# ಇತಿಹಾಸ ದರ್ಶನ

ಸಂಪುಟ ೧೦ / ೧೯೯೫




KARNATAKA ITIHASA ACADEMY
कर्नाटक इतिहास अकादमि

ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

# ಇತಿಹಾಸ ದರ್ಶನ

ಸಂಪುಟ ೧೦ / ೧೯೯೫

೧೯೯೪ರಲ್ಲಿ ಸೊಂಡೂರಿನಲ್ಲಿ ಸಮಾವೇಶಗೊಂಡ ಅಕಾದೆಮಿಯ
ಎಂಟನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟ

ಸಂಪಾದಕರು

ಡಾ॥ ಸೂರ್ಯನಾಥ ಕಾಮತ್
ಪಿ. ವಿ. ಕೃಷ್ಣಮೂರ್ತಿ




ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

## ITIHASA DARSHANA

Proceedings of the Eighth Annual
Conference of the Karnataka Itihasa
Academy (regd.) held at Sandur
on 9, 10 and 11 July 1994

Volume 10, Setp. 1995.

Edited by Dr. Suryanath Kamath
P. V. Krishnamurthy

Published by Karnataka Itihasa Academy (Regd.)
Ghokhale Institute of Public Affairs Compound
Basavanagudi Road, Narasimharaja Colony
Bangalore - 560 019



ಬೆಲೆ : ರೂ. ೧೦೦-೦೦

ಲಕ್ಷ್ಮೀ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೬೬೧೩೧೨೩, ೬೬೧೮೭೫೨



# ಸಂಪಾದಕೀಯ

ಇತಿಹಾಸ ಅಕಾದೆಮಿಯ ಎಂಟನೆಯ ಸಮ್ಮೇಳನದಲ್ಲಿ ಮಂಡಿಸಿದ್ದ ಪ್ರಬಂಧಗಳ ಸಂಗ್ರಹ ಒಂಬತ್ತನೆಯ ಸಮ್ಮೇಳನದ ಕಾಲದಲ್ಲಿ ಪ್ರಕಟವಾಗುತ್ತಿದೆ. ಇದು ಹತ್ತನೆಯ ಸಂಪುಟ. ಆರಂಭದ ಎರಡು ಸಂಪುಟಗಳು ಸಮ್ಮೇಳನಗಳ ನಡವಳಿಕೆಗಳಾಗಿರಲಿಲ್ಲ. ಹೀಗಾಗಿ ಮೂರನೇಯ ಸಂಪುಟವು ಪ್ರಥಮ ಸಮ್ಮೇಳನದ ನಡವಳಿಕೆಯಾಗಿ ಹೊರಬಂತು.

ಅಕಾದೆಮಿಯ ರಾಜ್ಯ ಕಾರ್ಯದರ್ಶಿಗಳಾದ ಡಾ॥ ದೇವರಕೊಂಡಾರೆಡ್ಡಿಯವರು ಕನ್ನಡ ವಿಶ್ವವಿದ್ಯಾಲಯಕ್ಕೆ ತೆರಳಿದ್ದರಿಂದ ಈ ಸಂಪುಟದ ಜವಾಬ್ದಾರಿ ಕೆಳಗೆ ಸಹಿ ಮಾಡಿದ ನಮ್ಮ ಮೇಲೆ ಬಿತ್ತು.

ಮೈಸೂರಿನ ಸಮ್ಮೇಳನದಲ್ಲಿ ಸುಮಾರು ೮೦ ಪ್ರಬಂಧಗಳು ಮಂಡಿತವಾಗಿದ್ದರೂ ಕೈಗೆ ಬಂದವು ಸುಮಾರು ೬೦. ಅವುಗಳಲ್ಲಿ ೫೧ ಮಾತ್ರ ಇಲ್ಲಿ ಪ್ರಕಟವಾಗಿವೆ.

ಇತಿಹಾಸ ಅಕಾದೆಮಿ ಈಗ ೧೦ನೆಯ ವರ್ಷದಲ್ಲಿದೆ. ಈ ಸಮ್ಮೇಳನ ಮುಗಿದ ಮೇಲೆ ಹತ್ತನೆಯ ವರ್ಷ ಉತ್ಸವ ಆಚರಿಸುತ್ತೇವೆ.

ಈ ಸಂಪುಟದಲ್ಲಿ ಹತ್ತೂ ಸಂಪುಟಗಳ ಲೇಖಕರ ಸೂಚಿ ಕೊಟ್ಟಿದೆ. ವಿಷಯ ಸೂಚಿ ಮುಂದಿನ ಸಂಪುಟದಲ್ಲಿ ಪ್ರಕಟಿಸುತ್ತೇವೆ.

ಈ ಸಂಪುಟದ ಸುಂದರ ಮುದ್ರಣಕ್ಕೆ ಕಾರಣರಾದ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್‌ಕುಮಾರ್ ಹಾಗೂ ಅವರ ಸಿಬ್ಬಂದಿಯವರಿಗೂ ಭಾವಚಿತ್ರಗಳ ವಿನ್ಯಾಸ ಹೊಂದಿಸಿಕೊಟ್ಟ ಡಾ॥ ಎಚ್. ಎಸ್. ಗೋಪಾಲರಾವ್ ಅವರಿಗೂ ಕೃತಜ್ಞತೆಗಳು.

ಒಂಬತ್ತನೆಯ ಸಂಪುಟಕ್ಕೆ ರೂ. ೪೦,೦೦೦ ಧನಸಹಾಯ ನೀಡಿದ ಶಿಕ್ಷಣ ಇಲಾಖೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ. ಈ ಸಂಪುಟದ ಮುದ್ರಣಕ್ಕೂ ಧನಸಹಾಯ ನೀಡಲು ವಿನಂತಿಸುತ್ತಿದ್ದೇವೆ.

ಸೂರ್ಯನಾಥ ಕಾಮತ್

೩೧-೮-೯೫ ಪಿ. ವಿ. ಕೃಷ್ಣಮೂರ್ತಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಂಕ ೧೦-೭-೧೯೯೪ ರಲ್ಲಿ ಆಯ್ಕೆಗೊಂಡಂತೆ)

ಅಧ್ಯಕ್ಷರು

ಡಾ॥ ಜಿ. ಎಸ್. ದೀಕ್ಷಿತ್, ಬೆಂಗಳೂರು

ಉಪಾಧ್ಯಕ್ಷರು

ಡಾ॥ ಡಿ. ವಿ. ದೇವರಾಜ್, ಮೈಸೂರು

ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು

ಪ್ರಧಾನ ಕಾರ್ಯದರ್ಶಿಗಳು

ಡಾ॥ ಎಚ್. ಎಸ್. ಗೋಪಾಲರಾವ್, ಬೆಂಗಳೂರು

ಕಾರ್ಯದರ್ಶಿಗಳು

ಡಾ॥ ದೇವರಕೊಂಡಾರೆಡ್ಡಿ, ಹಂಪಿ

ಡಾ॥ ಎಚ್. ಆರ್. ರಘುನಾಥಭಟ್, ಧಾರವಾಡ

ಕೋಶಾಧಿಕಾರಿ

ಶ್ರೀ ಎಂ. ಬಿ. ಪಾಟೀಲ್, ಬೆಂಗಳೂರು

ಸದಸ್ಯರು

ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು

ಡಾ॥ ಶ್ರೀನಿವಾಸ ಹಾವನೂರ, ಬೆಂಗಳೂರು

ಶ್ರೀ ವಿ. ಸಿ. ಮಾಲಗತ್ತಿ, ಬೆಳಗಾವಿ

ಡಾ॥ ರು. ಮ. ಷಡಕ್ಷರಯ್ಯ, ಧಾರವಾಡ

ಡಾ॥ ಎ. ವಿ. ನರಸಿಂಹಮೂರ್ತಿ, ಮೈಸೂರು

ಡಾ॥ ಸಿ. ಎಸ್. ಪಾಟೀಲ, ಮೈಸೂರು

ಶ್ರೀ ಎಚ್. ಎಂ. ಸಿದ್ದನಗೌಡರ್, ಬೆಂಗಳೂರು

ಶ್ರೀ ಕೆ. ಬಿ. ಶಿವತಾರಕ್, ಬ್ರಹ್ಮಾವರ

ಡಾ॥ ಎಂ. ಬಿ. ನೇಗಿನಾಳ್, ಬೆಳಗಾವಿ

ಶ್ರೀ ಕುಂ. ಬಾ. ಸದಾಶಿವಪ್ಪ, ಹರಪನಹಳ್ಳಿ

ಡಾ॥ ಕೆಳದಿ ವೆಂಕಟೇಶ ಜೋಯಿಸ್, ಕೆಳದಿ

ಡಾ॥ ಜ್ಯೋತಿಬಾಯಿ, ಬೆಂಗಳೂರು

ಡಾ॥ ಸಿಂದಗಿ ರಾಜಶೇಖರ, ಧಾರವಾಡ

ಪ್ರೊ॥ ವಸಂತ ಕುಷ್ಟಗಿ, ಗುಲ್ಬರ್ಗ

ಪ್ರೊ॥ ಸಿ. ವಿ. ಮಠದ, ಹಾವೇರಿ



ಡಾ॥ ಎಂ. ಎಂ. ಕಲಬುರ್ಗಿ

ಸಮ್ಮೇಳನಾಧ್ಯಕ್ಷರು

ಚಿತ್ರ : ಕೆ. ಎಲ್. ರಾಜಶೇಖರ್

## ಪರಿವಿಡಿ



ಸಮ್ಮೇಳನದ ಉದ್ಘಾಟನೆ ಶ್ರೀ ಎಂ. ವೈ. ಘೋರ್ಪಡೆಯವರಿಂದ




ಇತಿಹಾಸದರ್ಶನ ಸಂಚಿಕೆ 9 ಬಿಡುಗಡೆ ಪ್ರೊ॥ ಎ. ವಿ. ನರಸಿಂಹಮೂರ್ತಿ




ಕರ್ನಾಟಕದ ಕೈಫಿಯತ್ತು ಬಿಡುಗಡೆ ಶ್ರೀ ಎಂ. ವೈ. ಘೋರ್ಪಡೆ



ಸಮ್ಮೇಳನಾಧ್ಯಕ್ಷರಿಗೆ ಸನ್ಮಾನ


ಸಮ್ಮೇಳನಾಧ್ಯಕ್ಷರ ಭಾಷಣ


ಪಿಎಚ್.ಡಿ. ಪದವಿ ಪಡೆದವರಿಗೆ ಸನ್ಮಾನ




ವೇದಿಕೆಯ ಮೇಲೆ ಸಮ್ಮೇಳನಾಧ್ಯಕ್ಷರು ಮತ್ತು ಸ್ವಾಗತಾಧ್ಯಕ್ಷರು




ಉದ್ಘಾಟನ ಸಮಾರಂಭದಲ್ಲಿ ವೇದಿಕೆಯ ಮೇಲೆ ಉಪಸ್ಥಿತರು



ಸಮ್ಮೇಳನದ ಶ್ರೋತೃವರ್ಗ



ಸಮ್ಮೇಳನದ ಒಂದು ಗೋಷ್ಠಿ



ಪುರಾತತ್ವ ಇಲಾಖೆಯಿಂದ ವಸ್ತು ಪ್ರದರ್ಶನದ ಉದ್ಘಾಟನೆ ಎಂ. ವೈ. ಘೋರ್ಪಡೆಯವರಿಂದ



ಅಕಾಡೆಮಿಯ ಅಧ್ಯಕ್ಷರು ಮತ್ತು ಸ್ವಾಗತಾಧ್ಯಕ್ಷರು



ತ್ರ 1. ಮೇಲಿನ ಹಂತದ ಪೇಲಿಯೋಲಿಥಿಕ್ ಆಯುಧಗಳು
ಲೇಖನ 2



ಚಿತ್ರ 2. ಕೆಳಹಂತದ ಪೇಲಿಯೋಲಿಥಿಕ್ ಆಯುಧಗಳು
ಲೇಖನ 2



ಚಿತ್ರ 3. ಮಧ್ಯಹಂತದ ಪೇಲಿಯೋಲಿಥಿಕ್ ಆಯುಧಗಳು
ಲೇಖನ 2



ಚಿತ್ರ 4. ನೂತನ ಶಿಲಾಯುಗದ ಕೈಗೊಡಲಿ
ಲೇಖನ 2



ಚಿತ್ರ 5. ಕತ್ತಿರಾಜನಹಳ್ಳಿ
ಲೇಖನ 4



ಚಿತ್ರ 6. ಬಸವನ ಪುರದ ಬೃ. ಶಿಲಾ ಯುಗದ ರಂಧ್ರಕೋಣೆ ಗೋರಿ
ಲೇಖನ 3



ಚಿತ್ರ 7. ಕಂಜಿಗರಹಳ್ಳಿ ಬಯಲಿನ ಸಮಾಧಿಗಳ ಗುಂಪು
ಲೇಖನ 3



ಚಿತ್ರ 9. ಮೇನೆಯಲ್ಲಿ ಹೊರಟ ಯತಿ
ಲೇಖನ 6



ಚಿತ್ರ 9. ಕಲ್ಯಾಣಪುರ ಹಾದಿಕೋಣೆ ಗೋರಿ
ಲೇಖನ 3



ಚಿತ್ರ 10. "ಅರಸ ಮತ್ತು ಬೇಟೆ ತಂಡ"
ಲೇಖನ 6



ಚಿತ್ರ 11. ಅಂಬರೇಶ್ವರ ದೇವಸ್ಥಾನ – ಪೂರ್ವಕಡೆಯ ಗರ್ಭಗುಡಿ
ಲೇಖನ 9



ಚಿತ್ರ 12. ಅಂಬರೇಶ್ವರ ದೇವಸ್ಥಾನ – ಪಶ್ಚಿಮದ ಮುಖ್ಯದ್ವಾರ
ಲೇಖನ 9



ಚಿತ್ರ 13. ಅಂಬರೇಶ್ವರ ದೇವಾಲಯ – ಅಂಬರನಾಥ
ಲೇಖನ 9



ಚಿತ್ರ 14. ಹಿರೇಬಿದರಿ : ದ್ವಾರಫಲಕ
ಲೇಖನ 10



ಚಿತ್ರ 15. ಹಿರೇಬಿದರಿ : ಲಲಾಟ ಪಟ್ಟಿ
ಲೇಖನ 10



ಚಿತ್ರ 16. ಬೆನಕನ ಕೊಂಡ : ವೀರ–ಸತಿ ಕಲ್ಲು
ಲೇಖನ 10



ಚಿತ್ರ 17.
ಹೂಲಹಳ್ಳಿ :
ಕಲ್ಲೇಶ್ವರ ದೇವಾಲಯದ ಮುನ್ನೋಟ
ಲೇಖನ 10



ಚಿತ್ರ 18. ಹಿರೇಮಾಗನೂರು :
ಸಂಗಮೇಶ್ವರ ದೇವಾಲಯದ
ಮುನ್ನೋಟ – ಲೇಖನ 10



ಚಿತ್ರ 19. ಹಿರೇಮಾಗನೂರು : ದೇವಾಲಯದ ಕಂಬಗಳು
ಲೇಖನ 10



ಚಿತ್ರ 20. ಹಿರೇಮಾಗನೂರು : ದೇವಾಲಯದ ಮುಂದಿನ ಒಂದ
ದ್ವಾರ ಫಲಕ – ಲೇಖನ 10



ಚಿತ್ರ 21. ಅರಳೀಕಟ್ಟೆ : ಲಲಾಟ ಬಿಂಬ
ಲೇಖನ 10



ಚಿತ್ರ 22. ಮೇಧೂರು : ಬಿಂಬ
ಲೇಖನ 10



ಚಿತ್ರ 23. ಮೇಧೂರು : ಕಂಬ
ಲೇಖನ 10



ಚಿತ್ರ 24. ಮೇಧೂರು : ಸೂರ್ಯ
ಲೇಖನ 10





ಚಿತ್ರ 26. ಮುರುಕನ ಹಳ್ಳಿ ಶ್ರೀಕಂಠೇಶ್ವರ ದೇವಾಲಯದ
ಪೂರ್ವಾಭಿಮುಖ ನೋಟ ಕೆ. ಆರ್. ಪೇಟೆ
ಲೇಖನ 12

ಚಿತ್ರ 25. ಮೇಧೂರು : ಮಹಿಷಾಸುರ ಮರ್ಧಿನಿ
ಲೇಖನ 10





ಚಿತ್ರ 27. ಮುರುಕನ ಹಳ್ಳಿ ನಿಂತ ಭಂಗಿಯ ವಿಷ್ಣು (ಮಧುಸೂ
ಲೇಖನ 12



ಚಿತ್ರ 28. ಮುರುಕನ ಹಳ್ಳಿ ಶ್ರೀ ಕಂಠೇಶ್ವರ ದೇವಾಲಯದ
ಗರ್ಭಗೃಹದ ಕೆತ್ತನೆ – ಲೇಖನ 12



ಚಿತ್ರ 29. ಚಿಕ್ಕ ಸಿಂಧಗಿಯಲ್ಲಿ ದೊರೆತ ಗುಪ್ತನಿಧಿ
ಲೇಖನ 11



ಚಿತ್ರ 30. ಚಿಕ್ಕ ಸಿಂಧಗಿಯಲ್ಲಿ ದೊರೆತ ಬೆಳ್ಳಿಯ ಮುದ್ರಾಂಕಿತ
ನಾಣ್ಯಗಳು – ಲೇಖನ 11



ಚಿತ್ರ 31. ಚಿಕ್ಕ ಸಿಂಧಗಿ ಗುಪ್ತನಿಧಿಯಲ್ಲಿ ದೊರೆತ ತಾಮ್ರದ ಚೊಂಬು
ಮೇಲ್ಭಾಗದಲ್ಲಿ ನಂದಿಪಾದ, ಚಂತಸ ಎಂಬ
ಬ್ರಾಹ್ಮೀ ಶಾಸನ ಮತ್ತು ಶ್ರೀವತ್ಸ – ಲೇಖನ 11



ಚಿತ್ರ 32. ಸೂಳೆಕಲ್ಲುಮಠದ ಹೊರನೋಟ
ಲೇಖನ 14



ಚಿತ್ರ 33. ಸೂಳೆಕಲ್ಲು ಮಠದ ಗುಹಾ ಚಿತ್ರಗಳು
ಲೇಖನ 14



ಚಿತ್ರ 34. ಜಲಗಾರ ದಿಬ್ಬ ಶಾಸನ
ಲೇಖನ 17



ಚಿತ್ರ 35. ಮಹಾಲಿಂಗೇಶ್ವರ ದೇವಸ್ಥಾನ – ವಿಠಲಾಪುರ
ಲೇಖನ 18



ಚಿತ್ರ 36. ಸಕಳ ಚಂದ್ರ ಭಟ್ಟಾರಕರ ನಿಷಿದಿ
ಲೇಖನ 19



ಚಿತ್ರ 37. ಗುಣದೀಪಾದೀಶನ ನಿಷದಿಶಾಸನ
ಲೇಖನ 19



ಚಿತ್ರ 38. ಉಚ್ಚಂಗಿ ದುರ್ಗ – ಕಡೆಗಾಪು
ಲೇಖನ 32



ಚಿತ್ರ 39. ಮಠದ ಪಾರ್ಶ್ವ ಭಾಗ
ಲೇಖನ 33



ಚಿತ್ರ 40. ಜೋಗಿಕೊಳ್ಳದಲ್ಲಿ ದೊರೆತ ದೇವತೆಯ ವಿಗ್ರಹ
(ಯಕ್ಷಿ ಅಥವಾ ವ್ಯಂತರ ದೇವತೆ) – ಲೇಖನ 36



ಚಿತ್ರ 41. ಕುಳಿತಿರುವ ದ್ವಿಭುಜ ಅಪೂರ್ವ ನರಸಿಂಹ (ಮುಂಭಾ

ಲೇಖನ 41



ಚಿತ್ರ 42. ಕುಳಿತಿರುವ ದ್ವಿಭುಜ ಅಪೂರ್ವ ನರಸಿಂಹ

(ಹಿಂಭಾಗ)

ಲೇಖನ 41



ಚಿತ್ರ 43. ಅಪೂರ್ವ ನರಸಿಂಹ ಶಿಲ್ಪ

ಲೇಖನ 41






















1. ಕನ್ನಡಿ ಹೊತ್ತ ಕುಂಕುಮದ ಕರಂಡ
2. ಚಿಕ್ಕ ಕೈಗನ್ನಡಿ
3. ಬಾಹ್ಯಗೋಲದ ಕನ್ನಡಿ
4. ಕುಂಕುಮದ ಬೊಟ್ಟು ಇಟ್ಟುಕೊಳ್ಳುವ ಕನ್ನಡಿ
5. ಸತಿಯ ಸಿಂಗಾರ ಕನ್ನಡಿ
6. ಚಚ್ಚೌಕ ಕೈಗನ್ನಡಿ
7. ಗೃಹ ಅಲಂಕಾರದ ಕನ್ನಡಿ
















8. ಪುರುಷರ ಅಲಂಕಾರಕ್ಕೆ ಕೈಗನ್ನಡಿ
9. ಪ್ರತಿಷ್ಠಿತನು ಕನ್ನಡಿ ವೀಕ್ಷಣೆಯಲ್ಲಿದ್ದಾಗ
10. ಸೇನಾಪತಿ ತನ್ನ ಮೀಸೆಯನ್ನು ಮೆಚ್ಚುವಾಗ

11. ಕನ್ನಡಿ ಹೊತ್ತ ಸೇವಕ
12 ಶೃಂಗಾರ ಪ್ರಿಯ ಅರಸ ಮತ್ತು ಕನ್ನಡಿ

## ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು ದೊರೆತಿರುವ ಸ್ಥಳಗಳು



## ಕಾಲು ನಾಗಮಂಡಲ

ನಾಲ್ಕು ಪವಿತ್ರಗಂಟುಗಳು



"ಅ"

ಕೆಳದಿಯ ಶ್ರೀ ವೀರಭದ್ರ ದೇವಾಲಯದ ಮುಂಭಾಗದ ಮಾನಸ್ತಂಭದಲ್ಲಿಯ
ಉಬ್ಬು ತಗ್ಗು ಶಿಲಾಶಿಲ್ಪ

## ಅರ್ಧ ನಾಗಮಂಡಲ

೮ ಪವಿತ್ರಗಂಟುಗಳು



"ಬ"

ವೀರಭದ್ರ ದೇವಾಲಯದ ನವರಂಗದಲ್ಲಿ ಎಡಭಾಗದ ಉಬ್ಬು ತಗ್ಗಿನ ಶಿಲಾಶಿಲ್ಪ
ದೊಡ್ಡಸಂಕಣ್ಣನಾಯಕನಿಂದ ಸ್ಥಾಪನೆಯಾದದ್ದು (1567-70)
ಮಂದಿರ ಕಟ್ಟುವಿಕೆ 1629-46

ಸೊಂಡೂರಿನಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ಎಂಟನೆಯ ವಾರ್ಷಿಕ ಇತಿಹಾಸ ಸಮ್ಮೇಳನ

# ಸಮ್ಮೇಳನಾಧ್ಯಕ್ಷರ ಭಾಷಣ

–ಪ್ರೊ|| ಎಂ. ಎಂ. ಕಲಬುರ್ಗಿ

ಕರ್ನಾಟಕ ಇತಿಹಾಸ ಅಕಾಡೆಮಿಯ "ಇತಿಹಾಸ ಸಮ್ಮೇಲನ" ಎಂದಾಕ್ಷಣ, ಕನ್ನಡ ಸಾಹಿತ್ಯ ಪರಿಷತ್ತಿನ "ಸಾಹಿತ್ಯ ಸಮ್ಮೇಲನ" ನೆನಪಾಗುತ್ತದೆ. ಸಾಹಿತ್ಯದ ಅಭ್ಯಾಸಿಯಾಗಿರುವ ನನಗೆ ಈ ನೆನಪು ಸಹಜ.

ಸಾಹಿತ್ಯ ಸಮ್ಮೇಲನದಂತೆ ಸಮಾರಂಭದ ಸ್ವರೂಪ ತಂದುಕೊಳ್ಳದೆ, ಶುದ್ಧ ಶೈಕ್ಷಣಿಕ ನೆಲೆಯಲ್ಲಿ ಮುನ್ನಡೆಯುತ್ತ ಬಂದುದು, ಈ ಸಮ್ಮೇಲನದ ವೈಶಿಷ್ಟ್ಯವಾಗಿದೆ. ಹೀಗಾಗಿ ಇದರ ಅಧ್ಯಕ್ಷನಾಗುವುದು, ಶೈಕ್ಷಣಿಕ ಕಾಳಜಿಯುಳ್ಳ ಯಾರಿಗಾದರೂ ಹೆಮ್ಮೆಯ ವಿಷಯವೆನಿಸುತ್ತದೆ. ಈ ಹೆಮ್ಮೆಯನ್ನು ನನ್ನದನ್ನಾಗಿಸಿದ ಕರ್ನಾಟಕ ಇತಿಹಾಸ ಅಕಾಡೆಮಿಯ ಕಾರ್ಯಸಮಿತಿಯ ಸದಸ್ಯರಿಗೆ, ಸಮ್ಮೇಲನವನ್ನು ನಿರ್ವಹಿಸುತ್ತಲಿರುವ ಸಂಡೂರಿನ ಸ್ನೇಹಿತರಿಗೆ, ನಿಮ್ಮೆಲ್ಲರಿಗೆ ಕೃತಜ್ಞನಾಗಿದ್ದೇನೆ.

ಪಶ್ಚಿಮದ ಪ್ರಭಾವದಿಂದಾಗಿ, ನೂರು ವರ್ಷಗಳ ಹಿಂದೆಯೇ ನಮ್ಮ ಸಾಹಿತ್ಯಕ್ಷೇತ್ರ ಮತ್ತು ಇತಿಹಾಸಕ್ಷೇತ್ರಗಳಲ್ಲಿ ಏಕಕಾಲಕ್ಕೆ ಆಧುನಿಕ ದೃಷ್ಟಿ ತೆರೆದುಕೊಂಡಿತು. ಆ ಹೊಸ ತಿರುವಿನಲ್ಲಿಯೇ 'ಸಾಹಿತ್ಯ ಸಮ್ಮೇಲನ' ಹುಟ್ಟಿಕೊಂಡಂತೆ, 'ಇತಿಹಾಸ ಸಮ್ಮೇಲನ' ಹುಟ್ಟಿಕೊಳ್ಳದಿರುವುದು ವಿಷಾದದ ಸಂಗತಿ. ಸಾಹಿತ್ಯ ಸಮ್ಮೇಲನವನ್ನು ಅಸ್ತಿತ್ವಕ್ಕೆ ತಂದ ಸಾಹಿತ್ಯಜ್ಞರಿಗಿಂತ ಅಂದಿನ ಇತಿಹಾಸತಜ್ಞರು ಯಾವುದೇ ದೃಷ್ಟಿಯಿಂದ ಕಡಿಮೆಯಿರಲಿಲ್ಲ. ಹೀಗಿದ್ದೂ ಅವರಾಗಲೀ, ತರುವಾಯದವರಾಗಲೀ ಅಂಥ ಒಂದು ಉಪಕ್ರಮವನ್ನು ಪ್ರಾರಂಭಿಸಲೇ ಇಲ್ಲ. ಇದರಿಂದ ಸಾಹಿತ್ಯದಂತೆ ಇತಿಹಾಸ ಜನರ ಹತ್ತಿರ ಹೋಗಲಿಲ್ಲ ; ಜನಪ್ರಿಯ ವಿಷಯವಾಗಿ ಬೆಳೆಯಲಿಲ್ಲ. ಸಾಹಿತ್ಯದಲ್ಲಿಯಂತೆ ಹೊಸ ಹೊಸ ಚಿಂತನೆಗಳು ಇತಿಹಾಸದಲ್ಲಿ ಸ್ಫೋಟಗೊಳ್ಳಲಿಲ್ಲ. ಹೊಸ ಹೊಸ ಪ್ರಕಾರಗಳು ಆ ಪ್ರಮಾಣದಲ್ಲಿ ಬಿಚ್ಚಿಕೊಳ್ಳಲಿಲ್ಲ. ಸಾಹಿತಿಗಳಂತೆ ಸಂಶೋಧಕರಿಗೆ ಸಾರ್ವಜನಿಕ ಗೌರವ–ಪ್ರತಿಷ್ಠೆಗಳು ಪ್ರಾಪ್ತವಾಗಲಿಲ್ಲ ; ನ್ಯಾಯವಾಗಿ ಲಭಿಸಬೇಕಿದ್ದ ಅವಕಾಶಗಳೂ ಅವರಿಗೆ ಲಭಿಸಲಿಲ್ಲ. ಈ ತಪ್ಪನ್ನು ತಿದ್ದಿಕೊಳ್ಳುವ ಬಹುಮುಖ ಪ್ರಯತ್ನಗಳಲ್ಲಿ ಈ ಸಮ್ಮೇಲನ ಬಹುಮುಖ್ಯವಾದುದೆಂದು ಭಾವಿಸುತ್ತೇನೆ.

ಕಳೆದ ಎಂಟು ವರ್ಷಗಳಲ್ಲಿ ಈ ಸಮ್ಮೇಲನ, ರಾಜ್ಯದ ಮೂಲೆ ಮೂಲೆಗಳಲ್ಲಿ ಚದರಿಹೋಗಿದ್ದ ಇತಿಹಾಸಕಾರರನ್ನು ಸಂಘಟಿಸಿದೆ. ತರುಣ ಇತಿಹಾಸಕಾರರ ಸೈನ್ಯವನ್ನು ಸೃಷ್ಟಿಸಿದೆ. ಜನರಲ್ಲಿ ಇತಿಹಾಸಪ್ರಜ್ಞೆಯನ್ನು ಜಾಗೃತಗೊಳಿಸುತ್ತಲಿದೆ. ಇದಕ್ಕೆ ಮೂಲ ಮತ್ತು ಮುಖ್ಯ ಕಾರಣರಾದ ವಿದ್ವಾಂಸರಿಗೆ, ಕನ್ನಡನಾಡಿನ ಇತಿಹಾಸಲೋಕದ ಕೃತಜ್ಞತೆಗಳು ಸಲ್ಲುತ್ತವೆ.

* * *

ಯಾವುದೇ ವಿಷಯ, ಸಹೃದಯರನ್ನು ಹೆಚ್ಚು ಸಂಖ್ಯೆಯಲ್ಲಿ ಒಳಗುಮಾಡಿಕೊಂಡಷ್ಟೂ ಅವರ ಪ್ರೀತಿ–ಪ್ರತಿಕ್ರಿಯೆಗಳಿಗೆ ಮುಖಾಮುಖಿಯಾಗಿ ಸ್ಪಂದಿಸಿ. ತಾನೂ ಬೆಳೆಯುತ್ತದೆ, ಅವರ ಅಭಿರುಚಿಯನ್ನೂ ಬೆಳೆಸುತ್ತದೆ.

ಬೇಂದ್ರೆ-ಗಳಗನಾಥರು ಸಾಹಿತ್ಯವನ್ನು, ಸಹೃದಯರ ಸಾಹಿತ್ಯಾಭಿರುಚಿಯನ್ನು ಬೆಳೆಸಿದುದು ಹೀಗೆ. ಇವರಲ್ಲಿ ಬೇಂದ್ರೆಯವರಂಥ ಶಿಕ್ಷಕಸಾಹಿತಿಗಳು ಊರೂರು ಸುತ್ತಿ, ಭಾವಗೀತೆಗಳನ್ನು ಜನರ ಎದುರು ಹಾಡಿದರು, ವ್ಯಾಖ್ಯಾನಮಾಡಿದರು. ಸರಕಿನ ಮಹತ್ವವನ್ನು ಸಾರ್ವಜನಿಕರಿಗೆ ತಿಳಿಸಿಕೊಡುವ ಜಾಹಿರಾತುದಾರನಂತೆ ವ್ಯವಹರಿಸಿದರು. ಹವ್ಯಾಸಿ ಸಾಹಿತಿಯಾದ ಗಳಗನಾಥರಂಥವರು, ಗಿರಾಕಿಗಳಿದ್ದಲ್ಲಿಗೇ ಹೋಗಿ ಸರಕು ಮಾರಾಟಮಾಡುವ ವ್ಯಾಪಾರಿಯಂತೆ, ಪುಸ್ತಕ ಹೊತ್ತುಕೊಂಡು ಊರೂರು ಅಲೆದರು. ಈ ಬಗೆಯ ಉಪಕ್ರಮಗಳಿಂದಾಗಿ ಸಾಹಿತ್ಯ ಭಾರೀ ಬೇಡಿಕೆಯ ಸರಕಾಗಿ ಬೆಳೆಯಿತು.

ಹೀಗೆ ಇತಿಹಾಸವನ್ನೂ ಜನರು ಪ್ರೀತಿಸುವಂತೆ ಮಾಡುವುದರ ಸಲುವಾಗಿ, ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿ, ಇತಿಹಾಸಕ್ಕೆ ಸಂಬಂಧಪಟ್ಟ ಸಭೆ-ಸಮ್ಮೇಲನ, ವಿಚಾರಸಂಕಿರಣ-ಕಮ್ಮಟ ಇತ್ಯಾದಿಗಳನ್ನು ಜರುಗಿಸುವುದು ನಮ್ಮ ಮೊದಲ ಕರ್ತವ್ಯವಾಗಿದೆ. ಹೀಗೆ ಮಾಡುವಾಗ ಆಯಾ ಸ್ಥಳಕ್ಕೆ ಸಂಬಂಧಿಸಿದ, ಅಲ್ಲಿಯ ಜನರಿಗೆ ಪ್ರಿಯವಾದ ವಿಷಯಗಳನ್ನೇ ಆಯ್ದುಕೊಳ್ಳುವುದು ಸೂಕ್ತ, ಉಪಯುಕ್ತ. ಇದರಿಂದ ಇತಿಹಾಸ ಅಯಸ್ಕಾಂತದಂತೆ ಹಿಡಿದುಕೊಂಡು, ಅವರನ್ನು ಇತಿಹಾಸ ಕುತೂಹಲಿಗಳನ್ನಾಗಿಸುತ್ತದೆ. ಅಲ್ಲದೆ, ಇತಿಹಾಸವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ, ಆವೇಶರಹಿತವಾಗಿ ಪ್ರತಿಕ್ರಿಯಿಸುವ, ಆರೋಗ್ಯಪೂರ್ಣ ದೃಷ್ಟಿಕೋನವನ್ನು ಸಾಮಾಜಿಕರಲ್ಲಿ, ಅದರಲ್ಲಿಯೂ ಮೂಲಭೂತವಾದಿಗಳಲ್ಲಿ ಬೆಳೆಸುತ್ತದೆ.

ಇದಕ್ಕೆ ಪೂರಕವೆಂಬಂತೆ ಇತಿಹಾಸಕ್ಕೆ ಸಂಬಂಧಪಟ್ಟ ವೈವಿಧ್ಯಪೂರ್ಣ ಪುಸ್ತಕ, ಪತ್ರಿಕೆಗಳ ಪ್ರಕಟನ ಮತ್ತು ವಿತರಣಕಾರ್ಯಗಳು ವ್ಯಾಪಕವಾಗಿ ಜರುಗಬೇಕಾಗಿವೆ. ಇಂದು ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳ ವಿದ್ವತ್ಪತ್ರಿಕೆಗಳ ಗುಣಮಟ್ಟವಾಗಲಿ, ನಿಯತತೆಯಾಗಲಿ ಸಮಾಧಾನಕರವಾಗಿಲ್ಲ. ಮಾಸಿಕ, ದೈನಿಕ ಪತ್ರಿಕೆಗಳು ಸಂಸ್ಕೃತಿ-ಇತಿಹಾಸಗಳಿಗೆ ಸಂಬಂಧಿಸಿದ ವಿಷಯ, ಸುದ್ದಿಗಳನ್ನು ಹೆಚ್ಚು ಪ್ರಕಟಿಸುತ್ತಿಲ್ಲ. ಇಂಥ ಕೊರತೆಗಳನ್ನು ನೀಗಿಸಿಕೊಂಡು ಇತಿಹಾಸದ ಅಧ್ಯಯನ, ವಾಚನ. ಲೇಖನ ವಾತಾವರಣವನ್ನು ಜನರ ನಡುವೆ ಜೀವಂತವಾಗಿಡುವುದು ತೀರ ಅವಶ್ಯವಿದೆ.

ಸವಕಲು ಶಬ್ದಗಳನ್ನೊಳಗೊಂಡ ಇಂದಿನ ಇತಿಹಾಸ ಬರವಣಿಗೆಯ ಶೈಲಿ ತುಂಬ ಗತಾನುಗತಿಕವಾಗಿದ್ದು, ಓದಲು ಬೋರ್ ಎನಿಸುತ್ತಿದೆ.ಆದುದರಿಂದ ಸಂಶೋಧನೆಯ ಇನ್ನೊಂದು ರೂಪವಾಗಿರುವ ವಿಮರ್ಶೆಯಂತೆ ಇತಿಹಾಸವೂ ಹೊಸ ಶೈಲಿಯನ್ನು, ಅಂದರೆ ಸರಳ, ಆಕರ್ಷಕ ಮತ್ತು ಚಿಂತನಪರ ಶೈಲಿಯನ್ನು ರೂಢಿಸಿಕೊಳ್ಳಬೇಕಾಗಿದೆ. ಯಾವುದೇ ವಿಷಯದ ಸಾರ್ಥಕತೆ ಇರುವುದು ಅದರ ಸಂವಹನಕ್ರಿಯೆಯಲ್ಲಿ. ಈ ದೃಷ್ಟಿಯಿಂದ ಸಂಶೋಧನೆಯಲ್ಲಿ ಇಂದಿನ ಹೊಸ ಕಾಲಕ್ಕೆ ತಕ್ಕ ಹೊಸ ಭಾಷಾಶೈಲಿಯೊಂದು ಹುಟ್ಟಿಬರಬೇಕಾಗಿದೆ.

ಈ ಬಗೆಯ ಜನಪ್ರಿಯ ಚಟುವಟಿಕೆಗಳ ಅಭಾವ ಕಾರಣವಾಗಿ, ಕರ್ನಾಟಕದ ಇತಿಹಾಸ ಮತ್ತು ಅದರ ವಾರಸುದಾರರಾದ ಕನ್ನಡಿಗರ ನಡುವೆ ಕಂದರ ಬೆಳೆದು, ಕಾಲಕಾಲಕ್ಕೆ ಅದು ದೊಡ್ಡದಾಗುತ್ತ ಬಂದಿದೆ. ಅಂದರೆ ಇತಿಹಾಸ ಬರೆಯುವ ಜವಾಬ್ದಾರಿ ಹೊತ್ತ ನಾವು, ಆ ಕಂದರವನ್ನು ದೊಡ್ಡದಾಗಿಸುತ್ತ ಬಂದಿದ್ದೇವೆ. ಇದರಿಂದ ಇತಿಹಾಸ ಒಂದು ಕಡೆ, ಜನತೆ ಇನ್ನೊಂದು ಕಡೆಯೆಂಬ ಪರಿಸ್ಥಿತಿ ನಿರ್ಮಾಣವಾಗಿದೆ. ಹೀಗಾಗಿ ಪರಂಪರೆಯನ್ನು ಪ್ರೀತಿಸುವ, ಓದಿ ಸುಖಿಸುವ, ಅಭಿಮಾನಪಡುವ ಮನಸ್ಸು ಅವರಲ್ಲಿ ಬೆಳೆಯಲಿಲ್ಲ. ; ಗತಕಾಲದಿಂದ ವರ್ತಮಾನ ಕಾಲವನ್ನು ತಿದ್ದಿಕೊಳ್ಳುವ 'ಜೀವನಕಲೆ' ಅವರಿಗೆ ತಿಳಿಯಲಿಲ್ಲ. ಒಟ್ಟಾರೆ ಪರಂಪರೆ ನಮ್ಮ ಜನರಿಗೆ ಪಾಠವಾಗಿ, ಸ್ಫೂರ್ತಿಯಾಗಿ ಪರಿಣಮಿಸಲೇ ಇಲ್ಲ. "ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು" ಎಂಬ ಮಾತಿಗೆ ಅವರು ನಿದರ್ಶನವೆನಿಸಿದರು. ಹೀಗೆ ಇತಿಹಾಸದ ಬೇರುಗಳನ್ನು ಕಳೆದುಕೊಂಡುದೇ ಕನ್ನಡಿಗರ ಸ್ವಾಭಿಮಾನಶೂನ್ಯತೆಗೆ ಮುಖ್ಯ ಕಾರಣವೆನಿಸಿದೆ.

ಪರಂಪರೆಯ ಪ್ರಜ್ಞೆಯಿಲ್ಲದವನಿಗೆ ಈ ದೇಶವೂ ಅಷ್ಟೇ, ಪರದೇಶವೂ ಅಷ್ಟೇ. ಈ ಭಾಷೆಯೂ ಅಷ್ಟೇ,

ಪರಭಾಷೆಯೂ ಅಷ್ಟೇ. ಅಂಥವನಿಗೆ ಉಪಜೀವನ ಮುಖ್ಯವಾಗಿರುತ್ತದೆಯೇ ಹೊರತು, ಜೀವನವಲ್ಲ. ವ್ಯಕ್ತಿಕೇಂದ್ರಿತವಾಗಿ ಬದುಕುವುದು ಉಪಜೀವನ, ಪರಂಪರೆ ಕೇಂದ್ರಿತವಾಗಿ–ಸಮಾಜ ಕೇಂದ್ರಿತವಾಗಿ ಬದುಕುವುದು ಜೀವನ. ವ್ಯಕ್ತಿ ಕೇಂದ್ರಿತನಾದವನು ಪರಂಪರೆಗೆ ವಿಮುಖನಾಗಿ ಬೆಳೆಯುವುದರಿಂದ, ಅವನಿಗೆ ಸ್ವಂತ ಮನೆಯೂ ಅಷ್ಟೇ, ಬಾಡಿಗೆ ಮನೆಯೂ ಅಷ್ಟೇ. ಅವನು ತನ್ನ ಮನೆಯನ್ನು ಸಹ ಭೌತಿಕ ಬೆಲೆಯಿಂದ ನೋಡುವನೇ ಹೊರತು, ಅದರಾಚೆಯ ಸಾಂಸ್ಕೃತಿಕ ಮೌಲ್ಯದಿಂದ ನೋಡುವುದಿಲ್ಲ. ಕನ್ನಡಿಗರ ಮನಸ್ಥಿತಿ ಈ ರೀತಿಯದಾಗಿರುವ ಕಾರಣ, ಅವರಿಗೆ ಕರ್ನಾಟಕ ಸ್ವಲ್ಪ ಹೆಚ್ಚು–ಕಡಿಮೆ ಬಾಡಿಗೆ ಮನೆಯಾಗಿ ಪರಿಣಮಿಸಿದೆ. ಇದಕ್ಕೆ ಉದಾಹರಣೆ ಹುಡುಕಲು ನಾವು ದೂರ ಹೋಗ ಬೇಕಿಲ್ಲ. ಬಳ್ಳಾರಿ ಜಿಲ್ಲೆಯ ತುಂಗಭದ್ರಾ ತೀರದ ಫಲವತ್ತಾದ ಹೊಲಗಳನ್ನು ಕನ್ನಡಿಗರು ಹೆಚ್ಚಿನ ಬೆಲೆಯ ಆಸೆಗೆ ಬಿದ್ದು, ಆಂಧ್ರದವರಿಗೆ ಮಾರುವ ಮೂಲಕ, ಅಲ್ಲಿ ಆ ಜನರ ವಸತಿ ಸಾಂದ್ರವಾಗುವುದಕ್ಕೆ ಅವಕಾಶ ಮಾಡಿಕೊಡುತ್ತ ಲಿದ್ದಾರೆ. ಇದು ನೇರವಾಗಿ ಹೊಲವನ್ನು ಮಾರುವುದಾಗಿದ್ದರೂ, ಪರ್ಯಾಯವಾಗಿ ನೆಲವನ್ನು ಕಳೆದುಕೊಳ್ಳುವುದಾಗಿದೆ. ಇದರಿಂದಾಗಿ ತಮ್ಮ ಮನೆಯಲ್ಲಿಯೇ ಅವರು ಅಲ್ಪಸಂಖ್ಯಾತರಾಗಿ, ಅಲಕ್ಷಿತರಾಗಿ, ಅಂಜಿ ಬಾಳುವ ದುರ್ದೆಸೆಯನ್ನು ತಂದುಕೊಳ್ಳುತ್ತಲಿದ್ದಾರೆ. ಕನ್ನಡಿಗರು ಇತಿಹಾಸವನ್ನು ಮರೆತವರು, ಭವಿಷ್ಯದ ಪ್ರಜ್ಞೆಯಿಲ್ಲದವರು ಎಂಬುದಕ್ಕೆ ಇದು ಜ್ವಲಂತ ನಿದರ್ಶನವಾಗಿದೆ.

ಇದಕ್ಕೆ ವಿರುದ್ಧವೆನ್ನುವಂತೆ ನಮ್ಮ ಎಡಬಲದ ತಮಿಳರು, ಮರಾಠರು ತುಂಬ ಸ್ವಾಭಿಮಾನಿಗಳು. ನಮ್ಮಂತೆ ಅಂದಂದಿನ ಇತಿಹಾಸವನ್ನು ಅಂದೇ ಮರೆಯುತ್ತ ಬರದೆ, ಮುಂದುವರಿಸಿಕೊಂಡು ಬಂದುದು, ಹಾಗೆ ಮುಂದುವರಿಯು ವಂತೆ ಇತಿಹಾಸಕಾರರು–ರಾಜಕೀಯ ನೇತಾರರು ನೋಡಿಕೊಂಡುದು, ಇದಕ್ಕೆ ಕಾರಣವಾಗಿದೆ. ಇಂಥ ಚಾರಿತ್ರಿಕಪ್ರಜ್ಞೆ ಸಮಕಾಲೀನಪ್ರಜ್ಞೆಯನ್ನು ಪ್ರಭಾವಿಸಿದರೆ, ಸಮಕಾಲೀನಪ್ರಜ್ಞೆ ಚಾರಿತ್ರಿಕಪ್ರಜ್ಞೆಯನ್ನು ಬತ್ತದಂತೆ ನೋಡಿಕೊಳ್ಳು ತ್ತದೆ. ಹೀಗೆ ಅವು ಪರಸ್ಪರ ಪೂರಕವಾಗಿ ಸಾಗಿದಾಗ ಮಾತ್ರ, ಯಾವುದೇ ದೇಶದ ಚರಿತ್ರೆ ಗತಕಾಲವಾಗಿ ನಿಲ್ಲದೆ, ವರ್ತಮಾನಕಾಲವಾಗಿ ಪ್ರವಹಿಸುತ್ತದೆ ; ಅದರ ಇತಿಹಾಸಕ್ಕೆ ಚಲನಶೀಲತೆ ಪ್ರಾಪ್ತವಾಗುತ್ತದೆ. ಕನ್ನಡಿಗರ ಇತಿಹಾಸಕ್ಕೂ ಇಂಥ ಚಲನಶೀಲತೆ ಪ್ರಾಪ್ತವಾಗುವುದು ಅವಶ್ಯವಿದೆ. ಹೀಗೆ ಚಲನಶೀಲವಾಗುವುದಕ್ಕಾಗಿ ಭೌಗೋಲಿಕವಾಗಿಯೂ ಅದನ್ನು ಊರೂರು ಮುಟ್ಟಿಸಬೇಕಾಗಿದೆ. ಇಂದು ಸಂಡೂರಿಗೆ ಇತಿಹಾಸವನ್ನು ಮುಟ್ಟಿಸಿದುದು, ಅಂಥ ಒಂದು ಪ್ರಯತ್ನ ವೆಂದೇ ಭಾವಿಸುತ್ತೇನೆ.

ರಾಜ್ಯದ ಇತಿಹಾಸ ಬರೆಯುವ ಹೊಣೆಹೊತ್ತ ನಮ್ಮಿಂದ, ಹೀಗೆ ಜನತೆಗೆ ಅನ್ಯಾಯವಾದಂತೆ ಇತಿಹಾಸಕ್ಕೂ ಅನ್ಯಾಯವಾಗಿದೆ. ಅದು ಕೇವಲ ಇತಿಹಾಸ ವಿದ್ವಾಂಸರ ಮಧ್ಯದಲ್ಲಿ ತೊಳಲುವಂತೆ ಮಾಡಿದ್ದೇವೆ. ಇತಿಹಾಸ ಓದಿದ ಬಹಳ ಜನ ಅಧ್ಯಾಪಕರಿಗೆ, ಪಠ್ಯಪುಸ್ತಕದ ಆಚೆಗೂ ಇತಿಹಾಸವಿದೆ, ವರ್ಗಕೋಣೆಯ ಆಚೆಗೂ ಇತಿಹಾಸ ಕೇಳುವ ಜನ ರಿದ್ದಾರೆ ಎಂಬುದೇ ಗೊತ್ತಿಲ್ಲ. ಗೊತ್ತಿದ್ದವರಿಗೆ ಇತಿಹಾಸದ ಆಕರ ಗಣಿಗಳೆಂದರೆ ಶಾಸನ ಮತ್ತು ಪುರಾತತ್ವ ಅವಶೇಷ ಗಳು ಮಾತ್ರ. ಇದರಿಂದಾಗಿ ಕರ್ನಾಟಕದ ಇತಿಹಾಸ, ತನ್ನ ಮೈಯ ಒಂದೆರಡು ಮಗ್ಗುಲುಗಳನ್ನೋ, ಒಂದೆರಡು ಪದರು ಗಳನ್ನೋ ಮಾತ್ರ ತೋರಿಸಿದೆ. ಅದರ ನಿಗೂಢ ಮಗ್ಗಲು ಮತ್ತು ಪದರುಗಳನ್ನು ಕಾಣಬೇಕಾದರೆ ಹೊಸಬಗೆಯ ಆಕರ ಗಳನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ. ಜೊತೆಗೆ ಜಾಗತಿಕ ಮಟ್ಟದಲ್ಲಿ ಇತಿಹಾಸದ ಗ್ರಹಿಕೆ ಮತ್ತು ರಚನೆಯ ವಿಷಯವಾಗಿ ನಡೆದಿರುವ, ಹೊಸ ಹೊಸ ಚಿಂತನೆ–ಪ್ರಯೋಗಗಳನ್ನು ಆಮದು ಮಾಡಿಕೊಳ್ಳಬೇಕಾಗುತ್ತದೆ. ಇಂಥ ಪ್ರಯತ್ನಗಳು ನಡೆದಾಗ ಮಾತ್ರ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯವೆಂದು ಕನ್ನಡ ಸಾಹಿತ್ಯ ನವೀಕರಣ ಗೊಂಡಂತೆ ಕರ್ನಾಟಕದ ಇತಿಹಾಸ ಬರವಣಿಗೆಯೂ ನವೀಕರಣಗೊಳ್ಳುತ್ತದೆ, ಬೆಳೆಯುತ್ತದೆ.

ಹೀಗೆ ಇತಿಹಾಸವನ್ನು ಓದುವವರ, ಚಿಂತಿಸುವವರ ಸಂಖ್ಯೆಯನ್ನು ಬೆಳೆಸಿದರೆ, ಎಲ್ಲ ಮಗ್ಗಲುಗಳಿಂದಲೂ ಇತಿಹಾಸವನ್ನು ಬೆಳೆಸಿದರೆ. ಅದು ವಿದ್ವಾಂಸರಾದ ನಮ್ಮನ್ನು ಬೆಳೆಸುತ್ತವೆ ; ಧರ್ಮವನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ–ಎಂಬಂತೆ. ಇವು ಸಾಧ್ಯವಾದಂತೆಲ್ಲ ಇತಿಹಾಸವನ್ನೂ, ಇದನ್ನು ಕಟ್ಟಿಕೊಡುವ ಇತಿಹಾಸಕಾರರನ್ನೂ ಜನತೆ

ಗೌರವಿಸುತ್ತದೆ ; ಮತ್ತು ಸಮಾಜದಲ್ಲಿ ಅವರ ಸ್ಥಾನಮಾನಗಳು ವರ್ಧಿಸುತ್ತವೆ. ಈ ದಿಶೆಯಲ್ಲಿ ಚಳುವಳಿರೂಪದ ಪ್ರಯತ್ನ ನಡೆಯಬೇಕಾಗಿದೆ.

*　　　*　　　*

ಮೇಲೆ ಹೇಳಿದಂತೆ ಇತಿಹಾಸಕಾರರಾದ ನಾವು, ಶಾಸನ-ಪುರಾತತ್ವ ಅವಶೇಷಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಲಿದ್ದರೂ ಬಿ.ಎಲ್. ರೈಸ್, ಆರ್. ನರಸಿಂಹಾಚಾರ್ಯರ ಕಾಲದ ವೇಗವನ್ನು, ಬಹುಶಃ ಗುಣಮಟ್ಟವನ್ನೂ ಇಂದು ಕಳೆದುಕೊಂಡಿದ್ದೇವೆ. ಅವರಿಗಿಂತ ಅನುಕೂಲತೆ ಹೆಚ್ಚು, ಕೆಲಸ ಕಡಿಮೆ-ಎಂಬ ಸ್ಥಿತಿಗೆ ತಲುಪಿದ್ದೇವೆ. ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು ವಲಯಗಳನ್ನು ಸರಿಯಾಗಿ ಪುನರ್ಘಟಿಸದಿರುವುದು, ಹಳೆಯ ಆಡಳಿತಪದ್ಧತಿಯನ್ನು ನವೀಕರಿಸದಿರುವುದು, ಸರಕಾರದಿಂದ ಸೂಕ್ತ ಆರ್ಥಿಕ ಸಹಾಯ ಸಿಗದಿರುವುದು, ತೆರವಾದ ಹುದ್ದೆಗಳನ್ನು ತುಂಬದಿರುವುದು ಇತ್ಯಾದಿಗಳೂ, ಇವುಗಳಿಗಿಂತ ನಮ್ಮ ಹಿರಿಯರೊಂದಿಗೆ ಹೋಲಿಸಿದರೆ ನಮಗಿರುವ ಕರ್ತವ್ಯಪ್ರಜ್ಞೆಯ, ಶ್ರಮ ಸಂಸ್ಕೃತಿಯ ಕೊರತೆಯೂ ಅದಕ್ಕೆ ಕಾರಣವೆಂದು ಹೇಳಬೇಕು.

ಸದ್ಯದ ಪರಿಸ್ಥಿತಿಯನ್ನು ಗಮನಿಸಿ ಹೇಳುವುದಾದರೆ 'ಕೇಂದ್ರ ಪುರಾತತ್ವ ಇಲಾಖೆ'ಗಿಂತ 'ರಾಜ್ಯ ಪುರಾತತ್ವ ಇಲಾಖೆ'ಯ ಕೆಲಸ ಒಂದಿಷ್ಟು ಮೇಲು. ಹೀಗಿದ್ದೂ ಹಂಪೆ, ಸನ್ನತಿ, ತಲಕಾಡುಗಳಲ್ಲಿ ಭೂಶೋಧಕಾರ್ಯ ನಡೆಸಿ, ಸಂಪುಟಗಳನ್ನು ಪ್ರಕಟಿಸಿ ಶ್ಲಾಘ್ಯ ಕೆಲಸ ಮಾಡುತ್ತಲಿರುವ ಈ 'ರಾಜ್ಯ ಪುರಾತತ್ವ ಇಲಾಖೆ' ಶಾಸನಗಳ ಶೋಧ, ಪ್ರಕಟನೆಯ ಬಗೆಗೂ ಇಷ್ಟೇ ಆಸಕ್ತಿ ವಹಿಸುವುದು ಅವಶ್ಯವಿದೆ. 'ಕೇಂದ್ರ ಪುರಾತತ್ವ ಇಲಾಖೆ' ಹಂಪೆ, ಸನ್ನತಿ, ಗುಡ್ನಾಪುರಗಳಲ್ಲಿ ನಡೆಸಿರುವ ಭೂಶೋಧಕಾರ್ಯ ಮಹತ್ವದ್ದಾಗಿದ್ದರೂ ನಿಧಾನವಾಗಿದೆ ; ಫಲಿತಾಂಶ ಪ್ರಕಟನೆ ಇನ್ನೂ ನಿಧಾನವಾಗಿದೆ ; ಶಾಸನಗಳ ಪ್ರಕಟನಕಾರ್ಯ ಮತ್ತೂ ನಿಧಾನವಾಗಿದೆ. ಎರಡು ದಶಕಗಳ ಹಿಂದೆ 'ಕೇಂದ್ರ ಶಾಸನ ಇಲಾಖೆ'ಯನ್ನು ತಮಿಳುನಾಡಿನ ಉದಕಮಂಡಲದಿಂದ ಕರ್ನಾಟಕದ ಮೈಸೂರಿಗೆ ವರ್ಗಾಯಿಸಲಾಯಿತು. ಹೀಗೆ ಕರ್ನಾಟಕದಲ್ಲಿದ್ದೂ, ಕ್ರಮವಾಗಿ ಕನ್ನಡಿಗರೇ ನಿರ್ದೇಶಕರಾಗಿದ್ದೂ ಈ ಸಂಸ್ಥೆಯಿಂದ ಕರ್ನಾಟಕದ ಶಾಸನಗಳು ಸಮಗ್ರವಾಗಿ ಪ್ರಕಟವಾಗದಿರುವುದು ವಿಷಾದದ ಸಂಗತಿಯಾಗಿದೆ. ಇಂತಹದೇ ಇನ್ನೊಂದು ವಿಷಾದವೆಂದರೆ, ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿರುವ ರಾಜ್ಯ ಮತ್ತು ಕೇಂದ್ರ ಪುರಾತತ್ವ ಇಲಾಖೆಗಳ ಬಹಳಷ್ಟು ಶಾಖೆಗಳು ಒಂದೆರಡು ಭಗ್ನ ಮೂರ್ತಿಗಳನ್ನು ಬಾಗಿಲ ಮುಂದೆ ಚೆಲ್ಲಿಕೊಂಡು, ನಿದ್ರೆ ಮಾಡುತ್ತಲಿವೆ.

ವಿಶ್ವವಿದ್ಯಾಲಯಗಳಿಗೆ ಬಂದರೆ, ಇಲ್ಲಿಯ ಇತಿಹಾಸ ವಿಭಾಗಗಳಲ್ಲಿ ಇತ್ತೀಚೆಗೆ ಬೋಧನೆಗೆ ಹೆಚ್ಚು ಅವಕಾಶ ಸಿಕ್ಕು, ಸಂಶೋಧನೆ ಕ್ಷೀಣಿಸುತ್ತ ನಡೆದಿದೆ. ಬಹಳವೆಂದರೆ ಸಂಶೋಧನ "ಕಾರ್ಯ"ಗಳಿಗಿಂತ "ಕಾರ್ಯಕ್ರಮ" ಮಾಡಿ ಧನ್ಯತೆಯನ್ನು ಅನುಭವಿಸುತ್ತಲಿವೆ. ಅಂದರೆ ಪ್ರತಿವರ್ಷ ಮಾರ್ಚ್ ೩೧ ಕ್ಕೆ 'ಸೆಮಿನಾರ್' ಮಾಡಿ, ಪತ್ರಿಕೆಗಳಲ್ಲಿ ಮಿಂಚಿ ಮಾಯವಾಗುವ ಕೆಲಸ ಮಾತ್ರ ಇಲ್ಲಿ ಉಳಿದುಕೊಂಡು, ಗಂಭೀರ ಚಿಂತನೆಯ, ಕಠಿಣ ಪರಿಶ್ರಮದ ಯೋಜನೆಗಳು ಇಲ್ಲಿಂದ ಓಟ ಕಿತ್ತಿವೆ.

ಸ್ನಾತಕೋತ್ತರ ಕನ್ನಡ ವಿಭಾಗಗಳಿಗೆ ಬಂದರೆ ಇಲ್ಲಿಯೂ ಇದೇ ಸ್ಥಿತಿ ವಿರಾಜಮಾನವಾಗಿದೆ. ಇತಿಹಾಸ ಚಟುವಟಿಕೆಗೇ ಸೀಮಿತಗೊಳಿಸಿ ಹೇಳುವುದಾದರೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗ ಕೈಗೆತ್ತಿಕೊಂಡಿರುವ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ ಪರಿಷ್ಕೃತ ಆವೃತ್ತಿಗಳು ಸಮಯಕ್ಕೆ ಸರಿಯಾಗಿ ಹೊರಬರದಿರುವುದು, ಸಂಬಂಧಿಸಿದ ಅಧಿಕಾರಿಗಳಿಗೆ ಅವುಗಳ ಮಹತ್ವದ ಅರಿವಿಲ್ಲದುದರ ದ್ಯೋತಕವಾಗಿದೆ.

ಹೀಗೆ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಿಂದ ತುಂಗಭದ್ರಾನದಿಯ ದಕ್ಷಿಣದ ೯ ಜಿಲ್ಲೆಯ ಶಾಸನಗಳು ದ್ವಿತೀಯ ಆವೃತ್ತಿ ರೂಪದಲ್ಲಿ ಕುಂಟುತ್ತಲಾದರೂ ಪ್ರಕಟವಾಗುತ್ತಲಿವೆ. ಮಿಕ್ಕ ೧೧ ಜಿಲ್ಲೆಗಳ ಶಾಸನಗಳಲ್ಲಿ

ಒಂದಿಷ್ಟನ್ನು ಪ್ರಕಟಿಸಿದ ಕೇಂದ್ರ ಪುರಾತತ್ವ ಇಲಾಖೆ, ಈ ಕೆಲಸವನ್ನು ಮುಂದುವರಿಸಲಿಲ್ಲ. ತನ್ನ 'ಎಪಿಗ್ರಾಫಿಯ ಕರ್ನಾಟಕ' ಮಾದರಿಯಲ್ಲಿ 'ರಾಜ್ಯ ಪುರಾತತ್ವ ಇಲಾಖೆ'ಯೂ ಪ್ರಕಟಿಸಲಿಲ್ಲ. ಕರ್ನಾಟಕ, ಮಂಗಳೂರು, ಗುಲ್ಬರ್ಗಾ ವಿಶ್ವವಿದ್ಯಾಲಯಗಳು ಇದು ತನ್ನ ಕೆಲಸವಲ್ಲವೆಂಬಂತೆ ಬೆನ್ನು ತಿರುಗಿಸಿ ಕುಳಿತುಕೊಂಡಿವೆ. ಇದರಿಂದಾಗಿ ೧೧ ಜಿಲ್ಲೆಗಳ, ಅದರಲ್ಲಿಯೂ ಗುಲ್ಬರ್ಗಾ, ಬೀದರ, ರಾಯಚೂರು ಜಿಲ್ಲೆಗಳ, ಇವುಗಳಿಗಿಂತ ಹೊರನಾಡಿನ ಶಾಸನಗಳು ಶಾಸನ ವಿದ್ವಾಂಸರಾದ ನಮ್ಮತ್ತ ದೈನ್ಯ ದೃಷ್ಟಿಯಿಂದ ನೋಡುತ್ತಲಿವೆ.

ರಾಜಮನೆತನಗಳಿಗೆ ಸಂಬಂಧಿಸಿದ ಶಾಸನ ಸಂಪುಟಗಳನ್ನೂ ಸೂಚಿಸಂಪುಟಗಳನ್ನೂ ಸಂಯೋಜಿಸುವ ಕೆಲಸದಲ್ಲಿ ತೊಡಗಿಕೊಳ್ಳುವ ಮೂಲಕ, ಶಾಸನಕ್ಷೇತ್ರಕ್ಕೆ ಬೆಲೆಯುಳ್ಳ ಕೊಡುಗೆ ಸಲ್ಲಿಸುತ್ತಲಿರುವ ನಮ್ಮ ನಿವೃತ್ತಶಾಸನತಜ್ಞರನ್ನು ಈ ಶಾಸನ ಇಲಾಖೆಗಳು ಬಳಸಿಕೊಂಡು, ಮೇಲೆ ಹೇಳಿದ ಪ್ರದೇಶಗಳ ಅಪ್ರಕಟಿತ ಶಾಸನಗಳ ಪ್ರಕಟನಕಾರ್ಯವನ್ನು ಮೊದಲು ಮಾಡಿ ಮುಗಿಸಬೇಕಾಗಿದೆ.

ಕನ್ನಡ ಸಂಸ್ಕೃತಿಯ ಶೋಧ-ಪ್ರಸಾರಗಳಿಗಾಗಿ ತಲೆಯೆತ್ತಿರುವ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಪುಸ್ತಕ ಗಳನ್ನು ಹೆಚ್ಚು ಸಂಖ್ಯೆಯಲ್ಲಿ ಪ್ರಕಟಿಸುತ್ತಿದೆಯಾದರೂ ಬಹಳಷ್ಟು ಪುಸ್ತಕಗಳು ಇದರ ಉದ್ದೇಶಕ್ಕೆ ಹೊರತಾದು ವೆಂದೂ, ಇಲ್ಲಿ ನಡೆದಿರುವದು ಸ್ವಲ್ಪ ಹೆಚ್ಚು ಕಡಿಮೆ 'ಸಾಹಿತ್ಯ ಅಕಾಡಮಿ' ಮಾದರಿಯ ಕೆಲಸವೆಂದೂ ವಿದ್ವಾಂಸರ ಅಭಿಪ್ರಾಯವಾಗಿದೆ. ಬೇರೆ ವಿದ್ವಾಂಸರ ಕೃತಿಗಳನ್ನು ಪ್ರಕಟಿಸುವ ಮೂಲಕ 'ಪುಸ್ತಕ ಪ್ರಕಾಶನಸಂಸ್ಥೆ'ಯ ಸ್ವರೂಪಕ್ಕೆ ಇಳಿಯುತ್ತಲಿರುವ ಇದು, ತಾನೇ ನೇರವಾಗಿ ಶೋಧ, ಬರೆವಣಿಗೆ, ಅನುವಾದ ಕೆಲಸಗಳಲ್ಲಿ ತೊಡಗಿಕೊಂಡು, 'ವಿಶ್ವವಿದ್ಯಾಲಯ'ದ ಸ್ವರೂಪ ಪಡೆಯಬೇಕಾಗಿದೆ.ಅದರ ಕಣ್ಣು ಮುಂದೆ ಸಂಶೋಧನೆಗಾಗಿ ಕರ್ನಾಟಕದ ಸುದೀರ್ಘವಾದ ಇತಿಹಾಸ, ಪ್ರಸಾರಕ್ಕಾಗಿ ಜಗತ್ತಿನ ವಿಸ್ತಾರವಾದ ಭೂಗೋಲ ಚಾಚಿಕೊಂಡಿವೆ.

ಈ ಸಂದರ್ಭದಲ್ಲಿ ಒಂದು ಸೂಚನೆ : ಭಾರತೀಯ ಪುರಾತತ್ವ ಸರ್ವೇಕ್ಷಣೆಯ ಹೈದ್ರಾಬಾದ ವಲಯದಿಂದ ಉತ್ತರ ಕರ್ನಾಟಕದ ಜಿಲ್ಲೆಗಳನ್ನು ಬೇರ್ಪಡಿಸಿ, ಹೊಸದಾಗಿ 'ಧಾರವಾಡ ವಲಯ'ವನ್ನು ಸ್ಥಾಪಿಸುವುದು ಬಹು ದಿನಗಳಿಂದ ನೆನೆಗುದಿಗೆ ಬಿದ್ದಿದ್ದು. ಪ್ರಭಾವಶಾಲಿ ವ್ಯಕ್ತಿಗಳು, ಸರಕಾರ-ಈ ಕೆಲಸಕ್ಕೆ ಆದ್ಯಗಮನ ಕೊಡಬೇಕಾಗಿದೆ.

ಶಾಸನಗಳಂತೆ ಆಕರಗಳ ಇನ್ನೊಂದು ಗಣಿ "ಹಸ್ತಪ್ರತಿಗಳು". ಶಾಸನಶೋಧ ಕಾರ್ಯ ಮತ್ತು ಹಸ್ತಪ್ರತಿಶೋಧ ಕಾರ್ಯಗಳು ನೂರು ವರ್ಷಗಳ ಹಿಂದೆ, ಕರ್ನಾಟಕದಲ್ಲಿ ಏಕಕಾಲಕ್ಕೆ "ರಾಜ್ಯ ಪುರಾತತ್ವ ಇಲಾಖೆ"ಯ ಮೂಲಕ ಪ್ರಾರಂಭ ವಾದುವೇನೋ ನಿಜ. ಮುಂದೆ ಕೆಲವೇ ದಿನಗಳಲ್ಲಿ 'ರಾಜ್ಯಪುರಾತತ್ವ ಇಲಾಖೆ'ಯಿಂದ ಹಸ್ತಪ್ರತಿಗಳನ್ನು ಪ್ರತ್ಯೇಕಿಸಿ ವಿಶ್ವವಿದ್ಯಾಲಯದ ಒಂದು ಭಾಗವನ್ನಾಗಿಸಲಾಯಿತು. ಬೋಧನಪ್ರಧಾನವಾದ ವಿಶ್ವವಿದ್ಯಾಲಯಗಳು ಈ ಇಲಾಖೆ ಯನ್ನು, ಇಲ್ಲಿ ದುಡಿಯುವ ವಿದ್ವಾಂಸರನ್ನು ಎರಡನೆಯ ದರ್ಜೆಯ ಪ್ರಜೆಗಳಂತೆ ನೋಡಿಕೊಳ್ಳುತ್ತಲಿವೆ. ಹೀಗಾಗಿ ಶಾಸನಗಳಿಗೆ 'ರಾಜ್ಯ ಪುರಾತತ್ವ ಇಲಾಖೆ', ಮುದ್ರಿತ ಪುಸ್ತಕಗಳಿಗೆ 'ರಾಜ್ಯ ಸಾರ್ವಜನಿಕ ಗ್ರಂಥಾಲಯ ಇಲಾಖೆ'ಗಳು ಅಸ್ತಿತ್ವಕ್ಕೆ ಬಂದಂತೆ, ಹಸ್ತಪ್ರತಿಗಳಿಗಾಗಿ 'ರಾಜ್ಯ ಹಸ್ತಪ್ರತಿ ಇಲಾಖೆ' ಹೆಸರಿನ ಸ್ವತಂತ್ರ ಸಂಸ್ಥೆಯೊಂದು ಅಸ್ತಿತ್ವಕ್ಕೆ ಬರಬೇಕಾಗಿದೆ. ರಾಜ್ಯದ ಒಳ-ಹೊರಗೆ ಅಲ್ಲಲ್ಲಿ ಬಿದ್ದುಕೊಂಡಿರುವ, ಟ್ರಕ್ಕುಗಟ್ಟಲೇ ಸಿಗಬಹುದಾದ ಹಸ್ತಪ್ರತಿಗಳನ್ನು ಸಂಗ್ರಹಿಸುವುದರೊಂದಿಗೆ, ಈಗಾಗಲೇ ವಿಶ್ವವಿದ್ಯಾಲಯಗಳಲ್ಲಿ ಸಂಗ್ರಹವಾಗಿರುವ ಹಸ್ತಪ್ರತಿಗಳ ಸೂಚೀರಚನೆ. ಪರಿಷ್ಕರಣ-ಪ್ರಕಟನಕಾರ್ಯಗಳಿಗೆ ತೀವ್ರ ಗಮನ ಕೊಡಬೇಕಾಗಿದೆ.

ಸಾಮಾನ್ಯವಾಗಿ ಹಸ್ತಪ್ರತಿಗಳು ಸಾಹಿತ್ಯ-ಶಾಸ್ತ್ರಗಳನ್ನೊಳಗೊಂಡಿದ್ದರೂ ಅವು ಇತಿಹಾಸಕ್ಕೂ ಸಾಮಗ್ರಿ ಒದಗಿಸುತ್ತವೆಂದು ಬೇರೆ ಹೇಳಬೇಕಿಲ್ಲ. ನನ್ನ ದೃಷ್ಟಿಯಲ್ಲಿ ಸಾಹಿತ್ಯ ಬೇರೆಯಲ್ಲ, ಇತಿಹಾಸ ಬೇರೆಯಲ್ಲ. ಸತ್ಯದ ವಾಸ್ತವ ರೂಪ ಇತಿಹಾಸ, ಕಲಾರೂಪ ಸಾಹಿತ್ಯ. ಈ ಸಾಹಿತ್ಯರಾಶಿಯ ಭಾಗವಾಗಿರುವ ಕುಮಾರರಾಮನ ಸಾಂಗತ್ಯ, ಕೆಳದಿನೃಪವಿಜಯ ಮೊದಲಾದ 'ಚಾರಿತ್ರಿಕ ಕಾವ್ಯ'ಗಳು ಈಗಾಗಲೇ ಪ್ರಕಟಗೊಂಡಿವೆ.ಇತ್ತೀಚೆಗೆ ಇಮ್ಮಡಿ ಚಿಕ್ಕಭೂಪಾಲನ

ಸಾಂಗತ್ಯ, ನಿಂಬಸಾಮಂತ ಚರಿತೆ, ಸಿರುಮಣ ನಾಯಕನ ಸಾಂಗತ್ಯ, ಸಿರುಮನ ಚರಿತೆ, ಗೊಲ್ಲ ಸಿರುಮನ ಚರಿತೆಗಳು ಪ್ರಕಟವಾದುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಹಸ್ತಪ್ರತಿಗಳಲ್ಲಿ ಉಳಿದುಕೊಂಡಿರುವ ಇಂಥ ಇನ್ನೂ ಹತ್ತಾರು ಮಹತ್ವದ ಕೃತಿಗಳು ಪ್ರಕಟವಾಗಬೇಕಾಗಿದೆ.

ಇವುಗಳಲ್ಲದೆ, ಕಾವ್ಯ–ಶಾಸ್ತ್ರಗಳಲ್ಲಿ ಅಡಕವಾಗಿರುವ ಚರಿತ್ರೆಯ ತುಣುಕುಗಳನ್ನು ಶೋಧಿಸುವುದು ಇಂದು ಅವಶ್ಯವಿದೆ ಉದಾ : ಕೇಶಿರಾಜನ ಶಬ್ದಮಣಿ ದರ್ಪಣದಲ್ಲಿ "ಬಾಲವಣಮಂ ಬೇಡುವನೊಂದೆ ಗೊಂದೆಗಮನಂಗಾ ರಾತಿಯಂ ಹೈಹಯಂ" ಎಂಬ ಕರ್ತೃ ನಿರ್ದೇಶನವಿಲ್ಲದ ವಾಕ್ಯ ಕಂಡುಬರುತ್ತದೆ. ಹೈಹಯ ಅರಸು ಶಿವನಿಗಿರುವ ಒಂದೇ ಒಂದು ನಂದಿಗೂ 'ಬಾಲವಣ'ವನ್ನು ಅಂದರೆ ಎತ್ತಿನ ಸುಂಕವನ್ನು ಆಕರಿಸದೆ ಬೇಡುವುದಿಲ್ಲವೆಂದು ಇಲ್ಲಿಯ ಅಭಿಪ್ರಾಯ. ಇದು ಹೈಹಯ ಅರಸರ ಕ್ರೂರ ಸುಂಕವ್ಯವಸ್ಥೆಯನ್ನು ಸೂಚಿಸುತ್ತದೆ.

'ಗಂಗಿ–ಗೌರಿ ಸಂವಾದ' ಕಾವ್ಯದಲ್ಲಿ ಶಿವನು ಗಂಗೆಯನ್ನು ಕದ್ದು ಪ್ರೀತಿಸಿದ ವಿಷಯವನ್ನು, ಗಿಳಿ ಬಂದು ಗೌರಿಗೆ ಹೇಳುತ್ತದೆ. ಆಗ "ಹಂಡೆ ಮಲಕನೊಡೆಯ ಉಂಡ ಮನೆಯ ಜಂತಿ ಎಣಿಸನು" ಎಂದು ತನ್ನ ಗಂಡನ ಏಕಪತ್ನೀ ನಿಷ್ಠೆಯನ್ನು ಗೌರಿ ಸಮರ್ಥಿಸಿಕೊಳ್ಳುತ್ತಾಳೆ. ಈ ಕೃತಿಯ ಸಂಪಾದಕರು 'ಹಂಡೆ ಮಲಕ' ಎಂಬುದಕ್ಕೆ "ಹಂಡೆಯ (ಪಾತ್ರೆಯ) ಗಂಟು" ಎಂದು ಅಸಂಬದ್ಧ ಅರ್ಥ ಬರೆದಿದ್ದಾರೆ. "ಶಿವನು ಹಂಡೆಯ (ಪಾತ್ರೆಯ) ಗಂಟಿನ ಒಡೆಯ" ಎಂದರೆ ಏನು ಅರ್ಥ ? ಇದು ಶುದ್ಧ ತಪ್ಪು. ಇಲ್ಲಿಯ 'ಹಂಡೆಯ ಮಲಕ' ಎಂದರೆ ಬಳ್ಳಾರಿ ಪ್ರದೇಶದಲ್ಲಿ ಆಳುತ್ತಲಿದ್ದ ಹಂಡೆ ಮನೆತನದ ಪಾಳೆಯಗಾರನಾದ ಮಲಕನಾಯಕ. ಇವನು ಶಿವಭಕ್ತ. ಇದನ್ನು ಇಟ್ಟುಕೊಂಡರೆ 'ಹಂಡೆ ಮಲಕ ನೊಡೆಯ' ಎಂಬುದಕ್ಕೆ ಶಿವನೆಂಬ ಸರಿಯಾದ ಅರ್ಥ ಹೊರಡುವುದಲ್ಲದೆ, ಈ ಕಾವ್ಯ ಮಲಕನಾಯಕನ ಆಸ್ಥಾನದಲ್ಲಿ ಹುಟ್ಟಿದೆಯೆಂದೂ ಸ್ಪಷ್ಟವಾಗುತ್ತದೆ. ಕನ್ನಡ ಕಾವ್ಯಗಳಲ್ಲಿ ಇಂಥ ಸಣ್ಣ ಸಣ್ಣ ಐತಿಹಾಸಿಕ ತುಣುಕುಗಳು ನೂರುನೂರು ಸಿಗುತ್ತವೆ. ಕಾವ್ಯ, ಶಾಸನ, ದಾಖಲೆ ಮೊದಲಾದವುಗಳ ವ್ಯಾಪಕ ಅಧ್ಯಯನದ ಹಿನ್ನೆಲೆ ಇದ್ದವನು ಮಾತ್ರ ಇವುಗಳನ್ನು ಗ್ರಹಿಸಬಲ್ಲ, ಸಂಗ್ರಹಿಸಬಲ್ಲ. ಇವೆಲ್ಲವನ್ನೂ ಹಸ್ತಪ್ರತಿಗಳಿಂದ ಆಯ್ದು ಸಂಪುಟಗಳಾಗಿ ನಾವು ಪ್ರಕಟಿಸಬೇಕಿದೆ.

ಇವುಗಳಿಗಿಂತ ಭಿನ್ನವಾದ ಸಾಮಗ್ರಿ ಹಳೆಯ ದಾಖಲೆಗಳು. ದೇವಾಲಯ-ಮಠಗಳಲ್ಲಿ, ಪ್ರತಿಷ್ಠಿತ ಕುಟುಂಬ ಗಳಲ್ಲಿ ಧೂಳು ತಿನ್ನುತ್ತ ಬಿದ್ದುಕೊಂಡಿರುವ ಇವುಗಳ ಸಂರಕ್ಷಣೆ, ಅಧ್ಯಯನಗಳಿಗಾಗಿ ಸ್ಥಾಪಿಸಲ್ಪಟ್ಟಿರುವ 'ರಾಜ್ಯ ಪತ್ರಾಗಾರ ಇಲಾಖೆ' ತಾನು ಈವರೆಗೆ ಏನು ಮಾಡಿರುವೆನೆಂಬುದನ್ನು ಪ್ರಕಟನೆಗಳ ಮೂಲಕ ವಿದ್ವಾಂಸರ ಗಮನಕ್ಕೆ ತರುವುದು ಅವಶ್ಯವಿದೆ. ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಬಂಡಿಗಟ್ಟಲೆ ಬಿದ್ದಿರುವ ದಾಖಲೆಗಳು, ಈ ಇಲಾಖೆಯನ್ನು ಕೈಮಾಡಿ ಕರೆಯುತ್ತಲಿವೆ. ಈ ದಾಖಲೆಗಳ ವರ್ಗಕ್ಕೆ ಸೇರುವ ೧೩೪ ಕೈಫಿಯತ್ತುಗಳನ್ನೊಳಗೊಂಡ 'ಕರ್ನಾಟಕದ ಕೈಫಿಯತ್ತುಗಳು' ಕೃತಿ, ಇಂದು ಇತಿಹಾಸ ಸಮ್ಮೇಳನದಲ್ಲಿ ಬಿಡುಗಡೆಯಾದುದು ಒಂದು ಯೋಗಾಯೋಗ. ಇತಿಹಾಸಕ್ಕೆ ಸಂಬಂಧಿಸಿದ ಇನ್ನೊಂದು ಸಾಮಗ್ರಿ ಗೆಝೆಟಿಯರ್. ಆಕರಗಳ ಸಂಗ್ರಹ, ಲೇಖನಗಳ ಬರೆವಣಿಗೆ, ಸಂಪುಟಗಳ ಪ್ರಕಟನೆ ದೃಷ್ಟಿಯಿಂದ 'ರಾಜ್ಯ ಗೆಝೆಟಿಯರ್ ಇಲಾಖೆ' ಕಾಲಕ್ಕೆ ಸರಿಯಾಗಿ ಕಾರ್ಯ ಮುಗಿಸಿ, ಮಾದರಿಯನ್ನು ಸ್ಥಾಪಿಸಿವೆ.

ಈ ವರೆಗೆ ವಿವರಿಸಿದವುಗಳಲ್ಲಿ ಕನಿಷ್ಠ ಪಕ್ಷ ಲೇಖನರೂಪದ ಆಕರಗಳ ಸಂಗ್ರಹವನ್ನಾದರೂ ೧೦ ವರ್ಷಗಳಲ್ಲಿ ಮಾಡಿ ಮುಗಿಸುವ ಸಲುವಾಗಿ ಎಲ್ಲ ಪ್ರದೇಶಗಳ ಎಲ್ಲ ಶಾಸನ, ಎಲ್ಲ ಹಸ್ತಪ್ರತಿ ಎಲ್ಲ ದಾಖಲೆಗಳ ಸಂಗ್ರಹ ಮತ್ತು ಪ್ರಕಟನೆ ಹೆಸರಿನ ಒಂದು ಕಾಲಬದ್ಧ ಯೋಜನೆಯನ್ನು ಸರಕಾರ ಸಂಬಂಧಪಟ್ಟ ಇಲಾಖೆಗಳಿಗೆ ವಹಿಸಿಕೊಡಬೇಕಾಗಿದೆ : ಇತ್ತೀಚೆಗೆ ೧೫ ಸಂಪುಟಗಳಲ್ಲಿ "ಎಲ್ಲ ಶರಣರ ಎಲ್ಲ ವಚನ"ಗಳ ಯೋಜನೆಯನ್ನು ನಿರ್ದಿಷ್ಟ ಕಾಲಾವಧಿಯಲ್ಲಿ ಮಾಡಿ ಮುಗಿಸಿದಂತೆ. ತಡಮಾಡಿದರೆ ಈ ಸಾಮಗ್ರಿ ಶಾಶ್ವತವಾಗಿ ನಮ್ಮ ಕೈಬಿಟ್ಟು ಹೋಗುವುದರಿಂದ, ಇತಿಹಾಸ ಸಮ್ಮೇಳನ ಈ ವಿಷಯವಾಗಿ ಸರಕಾರದ ಮೇಲೆ ಒತ್ತಡ ತರುವುದು, ಜೊತೆಗೆ ಈ ಕೆಲಸ ಮಾಡಬೇಕಾದ ನಾವು ನಮ್ಮ ಮೇಲೆ ಒತ್ತಡ ತಂದುಕೊಳ್ಳುವುದು ಅವಶ್ಯವಿದೆ.

ಇವೆಲ್ಲ ಶಿಷ್ಟ ಆಕರಸಾಮಗ್ರಿಯಾಗಿವೆ. ಇದಕ್ಕಿಂತ ಭಿನ್ನವಾದ ದೇಶೀ ಸಂಸ್ಕೃತಿಯ ಪಳೆಯುಳಿಕೆಯಾದ ವಿಪುಲ ಜಾನಪದಸಾಮಗ್ರಿ ಅಲ್ಲಲ್ಲಿ ಉಳಿದುಕೊಂಡಿದೆ. ಅನೇಕ ರೂಪಗಳಲ್ಲಿ ಸಿಗುವ ಈ ಸಾಮಗ್ರಿಯ ಸಂಗ್ರಹ-ಅಧ್ಯಯನ ಇತ್ತೀಚೆಗೆ ಕನ್ನಡ ಅಧ್ಯಾಪಕರಿಂದ ಪ್ರಾರಂಭವಾಗಿದ್ದು, ಇನ್ನು ಮುಂದೆ ಇವರ ಜೊತೆ ಸಮಾಜಶಾಸ್ತ್ರ, ಮಾನವಶಾಸ್ತ್ರ ಮೊದಲಾದ ಶಿಸ್ತುಗಳ ವಿದ್ವಾಂಸರು ಈ ಕ್ಷೇತ್ರವನ್ನು ಪ್ರವೇಶಿಸಬೇಕಾಗಿದೆ. ಇತಿಹಾಸ ಪ್ರಾಧ್ಯಾಪಕರಿಗೂ ಇಲ್ಲಿ ವಿಪುಲ ಅವಕಾಶವಿದೆ. ಬಳ್ಳಾರಿ ಜಿಲ್ಲೆಯ ಓರುವಾಯಿ ಶಾಸನ ಕಪ್ಪೆಯರ ಆಹಾರದಾನವನ್ನೂ, ಸಮೀಪದ ಕುಡುತಿನಿ ಶಾಸನ ಕುಮಾರಸ್ವಾಮಿಯ ಯಾತ್ರೆಗೆ ಬರುವ ಕಪ್ಪಡಿಗಳ ಅನ್ನಸತ್ರವನ್ನೂ ಸೂಚಿಸುತ್ತವೆ. ಇಲ್ಲಿ ಕಪ್ಪೆಯರು, ಕಪ್ಪಡಿಗಳು ಸಮಾನಾರ್ಥ ಪದಗಳೆಂಬುದು ಸ್ಪಷ್ಟ. ಇದನ್ನು ಓದುತ್ತಲೇ ಬಾದಾಮಿಯ ಕಪ್ಪೆಅರಭಟ್ಟನ ಶಾಸನ ನೆನಪಾಗುತ್ತದೆ. ಕುಮಾರಸ್ವಾಮಿಯ ನೆಲೆಯಾದ ಈ ಸೊಂಡೂರಿನಲ್ಲಿರುವ "ಕಪ್ಪೆ" ಅಡ್ಡ ಹೆಸರಿನ ಮನೆತನಗಳಲ್ಲಿ ಜಾನಪದೀಯ ಶೋಧ ನಡೆಸಿದಲ್ಲಿ ಈ ಸಮಸ್ಯೆ ಬಗೆಹರಿಯುವಂತಿದ್ದರೆ, ಇತಿಹಾಸ ಸಂದರ್ಭದಲ್ಲಿ ಜಾನಪದ ಅಧ್ಯಯನ ಎಷ್ಟು ಮಹತ್ವಂದ್ದೆಂಬುದು ತಾನೇ ವಿದಿತವಾಗುತ್ತದೆ. ಶಾಸನಗಳಲ್ಲಿ ಬರುವ ಗವರೆಗಳು, ಗಾತ್ರಿಗರು ಹೆಸರಿನ ವ್ಯಾಪಾರಿ ವರ್ಗಗಳು ಇಂದಿನ ಕೋರಿ, ಕತ್ರಿ ವ್ಯಾಪಾರಿ ಮನೆತನಗಳೆಂದು ನಾನು ಬೇರೆಡೆ ಬರೆದುದನ್ನು ಇಲ್ಲಿ ಸೂಚಿಸಬಹುದಾಗಿದೆ.

ಜಾನಪದದ ಜೊತೆಗೆ ಇತ್ತೀಚೆಗೆ ತೆರೆದುಕೊಂಡ ಇನ್ನೊಂದು ಅಧ್ಯಯನವೆಂದರೆ 'ನಾಮವಿಜ್ಞಾನ'. ಗ್ರಾಮ ನಾಮ, ವ್ಯಕ್ತಿನಾಮ, ಕುಟುಂಬನಾಮ ಇತ್ಯಾದಿಗಳನ್ನೊಳಗೊಳ್ಳುವ ಇದು, ಅನ್ಯ ಆಕರಗಳಿಂದ ಹೊರಡುವ ಇತಿಹಾಸ ನಿಂತಲ್ಲಿಂದ, ಅದನ್ನು ಮುಂದಕ್ಕೆ ಕರೆದುಕೊಂಡು ಹೋಗುತ್ತದೆ. ಬಾಗೇವಾಡಿ ತಾಲೂಕಿನ ಭೈರವಾಡಗಿಯ ಪ್ರಾಚೀನ ಹೆಸರು ಬೌದ್ಧವಾಡಿಗೆ, ಬೇತಮಂಗಲದ ಪ್ರಾಚೀನ ಹೆಸರು ವಿಜಯಾದಿತ್ಯಮಂಗಲ-ಇತ್ಯಾದಿ ಸೂಚನೆಗಳು ಸಾಂಸ್ಕೃತಿಕ, ರಾಜಕೀಯ ಅಧ್ಯಯನಕ್ಕೆ ಎಷ್ಟು ಮಹತ್ವದವುಗಳೆಂದು ಬೇರೆ ಹೇಳಬೇಕಿಲ್ಲ. ಇದೇ ರೀತಿ ಕಟ್ವಪ್ಪು, ಬನವಾಸಿ, ಮೈಸೂರು. ಚಿತ್ರದುರ್ಗ ಮೊದಲಾದ ಗ್ರಾಮನಾಮಗಳೂ, ಪುಲಿಕೇಶಿ, ಬುಕ್ಕ, ಪ್ರೌಢದೇವರಾಯ ಎಂಬಂಥ ವ್ಯಕ್ತಿ ನಾಮಗಳೂ, ಕದಂಬ, ಚಾಲುಕ್ಯ, ಹೊಯ್ಸಳ ಮೊದಲಾದ ಕುಟುಂಬನಾಮಗಳೂ ಅಭ್ಯಾಸ ಯೋಗ್ಯವಾಗಿದ್ದು, ನಾಮ ವಿಜ್ಞಾನ ಮಾತ್ರ ಇವುಗಳ ಹಿಂದಿರುವ ಸತ್ಯವನ್ನು ಸ್ಫೋಟಗೊಳಿಸುತ್ತದೆ. ದುರ್ದೈವದ ಸಂಗತಿಯೆಂದರೆ, ಈ ಕ್ಷೇತ್ರದಲ್ಲಿ ದುಡಿಯುತ್ತಲಿರುವ ಬಹುಜನ ವಿದ್ವಾಂಸರಿಗೆ ನಾಮವಿಜ್ಞಾನದ ವೈಜ್ಞಾನಿಕ ದೃಷ್ಟಿಕೋನ ಇನ್ನೂ ಲಭ್ಯವಾಗಿಲ್ಲವೆಂದೇ ಹೇಳಬೇಕು.

ಇದಕ್ಕಿಂತ ಸೂಕ್ಷ್ಮವಾದ, ವ್ಯಾಪಕವಾದ ಆಕರಸಾಮಗ್ರಿ ಭಾಷೆ. ಇಂದು ಭಾಷೆಯ ರಾಚನಿಕ ಅಧ್ಯಯನ ನಡೆದಿದ್ದು, ಇನ್ನು ಮೇಲೆ ಸಾಂಸ್ಕೃತಿಕ ಅಧ್ಯಯನ ನಡೆಯಬೇಕಾಗಿದೆ. ಬದುಕಿನ ಶಬ್ದರೂಪವಾಗಿರುವ ಭಾಷೆಯ ಸಾಂಸ್ಕೃತಿಕ ಅಧ್ಯಯನವೆಂದರೆ ಬದುಕಿನ ಅಧ್ಯಯನವೇ ಆಗುತ್ತದೆ. ಸಂಸ್ಕೃತಿಯನ್ನು ತಿಳಿಸಿಕೊಡುವ ಸಾಧನವಾಗಬಹು ದಾದ ಭಾಷೆ, ಸಂಸ್ಕೃತಿಯನ್ನು ಪಲ್ಲಟಗೊಳಿಸುವ ಸಾಧನವೂ ಆಗಬಹುದು. ಗದುಗಿನ ಪ್ರಾಚೀನತಮ ಬೀಚಮಕೆರೆಯೇ ಇಂದು 'ಭೀಷ್ಮಕೆರೆ'ಯೆಂದು ಪ್ರಸಿದ್ಧಿ ಪಡೆದುದು, ಭಾಷೆಯಿಂದಾಗಿ ಸಂಸ್ಕೃತಿ ಪಲ್ಲಟಗೊಳ್ಳುವುದಕ್ಕೆ ಉದಾಹರಣೆ ಯಾಗಿದೆ. ಆದುದರಿಂದ ಸಂಸ್ಕೃತಿಯಲ್ಲಿ ಭಾಷೆಯನ್ನು, ಭಾಷೆಯಲ್ಲಿ ಸಂಸ್ಕೃತಿಯನ್ನು ಎಚ್ಚರಿಕೆಯಿಂದ ಹುಡುಕಬೇಕಾಗಿದೆ.

ಹೀಗೆ ಆಕರಗಳ ಶೋಧ ಅನೇಕ ನೆಲೆಗಳಲ್ಲಿ ನಡೆದರೆ ಮಾತ್ರ ಇತಿಹಾಸ ರಚನೆಗೆ ಒಂದು ಸಮಗ್ರತೆ ಪ್ರಾಪ್ತ ವಾಗುತ್ತದೆ. ಆದುದರಿಂದ ನಮ್ಮ ಇತಿಹಾಸಕಾರರು ಇನ್ನು ಮುಂದೆ ಆಕರದ ಹೊಸ ಹೊಸ ನೆಲೆಗಳನ್ನು ಹುಡುಕಿಕೊಂಡು ಹೋಗಬೇಕಾಗಿದೆ.

* * *

ಬಹು ದಿನಗಳಿಂದಲೂ ನನ್ನ ಮನಸ್ಸನ್ನು ಕೊರೆಯುತ್ತಲಿರುವ ಒಂದು ಅಂಶವೆಂದರೆ, ಅಸತ್ಯಗಳಿಂದ ಮುಕ್ತವಾದ ಕರ್ನಾಟಕದ ಇತಿಹಾಸ ರಚನೆ. "ನಾವು ಓದುತ್ತಲಿರುವ ಇತಿಹಾಸ, ಕೆಲವೊಮ್ಮೆ ನಡೆದ ಇತಿಹಾಸವಾಗಿರ

ಲಿಕ್ಕಿಲ್ಲ" ಎಂಬ ಸಂದೇಹ ನನ್ನನ್ನು ಆಗಾಗ ಕಾಡಿದೆ. ೫೦ ವರ್ಷಗಳಾಚೆಯ ಸ್ವಾತಂತ್ರ್ಯಯೋಧರ ಪಟ್ಟಿಯಲ್ಲಿ ಖೋಟಾ ಹೆಸರುಗಳೂ ದಾಖಲಾಗಿರುವುದನ್ನು ನೆನೆದರೆ, ಸಾವಿರ ವರ್ಷಗಳಾಚೆಯ ನಿಷ್ಕಲಂಕ ಇತಿಹಾಸ ಬರೆಯಬೇಕೆನ್ನುವವನಿಗೆ ಈ ಸಂದೇಹ ಕಾಡುವುದು ಸಹಜ. ಎಂದೋ ಜರುಗಿದ ಘಟನೆ, ಎಂದೋ ಅಸ್ತಿತ್ವದಲ್ಲಿದ್ದ ವ್ಯವಸ್ಥೆ ಮತ್ತು ಇವುಗಳ ಹಿಂದಿರುವ ಕಾರಣ–ಇತ್ಯಾದಿಗಳನ್ನು ಕಂಡುಹಿಡಿಯುವುದು ಅಷ್ಟು ಸರಳ ಕೆಲಸವಲ್ಲ. ಕರ್ನಾಟಕದಂಥ ಬಹುಸಂಸ್ಕೃತಿಯ ನಾಡಿನಲ್ಲಿ ಇದು ಇನ್ನೂ ಕಷ್ಟದ ಕೆಲಸ, ಶಿಷ್ಟರ ಆರ್ಯೀಕರಣ, ಜಾನಪದರ ಐತಿಹ್ಯೀಕರಣ ರೂಪದ ಆಕರಸಾಮಗ್ರಿಯಿಂದಾಗಿ, ಇಲ್ಲಿ ವಿದ್ವಾಂಸರ ಅಪವ್ಯಾಖ್ಯಾನೀಕರಣಕ್ಕೆ ವಿಪುಲ ಅವಕಾಶವಿದೆ. ಈ ಅಪವ್ಯಾಖ್ಯಾನಕ್ಕೆ ಇತಿಹಾಸ ಬರೆಯುವವನ ಆರ್ಯಧೋರಣೆ ಇಲ್ಲವೆ ಆಂಗ್ಲಧೋರಣೆ ಸೇರಿದರಂತೂ ನಿಜದ ನೆಲೆ ಕೈಗೆ ಸಿಗದೇ ಹೋಗುತ್ತದೆ. ಈ ಸೂತಕಗಳಿಂದ ಮುಕ್ತವಾಗಿ ಇತಿಹಾಸ ಬರೆಯಬೇಕೆನ್ನುವವನು, ಆಕರಸಾಮಗ್ರಿ ಏನೇ ಹೇಳಲಿ, ಕರ್ನಾಟಕ ಯಾವ ಯಾವ ಸಂಸ್ಕೃತಿಗಳಲ್ಲಿ ಹಾಯ್ದುಬಂದಿದೆ—ಎಂಬ ಸ್ಪಷ್ಟ ತಿಳಿವಳಿಕೆಯನ್ನು ಹಿನ್ನೆಲೆಯಾಗಿಟ್ಟುಕೊಳ್ಳಬೇಕಾಗುತ್ತವೆ.

ಯಾವುದೇ ಸಂಸ್ಕೃತಿ ಶುದ್ಧರೂಪದಲ್ಲಿ ಉಳಿದು ಬಂದಿರುವುದಿಲ್ಲ ; ಬರುವುದಿಲ್ಲ. ಮಿಶ್ರಣ ಅದರ ಅನಿವಾರ್ಯ ಪ್ರಕ್ರಿಯೆ. ಆದರೆ ಇಲ್ಲಿ ಸಾಮಾಜಿಕರ ಸಹಜಮಿಶ್ರಣ, ಪಂಡಿತರ ಆರೋಪಿತಮಿಶ್ರಣ—ಎಂಬ ಎರಡು ಪ್ರಕ್ರಿಯೆಗಳು ಜರುಗುತ್ತ ಬಂದಿರುತ್ತವೆ. ಕರ್ನಾಟಕವನ್ನೇ ಕುರಿತು ಹೇಳುವುದಾದರೆ, ಇದು ಮೂಲತಃ ದ್ರಾವಿಡ ನೆಲೆ ; ಇಲ್ಲಿಯದು ಮೂಲತಃ ದ್ರಾವಿಡ ಸಂಸ್ಕೃತಿ. ಇದರ ಮೇಲೆ ಪ್ರಧಾನವಾಗಿ ಮೊದಲು ಆರ್ಯಸಂಸ್ಕೃತಿ, ಬಳಿಕ ಇಸ್ಲಾಂ ಸಂಸ್ಕೃತಿಗಳು ಸೇರಿಕೊಂಡಿದ್ದು, ಇತ್ತೀಚೆಗೆ ಆಂಗ್ಲ ಸಂಸ್ಕೃತಿ ಸೇರಿಕೊಳ್ಳುತ್ತಲಿದೆ. ಇಪ್ಪತ್ತನೆಯ ಶತಮಾನದಲ್ಲಿ ನಿಂತು ಇತಿಹಾಸ ಬರೆಯುವ ನಾವು ತೀರ ಇತ್ತೀಚಿನದೂ, ಒಡೆದು ಕಾಣುವಂಥದೂ ಆಗಿರುವ ಆಂಗ್ಲಸಂಸ್ಕೃತಿಯನ್ನು ಗುರುತಿಸಬಹುದು. ವಿಭಿನ್ನಲಕ್ಷಣಗಳನ್ನೊಳಗೊಂಡ ಇಸ್ಲಾಂ ಸಂಸ್ಕೃತಿಯನ್ನೂ ಗುರುತಿಸಬಹುದು. ಈ ಮಾತು ಆರ್ಯಸಂಸ್ಕೃತಿಯನ್ನು ಕುರಿತು ಹೇಳಲು ಬರುವಂತಿಲ್ಲ. ಅದು ಕಾಲದ ಸುದೀರ್ಘತೆ, ಪ್ರಭಾವದ ಗಾಢತೆ ದೃಷ್ಟಿಯಿಂದ ದ್ರಾವಿಡಸಂಸ್ಕೃತಿಯಲ್ಲಿ ಆಳವಾಗಿ ಕರಗಿಹೋಗಿದೆ. ಈ ಮಿಶ್ರಣವನ್ನು ಬೇರ್ಪಡಿಸಿ ನೋಡದೆ, ಇದೆಲ್ಲ ಆರ್ಯಮೂಲವೆಂದೇ ಪರಿಗಣಿಸಿ. ಇಲ್ಲವೆ ಆರ್ಯಚಿಂತನೆಗಳನ್ನು ಬೆರಸಿ, ಕೆಲವೊಮ್ಮೆ ಇತಿಹಾಸ ಬರೆಯುತ್ತ ಬಂದಿದ್ದೇವೆ. ಈ ದೋಷದಿಂದ ನಾವು ಮುಕ್ತರಾಗದ ಹೊರತು ಕರ್ನಾಟಕದ ಶುದ್ಧ ಇತಿಹಾಸ ನಮಗೆ ಕಾಣಿಸುವುದಿಲ್ಲ. ಯಾವುದೇ ಒಂದು ವಿಷಯವನ್ನು ಕೈಗೆತ್ತಿಕೊಂಡರೆ, ಅದರ ಮೂಲಮಾತೃಕೆ (Archetype) ದ್ರಾವಿಡವೋ ? ಆರ್ಯವೋ ? ದ್ರಾವಿಡ ಮಾತೃಕೆಯಾಗಿದ್ದರೆ ಯಾವ ಹಂತದಲ್ಲಿ ಅದು ಆರ್ಯಪ್ರಭಾವಕ್ಕೆ ಗುರಿಯಾಯಿತು ? ಆ ಪ್ರಭಾವ ಸಹಜವೋ ? ಆರೋಪಿತವೋ ? ಇತ್ಯಾದಿ ಪ್ರಶ್ನೆ ಹಾಕಿಕೊಂಡು, ಇತಿಹಾಸ ಕಟ್ಟುತ್ತ ಬರುವ ಕ್ರಮವನ್ನು ನಾವು ಅನುಸರಿಸಬೇಕಾಗಿದೆ. ಇತಿಹಾಸದಲ್ಲಿ ಇದನ್ನು 'ದ್ರಾವಿಡವಾದ' ಅಥವಾ 'ದೇಶೀವಾದ'ವೆಂದು ಕರೆಯಬಹುದು. ಈ ದ್ರಾವಿಡಚಿಂತನಕ್ರಮದ ಮೂಲಕ ಕರ್ನಾಟಕದ ಇತಿಹಾಸ ಬರೆಯುವುದು ಇತಿಹಾಸಕಾರನ ಕರ್ತವ್ಯವೂ ಹೌದು, ಅವನಿಗೆ ಸವಾಲೂ ಹೌದು.

"ಕನ್ನಡವು ಸಂಸ್ಕೃತಜನ್ಯ"ವೆಂದೇ ನಂಬುತ್ತಲಿದ್ದ ಕಾಲದಲ್ಲಿ ಕಾಲ್ಡವೆಲ್ ಅವರು "ದ್ರಾವಿಡಮೂಲಸಿದ್ಧಾಂತ"ವನ್ನು ಸ್ಥಾಪಿಸಿ, ನಮ್ಮ ಕಣ್ಣು ತೆರೆಸಿದರು. ಇದೇ ರೀತಿ, ಮ್ಯಾಕ್ಸಮುಲ್ಲರ್ ಪ್ರಸಾರ ಮಾಡಿದ "ಆರ್ಯಮೂಲ ಸಂಸ್ಕೃತಿ ಸಿದ್ಧಾಂತ"ವನ್ನು ಕಣ್ಣುಮುಚ್ಚಿ ಒಪ್ಪಿಕೊಳ್ಳದೆ, "ದ್ರಾವಿಡಮೂಲ ಸಂಸ್ಕೃತಿ ಸಿದ್ಧಾಂತ"ವನ್ನು ಕಾಲ್ಡವೆಲ್‌ನಂತೆ ನಾವು ಸ್ಥಾಪಿಸಬೇಕಾಗಿದೆ. ಸ್ಥಳೀಯ ನಿಜವಾದ ಸಂಸ್ಕೃತಿಯ ಹುಡುಕಾಟ ನಡೆಯಬೇಕಾಗಿದೆ. ಕನ್ನಡ ಸಂಸ್ಕೃತಿಯ ಒರಿಜಿನಾಲಿಟಿ ಏನು ? ಅದು ಬಣ್ಣ ಬದಲಿಸುತ್ತ ಬಂದ ಬಗೆಗಳಾವುವು ? ಹೀಗೆ ಪ್ರಶ್ನೆ ಹಾಕಿಕೊಂಡು ಬರೆಯದಿದ್ದರೆ, ಕರ್ನಾಟಕದ ಇತಿಹಾಸಕ್ಕೆ ನಾವು ಅನ್ಯಾಯ ಮಾಡಿದಂತಾಗುತ್ತದೆ. ಈ ದೃಷ್ಟಿಕೋನವಿಲ್ಲದೆ ಬರೆದುದು ಇತಿಹಾಸವಲ್ಲ, ಇತಿಹಾಸದ ವ್ಯಂಗ್ಯವೆನಿಸುತ್ತದೆ. ಸವದತ್ತಿ ಎಲ್ಲಮ್ಮನ ಇತಿಹಾಸವನ್ನು ರೇಣುಕೆ–ಜಮದಗ್ನಿ ಮೂಲದಿಂದ ಹೇಳುವುದು, ಮೈಲಾರನ ಇತಿಹಾಸವನ್ನುಮಣಿಮಲ್ಲಾಸುರವಧೆಯಿಂದ ನಿರೂಪಿಸುವುದು,ಶಾಸನಗಳು ಚಾಲುಕ್ಯರ ಮೂಲವನ್ನು ಚಲಕ(=ಬೊಗಸೆ)ದಿಂದ ಸಾಧಿಸುವುದು, ಹೊಯ್ಸಳರ ಮೂಲವನ್ನು ಹೊಯ್+ಸಳ ಎಂಬ ಜೈನ ಕಲ್ಪಿತ ಕಥೆಯಿಂದ ಪ್ರತಿಪಾದಿಸುವುದು, ಇವೆಲ್ಲ ಇತಿಹಾಸದ ವ್ಯಂಗ್ಯಗಳೇ ಸರಿ. ಇಂಥ ಸಂದರ್ಭಗಳಲ್ಲಿ "ದೇಶೀವಾದ"ವೇ ಪ್ರಯೋಜಕವೆನಿಸುತ್ತದೆ. ಈ ದೃಷ್ಟಿ

ಕೋನದವರು ಮಾತ್ರ ಮಲಿನವಾದ ಇತಿಹಾಸವನ್ನು ಶುದ್ಧೀಕರಿಸುತ್ತಾರೆ. ಅಂಥವರಿಗೆ ಮಾತ್ರ ಕವಿ ಹರಿಹರದೇವನ ನಿಜನಾಮ ಹರಿಯಲದೇವ, ಮದಕರಿನಾಯಕನ ನಿಜನಾಮ ಮೆದೆಕೆರೆನಾಯಕ–ಇತ್ಯಾದಿ ಸತ್ಯಗಳು ಕಾಣಿಸುತ್ತವೆ. ವೀರಶೈವ ಗೋತ್ರ–ಸೂತ್ರ ಸಂದರ್ಭದಲ್ಲಿ ಕೇಳಿಬರುವ 'ಮಳೆಯಸೂತ್ರ'ವನ್ನು ಆರ್ಯಚಿಂತನಕ್ರಮದವರು 'ವೃಷ್ಟಿ ಸೂತ್ರ'ವೆಂದು ಪ್ರತಿಪಾದಿಸಿದರೆ, ದ್ರಾವಿಡಚಿಂತನಕ್ರಮದವರು "ಮಲೆಯ ಸೂತ್ರ" ಅಂದರೆ ಕಾಳಾಮುಖರ "ಪರ್ವತಾ ವಳಿ" ಎಂದು ಪ್ರತಿಪಾದಿಸುವುದು, ಈ ಉಭಯ ಚಿಂತನಕ್ರಮಗಳಿಗೆ ನಿದರ್ಶನವೆನಿಸಿವೆ.

ಆರ್ಯದೃಷ್ಟಿಕೋನದಂತೆ ಇತ್ತೀಚೆಗೆ ಆಂಗ್ಲದೃಷ್ಟಿಕೋನವೂ ಕೆಲವೊಮ್ಮೆ ನಮ್ಮನ್ನು ದಾರಿ ತಪ್ಪಿಸುತ್ತಲಿದೆ. ಪ್ರಾಚೀನ ಆಡಳಿತ ಕ್ರಮವನ್ನೇ ಕುರಿತು ಹೇಳುವುದಾದರೆ, ಆರ್ಯಚಿಂತನ ಕ್ರಮದವರು ಕೌಟಿಲ್ಯನ ಅರ್ಥಶಾಸ್ತ್ರವನ್ನು ಆದರ್ಶವಾಗಿಟ್ಟುಕೊಳ್ಳುವಂತೆ, ಆಂಗ್ಲದೃಷ್ಟಿಕೋನದವರು ಪ್ರಚಲಿತ ಇಂಗ್ಲಿಷ ಆಡಳಿತ ಪದ್ಧತಿಯನ್ನು ಮನಸ್ಸಿನಲ್ಲಿಟ್ಟು ಕೊಳ್ಳುತ್ತಾರೆ. ಅಂಥವರು ಸಾಮಂತ, ಮಾಂಡಲಿಕ ಶಬ್ದಗಳಲ್ಲಿರುವ ವ್ಯತ್ಯಾಸವನ್ನು ಗಮನಿಸದೆ, "Feudatory" ಎಂಬ ಒಂದೇ ಇಂಗ್ಲಿಷ್ ಪದ ಬಳಸುವುದು, ಇದಕ್ಕೆ ಉದಾಹರಣೆಯಾಗಿದೆ. ಇಂಥ ಸಂದರ್ಭಗಳಲ್ಲಿ ಸತ್ಯ ಒಂದೆಡೆ ಉಳಿದು, ಅಸತ್ಯವೇ ಬರಹದಲ್ಲಿ ಅವತರಿಸುತ್ತದೆ.

ಹೀಗೆ 'ಆರ್ಯವಾದ', 'ಆಂಗ್ಲವಾದ'ಗಳ ಅತಿರೇಕಗಳನ್ನು ಕಡಿಮೆ ಮಾಡಿಕೊಳ್ಳುವುದು ಅವಶ್ಯವಾಗಿದ್ದರೂ, ಹೀಗೆ ಕಡಿಮೆ ಮಾಡಿಕೊಳ್ಳುವ ಭರದಲ್ಲಿ 'ದ್ರಾವಿಡವಾದ'ವೆನ್ನುವುದು ಇನ್ನೊಂದು ಅತಿರೇಕವಾಗಬಾರದು ; "ಕರ್ನಾಟಕ ಸತ್ಯ"ವನ್ನು ಅನ್ವೇಷಿಸುವ ಒಂದು ಪ್ರಾಮಾಣಿಕ ಸಾಧನವಾಗಬೇಕು. ನಮ್ಮ ದೇಶದ ಇತಿಹಾಸ ರಚಿಸುವಲ್ಲಿ "ಭಾರತೀಯ ದೃಷ್ಟಿಕೋನ" ಇರಬೇಕೆಂದು ಬಯಸುವ ನನಗೆ, ನಮ್ಮ ರಾಜ್ಯದ ಇತಿಹಾಸ ರಚಿಸುವಲ್ಲಿ "ದ್ರಾವಿಡ ದೃಷ್ಟಿಕೋನ"ವಿರ ಬೇಕೆಂದು ಹೇಳುವುದು ಅನಿವಾರ್ಯವೆನಿಸುತ್ತದೆ.

ಈ "ದ್ರಾವಿಡವಾದ"ದ ಸಾರ್ಥಕತೆಗೆ ಕೇವಲ ಶಾಸನ, ಪುರಾತತ್ವ ಮೊದಲಾದ ಶಿಷ್ಟ ಆಕರ ಸಾಮಗ್ರಿಯನ್ನವ ಲಂಬಿಸದೆ, ಜಾನಪದ ಸಾಮಗ್ರಿಯನ್ನೂ ಬಳಸಿಕೊಳ್ಳಬೇಕಾಗುತ್ತದೆ. ಏಕೆಂದರೆ, ಶಾಸನಗಳು ಮುಖ್ಯವಾಗಿ ಯಜಮಾನ ಪರ ಸಂಸ್ಕೃತಿಯನ್ನು ದಾಖಲಿಸುತ್ತ ಬಂದಿವೆ. ಇಲ್ಲಿ ರಾಜಶಾಹಿಯ ಯುದ್ಧಶಾಸನ, ಪುರೋಹಿತಶಾಹಿಯ ದಾನಶಾಸನ ಗಳೇ ತುಂಬಿಕೊಂಡಿವೆ. ಇವುಗಳನ್ನು ಬಳಸಿ ಯಜಮಾನ ಸಂಸ್ಕೃತಿಯ ದೊಡ್ಡ ರಾಜಮನೆತನಗಳ ಇತಿಹಾಸವನ್ನು ಬರೆಯುತ್ತ ಬಂದ ನಾವು, ಈ ಸಂಪ್ರದಾಯದ ಸಣ್ಣ ಅರಸು ಮನೆತನಗಳ ಅಧ್ಯಯನದ ಕಡೆಗೆ ಗಮನ ಕೊಟ್ಟಿಲ್ಲ. ಇತ್ತೀಚೆಗೆ ಸ್ವಾದಿ, ಕೆಳದಿ, ಕಳಲೆ, ಹಾಗಲವಾಡಿ, ಹದಿನಾಡು, ಸುಗಟೂರು, ಯಲಹಂಕ ಪಾಳೆಯಗಾರರನ್ನು ಕುರಿತು ಅಲ್ಲಲ್ಲಿ ವಿಚಾರಸಂಕಿರಣಗಳು ಜರುಗಿ, ಕೆಲವು ಪುಸ್ತಕಗಳು ಪ್ರಕಟವಾಗಿವೆ. ಬಿಜ್ಜಾವರ, ಬೀಳಗಿ, ಹರಪನಹಳ್ಳಿ. ಉಮ್ಮತ್ತೂರು ಪಾಳೆಯಗಾರರನ್ನು ಕುರಿತ ವಿಚಾರಸಂಕಿರಣಗಳ ವ್ಯವಸ್ಥೆ ಮುಂದುವರಿದಿವೆ. ಇದು ಇನ್ನೂ ಮುಂದು ವರಿದು ನಾಳ್ಗಾವುಂಡ–ಗಾವುಂಡ ಇತ್ಯಾದಿ ಅಧಿಕಾರಿಗಳ, ಇವರ ಸೀಮೆಗಳಲ್ಲಿ ಬದುಕುತ್ತಲಿದ್ದ ಜನಸಾಮಾನ್ಯರ, ಇವರ ಆಚೆಗೆ ಹರಡಿಕೊಂಡಿರುವ ಉಪಸಂಸ್ಕೃತಿಗಳ ಆಕರಸಂಗ್ರಹ–ಅಧ್ಯಯನ ನಡೆಯಬೇಕಾಗಿದೆ. ಹೀಗೆ ಜೀವನದ ಎಲ್ಲ ಹಂತ ಗಳ ಸಮಗ್ರ ಆಕರಸಾಮಗ್ರಿಯನ್ನು ಬಳಸಿಕೊಂಡರೆ ಮಾತ್ರ, ನಮ್ಮ ಇತಿಹಾಸಕ್ಕೆ ಸಮಗ್ರತೆ ಪ್ರಾಪ್ತವಾಗುತ್ತದೆ.ಆದರೆ, ಇದುವರೆಗೆ ಶಿಷ್ಟ ಆಕರಗಳೊಂದಿಗೆ ವ್ಯವಹರಿಸಿದ ವಿದ್ವಾಂಸರಿಗೆ ಈ ದೇಶೀ ಆಕರಗಳು ಸರಿಯಾಗಿ ಅರ್ಥವಾಗುವುದು ಕಠಿಣ. ಹೊಸಬಗೆಯ ತರಬೇತಿ, ವಿಶಿಷ್ಟ ಮಾನಸಿಕ ಸಿದ್ಧತೆಯುಳ್ಳ ಮೌಖಿಕ ಇತಿಹಾಕಾರರನ್ನು (Oral Historians) ಅದು ಬಯಸುತ್ತದೆ. ಹೀಗೆ ಶಿಷ್ಟ ಮತ್ತು ಜಾನಪದ ಈ ಎರಡೂ ಪ್ರಜ್ಞೆಗಳ ಹಿನ್ನೆಲೆಯಲ್ಲಿ ರೂಪಗೊಂಡ ಇತಿಹಾಸ ಶಾಸ್ತ್ರದ (Historiography) ಹೊಸ 'ಪರಿಕಲ್ಪನೆ'ಯ ಬೆಳಕಿನಲ್ಲಿ 'ಕನ್ನಡ ಸಂಸ್ಕೃತಿ ಚರಿತ್ರೆ'ಯನ್ನು ನಾವು ಬರೆಯ ಬೇಕಾಗಿದೆ. ಈವರೆಗೆ ಸಾಹಿತ್ಯ ಚರಿತ್ರೆ, ರಾಜಕೀಯ ಚರಿತ್ರೆ, ಧಾರ್ಮಿಕ ಚರಿತ್ರೆಗಳನ್ನು ಬರೆಯುತ್ತ ಬಂದ ನಮಗೆ, ಕರ್ನಾಟಕದ ಸಮಗ್ರ "ಸಂಸ್ಕೃತಿ ಚರಿತ್ರೆ" ಬರೆಯುವುದು ಒಂದು ಆಹ್ವಾನವಾಗಿ ಉಳಿದಿದೆ.

'ಸಂಸ್ಕೃತಿ'ಯೆನ್ನುವುದು ಒಂದು ಜನವರ್ಗದವರಿಂದ 'ಸಾಮೂಹಿಕ ಸಮ್ಮತಿ' ಪಡೆದು, ಆಚರಣೆಯಲ್ಲಿರುವ ಜೀವನಪದ್ಧತಿಯಾಗಿದೆ. ಕನ್ನಡಿಗರವೇ ಆದ ಇಂಥ ವಿಶಿಷ್ಟ ಜೀವನಪದ್ಧತಿಗಳಾವುವು ? ಬದಲಾಗದೆ ಬಂದ,ಬದಲಾಗುತ್ತ ಬಂದ ಅವುಗಳ ಸ್ವ-ಭಾವ, ಸ್ವ-ರೂಪಗಳಾವುವು ? ಅವು ಎಷ್ಟರಮಟ್ಟಿಗೆ ಜನಪರ ? ಎಷ್ಟರಮಟ್ಟಿಗೆ ಜನವಿರೋಧಿ ? ಅವು ಹಾಗೆ ರೂಪಗೊಳ್ಳಲು ಇರುವ ಒತ್ತಡಗಳಾವುವು ? ಸಮಾಜದ ಮೇಲೆ ಆದ ಅವುಗಳ ಪರಿಣಾಮವೇನು ? ಇತ್ಯಾದಿ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತ, 'ದ್ರಾವಿಡವಾದ'ದ ನೆಲೆಯಲ್ಲಿ ನಿಂತು, "ಕರ್ನಾಟಕ ಸಂಸ್ಕೃತಿ ಚರಿತ್ರೆ"ಯ ಬೃಹದ್ಗ್ರಂಥವನ್ನು ರಚಿಸಬೇಕಾಗಿದೆ. ಈ ಕಾರ್ಯ ಸಾಹಿತ್ಯ ಮತ್ತು ಇತಿಹಾಸ ವಿಭಾಗಗಳ ಸಂಯುಕ್ತ ಜವಾಬ್ದಾರಿಯಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಮಿಕ್ಕ ವಿಭಾಗಗಳಿಗಿಂತ ಈ ವಿಭಾಗಗಳ ಹೊಣೆ ವಿಶಿಷ್ಟವಾಗಿದೆ. ಇವು ಯಾವುದೊ ಒಂದು ಜ್ಞಾನಶೋಧದ ಇಲಾಖೆಗಳಲ್ಲ, ನೇರವಾಗಿ "ಕರ್ನಾಟಕಜ್ಞಾನ" ಶೋಧದ ಇಲಾಖೆಗಳು. ಇವುಗಳಲ್ಲಿ ಕನ್ನಡ ವಿಭಾಗಗಳು ಶಾಸನೋಕ್ತ ಆರ್ಥಿಕ, ವಾಣಿಜ್ಯ, ಧರ್ಮ, ಮಹಿಳಾಸಮಾಜ, ವೀರಮರಣ, ಮಾಸ್ತಿಮರಣ, ಸಮಾಧಿ ಮರಣ ಇತ್ಯಾದಿಗಳನ್ನು ಕುರಿತು ಈವರೆಗೆ ಮಾಡಿದ ಅಧ್ಯಯನ ತುಂಬ ಮೌಲಿಕವೆನಿಸಿದೆ. ಇತ್ತೀಚೆಗೆ ಈ ಅಭ್ಯಾಸ ಇಳಿಮುಖವಾಗುತ್ತಿರುವುದನ್ನು ನಾವು ತಡೆಗಟ್ಟಬೇಕಾಗಿದೆ. ಇದೇ ರೀತಿ ಇತಿಹಾಸದವರೂ ಸಾಹಿತ್ಯವನ್ನು ಬಳಸಿಕೊಂಡು, ಸಮಾಧಿಮರಣ ಇತ್ಯಾದಿಗಳನ್ನು ಕುರಿತು ಅಧ್ಯಯನ ಮಾಡುತ್ತಲಿದ್ದರೂ ಈ ಕೆಲಸ ಏರುಮುಖಗೊಳ್ಳಬೇಕಾಗಿದೆ. ಇಂಥ ಅನೇಕ ಬಗೆಯ ಅಧ್ಯಯನಗಳನ್ನು ಬಳಸಿಕೊಂಡು, ವಿದ್ವಾಂಸರು ಆದಷ್ಟು ಬೇಗ 'ಕರ್ನಾಟಕ ಸಂಸ್ಕೃತಿ ಚರಿತ್ರೆ'ಯನ್ನು ಬರೆಯಲೆಂದು ಹಾರೈಸುತ್ತೇನೆ.

ಕೊನೆಯದಾಗಿ, 'ಸಂಡೂರು' ಎಂದಾಕ್ಷಣ, ನಮಗೆ ಏಕಕಾಲಕ್ಕೆ ಅನೇಕ ವಿಷಯಗಳು ನೆನಪಾಗುತ್ತವೆ. ಉದ್ದಿಮೆದಾರರಿಗೆ ಅದಿರು ನೆನಪಾಗುತ್ತದೆ ; ಧಾರ್ಮಿಕರಿಗೆ ಕುಮಾರಸ್ವಾಮಿ ನೆನಪಾಗುತ್ತಾನೆ ; ಇತಿಹಾಸಕಾರರಿಗೆ ಘೋರ್ಪಡೆ ರಾಜಮನೆತನ ನೆನಪಾಗುತ್ತದೆ. ಇದೇ ರೀತಿ ಬಳ್ಳಾರಿ ಜಿಲ್ಲೆ ಎಂದಾಕ್ಷಣ, ಅನೇಕ ವಿಷಯಗಳು ಸ್ಮರಣೆಗೆ ಬರುತ್ತವೆ. ನಡುಗನ್ನಡ ಸಾಹಿತ್ಯದಲ್ಲಿ ಹೊಸ ಹಾದಿ ತೆರೆದವರು, ಈ ಜಿಲ್ಲೆಯ ಹರಿಹರ-ರಾಘವಾಂಕರು. ಅದನ್ನು ಪಟ್ಟುಹಿಡಿದು ಮುಂದುವರಿಸಿಕೊಂಡು ಹೋದವರು, ಪ್ರೌಢದೇವರಾಯನ ಕಾಲದ ವೀರಶೈವ ವಿರಕ್ತರು ಮತ್ತು ಕೃಷ್ಣದೇವರಾಯನ ಕಾಲದ ವೈಷ್ಣವ ಕೀರ್ತನಕಾರರು. ಮಧ್ಯಕಾಲೀನ ಕರ್ನಾಟಕದ ರಾಜಕೀಯ ನೆಲೆಯಲ್ಲಿ ಕಂಪಿಲ ಅರಸುಮನೆತನ ಒಂದು ಬೆಳ್ಳಿಚುಕ್ಕಿ. ತರುವಾಯ ಕರ್ನಾಟಕದ ರಾಜಕೀಯ ಚಟುವಟಿಕೆಯನ್ನು ನಿಯಂತ್ರಿಸಿದವರು, ವಿಜಯನಗರದ ಅರಸರು ಮತ್ತು ಇಲ್ಲಿಂದಲೇ ಹರಡಿಹೋದ ಪಾಳೆಯಗಾರರು. ಧಾರ್ಮಿಕಕ್ಕೆ ಬಂದರೆ ವೀರಶೈವ ವಿರಕ್ತ ಆಂದೋಲನ, ಮಾಧ್ವ ದಾಸ ಆಂದೋಲನ ಹುಟ್ಟಿದ್ದು, ಬೆಳೆದದ್ದು, ಇದೇ ಜಿಲ್ಲೆಯಲ್ಲಿ. ಶಿಲ್ಪದಲ್ಲಿಯೂ ವಿಜಯನಗರ ಶೈಲಿ ಆವಿಷ್ಕಾರಗೊಂಡದ್ದು, ಈ ಜಿಲ್ಲೆಯಲ್ಲಿ. ಹೀಗೆ ಮಧ್ಯಕಾಲೀನ ಕರ್ನಾಟಕದ ಎಲ್ಲ ಮುಖಗಳ ಇತಿಹಾಸವೆಂದರೆ ಬಳ್ಳಾರಿ ಜಿಲ್ಲೆಯ ಇತಿಹಾಸವೇ ಆಗಿದೆ. ಇಂಥ ಇತಿಹಾಸ ಪರಂಪರೆಯ ನೆಲದಲ್ಲಿ, ಇತಿಹಾಸ ಪ್ರಸಿದ್ಧ ರಾಜಮನೆತನದ ಮಾನ್ಯ ಶ್ರೀ ಎಂ. ವಾಯ್. ಘೋರ್ಪಡೆಯವರ ನೇತೃತ್ವದಲ್ಲಿ ಈ "ಇತಿಹಾಸ ಸಮ್ಮೇಳನ" ಜರುಗುತ್ತಲಿದೆ. ಇಂಥ ಐತಿಹಾಸಿಕ ಸಮ್ಮೇಲನದ ಅಧ್ಯಕ್ಷತೆಯ ಅವಕಾಶವನ್ನು, ಸಾಹಿತ್ಯ-ಇತಿಹಾಸಗಳ ಅಭ್ಯಾಸಿಯಾದ ನನಗೆ ಒದಗಿಸಿಕೊಟ್ಟ ನಿಮಗೆಲ್ಲ ವಂದನೆಗಳು.

ಶ್ರೀ ಹೆಚ್. ಟಿ. ತಳವಾರ್*

# ಸನ್ನತಿಯಲ್ಲಿ ಉತ್ಖನನಗಳು ೧೯೮೬-೮೭

ಸನ್ನತಿಯು, ಗುಲ್ಬರ್ಗ ಜಿಲ್ಲೆಯ, ಚಿತಾಪುರ ತಾಲ್ಲೂಕಿನಲ್ಲಿರುವ ಒಂದು ಚಿಕ್ಕಹಳ್ಳಿ. ಈ ಗ್ರಾಮವು ಯಾದಗಿರಿಯಿಂದ ೪೦ ಕಿ.ಮೀ. ದೂರದಲ್ಲಿ ಹೈದರಾಬಾದ್ ನಿಂದ ನೈರುತ್ಯಕ್ಕೆ ೨೨೦ ಕಿ.ಮೀ. ಮತ್ತು ಚಿತಾಪುರ–ನಾಲ್ವಾರ ರೈಲ್ವೆ ನಿಲ್ದಾಣದಿಂದ ೨೦ ಕಿ.ಮೀ. ದೂರ ದಲ್ಲಿದ್ದು, ಭೀಮಾನದಿಯ ಎಡದಂಡೆಯ ಮೇಲಿದೆ. ಹಾಗೂ ಈ ಹಳ್ಳಿಯು ಶ್ರೀ ಚಂದ್ರಲಾಂಬಾ ದೇವಸ್ಥಾನ ದಿಂದ (ಕ್ರಿ.ಶ. ೭–೮ನೇ ಶತಮಾನ) ಪ್ರಸಿದ್ಧಿ ಪಡೆದ ಯಾತ್ರಾ ಸ್ಥಳವಾಗಿದೆ.

ಸನ್ನತಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವು ಪ್ರಾಚ್ಯ ಅವಶೇಷಗಳಿಂದ ಕೂಡಿದ ಒಂದು ಶ್ರೀಮಂತ ಪ್ರದೇಶವಾಗಿರುವುದು. ಅಂತೆಯೇ ಸನ್ನತಿಗೆ ಸಮೀಪ ವಿರುವ ಕನಗನಹಳ್ಳಿಯ ಸ್ತೂಪ, ಆನೆಗುತ್ತಿಯ ಸ್ತೂಪದ ದಿನ್ನೆ, ಬೆನಗುತ್ತಿಯ ದಿಬ್ಬ ಹಾಗೂ ಕೈತಾಳ ಹೊಲದಲ್ಲಿ ರುವ ವಸತಿ ಪ್ರದೇಶದ ದಿಬ್ಬಗಳು ಮತ್ತು ಚಿತಾಪುರ ತಾಲ್ಲೂಕಿನಲ್ಲಿ ಹೆಸರಿಸುವಂತಿದ್ದರೆ, ಭೀಮಾನದಿಯಾಚೆ ಅದೇ ಜಿಲ್ಲೆಯ ಶಹಪೂರ ತಾಲ್ಲೂಕಿನ ಹುರಸಗುಂಡಿಗಿ ಹಳ್ಳಿಯ ಹತ್ತಿರವಿರುವ ಸ್ತೂಪವು ಕರ್ನಾಟಕದಲ್ಲಿ ೧–೨ನೆಯ ಶತಮಾನಕ್ಕೆ (ಶಾತವಾಹನ ಕಾಲದ್ದು) ಸಂಬಂಧಿಸಿದ ಬೌದ್ಧಸ್ತೂಪಗಳ ಅಧ್ಯಯನಕ್ಕೆ ನಾಂದಿ ಯಾಗಿರುವವು. ಮತ್ತು ಬೌದ್ಧರ ವಾಸ್ತುಶಿಲ್ಪದ ಮೇಲೆ ಹೆಚ್ಚಿನ ಬೆಳಕನ್ನು ಪ್ರತಿಬಿಂಬಿಸುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಶಾತವಾಹನರ ಕಾಲದಲ್ಲಿ ಈ ಪ್ರದೇಶವು ಒಂದು ಬೌದ್ಧರ ಯಾತ್ರಾಸ್ಥಳವಾಗಿರು ವುದು ಗಮನಕ್ಕೆ ಬರುತ್ತದೆ. ಭೀಮಾನದಿಯ ಮತ್ತು ಅದರ ಸುತ್ತಮುತ್ತ ದೊರೆತ ಹಳೆಯ ಶಿಲಾಯುಗದ, ನೂತನ ಶಿಲಾಯುಗದ, ಸೂಕ್ಷ್ಮ ಶಿಲಾಯುಗದ ಅವಶೇಷ ಗಳು ಸನ್ನತಿಯನ್ನು ಶಿಲಾಯುಗಕ್ಕೆ ಕರೆದೊಯ್ಯು ತ್ತವೆ.

ಈ ಹಳ್ಳಿಯು ಎರಡು ಸುತ್ತುವರಿದ ಕೋಟೆಗಳಿಂದ ಕೂಡಿದೆ. ಒಳ ಕೋಟೆಯೊಳಗಿನ ರಣಮಂಡಲವೆಂದು ಕರೆಯುವ ಸುಮಾರು ೮೦ ಎಕರೆ ಪ್ರದೇಶವು ರಾಜವಾಡೆ (Citadel) ಆಗಿರುತ್ತದೆ. ಇಟ್ಟಿಗೆಯ ಕೋಟೆ ಗೋಡೆ ಸುಮಾರು ೪ ಮೀಟರ್ ಅಗಲ ಮತ್ತು ೨–೩ ಮೀಟರ್ ಎತ್ತರವಿದೆ. ಇದನ್ನು ಎರಡು ಭಾಗ ಗಳಾಗಿ ವಿಂಗಡಿಸಲಾಗಿದೆ.

ರಣಮಂಡಲವೆಂದು (Citadel) ಕರೆಯಲಾದ ಸ್ಥಳದ ಮಹತ್ವವನ್ನು ತಿಳಿಯಲು ಉತ್ಖನನವನ್ನು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾ ಲಯ ಇಲಾಖೆಯು ಕೈಗೊಂಡಿದೆ.

ಕೋಟೆಯ ನಿವೇಶನದ ಇಟ್ಟಿಗೆಯ ಆಕಾರ ೫೪ × ೨೭ × ೯ ಸೆಂ.ಮೀ. ಮತ್ತು ೪೭ × ೨೪ × ೮ ಸೆಂ.ಮೀ. ಇದ್ದು, ಅಗೆತದಲ್ಲಿ ಸಿಕ್ಕಿರುವ ಹೊಳಪಿನಕಲ್ಲು ಹಲವು ಔತ್ತರೇಯ ಕಪ್ಪು ಹೊಳಪಿನ ಕುಂಬಗಳು (Northern black polished ware) ಮತ್ತು

* ತಾಂತ್ರಿಕ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು.

ರೋಮನ್ ಮಡಿಕೆಯ ಚೂರುಗಳು ಇತ್ಯಾದಿಗಳು ನಿವೇಶನವು ಮೌರ್ಯರ ಕಾಲದಷ್ಟು ಹಳೆಯದೆಂದು ಸೂಚಿಸುತ್ತದೆ. ಅಲ್ಲದೆ ಇದು ಒಂದು ವಾಣಿಜ್ಯ ಕೇಂದ್ರ ವಾಗಿತ್ತು ಎಂಬುದಕ್ಕೆ ಒತ್ತು ಕೊಡುತ್ತದೆ.

ಕರ್ನಾಟಕದಲ್ಲಿ ನಾವು ಅಶೋಕನ ಶಾಸನಗಳನ್ನು ನೋಡಬಹುದು. ಆದರೆ ಔತ್ತರೇಯ ಕಪ್ಪು ಹೊಳಪಿನ ಕುಂಬಗಳ ಸಂಶೋಧನೆಯು ಕರ್ನಾಟಕದ ಪ್ರಾಗೈತಿಹಾಸ ಸಂಶೋಧನೆಯಲ್ಲಿ ಒಂದು ಹೊಸ ಯುಗವನ್ನೇ ನಿರ್ಮಿಸಿ, ಮೌರ್ಯರ ಅವಶೇಷಗಳಲ್ಲಿ ಒಂದಾದ ಈ ಕುಂಬಗಳ ಬಗ್ಗೆ ಇದ್ದ ಒಗಟನ್ನು ನಿವಾರಿಸಿ ಕರ್ನಾಟಕದ ಹೊಸ ಇತಿಹಾಸವನ್ನು ಸೃಷ್ಟಿ ಮಾಡಲು ಅನುಕೂಲ ಮಾಡಿ ಕೊಟ್ಟಿರುವುದು.

ಉತ್ಖನನದಲ್ಲಿ ದೊರೆತ ಇಟ್ಟಿಗೆಯ ಬಾವಿಗಳು ೧.೫೦ ಮೀಟರ್ ಎತ್ತರ ಹಾಗೂ ೧.೧೫ ಮೀಟರ್ ಆಗಿದ್ದು (ಇಟ್ಟಿಗೆ ೨೮×೨೨×೧ ಸೆಂ.ಮೀ.) ಶಾತವಾಹನರ ಕಾಲದಾಗಿದ್ದು (ಕ್ರಿ.ಶ. ೧–೨ನೆಯ ಶತಮಾನ) ಕರ್ನಾಟಕದ ಪ್ರಾಗೈತಿಹಾಸದಲ್ಲಿ ನೀರು ಶೇಖರಣೆ ಪದ್ಧತಿಯ ಬಗ್ಗೆ ಮಾಹಿತಿಯನ್ನು ನೀಡುವುದು. ಅಲ್ಲದೆ ವಾಯುವ್ಯ ದಿಕ್ಕಿಗೆ ಹೋಗುವ ಹಾಸುಗಲ್ಲು ನಗರೀಕರಣದ ಕುರುಹು ಎಂದು ಹೇಳಬಹುದು.

ಉತ್ಖನನದಲ್ಲಿ ಹೇರಳವಾಗಿ ಅವಶೇಷಗಳು, ಮಣಿಗಳು, ನೀಲಿವೈಡೂರ್ಯ, ಕಪ್ಪು, ಹಸಿರು ಮತ್ತು ಕೆಂಪು ಜಾಸ್ಪರ್, ಕಾರನೀಲಿಯನ್, ದಂತ ಮತ್ತು ಸುಟ್ಟಮಣ್ಣಿನ ಮಣಿಗಳು, ಕಪ್ಪೆಚಿಪ್ಪಿನ ಬಳೆಗಳು, ಕಬ್ಬಿಣದ ಮೊಳೆಗಳು, ತಾಮ್ರದ ಉಂಗುರ ಮತ್ತು ಮೊಳೆಗಳು, ಶಾತವಾಹನರ ಕಾಲದ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಹಾಗೂ ಕಾಸಿನ ನಾಣ್ಯಗಳು ಹಾಗೂ ಸುಟ್ಟ ಮಣ್ಣಿನ ಗೊಂಬೆಗಳು, ದಂತದ-ಸ್ತೂಪ, ವಿವಿಧ ರೀತಿಯ ಅರೆಯುವ ಕಲ್ಲುಗಳು ಕಣ್ಮನ ಸೆಳೆಯುವಂತಿವೆ. ಉತ್ಖನನವು ಇನ್ನೂ ಪ್ರಗತಿ ಪಥದಲ್ಲಿದ್ದು, ಈ ಉತ್ಖನನವು ಕರ್ನಾಟಕದ ಪ್ರಾಗೈತಿಕ ಇತಿಹಾಸವನ್ನು ಪುನಃ ನಿರ್ಮಾಣ ಮಾಡುವಲ್ಲಿ ಸಹಾಯಕ ವಾಗಿದೆ. ಇನ್ನೂ ಹೆಚ್ಚಿನ ಮಾಹಿತಿಯನ್ನು ವಿದ್ವಾಂಸ ಲೋಕಕ್ಕೆ ಒದಗಿಸಲು ಇದರಿಂದ ಅವಕಾಶವಾಗಲಿದೆ.

ಡಾ|| ರಾಜಾರಾಮ ಹೆಗ್ಗಡೆ*

# ಭದ್ರಾ ಪ್ರಾಜೆಕ್ಟ್ ಪರಿಸರದ ಶಿಲಾಯುಧಗಳು

ಭದ್ರಾ ಪ್ರಾಜೆಕ್ಟ್ ಇಂದಿನ ಶಿವಮೊಗ್ಗಾ ಜಿಲ್ಲೆಯ ಭದ್ರಾವತಿ ತಾಲ್ಲೂಕಿನಲ್ಲಿದೆ (ಅಕ್ಷಾಂಶ ೧೩°–೪೩′, ರೇಖಾಂಶ ೭೫°–೩೮′). ಭದ್ರಾವತಿ ಪಟ್ಟಣದಿಂದ ನೈರುತ್ಯಕ್ಕೆ ೧೮ ಕಿ.ಮೀ. ಅಂತರದಲ್ಲಿ ಭದ್ರಾನದಿಗೆ ಅಡ್ಡಲಾಗಿ ನಿರ್ಮಿಸಿರುವ ಅಣೆಕಟ್ಟೆಯ ಸ್ಥಳದಲ್ಲಿ ಇದೊಂದು ಹಳ್ಳಿ. ಈ ಸ್ಥಳದಲ್ಲಿ ಭದ್ರಾನದಿ ಚಿಕ್ಕಮಗಳೂರು ಜಿಲ್ಲೆಯಿಂದ ಶಿವಮೊಗ್ಗ ಜಿಲ್ಲೆ ಗಡಿಯಲ್ಲಿ ಹರಿದು ಈಶಾನ್ಯ ದಿಕ್ಕಿನಲ್ಲಿ ಸುಮಾರು ೫೦ ಕಿ.ಮೀ. ಅಂತರದಲ್ಲಿ ತುಂಗಾನದಿಯನ್ನು ಸೇರುತ್ತದೆ.

ಪ್ರಸ್ತುತ ಲೇಖನದಲ್ಲಿ ಪರಿಶೀಲನೆಗೆ ಒಳಪಟ್ಟ ಪ್ರದೇಶ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕು ಹಾಗೂ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ಹಾಗೂ ನರಸಿಂಹರಾಜಪುರ ತಾಲ್ಲೂಕುಗಳಲ್ಲಿ ವ್ಯಾಪಿಸಿಕೊಂಡಿದೆ. ಈ ಪ್ರದೇಶ ಅರೆಮಲೆನಾಡಿನ ಚಳಿಗಾಲದಲ್ಲಿ ಉದುರೆಲೆಯ ಆರ್ದ್ರ ಕಾಡುಗಳಿಂದ ತುಂಬಿದೆ. ತೀರ ಇತ್ತೀಚೆಗೆ ಬೇರೆ ಬೇರೆ ಉದ್ದೇಶಗಳಿಗಾಗಿ ಈ ಕಾಡು ಸಾಕಷ್ಟು ನಿರ್ನಾಮವಾಗಿದೆ. ಭದ್ರಾ ನದಿ ಮಲೆನಾಡಿನ ಗುಡ್ಡ ಬೆಟ್ಟಗಳನ್ನು ಬಳಸಿ ಹರಿದು ಬಂದು ಈ ಪ್ರದೇಶದಲ್ಲಿ ಒಳನಾಡಿನ ಬಯಲನ್ನು ಸೇರುತ್ತದೆ. ಈ ರೀತಿಯಾಗಿ ಮಲೆನಾಡು ಹಾಗೂ ಬಯಲುನಾಡುಗಳ ಸಂಧಿ ಸ್ಥಳವಾಗಿ ಇಂದು ಈ ಪ್ರದೇಶ ಗೋಚರಿಸುತ್ತದೆ. ಈ ಪ್ರದೇಶ ವಾರ್ಷಿಕವಾಗಿ ಸರಾಸರಿ ೯೦೦ ಮಿ.ಮೀ. ಗಳಷ್ಟು ಮಳೆಯನ್ನು ಪಡೆಯುತ್ತದೆ. ಭೂಗರ್ಭ ಶಾಸ್ತ್ರೀಯವಾಗಿ ಈ ಭೂಮಿ ಆರ್ಕಿಯನ್ ಪ್ರಕಾರದ ಧಾರವಾಡ ಶಿಲಾರಚನೆಗಳನ್ನು ಹೊಂದಿದ್ದು ಶಿಲಾಯುಧಗಳನ್ನು ತಯಾರಿಸಲು ಶಿಲಾಯುಗದ ಮಾನವ ಬಳಸುತ್ತಿದ್ದ ಕ್ವಾರ್ಟ್‌ಜೈಟ್ (ಬೆಣಚು ಕಲ್ಲು) ಹಾಗೂ ಡೋಲರೈಟ ಮುಂತಾದ ಶಿಲೆಗಳು ಸ್ಥಾನಿಕವಾಗಿ ಸಿಗುತ್ತವೆ.

## ೧. ಸ್ಥಳಗಳು :

ಈ ಪ್ರದೇಶದಲ್ಲಿ ನಾಲ್ಕು ಸ್ಥಳಗಳಲ್ಲಿ ಶಿಲಾಯುಧಗಳು ಸಿಕ್ಕಿವೆ (ನೋಡಿ ನಕ್ಷೆ ೧). ಸ್ಥಳ ೧ : ಭದ್ರಾ ಪ್ರಾಜೆಕ್ಟ್‌ನಿಂದ ವಾಯುವ್ಯಕ್ಕೆ ಮೂರು ಕಿ.ಮೀ. ದೂರದಲ್ಲಿ ಒಂದು ಎತ್ತರ ಪ್ರದೇಶದ ಎರಡೂ ಮಗ್ಗುಲುಗಳಲ್ಲಿ ಈ ಸ್ಥಳವಿದೆ. ಈ ಎತ್ತರದ ಪ್ರದೇಶ ಈಗಿನ ಭದ್ರಾ ಜಲಾಶಯದ ಹಿನ್ನೀರಿಗೆ ಅಡ್ಡಲಾಗಿ ಇದೆ. ಈ ಸ್ಥಳ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲ್ಲೂಕಿನಲ್ಲಿ ಇದೆ. ಈ ಪ್ರದೇಶದ ಪಶ್ಚಿಮ ಮಗ್ಗುಲಿನಲ್ಲಿ (ಬಿ ಭಾಗ) ಬಹುಭಾಗ ಜಲಾಶಯದ ನೀರಿನಲ್ಲಿ ವರ್ಷದ ಬಹುಕಾಲ ಮುಳುಗಿರುತ್ತದೆ. ನೀರಿನ ಹೊಡೆತಕ್ಕೆ ಸಿಕ್ಕ ಶಿಲಾಯುಗದ ಭೂ ಪದರಗಳು ಅಲ್ಲಲ್ಲಿ ಕೊಚ್ಚಿಹೋಗಿ ಶಿಲಾಯುಧಗಳು ಹೊರಗೆ ಬಂದಿವೆ. ಪೂರ್ವದ ಮಗ್ಗುಲಿನಲ್ಲಿ (ಎ ಭಾಗ) ತೀರ ಈಚೆಗೆ ವ್ಯವಸಾಯಕ್ಕೆ ಒಳಪಡಿಸಿದ ಭೂಮಿಯಲ್ಲಿ ಶಿಲಾಯುಗದ ಪದರಗಳು ಕಿತ್ತು ಮೇಲೆ ಬಂದಿವೆ. ಇಲ್ಲೆಲ್ಲ ಶಿಲಾಯುಗದ ಪದರಗಳು ಈಗಿನ ನೆಲಕ್ಕಿಂತ ಕೆಲವೇ ಇಂಚುಗಳಷ್ಟು ಒಳಗಿವೆ.

---

* ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ

ಶಿಲಾಯುಗದ ಪದರುಗಳ ಅನುಕ್ರಮಣಿಕೆಯನ್ನು ತಿಳಿಯಲು ಈ ಪ್ರದೇಶದಲ್ಲಿ ಈ ಸ್ಥಳವೇ ಹೆಚ್ಚು ಸೂಕ್ತವಾದದ್ದು ಎಂದು ಕಂಡುಬರುತ್ತದೆ. ಇಂದಿನ ಒಂದು ಬಂಡಿಯ ದಾರಿ ಈ ಎತ್ತರ ಪ್ರದೇಶವನ್ನು ಹಾಯ್ದು ಹೋಗುತ್ತದೆ. ಈ ದಾರಿ ಕೆಲವೆಡೆ ಒಂದು ಮೀಟರಿಗಿಂತಲೂ ಹೆಚ್ಚು ದಪ್ಪವಿರುವ ಭೂ ಪದರಗಳನ್ನು ಕತ್ತರಿಸಿ ಶಿಲಾಯುಗದ ನೆಲದ ಮೇಲೆ ಹಾದು ಹೋಗುತ್ತದೆ. ಇಲ್ಲಿ ಶಿಲಾಯುಗದ ನೆಲ ಕ್ವಾಡ್ಜೈಟ್ ಕಲ್ಲುಗಳ ಸೀಳುಗಳು ಹಾಗೂ ಉಂಡೆಗಳಿಂದ ತುಂಬಿದೆ. ಈ ಕಲ್ಲುಗಳು ಭೂಮಿಯ ಹಾಸುಗಲ್ಲಿನ ಮೇಲೆ ಕಲ್ಲಿನ ಸವಕಳಿ ಮರಳಿನ ಜೊತೆ ಮಿಶ್ರವಾಗಿವೆ. ಈ ಪದರನ್ನು ಆದಿ ಶಿಲಾಯುಗದ ಉಪಕರಣಭರಿತ ಪದರೆಂದು ಗುರುತಿಸಬಹುದು. ಈ ಪದರಿನಿಂದಲೇ ಒಂದು ಆದಿ ಶಿಲಾಯುಗದ ಕೈಗೊಡಲಿಯನ್ನು ಅಗೆದು ತೆಗೆಯಲಾಗಿದೆ. (ಚಿತ್ರ II-೬) ಈ ಪದರು ಮರಳು ಮಿಶ್ರಿತ ಆವೆ ಮಣ್ಣಿನ ಹಳದಿ ಅಥವಾ ಕಂದು ಪದರಿನ ಕೆಳಭಾಗದಲ್ಲಿ ಇದೆ. ಈ ಹಳದಿ ಅಥವಾ ಕಂದು ಪದರು ಕೆಲವೆಡೆ ಒಂದು ಅಡಿಗಿಂತಲೂ ದಪ್ಪವಾಗಿದೆ. ಈ ಎಲ್ಲ ಪದರುಗಳಿಗೂ ಮೇಲೆ ಕಪ್ಪು ಮಣ್ಣಿನ ಮೇಲ್ಮೈ ಪದರಿದೆ. ಈ ಕಪ್ಪು ಮಣ್ಣಿನ ಮೇಲ್ಪದರದಲ್ಲಿ ಹಾಲು ಬೆಣಚುಗಲ್ಲಿನ ಸೂಕ್ಷ್ಮ ಶಿಲಾಯುಧಗಳು ದೊರೆಯುತ್ತವೆ. ಆದಿ ಶಿಲಾಯುಗದ ಉಪಕರಣಭರಿತ ಪದರಿನಲ್ಲಿ ಕೆಲವು ಹೊಳೆಯ ಉರುಟಾದ ಉಂಡೆಗಲ್ಲುಗಳೂ ಸಿಕ್ಕುವುದರಿಂದ ಶಿಲಾಯುಗದ ಮಾನವನೇ ಅವುಗಳನ್ನು ಸುಮಾರು ಅರ್ಧ ಕಿ.ಮೀ. ದೂರದ ಹೊಳೆಯಿಂದ ತಂದಿದ್ದರಲ್ಲಿ ಯಾವ ಸಂಶಯವೂ ಕಾಣುವುದಿಲ್ಲ.

ಪಶ್ಚಿಮದ ಇಳಿಜಾರಿನಲ್ಲಿ ಜಲಾಶಯದ ನೀರು ಇಳಿದಾಗ ಅಂತ್ಯಹಳೆ ಶಿಲಾಯುಗದ ಆಯುಧ ಪ್ರಕಾರಗಳು ಸಿಗುವ ಜಾಗ ಕಂಡುಬರುತ್ತದೆ. ಈ ಜಾಗದಲ್ಲಿ ಮಧ್ಯ ಹಳೆ ಶಿಲಾಯುಗದ ಆಯುಧಗಳೂ ಸಿಗುತ್ತವೆ. ಈ ಆಯುಧಗಳೆಲ್ಲ ಒಟ್ಟಾಗಿ ಕಲಸಿ ಹೋಗಿರುವುದರಿಂದ ಅನುಕ್ರಮಣಿಕೆ ಶಕ್ಯವಿಲ್ಲ. ಆದರೆ ಈ ಜಾಗವನ್ನು ಉತ್ಖನನ ಮಾಡಿದರೆ ಮಹತ್ವಪೂರ್ಣ ವಿವರಗಳು ತಿಳಿದು ಬರಬಹುದು.

**ಸ್ಥಳ ೨**

ಇದು ಕುವೆಂಪು ವಿಶ್ವವಿದ್ಯಾನಿಲಯದ ಕ್ಯಾಂಪಸ್ಸಿನ ಒಳಗಡೆ ಇದೆ. ಕ್ಯಾಂಪಸ್ಸಿನ ನೀರಿನ ಟ್ಯಾಂಕಿನ ಗುಡ್ಡದ ಪೂರ್ವ ಮತ್ತು ಪಶ್ಚಿಮದ ತಪ್ಪಲಿನಲ್ಲಿ ನೆಲದ ಮೇಲ್ಮೈಯಿಂದ ಸುಮಾರು ೬ ರಿಂದ ೧ ಅಡಿಗಳಷ್ಟು ಕೆಳಗೆ ಉಪಕರಣಭರಿತ ಪದರು ಇದೆ. ಆದರೆ ಸ್ಥಳ ೧ ರಷ್ಟು ಹಳೆಯ ಆಯುಧಗಳು ಪಶ್ಚಿಮದ ತಪ್ಪಲಿನಲ್ಲಿ ಸಿಕ್ಕಿಲ್ಲ. ಇಲ್ಲೂ ಕೂಡ ನದಿಗರಸಿನ ಉಂಡೆ ಕಲ್ಲುಗಳನ್ನು ಶಿಲಾಯುಗದ ಮನುಷ್ಯ ತಂದು ಹಾಕಿದ್ದು ಕಂಡುಬರುತ್ತದೆ. ಇಂದು ವಿವಿಧ ಉದ್ದೇಶಗಳಿಗಾಗಿ ಈ ಪ್ರದೇಶದಲ್ಲಿ ಅಗೆತಗಳು ನಡೆಯುತ್ತಿವೆಯಾದ್ದರಿಂದ ಶಿಲಾಯುಧಗಳ ಪದರಗಳು ಕಾಣಸಿಕ್ಕುತ್ತವೆ. ಗುಡ್ಡದ ಇಳಿಜಾರಿನಲ್ಲಿ ಬೆಣಚುಕಲ್ಲುಗಳ ಸೂಕ್ಷ್ಮ ಶಿಲಾಯುಗದ ಆಯುಧಗಳು ನೆಲದಿಂದ ಒಂದು ಅಡಿಯಷ್ಟು ಕೆಳಭಾಗದಲ್ಲಿ ಕೆಲವೆಡೆ ದೊರಕುತ್ತದೆ.

**ಸ್ಥಳ ೩**

ಈ ಸ್ಥಳ ಬಿ. ಆರ್. ಪ್ರಾಜೆಕ್ಟಿನ ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯದ ಹಿಂಭಾಗದಲ್ಲಿ ಗುಡ್ಡದ ತಪ್ಪಲಿನಲ್ಲಿ ಇದೆ. ಈ ಭಾಗದಲ್ಲಿ ಗುಡ್ಡದ ತುಂಬೆಲ್ಲ ಡೊಲರೈಟಡೈಕಿನ ಚೂರುಗಳು ಚೆಲ್ಲಾಪಿಲ್ಲಿಯಾಗಿವೆ. ಈ ಮೇಲ್ಮೈಯಿಂದ ಸ್ವಲ್ಪವೇ ಕೆಳಗೆ ಹಳೇ ಶಿಲಾಯುಗದ ಪದರು ಇದೆ. ಇಲ್ಲಿ ೧೮ ಹಳೇ ಶಿಲಾಯುಗದ ಆಯುಧಗಳು ಸಿಕ್ಕಿವೆ. ಆದರೆ ಮೇಲ್ಮೈಯಲ್ಲಿ ಹಾಲು ಬೆಣಚುಕಲ್ಲಿನ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಧಾರಾಳವಾಗಿ ಸಿಗುತ್ತವೆ. ಒಂದು ಸೂಕ್ಷ್ಮವಾದ ಕ್ವಾಡ್‌ಜೈಟ್ ಕಲ್ಲಿನ ಸುಂದರವಾದ ಮೊನೆ ಇಲ್ಲಿ ದೊರೆತಿದೆ (ಚಿತ್ರ VI-೨೧). ಈ ಭಾಗದಲ್ಲೇ ಡೊಲರೈಟಿನಲ್ಲಿ ಮಾಡಿದ ಒಂದು ನವಶಿಲಾಯುಗದ ಕೈಗೊಡಲಿ ಕೂಡ ಸಿಕ್ಕಿದೆ (ಚಿತ್ರ V) ಆದರೆ ಇನ್ನೂ ನವಶಿಲಾಯುಗದ ವಸತಿದಿಬ್ಬವನ್ನು ಇನ್ನೂ ಗುರುತಿಸಲು ಆಗಿಲ್ಲ.

**ಸ್ಥಳ ೪**

ಭದ್ರಾನದಿಯ ಎರಡೂ ದಡಗಳ ಮೇಲೆ ಭದ್ರಾನದಿಗೆ ನಿರ್ಮಿಸಿರುವ ಆಧುನಿಕ ಸೇತುವೆಯಿಂದ ಕೆಳಗೆ ಕೆಲವೇ ಫರ್ಲಾಂಗುಗಳ ಅಂತರದಲ್ಲಿ ಈ ಸ್ಥಳವಿದೆ. ಇದು

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನಲ್ಲಿ ಬರುತ್ತದೆ. ಇಲ್ಲಿ ಹಾಲು ಬೆಣಚುಗಲ್ಲಿನ ಸೂಕ್ಷ್ಮಶಿಲಾಯುಗಕ್ಕೆ ಸೇರಬಹುದಾದ ಆಯುಧಗಳು ದೊರಕಿವೆ. ಹಾಗೂ ಎರಡು ಮಧ್ಯ ಹಳೆ ಶಿಲಾಯುಗದ ಆಯುಧಗಳು ಸಿಕ್ಕಿವೆ.

೨. ಶಿಲಾಯುಗದ ಪ್ರಕಾರಗಳು :

ನಾಲ್ಕು ಹಂತಗಳಿಗೆ ಸೇರುವ ಶಿಲಾಯುಧಗಳು ಈ ಪ್ರದೇಶಗಳಲ್ಲಿ ಸಿಕ್ಕಿವೆ. ೧) ಆದಿ ಮತ್ತು ಮಧ್ಯ ಹಳೆ ಶಿಲಾಯುಗದ ಪ್ರಕಾರಗಳು, ೨) ಅಂತ್ಯ ಹಳೇ ಶಿಲಾಯುಗ, ೩) ಸೂಕ್ಷ್ಮ ಶಿಲಾಯುಗ, ಹಾಗೂ ೪) ನವಶಿಲಾಯುಗ.

ಈ ಮೇಲಿನ ವರ್ಗೀಕರಣ ಕೇವಲ ಆಯುಧ ಪ್ರಕಾರಗಳ ಮೇಲೆ ಮಾತ್ರ ನಿಂತಿದೆ. ಹೀಗಾಗಿ ಈ ಆಯುಧಗಳ ಕಾಲಾನುಕ್ರಮಣಿಕೆಯು ಬಗೆಗೆ ಈ ಲೇಖನದಲ್ಲಿ ಖಚಿತವಾಗಿ ಏನನ್ನೂ ಹೇಳಲು ಶಕ್ಯವಿಲ್ಲ. ಲಭ್ಯವಿದ್ದಷ್ಟು ಸ್ತರಗಳ ಪರಿಶೀಲನೆ ಸ್ಥೂಲವಾಗಿ ಮಧ್ಯ ಹಾಗೂ ಅಂತ್ಯ ಹಳೇ ಶಿಲಾಯುಗಗಳು ನಂತರದ ಶಿಲಾಯುಗಗಳಿಗಿಂತ ಪ್ರಾಚೀನ ಎಂಬುದನ್ನು ಮಾತ್ರ ತೋರಿಸುತ್ತದೆ.

ಬಳಕೆಯಾದ ಕಲ್ಲುಗಳು

ಆದಿ ಮತ್ತು ಮಧ್ಯ ಶಿಲಾಯುಗದ ಆಯುಧ ಪ್ರಕಾರಗಳು ಕ್ವಾಡ್‌ಜೈಟ್ ಹಾಗೂ ಬೆಣಚುಕಲ್ಲುಗಳಿಂದಲೇ ಮಾಡಲ್ಪಟ್ಟಿವೆ. ಇಲ್ಲಿಯ ಕ್ವಾಡ್‌ಜೈಟ್ ಕಲ್ಲುಗಳು ಕಂದು ಬಣ್ಣದ ಇಲ್ಲವೇ ಕೆಂಪುಕಂದು ಬಣ್ಣದಲ್ಲಿವೆ. ಅವುಗಳ ರಚನೆ ಕೆಲವೊಮ್ಮೆ ಕಲ್ಮಶಭರಿತವಾಗಿದ್ದು ಆಯುಧಗಳ ಒರಟು ರೂಪಕ್ಕೆ ಕಾರಣವಾಗಿದೆ. ಇಂಥ ಕಲ್ಲುಗಳಲ್ಲಿ ಎತ್ತಿದ ಚಕ್ಕೆಗಳ ಗುರುತುಗಳೂ ಅಂಥ ಕ್ರಮವಾಗಿ ಮೂಡಿಲ್ಲ. ಜೊತೆಗೆ ಆಯುಧಗಳಲ್ಲಿ ತೀರ ವಕ್ರವಾದ ಅಂಚುಗಳನ್ನು ಸಾಮಾನ್ಯವಾಗಿ ನೋಡಬಹುದು.

ಅಂತ್ಯ ಹಳೇ ಶಿಲಾಯುಗದ ಆಯುಧಗಳೆಂದು ಸ್ಪಷ್ಟವಾಗಿ ಗುರುತಿಸಬಲ್ಲ. ಆಯುಧಗಳು ತೀರ ಸೂಕ್ಷ್ಮ ಕಣಗಳಿಂದ ಕೂಡಿದ ನಯವಾದ ಕಪ್ಪು ಕ್ವಾಡ್‌ಜೈಟ್‌ನಿಂದ ಮಾಡಲ್ಪಟ್ಟಿವೆ. ಇಲ್ಲಿ ಸಿಗುವ ಸೂಕ್ಷ್ಮ ಶಿಲಾಯುಧ ಪ್ರಕಾರಗಳೆಲ್ಲ ಹಾಲು ಬೆಣಚುಕಲ್ಲಿನಲ್ಲಿ ತಯಾರಿಸಿದಂಥವು. ಅಪರೂಪಕ್ಕೆ ಬೆಣಚುಕಲ್ಲಿನ ಉಳಿದ ಪ್ರಕಾರಗಳಲ್ಲಿ ಕೂಡ ಅವುಗಳನ್ನು ನೋಡಬಹುದು. ನವಶಿಲಾಯುಗದ ಆಯುಧ ಡೊಲರೈಟ ಕಲ್ಲಿನಲ್ಲಿ ತಯಾರಿಸಲ್ಪಟ್ಟಿದೆ. ಕರ್ನಾಟಕದ ನವಶಿಲಾಯುಗದ ಜನರು ಸಾಮಾನ್ಯವಾಗಿ ಈ ಕಲ್ಲನ್ನೇ ಎಲ್ಲ ಕಡೆಗೂ ಆಯ್ಕೆ ಮಾಡಿಕೊಂಡಿದ್ದರು.

ಸ್ಥಳ ೧ ; ಆಯುಧಗಳನ್ನು ತಯಾರಿಸುವ ಒಂದು ಜಾಗವಾಗಿತ್ತು. ಇಲ್ಲಿ ಸಿದ್ಧಪಡಿಸಿದ ತಿರುಳುಗಳೂ, ಆಯುಧಗಳೂ, ಅಪೂರ್ಣ ಆಯುಧಗಳೂ, ತ್ಯಜಿಸಿದ ಆಯುಧಗಳು ಚಕ್ಕೆಗಳೂ ಧಾರಾಳವಾಗಿ ಸಿಗುತ್ತವೆ.

ಆದಿ ಹಾಗೂ ಮಧ್ಯ ಹಳೆ ಶಿಲಾಯುಗದ ಆಯುಧ ವೈವಿಧ್ಯಗಳು :

೧) ಕೈಗೊಡಲಿ : ಇಲ್ಲಿಯ ಕೈಗೊಡಲಿಗಳನ್ನು ಆದಿ ಹಳೇ ಶಿಲಾಯುಗದ ಮಾದರಿ ಆಕಾರಗಳಿಗೆ ಹೋಲಿಸುವುದು ಕಷ್ಟ. ಸ್ಥೂಲವಾಗಿ ಕೆಳಗಿನಂತೇ ಅವನ್ನೂ ವಿಭಾಗಿಸಬಹುದು.

ಅ) ಚೂಪು ಮೊನೆಯ ಕೈಗೊಡಲಿಗಳು : ಅವುಗಳಲ್ಲಿ ಬುಡ ಗುಂಡಗಿರುವ ಹಾಗೂ ತಿರುಳಿನ ಭಾಗವನ್ನು ಹೊಂದಿರುವ ಕೈಗೊಡಲಿಗಳು, ದಪ್ಪ ಚಕ್ಕೆಗಳಲ್ಲಿ ಮಾಡಿರುವ ಸಮತಲವಾದ ದಪ್ಪ ಬುಡವನ್ನು ಹೊಂದಿರುವ ಕೈಗೊಡಲಿಗಳು (II–೬, III–೧೪) ಇಲ್ಲಿ ನೀಳ ಮೊನೆಯ ತೆಳುವಾದ ಆದರೆ ಅಗಲವಾದ ಬುಡವನ್ನು ಹೊಂದಿರುವ ಸೀಳುಗಳಲ್ಲಿ ಮಾಡಿರುವ ಕೈಗೊಡಲಿಗಳು (II-೫) ಹೆಸರಿಸಬಹುದಾದಂಥವು.

ಆ) ಅಗಲ ಮೊನೆಯ ಕೈಗೊಡಲಿಗಳು : ಇವುಗಳಲ್ಲಿ ಕೊಡಲಿಗಳ ತುದಿಭಾಗದ ಅಲಗು ಅಗಲವಾಗಿ ಇರುತ್ತದೆ. ಇವುಗಳ ಬುಡ ಭಾಗ ಈ ಮೇಲೆ ವಿವರಿಸಿದ ಚೂಪು ಮೊನೆಯ ವಿಭಿನ್ನ ಕೈಗೊಡಲಿಗಳ ಬುಡಗಳಂತೇ ಇರಬಹುದು (II-೮).

ಇ) ದೀರ್ಘ ವರ್ತುಲಾಕೃತಿಯ ಕೈಗೊಡಲಿಗಳು (I-೪).

ಈ) ಪ್ರಮಾಣಬದ್ಧವಾದ ಸೀಳು ನೋಟದಲ್ಲಿ ಇರುವಂತೆಯೇ ಕಾಣುವ ಕೈಗೊಡಲಿಗಳು. ಅವುಗಳ ಮೊನೆ ಚೂಪಾಗಿರಬಹುದು ಇಲ್ಲಿ ಅಗಲವಾಗಿರಬಹುದು (II-೭).

೨) ಸೀಳುಗೊಡಲಿ : ಒಂದೇ ಒಂದು ಸ್ಪಷ್ಟ ಸೀಳುಗೊಡಲಿ ಸಿಕ್ಕಿದೆ (ಚಿತ್ರ III-೧೧). ಮತ್ತೆರಡು ಉದಾಹರಣೆಗಳಲ್ಲಿ ಒಂದೇ ಆಯುಧವೇ ವಿಭಿನ್ನ ಅಂಚು ಗಳಲ್ಲಿ ಕೈಗೊಡಲಿ ಹಾಗೂ ಸೀಳುಗೊಡಲಿಗಳ ಕಾರ್ಯ ನಿರ್ವಹಿಸಿರಬಹುದಾದ ಸಾಧ್ಯತೆ ಇದೆ (ಚಿತ್ರ II-೯).

೩) ಹೆರೆಗತ್ತಿಗಳು : (ಅ) ಇವುಗಳನ್ನು ಕಲ್ಲಿನ ತಿರುಳಿನಲ್ಲಿಯೂ ದಪ್ಪ ಸೀಳುಗಳಲ್ಲಿಯೂ ತಯಾರಿಸಲಾಗಿದೆ (ಚಿತ್ರ I-೨, I-೧೦, IV-೨೦).

(ಆ) ಹೆರೆಗತ್ತಿ ಹಾಗೂ ಮೊನೆಗಳಿರುವ ಆಯುಧ (ಚಿತ್ರ III-೧೫).

(ಇ) ಹೆರೆಗತ್ತಿ ಹಾಗೂ ಭೈರಿಗೆಗಳಿರುವ ಆಯುಧ (IV-೨೧)

೪) ಮೊನೆಗಳು : ಇವುಗಳನ್ನು ಸೀಳುಗಳಲ್ಲಿ ತಯಾರಿಸಲಾಗಿದ್ದು, ಸೀಳುಗಳ ಒಂದು ಮೈ ಅಥವಾ ಎರಡೂ ಮೈಗಳನ್ನೂಸಿದ್ಧಪಡಿಸಲಾಗಿದೆ. ಮೊನೆಗಳಲ್ಲಿನ ವಿಧಗಳೆಂದರೆ (ಅ) ತ್ರಿಕೋಣಾಕೃತಿಯ ಮೊನೆಗಳು (ಚಿತ್ರ IV-೧೮) (ಆ) ನೀಳ ಮೊನೆಗಳು (ಚಿತ್ರ IV-೧೯) (ಇ) ಅಗಲ ಮೊನೆಗಳು (ಚಿತ್ರ IV-೨೨).

ತ್ರಿಕೋನಾಕೃತಿಯ ಮೊನೆಗಳು ಬೆನ್ನ ಮೇಲೆ ಮೂರು ಏಣುಗಳಿರುತ್ತವೆ. ಅವು ಮಧ್ಯದಲ್ಲಿ ಕೂಡು ತ್ತವೆ. ಅದರ ತಳಭಾಗದಲ್ಲಿ ಒಂದೇ ಸೀಳಿನ ಗುರುತು ಇರುತ್ತದೆ. ಬಹುಶಃ ಅಂಚುಗಳುಳ್ಳ ಒಂದು ತಿರುಳಿನ ಮೂಲೆಯ ಚಕ್ಕೆ ಎಬ್ಬಿಸಿ ಆ ಚಕ್ಕೆಯಿಂದ ಇಂಥ ಮೊನೆ ಗಳನ್ನು ಮಾಡುತ್ತಿದ್ದರು. ಅದೇ ರೀತಿ ನೀಳವಾದ ಮೊನೆಗಳನ್ನು ನೀಳವಾದ ಅಲಗನ್ನು ಹೋಲುವ ಸೀಳುಗಳಿಂದ ಮಾಡಿದ್ದು ಕಂಡುಬರುತ್ತದೆ.

೫) ಬೈರಿಗೆಗಳು : ಬೈರಿಗೆಯ ಕೆಲಸವನ್ನು ನಿರ್ವಹಿಸಿರಬಹುದಾದ ಈ ಆಯುಧಕ್ಕೆ ಒಂದು ಚೂಪು ತುದಿಯಿದ್ದು ಆ ತುದಿಯ ಎರಡೂ ಪಾರ್ಶ್ವದಲ್ಲೂ ಸಣ್ಣ ಚಕ್ಕೆಗಳನ್ನೆತ್ತಿರುತ್ತಾರೆ. (ಚಿತ್ರ VI-೧೮).

ಆಯುಧಗಳ ವೈಶಿಷ್ಟ್ಯ : ಆಯುಧಗಳು ಉದ್ದ ದಲ್ಲಿ ೫ ರಿಂದ ೧೪ ಸೆಂ.ಮೀ.ವರೆಗೆ ಇವೆ. ಮೊನೆಯ ಮತ್ತು ಹೆರೆಯುವ ಆಯುಧಗಳು ಈ ಪ್ರದೇಶದಲ್ಲಿ ಬಹಳವಾಗಿದ್ದು, ಸೀಳುಗೊಡಲಿಗಳು ತೀರ ಅಪರೂಪಕ್ಕೆ ಸಿಕ್ಕುತ್ತವೆ. ಆದಿ ಹಳೇ ಶಿಲಾಯುಗದ ಆಯುಧಗಳಲ್ಲಿ ಪ್ರಮುಖವಾದ ಸೀಳುಗೊಡಲಿ ಇಲ್ಲಿ ಇಷ್ಟು ಕಡಿಮೆ ಪ್ರಮಾಣದಲ್ಲಿ ಸಿಕ್ಕುವುದೂ, ಇಲ್ಲಿನ ಕೈಗೊಡಲಿಗಳು ಆದಿ ಹಳೆಯ ಶಿಲಾಯುಗದ ಮಾದರಿ ಆಕಾರವನ್ನು ಅಷ್ಟಾಗಿ ಹೋಲದಿರು ವುದೂ ಇಲ್ಲಿ ಅಪ್ಪಟ ಆದಿ ಹಳೆ ಶಿಲಾಯುಗ ಸಂಸ್ಕೃತಿ ಇಲ್ಲದ್ದನ್ನು ಸೂಚಿಸಬಹುದು. ಈ ಆಯುಧ ಗಳು ಹಳೆಯ ಮೈಸೂರಿನ ಇನ್ನಿತರ ನೆಲೆಗಳಿಂದ ಬಂದ ಆಯುಧಗಳನ್ನು ಹೋಲುತ್ತವೆ. ಉದಾಹರಣೆಗೆ ಮೊನೆಗಳನ್ನು ಮುಮ್ಮೈ ಸೀಳುಗಳಿಂದ ತ್ರಿಕೋಣಾದಲ್ಲಿ ತಯಾರಿಸುವ ವಿಧಾನವನ್ನು ಶೇಷಾದ್ರಿಯವರು ಹಳೇ ಮೈಸೂರು ಶಿಲಾಯುಧಗಳಲ್ಲಿ ಗಮನಿಸುತ್ತಾರೆ.[1] ಅದೇ ರೀತಿ ದಪ್ಪವಾದ ಕಲ್ಲಿನ ಸೀಳುಗಳನ್ನು ತೆಗೆದುಕೊಂಡು ಅದರ ಒಂದು ಸಮತಲ ಪಾರ್ಶ್ವವನ್ನು ಬಹುಭಾಗ ಉಳಿಸಿಕೊಂಡು ಉಳಿದ ಭಾಗದಲ್ಲಿ ಚಕ್ಕೆ ಎತ್ತಿ ಆಯುಧ ತಯಾರಿಸುವ ವಿಧಾನ ಬಿ. ಆರ್. ಪ್ರಾಜೆಕ್ಟ್‌ನ ಶಿಲಾ ಯುಧಗಳ ವೈಶಿಷ್ಟ್ಯ. ಇಂಥದೇ ಆಯುಧಗಳು ಇಲ್ಲಿಗೆ ಸಮೀಪದ ಲಿಂಗದಹಳ್ಳಿಯಲ್ಲಿ ಬ್ರೂಸ್‌ಫೂಟ್ ಅವರಿಗೆ ದೊರೆತಿದ್ದವು.[2]

1 ಎಮ್. ಶೇಷಾದ್ರಿ., "ದಿ ಸ್ಟೋನ್ ಯೂಸಿಂಗ್ ಕಲ್ಚರ್ಸ್ ಆಫ್ ಪ್ರಿ ಹಿಸ್ಟಾರಿಕ್ ಮೈಸೂರ್, ೧೯೫೬, ಪು. ೧೮.

2 ಅದೇ, ಪು. ೨೨-೨೩.

## ಅಂತ್ಯ ಹಳೇ ಶಿಲಾಯುಗದ ಆಯುಧಗಳು

ಸ್ಥಳ ೧ ರಲ್ಲಿ ಬಿ ಭಾಗದಲ್ಲಿ ತೀರ ವಿಭಿನ್ನವಾದ ಶಿಲೆಗಳನ್ನು ಉಪಯೋಗಿಸಿ ಈ ಮೇಲಿನ ವಿಧದ ಆಯುಧಗಳನ್ನು ತಯಾರಿಸಿದ್ದು ಗೋಚರಿಸುತ್ತದೆ. ಉಪಯೋಗಿಸಿದ ಕಲ್ಲು ಕಪ್ಪು ಬಣ್ಣದ ಸೂಕ್ಷ್ಮ ಕಣಗಳ ಕ್ವಾಡ್‌ಜೈಟಿನಲ್ಲಿದೆ. ಆಂಧ್ರದ ಹಾಗೂ ಕೃಷ್ಣಾ-ಭೀಮಾನದೀ ತೀರದ ಅಂತ್ಯ ಹಳೆ ಶಿಲಾಯುಗದ ಆಯುಧಗಳನ್ನು ಇಲ್ಲಿಯ ಆಯುಧಗಳು ಉಪಯೋಗಿಸಿದ ಕಲ್ಲು ಹಾಗೂ ಆಕಾರ ವಿಧಗಳಲ್ಲಿ ಹೋಲುತ್ತವೆ.[3] ಅವು ಉದ್ದದಲ್ಲಿ ೨.೫ ಸೆಂ.ಮೀ. ನಿಂದ ೭ ಸೆಂ.ಮೀ. ವರೆಗೆ ಇವೆ. ಅವುಗಳನ್ನು ಕಲ್ಲಿನ ಅಲಗು(ಬ್ಲೇಡು)ಗಳಿಂದ (ಉದ್ದ ಚಕ್ಕೆಗಳಾಗಿ) ತಯಾರಿಸಲಾಗಿದೆ. ಈ ಬ್ಲೇಡುಗಳನ್ನು ಕೊಳವೆ ಆಕಾರದ ತಿರುಳುಗಳಿಂದ ಎತ್ತಲಾಗಿದ್ದು ಅಂಥ ತಿರುಳುಗಳೂ ಇಲ್ಲಿ ಸಿಕ್ಕಿವೆ. ಅಂಥ ಒಂದು ತಿರುಳಿನಲ್ಲೂ ಉಳಿಯ ಥರದ ಅಂಚಿನ ಆಯುಧವನ್ನು ತಯಾರಿಸಲಾಗಿದೆ (ಚಿತ್ರ VI, ೧೪), ಬ್ಲೇಡುಗಳಲ್ಲಿ ಮಾಡಿದ ಆಯುಧಗಳಲ್ಲಿ ಹಿಂಭಾಗವನ್ನು ಮೊಂಡಾಗಿ ಮಾಡಿದ ಅಲಗುಗಳು (ಚಿತ್ರ VI-೩, ೪, ೫) ಹಾಗೂ ಸಣ್ಣ ಉಳಿಗಳು (ಚಿತ್ರ VI-೧೨) ಮುಖ್ಯವಾಗಿವೆ. ಜೊತೆಗೆ ಹೆರೆಯುವ ಆಯುಧಗಳು ಹಾಗೂ ಮೊನೆಗಳನ್ನೂ ನಾವು ಕಾಣುತ್ತೇವೆ (ಚಿತ್ರ V-೯, ೧೧).

ಅಂತ್ಯ ಹಳೇ ಶಿಲಾಯುಗದ ಆಯುಧಗಳು ಅಚ್ಚ ಹೊಸದಾಗಿ ಕಾಣಿಸುತ್ತವೆ. ಬ್ಲೇಡುಗಳ ತುದಿಭಾಗದಲ್ಲಿ ಮೊನೆಯಂತಹ ಉಪಕರಣದಿಂದ ಹೊಡೆದ ಗುರುತು ಕೆಲವೊಮ್ಮೆ ಕಾಣಿಸುತ್ತದೆ. ಕೆಲವು ಆಯುಧಗಳ ಅಲಗುಗಳನ್ನು ಬಳಸಿ ಕೆಲಸ ಮಾಡಿದ ಗುರುತುಗಳೂ ಕಂಡು ಬರುತ್ತವೆ. ಇವುಗಳಲ್ಲದೇ ಕ್ವಾಡ್‌ಜೈಟ್‌ನಲ್ಲಿ ಮಾಡಿದ ಬ್ಲೇಡು ಹಾಗೂ ಸಣ್ಣ ಉಳಿಗಳೂ ಈ ಭಾಗದಲ್ಲಿ ಸಿಕ್ಕಿವೆ.

## ಸೂಕ್ಷ್ಮ ಶಿಲಾಯುಧಗಳು

ಈ ಪ್ರದೇಶದಲ್ಲಿ ಭೂಮಿಯ ಮೇಲ್ಮೈಯಲ್ಲಿ ಸೂಕ್ಷ್ಮ ಶಿಲಾಯುಧಗಳು (ಚಿತ್ರಗಳು VII, ೧-೭೬) ಸಾಧಾರಣವಾಗಿ ಕಾಣಸಿಗುತ್ತವೆ. ಅವು ಸಾಧಾರಣವಾಗಿ ಹಾಲು ಬೆಣಚು ಕಲ್ಲಿನಲ್ಲಿ ಮಾಡಲ್ಪಟ್ಟಿವೆ. ಕೆಲವೊಮ್ಮೆ ಗುಡ್ಡದ ಇಳಿಜಾರಿನಲ್ಲಿ ನೆಲದಿಂದ ಒಂದು ಅಡಿಗಿಂತಲೂ ಕೆಳಗೆ ಅವು ಸಂಚಯವಾಗಿರುವುದರಿಂದ ಸೂಕ್ಷ್ಮ ಶಿಲಾಯುಧಗಳು ಈ ಭಾಗದಲ್ಲಿ ಬಹು ಪ್ರಾಚೀನ ಕಾಲದಿಂದ ಇವೆ ಎಂಬುದು ಸ್ಪಷ್ಟ. ನೆಲದ ಮೇಲೆ ಸಿಕ್ಕ ಸೂಕ್ಷ್ಮ ಶಿಲಾಯುಧಗಳು ಡಾ॥ ಸಂಕಾಲಿಯಾ ಅವರ ಪ್ರಕಾರ ಕ್ರಿ.ಶ. ೧೦ನೆಯ ಶತಮಾನದವರೆಗಿನ ಯಾವುದೇ ಕಾಲಕ್ಕೆ ಸೇರುವ ಶಕ್ಯತೆ ಇದೆ.[4]

ಈ ಪ್ರದೇಶದ ಸೂಕ್ಷ್ಮ ಶಿಲಾಯುಧಗಳು ಜ್ಯಾಮಿತೀಯ ಆಕಾರಗಳನ್ನು ತೀರ ಅಪರೂಪವಾಗಿ ಪ್ರತಿನಿಧಿಸುತ್ತವೆ. ಅಂಥ ಆಕಾರಗಳೆಂದರೆ (೧) ಅರ್ಧ ಚಂದ್ರಾಕೃತಿಗಳು (೨) ಟ್ರಾಪೀಜುಗಳು (೩) ತ್ರಿಕೋಣಗಳು. ಜ್ಯಾಮಿತಿಯವಲ್ಲದ ಆಕಾರಗಳು ವಿಪುಲವಾಗಿವೆ. ಅವುಗಳನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು :

೧) ಮೊನೆಗಳು : ಮೊನೆಗಳನ್ನು ಬ್ಲೇಡುಗಳಿಂದ, ಸೀಳುಗಳಿಂದ ಇಲ್ಲ ಕೊಳವೆ ತಿರುಳುಗಳಿಂದ ತಯಾರಿಸಲಾಗಿದೆ. ಕೊಳವೆ ತಿರುಳುಗಳಲ್ಲಿ ತೀರ ಕೊನೆಗೆ ಎತ್ತಿದ ಬ್ಲೇಡುಗಳು ಸಹಜವಾಗಿಯೇ ಮೊನೆಯನ್ನು ಹೊಂದಿರುತ್ತವೆ. ಸೀಳುಗಳಿಂದ ತಯಾರಿಸಿದ ಮೊನೆಗಳ ಬೆನ್ನ ಮೇಲೆ ಒಂದು ಏಣು ಇರುತ್ತದೆ. ಬಹುಶಃ ತಿರುಳಿನ ಅಂಚನ್ನು ಚಕ್ಕೆ ಎಬ್ಬಿಸಿರುವುದರಿಂದ ಈ ಆಕಾರ ಸಹಜವಾಗಿ ಬಂದಿದೆ. ಈ ಮೊನೆಗಳೆಲ್ಲ ೧.೫ ಸೆಂ.ಮೀ. ಯಿಂದ ೫ ಸೆಂ.ಮೀ.ವರೆಗೆ ಉದ್ದವಾಗಿರುತ್ತವೆ. ಈ ಮೊನೆಗಳಲ್ಲಿ ತ್ರಿಕೋನಾಕೃತಿಯ ಮೊನೆಗಳು, ಪತ್ರಾಕಾರದ ಮೊನೆಗಳು, ನೀಳ ಮೊನೆಗಳು, ಕೊಕ್ಕಿನಂಥ

---

3 ಎಂ. ಎಲ್. ಕೆ., ಮೂರ್ತಿ, "ಬ್ಲೇಡ್-ಬ್ಯುರಿನ್ ಎಂಡ್ ಲೇಟ್ ಸ್ಟೋನ್ ಏಜ್ ಇಂಡಸ್ಟ್ರೀಸ್ ಎರೌಂಡ್ ರೇಣಿಗುಂಟಾ" ಹಾಗೂ ಪದ್ದಯ್ಯ ಕೆ., "ದಿ ಬ್ಲೇಡ್ ಟೂಲ್ ಇಂಡಸ್ಟ್ರೀ ಆಫ್ ಶೋರಾಪೂರ್ ದೋಆಬ್ ಪೆನಿನ್ಸುಲರ್ ಇಂಡಿಯಾ" ಎರಡೂ ಲೇಖನಗಳೂ ಪ್ರಕಟವಾಗಿರುವ ಪುಸ್ತಕ "ಸ್ಟಡೀಸ್ ಇನ್ ಇಂಡಿಯನ್ ಆರ್ಕಿಯಾಲಜಿ" (ಸಂ) ಎಸ್. ಬಿ. ದೇವ ಹಾಗೂ ಎಂ. ಕೆ. ಧವಳೀಕರ, ಪಾಪ್ಯೂಲರ್ ಪ್ರಕಾಶನ, ಬಾಂಬೆ, ೧೯೮೫.

4 ಸಂಕಾಲಿಯಾ ಎಚ್. ಡಿ., "ಸ್ಟೋನ್ ಏಜ್ ಟೂಲ್ಸ್" ಡೆಕ್ಕನ್ ಕಾಲೇಜ್, ಪೂನಾ ಇಲ್ಲಿ ಈ ಸಂಬಂಧಿಸಿ ಚರ್ಚಿಸಲಾಗಿದೆ.

ಮೊನೆಗಳು, ಕರ್ಣಿಕೆಗಳೆಂದು ವಿಭಿನ್ನ ವರ್ಗೀಕರಣವನ್ನು ಮಾಡಬಹುದು.

೨) ಹೆರೆಯುವ ಆಯುಧಗಳು : ಇವುಗಳನ್ನು ಕೂಡ ಸೀಳುಗಳಿಂದ ಹಾಗೂ ಕೊಳವೆ ತಿರುಳುಗಳಿಂದ ತಯಾರಿಸಲಾಗಿದೆ. ಅವುಗಳ ಗರಿಷ್ಠ ಉದ್ದ ಕೂಡ ೫ ಸೆಂ.ಮೀ.ನಷ್ಟಿದೆ. ಕೆಲವು ಆಯುಧಗಳು ಮೊನೆಯಾಗಿಯೂ, ಹೆರೆಯುವ ಆಯುಧಗಳಾಗಿಯೂ ಒಟ್ಟಿಗೇ ಉಪಯೋಗಿಸಲ್ಪಡುತ್ತಿದ್ದವು.

೩) ಬ್ಲೇಡುಗಳು : ಹಾಲು ಬೆಣಚು ಕಲ್ಲಿನಲ್ಲಿ ತಯಾರಿಸಿದ ಬ್ಲೇಡುಗಳು ಉದ್ದದಲ್ಲಿ ೧.೫ ಸೆಂ.ಮೀ. ನಿಂದ ೪ ಸೆಂ.ಮೀ. ಗಳಷ್ಟು ಹಾಗೂ ಅಗಲದಲ್ಲಿ ೩ ಮಿ.ಮಿ.ಗಳಿಂದ ೫ ಮಿ.ಮಿ.ಗಳವರೆಗೆ ಇವೆ. ಸಾಧಾರಣವಾಗಿ ಬ್ಲೇಡಿನ ಒಂದು ಸಮಾನಾಂತರ ಅಂಚನ್ನು ಮೊಂಡು ಮಾಡಲಾಗಿರುತ್ತದೆ. ಕೆಲಸ ಮಾಡುವ ಅಂಚುಗಳು ನೇರವಾಗಿ ಅಥವಾ ವಕ್ರವಾಗಿ ಇವೆ. ಕೆಲವೊಂದು ಗರಗಸದಂತಹ ಅಂಚುಗಳನ್ನು ಹೊಂದಿವೆ.

ಸೂಕ್ಷ್ಮ ಬೈರಿಗೆಗಳು : ಅವನ್ನು ದಪ್ಪ ಬ್ಲೇಡುಗಳಿಂದ ಅಥವಾ ಸೀಳುಗಳಿಂದ ತಯಾರಿಸಲಾಗಿದೆ.

ಸೂಕ್ಷ್ಮ ಉಳಿಗಳು : ಅಪರೂಪಕ್ಕೆ ಈ ಆಯುಧಗಳೂ ಸೂಕ್ಷ್ಮ ಶಿಲಾಯುಧಗಳ ಇತರ ಪ್ರಕಾರಗಳ ಜೊತೆ ಸಿಗುತ್ತವೆ.

### ನವಶಿಲಾಯುಗದ ಕೈಗೊಡಲಿ

ಸಿಂಗನಮನೆ ಗ್ರಾಮದ ರಸ್ತೆಗೆ ಬಳಸಲಾಗಿದ್ದ ಗರಸಿನಲ್ಲಿ ಈ ಆಯುಧ (ಚಿತ್ರ V) ಸಿಕ್ಕಿದ್ದು, ಮೂಲತಃ ಇದನ್ನು ಸ್ಥಳ ೩ ರಿಂದ ತರಲಾಗಿದೆಯೆಂದು ಗರಸನ್ನು ತಂದವರು ತಿಳಿಸಿದ್ದಾರೆ. ಆ ಸ್ಥಳದ ಸುತ್ತಮುತ್ತ ಎಲ್ಲೂ ನವಶಿಲಾಯುಗದ ವಸತಿ ದಿಬ್ಬ ಸಿಕ್ಕಲಿಲ್ಲ. ಈ ಮೇಲೆ ಉಲ್ಲೇಖಿಸಿದ ಆಯುಧವನ್ನು ಡೊಲರೈಟ ಕಲ್ಲಿನಲ್ಲಿ ಮಾಡಿದ್ದು ಅದರ ಉದ್ದ ೧೪ ಸೇ.ಮೀ. ಹಾಗೂ ಅಗಲ ೩.೬ ಸೆಂ.ಮೀ. ಇದೆ.

### ೩. ಶಿಲಾಯುಗದ ಕಾಲಕ್ಕೆ ಸಂಬಂಧಿಸಿದ ಸಮಸ್ಯೆಗಳು :

ಕರ್ನಾಟಕದ ಈ ಭಾಗದ ಶಿಲಾಯುಧಗಳನ್ನು ಭೂಗರ್ಭಶಾಸ್ತ್ರೀಯ ಸ್ತರಗಳ ಆಧಾರದಿಂದ ವ್ಯವಸ್ಥಿತವಾಗಿ ಅರ್ಥೈಸುವ ಕೆಲಸ ಇನ್ನೂ ಆಗಿಲ್ಲ. ಸ್ಥಳ ೧ರಲ್ಲಿ ಶಿಲಾಯುಧಗಳು ದೊರೆಯುವ ಭೂಸ್ತರಗಳ ಕುರಿತು ಒಂದು ಸ್ಥೂಲ ಕಲ್ಪನೆ ಸಿಗುತ್ತದಾದರೂ ಒಂದು ವ್ಯವಸ್ಥಿತ ಕಾಲಾನುಕ್ರಮಣಿಕೆಯನ್ನು ಪ್ರತಿಪಾದಿಸಲು ಈ ಆಧಾರ ಸಾಲುವುದಿಲ್ಲ. ಹಾಗಾಗಿ ಸಿಕ್ಕ ಆಯುಧಗಳನ್ನು ಕೇವಲ ಆಕೃತಿ ವಿಧಗಳ ಮೇಲೆ ವಿಭಿನ್ನ ಶಿಲಾಯುಗಗಳಿಗೆ ಸೇರಿಸಬೇಕಾಗುತ್ತದೆ.

ಶಿಲಾಯುಧಗಳ ಆಕೃತಿಗೆ ಸಂಬಂಧಿಸಿ ಅನೇಕ ಸಮಸ್ಯೆಗಳಿವೆ. ಒಂದು ಯುಗದ ಆಕೃತಿಯು ಮತ್ತೊಂದು ಯುಗದಲ್ಲಿ ಮುಂದುವರಿದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಅದೇ ರೀತಿ ಮುಂದಿನ ಯುಗದ ಆಯುಧಕ್ಕೆ ಹಿಂದಿನ ಯುಗದಲ್ಲೇ ಆಕೃತಿ ಮಾದರಿಗಳು ತಯಾರಾಗಿರಲೂಬಹುದು. ಇದಲ್ಲದೇ ಶಿಲಾಯುಧಗಳಲ್ಲಿ ಪ್ರಾಚೀನತಮ ಹಾಗೂ ಪ್ರಾಚೀನತರ ಎಂದು ವಿಂಗಡಿಸಲು ಇರುವ ಅವುಗಳ ಲಕ್ಷಣವಾದ ಮಾಟಗಾರಿಕೆ ಎಷ್ಟುಮಟ್ಟಿಗೆ ಪ್ರಮಾಣವಾಗಬಲ್ಲದು ಎಂಬ ಪ್ರಶ್ನೆಯೂ ಇದೆ.[5]

ಶೇಷಾದ್ರಿಯವರು ಕೇವಲ ಆಕೃತಿಗಳನ್ನು ಆಧರಿಸಿ ಆದಿ ಹಳೇ ಶಿಲಾಯುಗದ ಆಶ್ಯೂಲಿಯನ್‌ನ ಅಂತ್ಯ ಭಾಗ ಮೈಸೂರಿನ ಪ್ರದೇಶದಲ್ಲಿ ಪ್ರತಿನಿಧಿಸಲ್ಪಟ್ಟಿಲ್ಲ ಎಂದು ತೀರ್ಮಾನಿಸುತ್ತಾರೆ.[6] ಬಿ. ಆರ್. ಪ್ರಾಜೆಕ್ಟ್‌ನಲ್ಲಿ ಆದಿ ಹಳೇ ಶಿಲಾಯುಗದ ಅಂತ್ಯ ಭಾಗದ ಶಿಲಾಯುಧ ಆಕೃತಿಗಳು ಲಭ್ಯವಿದೆ. ಆದರೆ ಈ ಶಿಲಾಯುಧಗಳು ಮಧ್ಯ ಶಿಲಾಯುಗದಲ್ಲಿ ಪ್ರಚಲಿತವಿದ್ದವುಗಳು ಏಕಾಗ ಬಾರದು ಎಂಬ ಪ್ರಶ್ನೆಯೂ ಏಳುತ್ತದೆ. ಏಕೆಂದರೆ ಮಧ್ಯಶಿಲಾಯುಗದ ಆಯುಧಗಳಲ್ಲಿ ಸಣ್ಣ ಆಕಾರದ

---

5 ಅದೇ ಪು. ೨೪.

6 ಶೇಷಾದ್ರಿ–ಹಿಂದೆ ಉಲ್ಲೇಖಿಸಿದ್ದು, ಪು. ೨೪




ನಕ್ಷೆ : ೧

ಭದ್ರಾ ಪ್ರಾಜೆಕ್ಟ್‌ನ ಸುತ್ತ–ಮುತ್ತಲಿನ ಶಿಲಾಯುಗದ ನೆಲೆಗಳು









5





6





7







8



9







10

ಚಿತ್ರ : II All Locality I except Nos 7 & 10 from L. II

Nos 7 & 10 from L. II



17





18



19





20



21



22



23

ಚಿತ್ರ : IV All Locality I except 18 from L. II





1

ಚಿತ್ರ : V  Locality III




ಚಿತ್ರ : VI Locality I




ಚಿತ್ರ : VII Locality I

ಕೈಗೊಡಲಿಗಳನ್ನು ಕೆಲ ವಿದ್ವಾಂಸರು ಸೇರಿಸುತ್ತಾರೆ.[7] ಸಂಕಾಲಿಯಾ ಅವರು ಈ ಕೈಗೊಡಲಿಗಳು ಅಂತ್ಯ ಅಶ್ಯುಲಿಯನ್ ಕಾಲದವು ಎಂದು ಅಭಿಪ್ರಾಯಪಡು ತ್ತಾರೆ.[8] ಹಾಗಾಗಿ ಸದ್ಯಕ್ಕೆ ಈ ಸಮಸ್ಯೆಯನ್ನು ಹಾಗೇ ಬಿಡಬೇಕಾಗುತ್ತದೆ.

ಆಯುಧಗಳಿಗೆ ಬಳಸಿದ ಕಲ್ಲಿಗೆ ಸಂಬಂಧಿಸಿಯೂ ಸಮಸ್ಯೆಗಳಿವೆ. ಆದಿ ಹಳೇ ಶಿಲಾಯುಗ ಮತ್ತು ಮಧ್ಯ ಹಳೇ ಶಿಲಾಯುಗದ ಆಯುಧ ಪ್ರಕಾರಗಳನ್ನು ಮಾಡಲು ಉಪಯೋಗಿಸಿದ ಕಲ್ಲು ಒಂದೇ ; ಕಂದು ಕ್ವಾಡ್‌ಜೈಟ್ ಅಥವಾ ಬೆಣಚು ಕಲ್ಲು. ಅಂತ್ಯ ಹಳೇ ಶಿಲಾಯುಗದ ಆಯುಧಗಳನ್ನೂ ಎರಡು ವಿಭಿನ್ನ ರೀತಿಯ ಕಲ್ಲುಗಳಲ್ಲಿ ನೋಡಬಹುದು. ಅವುಗಳಲ್ಲಿ ಕಂದು ಕ್ವಾಡ್‌ಜೈಟ್‌ನಲ್ಲಿ ಮಾಡಿದ ಆಯುಧಗಳನ್ನು ಯಾವ ಯುಗಕ್ಕೆ ಸೇರಿಸಬೇಕು ಎಂಬುದು ಖಚಿತವಾಗುವುದಿಲ್ಲ. ಅದೇ ರೀತಿ ಎಲ್ಲ ಬೆಣಚುಕಲ್ಲಿನ ಆಯುಧಗಳನ್ನೂ ಸೂಕ್ಷ್ಮ ಶಿಲಾ ಯುಗಕ್ಕೆ ಸೇರಿಸುವುದು ಕೂಡ ಸಮಸ್ಯಾತ್ಮಕವೇ. ಏಕೆಂದರೆ ಹಳೇ ಶಿಲಾಯುಗದಿಂದಲೇ ಬೆಣಚುಕಲ್ಲಿನ ಆಯುಧ ಪ್ರಕಾರಗಳು ಇಲ್ಲಿ ಸಿಗುತ್ತವೆ. ಹಾಗಾಗಿ ಸ್ತರವಿಂಗಡಣಾತ್ಮಕವಾಗಿ ಈ ಶಿಲಾಯುಧಗಳನ್ನು ಅನ್ವೇಷಿಸುವವರೆಗೂ ತೀರ ಖಚಿತವಾದ ವರ್ಗೀಕರಣವು ಈ ಪ್ರದೇಶದಲ್ಲಿ ಶಕ್ಯವಿಲ್ಲ. ಒಟ್ಟಿನಲ್ಲಿ ಪ್ರಸ್ತುತ ನೆಲೆಗಳು ಆಯುಧ ಪ್ರಕಾರವೊಂದನ್ನೇ ಆಧರಿಸಿದ ಶಿಲಾ ಯುಗದ ಸರಳ ವರ್ಗೀಕರಣವನ್ನು ಪ್ರಶ್ನಿಸುತ್ತವೆ.

(ಈ ಅನ್ವೇಷಣೆಯಲ್ಲಿ ಸಹಕರಿಸಿದ ನನ್ನೆಲ್ಲ ವಿದ್ಯಾರ್ಥಿಗಳ ಸಹಾಯವನ್ನು ಸ್ಮರಿಸುತ್ತೇನೆ.)

7 ಸಂಕಾಲಿಯ, ಎಚ್. ಡಿ., "ಪ್ರಿ ಎಂಡ್ ಪ್ರೊಟೋ ಹಿಸ್ಟರಿ ಆಫ್ ಇಂಡಿಯಾ ಎಂಡ್ ಪಾಕಿಸ್ಥಾನ್", ಡೆಕ್ಕನ್ ಕಾಲೇಜು. ಪೂಣಾ ಪು. ೧೭೬ ಹಾಗೂ ೧೮೧.

8 ಆಂಧ್ರದ ಚಿತ್ತೂರಿನಲ್ಲಿ ಹಾಗೂ ಮಧ್ಯಪ್ರದೇಶದ ಹಿಹೋರಾದಲ್ಲಿ ಅಂಥ ಉದಾಹರಣೆಗಳು ಸಿಕ್ಕಿವೆ.

ಎಂ. ಜಿ. ಮಂಜುನಾಥ*

# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನವಶೋಧಿತ ಬೃಹತ್ ಶಿಲಾ ನಿವೇಶನಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇತ್ತೀಚೆಗೆ ನಾನು ಪತ್ತೆ ಹಚ್ಚಿದ ಹನ್ನೆರಡು ಬೃಹತ್ ಶಿಲಾಯುಗದ ನಿವೇಶನಗಳ ವಿಚಾರ ನಿಮ್ಮ ಮುಂದೆ ಮಂಡಿಸುತ್ತಿದ್ದೇನೆ.

ಈ ನಿವೇಶನಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ, ನೆಲಮಂಗಲ, ರಾಮನಗರ ತಾಲ್ಲೂಕುಗಳಲ್ಲಿವೆ. ಮಾಗಡಿ ತಾಲ್ಲೂಕಿನಲ್ಲಿ ೧, ನೆಲಮಂಗಲ ತಾಲ್ಲೂಕಿನಲ್ಲಿ ೫, ರಾಮನಗರ ತಾಲ್ಲೂಕಿನಲ್ಲಿ ೬ ನಿವೇಶನಗಳು ಪತ್ತೆಯಾಗಿವೆ.

೧. ಮಾಗಡಿ ತಾಲ್ಲೂಕಿನ ಸೋಲೂರು ಹೋಬಳಿಯ ಬಸವೇನಹಳ್ಳಿಬೆಟ್ಟದ ಹಿಂಭಾಗದಲ್ಲಿ ಕಲ್ಯಾಣಪುರ ಎಂಬ ಗ್ರಾಮದ ವ್ಯಾಪ್ತಿಯಲ್ಲಿ ಒಂದು ನಿವೇಶನ ಪತ್ತೆಯಾಗಿದೆ. ಇಲ್ಲಿ ೩೫ ಹಾದಿಕೋಣೆ ಗೋರಿಗಳಿವೆ. ಇಲ್ಲಿಯ ಬಹುತೇಕ ಗೋರಿಗಳು ಅತ್ಯುತ್ತಮ ಸ್ಥಿತಿಯಲ್ಲಿವೆ. ನಾಲ್ಕು ಗೋರಿಗಳು ನಿಧಿ ಶೋಧಕರ ದಾಳಿಗೆ ಗುರಿಯಾಗಿ ಶಿಥಿಲಾವಸ್ಥೆಯಲ್ಲಿವೆ. ಈ ಗೋರಿಗಳಲ್ಲಿ ಸ್ಟ್ಯಾಂಡಿನಂತೆ ಕಾಲುಗಳುಳ್ಳ ೪ ಕೆಂಪು ಮಡಿಕೆಗಳು, ೧ ಕಬ್ಬಿಣದ ಕತ್ತಿ, ೨ ಕಬ್ಬಿಣದ ಬಾಣಗಳು, ಹಾಗೂ ಕಬ್ಬಿಣದಿಂದಲೇ ಮಾಡಿದ ಒಂದು ಜೊತೆ ಸುಂದರವಾದ ಚಪ್ಪಲಿಗಳು ದೊರೆತಿದ್ದವೆಂದು ಅಲ್ಲಿನ ನಿವಾಸಿಗಳು ಹೇಳಿದರು. ಕಬ್ಬಿಣದ ಚಪ್ಪಲಿಗಳು ಬೃಹತ್ ಶಿಲಾಯುಗದ ಯಾವುದೇ ನಿವೇಶನದಲ್ಲಿ ದೊರೆತ ದಾಖಲೆಗಳಿಲ್ಲ. ಹಾಗಾಗಿ ಈ ನಿವೇಶನ ಹೆಚ್ಚಿನ ಪ್ರಾಮುಖ್ಯತೆ ಪಡೆದಿದೆಯೆಂದು ಹೇಳಬಹುದು.

೨. ನೆಲಮಂಗಲ ತಾಲ್ಲೂಕು ಕಸಬಾ ಹೋಬಳಿಯ ಮೈಲನಹಳ್ಳಿ ಎಂಬ ಗ್ರಾಮದಲ್ಲಿ ಒಂದು ಬೃಹತ್ ಶಿಲಾಯುಗದ ನಿವೇಶನ ಪತ್ತೆಯಾಗಿದೆ. ಈ ನಿವೇಶನದಲ್ಲಿ ೧೮೯ ರಂಧ್ರಕೋಣೆ ಗೋರಿಗಳು ಹಾಗೂ ೧೨ ಹಾದಿ ಕೋಣೆ ಗೋರಿಗಳಿವೆ. ಇವುಗಳಲ್ಲಿ ಹತ್ತಾರು ಗೋರಿಗಳು ಅಗೆಯಲ್ಪಟ್ಟಿವೆ. ಅವುಗಳಲ್ಲಿದ್ದ ಮಡಿಕೆಗಳಲ್ಲಿ ರಾಗಿ ಕಾಳುಗಳು ಹಾಗೂ ಮೂಳೆಗಳು ದೊರೆತವೆಂದು ಅಲ್ಲಿನ ಜನರು ಹೇಳಿದರು.

೩. ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಬಿಲ್ಲಿನಕೋಟೆ ಬಳಿಯಲ್ಲಿರುವ ಆಲದಹಳ್ಳಿ ಬೆಟ್ಟದ ಹಿಂಭಾಗದಲ್ಲಿ ಒಂದು ನಿವೇಶನ ಪತ್ತೆಯಾಗಿದೆ. ಇಲ್ಲಿ ೪೨ ಹಾದಿಕೋಣೆ ಗೋರಿಗಳಿವೆ. ಇವುಗಳಲ್ಲಿ ಕೇವಲ ೧ ಗೋರಿ ಮಾತ್ರ ಹಾಳಾಗಿದೆ. ಈ ಗೋರಿಯೊಳಗಿನ ಮಡಿಕೆಗಳ ಚೂರುಗಳನ್ನು ಸಂಗ್ರಹಿಸಿದ್ದೇನೆ. ಈ ನಿವೇಶನದ ಪಕ್ಕದಲ್ಲಿಯೇ ಇರುವ ಬೆಟ್ಟದಲ್ಲಿ ನಾಲ್ಕು ಗವಿಗಳೂ, ಆರು ಕಲ್ಲಾಸರೆಗಳೂ ಇವೆ. ಇವು ಹಿಂದೆ ಬೃಹತ್ ಶಿಲಾಯುಗದ ಜನರ ವಾಸಕ್ಕೆ ಉಪಯೋಗವಾಗಿರಬಹುದಾದ ಸಾಧ್ಯತೆಗಳಿವೆ.

೪. ಬಿಲ್ಲಿನಕೋಟೆಯ ನಿವೇಶನದ ಪೂರ್ವಕ್ಕೆ ೧ ಮೈಲು ದೂರದಲ್ಲಿರುವ ಮಹಿಮಾಪುರದ ಮಹಿಮ ರಂಗನ ಬೆಟ್ಟದ ಬಳಿ ೨೬ ರಂಧ್ರಕೋಣೆ ಗೋರಿಗಳಿವೆ. ಒಂದು ಗೋರಿಯು ಶಿಥಿಲವಾಗಿದ್ದು ಉಳಿದೆಲ್ಲವೂ ಅತ್ಯಂತ ಸುಭದ್ರವಾಗಿವೆ.

---

* ಸಂಶೋಧನ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬

೫. ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಎಲೆಕ್ಯಾತನಹಳ್ಳಿಯಲ್ಲಿನ ನಿವೇಶನದಲ್ಲಿ ೪ ರಂಧ್ರಕೋಣೆ ಗೋರಿಗಳಿವೆ. ಅದರಲ್ಲಿ ಎರಡು ಗೋರಿಗಳನ್ನು ಅಗೆದು ಹಾಳು ಮಾಡಿದ್ದಾರೆ. ಉಳಿದೆರಡು ಸುಸ್ಥಿತಿಯಲ್ಲಿವೆ. ಇಲ್ಲಿ ಇನ್ನೂ ಹತ್ತಾರು ಗೋರಿಗಳಿದ್ದಿರಬಹುದು. ಆದರೆ ಕಾಲಾಂತರದಲ್ಲಿ ಹಾಳಾಗಿರಬಹುದು.

೬. ನೆಲಮಂಗಲ ತಾಲ್ಲೂಕು ಕಸಬಾ ಹೋಬಳಿಯ ಮಹದೇವಪುರದ ಬಳಿ ಇರುವ ಹನುಮಯ್ಯನಪಾಳ್ಯದ ಬಳಿಯಲ್ಲಿ ಎಂಟು ಹಾದಿಕೋಣೆ ಗೋರಿಗಳಿವೆ. ಈ ನಿವೇಶನ ಅತ್ಯಂತ ಪ್ರಮುಖವಾದ ನಿವೇಶನ ಎಂದು ನನ್ನ ಅಭಿಪ್ರಾಯ. ಏಕೆಂದರೆ ಇಲ್ಲಿಯ ಗೋರಿಗಳು ತುಂಬಾ ದೊಡ್ಡ ಗೋರಿಗಳು. ಈ ಗೋರಿಗಳ ಮೇಲ್ಭಾಗದಲ್ಲಿ ಮುಚ್ಚಲಾಗಿರುವ ಕ್ಯಾಪ್‌ಸ್ಟೋನ್‌ಗಳು ೨೦ ಅಡಿ ಉದ್ದ, ೧೫ ಅಡಿ ಅಗಲವಾಗಿವೆ. ಬೃಹತ್ ಶಿಲಾಯುಗದ ಬೇರೆ ಎಲ್ಲ ಕಡೆಯ ಸಮಾಧಿಗಳಿಗಿಂತ ಇವೇ ದೊಡ್ಡವಾಗಿರಬಹುದಾದ ಸಾಧ್ಯತೆಗಳಿವೆ.

೭. ಬೆಂಗಳೂರು ಮೈಸೂರು ಹೆದ್ದಾರಿಯಲ್ಲಿರುವ ರಾಮನಗರ ತಾಲ್ಲೂಕು ಕೂಟಗಲ್ಲು ಹೋಬಳಿಯಲ್ಲಿ ಬೃಹತ್ ಶಿಲಾಯುಗದ ಆರು ನಿವೇಶನಗಳನ್ನು ಗುರುತಿಸಿದ್ದೇನೆ. ಬಸವನಪುರ ಎಂಬ ಹಳ್ಳಿಯ ಬಳಿಯಲ್ಲಿ ೧೦೪ ರಂಧ್ರಕೋಣೆ ಗೋರಿಗಳಿವೆ. ಇವುಗಳಲ್ಲಿ ೪೦ ಹಾಳಾಗಿದ್ದು ಉಳಿದವೆಲ್ಲ ಸುಸ್ಥಿತಿಯಲ್ಲಿವೆ.

೮. ವಡೇರಹಳ್ಳಿ ಎಂಬ ಗ್ರಾಮದ ಹತ್ತಿರವಿರುವ ನಿವೇಶನದಲ್ಲಿ ೧೨೦ ರಂಧ್ರಕೋಣೆ ಗೋರಿಗಳಿವೆ. ಸುಮಾರು ೩೦ ಹಾಳಾಗಿವೆ.

೯. ಗಂಗರಾಜರಹಳ್ಳಿ ಎಂಬ ಗ್ರಾಮದಲ್ಲಿನ ನಿವೇಶನದಲ್ಲಿ ೪೦ ರಂಧ್ರಕೋಣೆ ಗೋರಿಗಳಿವೆ. ಸುಮಾರು ೨೦ ಹಾಳಾಗಿವೆ.

೧೦. ಅರಳೀಪುರದ ದೊಡ್ಡಿಯ ನಿವೇಶನದಲ್ಲಿ ೩೪ ಗೋರಿಗಳಿವೆ. ೨೨ ಸಂಪೂರ್ಣ ಹಾಳಾಗಿವೆ.

೧೧. ಕೆಂಜಿಗರಹಳ್ಳಿಯ ನಿವೇಶನದಲ್ಲಿ ೮೦ ಗೋರಿಗಳಿವೆ. ೧೦ ಗೋರಿಗಳು ಹಾಳಾಗಿದ್ದು ಉಳಿದವು ಸುಸ್ಥಿತಿಯಲ್ಲಿವೆ. ಒಂದು ಗೋರಿಯ ಮುಂಭಾಗದ ಚಪ್ಪಡಿ ಹಾಳಾಗಿದ್ದು ಒಳಭಾಗದಲ್ಲಿ ೬ ಅಡಿ ಎತ್ತರ ೬ ಅಡಿ ಅಗಲ ಹಾಗೂ ೧೦ ಅಡಿ ಉದ್ದವಿದೆ.

೧೨. ಕೆಂಜಿಗರಹಳ್ಳಿಗೆ ೧/೨ ಮೈಲಿ ದೂರದಲ್ಲಿ ಇರುವ ಕೆಂಜಿಗರಹಳ್ಳಿಬಯಲು ಎಂದು ಕರೆಯಲ್ಪಡುವ ಒಂದು ಬೆಟ್ಟದ ಮೇಲ್ಭಾಗದಲ್ಲಿನ ಸಮತಟ್ಟಾದ ಪ್ರದೇಶದಲ್ಲಿ ಅತ್ಯಂತ ಆಶ್ಚರ್ಯಕರವಾಗಿ ೪೧ ಗೋರಿಗಳಿವೆ. ಇವುಗಳಲ್ಲಿ ಹಾದಿಕೋಣೆ ಗೋರಿಗಳು ಹಾಗೂ ರಂಧ್ರಕೋಣೆ ಗೋರಿಗಳು ಎರಡೂ ರೀತಿಯವುಗಳಿವೆ. ಬಹುತೇಕ ಎಲ್ಲ ಗೋರಿಗಳೂ ಹಾಳಾಗಿವೆ. ದನಗಾಹಿಗಳು ಹಾಗೂ ನಿಧಿಶೋಧಕರ ಕೈವಾಡದಿಂದ ಇವು ಹಾಳಾಗಿರಬಹುದು. ಸಾಧಾರಣವಾಗಿ ಬೆಟ್ಟದ ಮೇಲೆ ಬೃಹತ್ ಶಿಲಾಯುಗದ ಜನರ ಸಮಾಧಿಗಳು ದೊರೆಯುವುದು ತೀರಾ ಅಪರೂಪ. ನನ್ನ ಗಮನಕ್ಕೆ ಬಂದಂತೆ ಕೊಪ್ಪಳದ ಪಾಲ್ಕಿಗುಂಡು ಬೆಟ್ಟದ ಮೇಲೆ, ಹಾಗೂ ಐಹೊಳೆಯ ಮೇಗುತಿ ಜಿನಾಲಯದ ಹಿಂಭಾಗದಲ್ಲಿ ಬೆಟ್ಟದ ಮೇಲೆ ಈ ರೀತಿಯ ಗೋರಿಗಳಿವೆ. ಕರ್ನಾಟಕದ ಹೊರಭಾಗಗಳಲ್ಲಿ ಬೆಟ್ಟದ ಮೇಲೆ ಬಂಡೆಯಲ್ಲಿ ಕೊರೆದ ಕೋಣೆ ಗೋರಿಗಳು ದೊರೆತಿವೆ. ಆದರೆ ಬೆಟ್ಟದ ಮೇಲೆ ಕಟ್ಟಿದ ಕೋಣೆ ಗೋರಿಗಳು ದೊರೆತಿರುವ ನಿದರ್ಶನಗಳು ತೀರಾ ಕಡಿಮೆ. ಇಲ್ಲಿಯ ನಾಲ್ಕು ಗೋರಿಗಳ ಸುತ್ತಲೂ ಇಟ್ಟಿಗೆ ಗಾತ್ರದ ಕಲ್ಲುಗಳನ್ನು ಎರಡೆರಡು ಗಾಡಿಯಷ್ಟು ರಾಶಿ ಹಾಕಲಾಗಿದೆ. ಅವುಗಳಲ್ಲಿ ಒಂದು ಗೋರಿಯನ್ನು ಕರಡಿಗಳು ವಾಸಸ್ಥಾನವನ್ನಾಗಿಸಿಕೊಂಡಿವೆ. ಈ ಬೆಟ್ಟದ ಪಶ್ಚಿಮ ಭಾಗದಲ್ಲಿ ಹತ್ತಾರು ದೊಡ್ಡ ಗವಿಗಳಿದ್ದು ಎಲ್ಲವೂ ಕರಡಿಗಳಿಗೆ ಆಶ್ರಯತಾಣಗಳಾಗಿವೆ. ಈ ಗವಿಗಳು ಬೃಹತ್ ಶಿಲಾಯುಗದ ಮನುಷ್ಯರ ವಾಸದ ತಾಣಗಳಾಗಿರಬಹುದು.

ರಾಮನಗರ ತಾಲ್ಲೂಕಿನ ಈ ಆರು ನಿವೇಶನಗಳ ಸನಿಹದಲ್ಲಿಯೂ ಹತ್ತಾರು ಗವಿಗಳು ಹಾಗೂ ಇದರ ನಾಲ್ಕಾರು ಪಟ್ಟು ಕಲ್ಲಾಸರೆಗಳೂ ಇವೆ. ಇವು ಆ ಕಾಲದ ಜನರಿಗೆ ನಿವಾಸಗಳಾಗಿ ಬಳಕೆಯಾಗಿರಬಹುದು. ಈ ಎಲ್ಲ ಗವಿಗಳೂ ಹಾಗೂ ಕಲ್ಲಾಸರೆಗಳು ಸಂಪೂರ್ಣವಾಗಿ ಕಾಡಿನಿಂದ ಆವರಿಸಲ್ಪಟ್ಟು ಕರಡಿಗಳ ವಾಸಸ್ಥಳ

ಗಳಾಗಿರುವುದರಿಂದ ಈ ಪ್ರದೇಶದಲ್ಲಿ ಜನರ ಓಡಾಟ ತೀರಾ ಕಡಿಮೆಯಾಗಿದೆ. ಹಾಗಾಗಿ ಈ ನಿವೇಶನಗಳು ಹೆಚ್ಚಿನ ಪ್ರಮಾಣದಲ್ಲಿ ಶೋಧನೆ ಆಗಿಲ್ಲದಿರುವುದರಿಂದ ಇವು ಉತ್ಖನನ ಯೋಗ್ಯವಾಗಿವೆ. ಈ ಪ್ರದೇಶದಲ್ಲಿ ಉತ್ಖನನ ಮಾಡಿದರೆ ಅತ್ಯಂತ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ನಮ್ಮ ಪುರಾತತ್ವ ಇಲಾಖೆ ಕ್ರಮ ಕೈಗೊಳ್ಳುವುದು ಒಳಿತು.

ಕೆ. ಬಿ. ಶಿವತಾರಕ್*

# ಬೃಹತ್ ಶಿಲಾ ಸ್ಮಾರಕಗಳ ನೆಲೆ - ಕತ್ತಿರಾಜನಹಳ್ಳಿ

ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯು ಶಿಲಾಯುಗ ಸಂಸ್ಕೃತಿಯ ಕೊನೆಯ ಹಂತ. ಮಾನವನು ಈ ಸಮಯಕ್ಕಾಗಲೇ ಲೋಹದ ತಯಾರಿಕೆಯನ್ನು ತಿಳಿದುಕೊಂಡಿದ್ದು, ಕಬ್ಬಿಣವನ್ನು ಪೂರ್ಣ ಪ್ರಮಾಣದಲ್ಲಿ ಉಪಯೋಗಿಸುತ್ತಿದ್ದುದು ತಿಳಿದು ಬರುತ್ತದೆ. ವಿವಿಧ ಮಾದರಿಯ ಮಡಕೆ ತಯಾರಿಸುವುದನ್ನು ಅರಿತು ಕೊಂಡಿದ್ದನು. ಈ ಸಂಸ್ಕೃತಿಯ ಮುಖ್ಯ ಅಂಶಗಳೆಂದರೆ (೧) ಒಂದು ಕಡೆ ನೆಲೆಸಿ ವಾಸ್ತವ್ಯವಿದ್ದುದು ಮತ್ತು (೨) ಸತ್ತವರ ಸಂಸ್ಕಾರಕ್ಕೋಸ್ಕರ ಬೃಹತ್ ಶಿಲಾ ಸ್ಮಾರಕಗಳನ್ನು ರಚಿಸುತ್ತಿದ್ದುದು. ಹೀಗೆ ಈ ಸಂಸ್ಕೃತಿಯ ಎರಡು ವಿಭಿನ್ನ ಪ್ರಕಾರಗಳನ್ನು ಕಾಣಬಹುದು.

ದಕ್ಷಿಣ ಭಾರತದ ತುಂಬೆಲ್ಲಾ ಈ ಸಂಸ್ಕೃತಿಯ ಅವಶೇಷಗಳಿರುವುದು ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಸುಮಾರು ೩೦೦೦ಕ್ಕೂ ಹೆಚ್ಚು ನೆಲೆಗಳು ದೊರೆತಿದ್ದು ಇವುಗಳನ್ನು ವೈಜ್ಞಾನಿಕವಾಗಿ ಅಧ್ಯಯನ ನಡೆಸಿ ಮಹಾ ಪ್ರಬಂಧಗಳನ್ನು ರಚಿಸಲಾಗಿದೆ. ಅವುಗಳಲ್ಲಿ ಪ್ರಮುಖ ವಾದವುಗಳೆಂದರೆ ಡಾ॥ ಅ. ಸುಂದರ ಅವರ ದ ಅರ್ಲಿ ಚೇಂಬರ್ ಟೊಂಬ್ಸ ಆಫ್ ಸೌತ್ ಇಂಡಿಯಾ ಮತ್ತು ಬಿ. ಕೆ. ಗುರುರಾಜರಾವ್‌ರವರ ದ ಮೆಗಲಿತಿಕ್ ಕಲ್ಚರ್ ಇನ್ ಸೌತ್ ಇಂಡಿಯಾ. ಅದೇ ರೀತಿ ಈ ಸಂಸ್ಕೃತಿಯ ಹೆಚ್ಚಿನ ಮಾಹಿತಿಗಾಗಿ ಕೆಲವು ಸ್ಥಳಗಳಲ್ಲಿ ಈ ಶಿಲಾಗೋರಿಗಳ ಉತ್ಖನನವನ್ನೂ ಕೈಗೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಜಡಿಗೇನಹಳ್ಳಿಯ ಉತ್ಖನನ (ಶೇಷಾದ್ರಿ ಎಂ. : ೧೯೬೦), ಬ್ರಹ್ಮಗಿರಿಯ ಉತ್ಖನನ (ಆರ್. ಇ. ಎಂ. ವೀಲ್ಹರ್ : ೧೯೪೭), ಮಾಸ್ಕಿಯ ಉತ್ಖನನ (ಥಾಪರ್ ಬಿ. ಕೆ. : ೧೯೫೭).

## ತುಮಕೂರು ಜಿಲ್ಲೆ ಬೃಹತ್ ಶಿಲಾಯುಗ ಸಂಸ್ಕೃತಿ

ಬೃಹತ್ ಶಿಲಾಯುಗ ಸಂಸ್ಕೃತಿಯ ಬಗ್ಗೆ ತುಮಕೂರು ಜಿಲ್ಲೆಯಲ್ಲಿ ತಿಳಿದಿರುವುದು ಅತ್ಯಲ್ಪವೆಂದೇ ಹೇಳಬಹುದು. ೧೮೯೨ರಲ್ಲಿ ಬಿ. ಎಲ್. ರೈಸ್‌ರವರು ಬೆಳ್ಳಿಬಟ್ಟಲಹಳ್ಳಿಯಲ್ಲಿ ಬೃಹತ್ ಶಿಲಾಗೋರಿಗಳನ್ನು ಶೋಧಿಸಿ ಪ್ರಕಟಿಸಿರುವರು (ಸುಂದರ ಅ., ಸಂ : ೧೯೭೫). ೧೯೦೬ರಲ್ಲಿ ಸ್ಲೇಟರ್ ಹೆಚ್. ಕೆ.ಅವರು ಅನೇಕ ಬೃಹತ್ ಶಿಲಾಗೋರಿಗಳು ತಿಪಟೂರು ತಾಲ್ಲೂಕಿನ ಕೇರಳಕಟ್ಟೆಯಲ್ಲಿ ದೊರೆತಿರುವುದನ್ನು ತಿಳಿಸಿರುವರು (ಸ್ಲೇಟರ್, ಹೆಚ್. ಕೆ. : ೧೯೦೬). ವಿ. ಆರ್. ಚಲುವರಾಜನ್ ಅವರು ಪಾವಗಡ ತಾಲ್ಲೂಕಿನಲ್ಲಿ ಬೃಹತ್ ಶಿಲಾಗೋರಿಗಳು ಬಸವನಬೆಟ್ಟ, ಕಣಕಲ ಬಂಡೆ, ತಪ್ಪಗಾನದೊಡ್ಡಿ ಮತ್ತು ಪಳವಳ್ಳಿಗಳಲ್ಲಿ ಇರುವ ಬಗ್ಗೆ ತಿಳಿಸಿರುವರು. (ಚಲುವರಾಜನ್ ವಿ.ಆರ್. : ೧೯೭೭), ಈ ಎಲ್ಲಾ ಶಿಲಾಸ್ಮಾರಕಗಳು ಆಕಸ್ಮಿಕವಾಗಿ ದೊರೆತವುಗಳಾಗಿದ್ದು, ತುಮಕೂರು ಜಿಲ್ಲಾ ಪ್ರದೇಶದಲ್ಲಿ ಪ್ರಾಗೈತಿಹಾಸ ಸರ್ವೇಕ್ಷಣೆಯ ಕಾರ್ಯ ನಡೆದೇ ಇಲ್ಲ. ಆದರೆ ನನ್ನ ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ಹಲವಾರು ನೆಲೆಗಳು ಮತ್ತು ಕೆಲವು ಶಿಲಾಸ್ಮಾರಕಗಳಿರುವ ಸ್ಥಳಗಳು ದೊರೆತಿವೆ. ಶಿರಾ ತಾಲ್ಲೂಕಿನ ಬುಕ್ಕಾಪಟ್ಣ, ಗುಬ್ಬಿ ತಾಲ್ಲೂಕಿನ ಬೆಟ್ಟದಹಳ್ಳಿ, ತಿಪಟೂರು ತಾಲ್ಲೂಕಿನ

* ಇತಿಹಾಸ ಅಧ್ಯಾಪಕ, ಸೀರಿಯನ್ ಪದವಿ ಕಾಲೇಜು, ಬ್ರಹ್ಮಾವರ, ದ.ಕ.

ಜಕ್ಕನಹಳ್ಳಿ. ತುಮಕೂರು ತಾಲ್ಲೂಕಿನ ಹಿರೇಗುಂಡಗಲ್ಲು, ಬೆಳ್ಳಿಬಟ್ಟಲಹಳ್ಳಿ ಮತ್ತು ಸಿದ್ಧಗಂಗಾಬೆಟ್ಟ, ಪಾವಗಡ ತಾಲ್ಲೂಕಿನ ವೈ. ಎನ್. ಹೊಸಕೋಟೆ, ವೈ. ಎನ್. ಹಳ್ಳಿ, ರಾಚಮಾರನಹಳ್ಳಿ, ನಿಡುಗಲ್ಲು, ಬೂದಿಬೆಟ್ಟ ಮತ್ತು ಮರಿದಾಸಹಳ್ಳಿ, ಮಧುಗಿರಿ ತಾಲ್ಲೂಕಿನ ಮಧುಗಿರಿ, ಗುರಮ್ಮನ ಕಟ್ಟೆ, ಮಿಡಿಗೇಶಿ, ಮತ್ತು ಕತ್ತಿರಾಜನಹಳ್ಳಿ. ಇವುಗಳಲ್ಲೆಲ್ಲಾ ಒಂದು ಪ್ರಮುಖವಾದ ನೆಲೆಯೇ ಕತ್ತಿರಾಜನಹಳ್ಳಿ. ಇಲ್ಲಿನ ಬೃಹತ್ ಶಿಲಾ ಸ್ಮಾರಕಗಳು ಉಲ್ಲೇಖಾರ್ಹವಾದವುಗಳು.

## ಕತ್ತಿರಾಜನಹಳ್ಳಿಯ ಸ್ಮಾರಕಗಳು

ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಮಿಡಿಗೇಶಿ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮವಾದ ಕತ್ತಿರಾಜನಹಳ್ಳಿಯು ಬೃಹತ್ ಶಿಲಾ ಸ್ಮಾರಕಗಳನ್ನು ಹೊಂದಿದೆ. ಇವುಗಳನ್ನು ಸ್ಥಳೀಯರು ಪಾಂಡವರ ಕಲ್ಲು ಎಂದು ಕರೆಯುತ್ತಾರೆ. ಈ ಶಿಲಾ ಸ್ಮಾರಕಗಳನ್ನು ನಿಧಿಗೋಸ್ಕರ ಹಾಳುಮಾಡಲಾಗಿದೆ. ಈ ಶಿಲಾ ಸ್ಮಾರಕಗಳು ನೆಲಮಟ್ಟದಲ್ಲಿಯೇ ಇದ್ದು ಕೆಲವು ಶಿಲಾವರ್ತುಲಗಳನ್ನು ಹೊಂದಿವೆ.

ಶಿಲಾಸ್ಮಾರಕಗಳು ಸುಮಾರು ೫೦ ಇದ್ದು ಇದೇ ಸ್ಥಳದಲ್ಲಿ ೨ ನೆಡುಗಲ್ಲು ಅಥವಾ ನಿಲಸುಗಲ್ಲುಗಳನ್ನು ಕಾಣಬಹುದು. ಕೆಲವು ಸ್ಥಳಗಳಲ್ಲಿ ಮುಚ್ಚಳಕಲ್ಲು (Cap stone) ಮಾತ್ರ ಕಾಣುತ್ತದೆ. ಈ ಶಿಲಾ ಸ್ಮಾರಕಗಳಲ್ಲಿ ಹಲವನ್ನು ಹಾಳುಮಾಡಲಾಗಿದೆ. ಹಾಗಾಗಿ ಈ ಗೋರಿಗಳ ಮಾದರಿಯನ್ನು ಅರಿಯಲು ಸಹಾಯಕವಾಗಿದೆ.

**ಶಿಲಾಸ್ಮಾರಕಗಳ ಐತಿಹ್ಯ :** ಈ ಶಿಲಾಸ್ಮಾರಕಗಳನ್ನು "ಪಾಂಡವರಕಲ್ಲು" ಎಂದು ಕರೆಯುತ್ತಾರೆ. ಪಾಂಡವರು ವನವಾಸ ಸಮಯದಲ್ಲಿ ಇಲ್ಲಿರುವ ನೆಡುಗಲ್ಲು (Menhirs)ಗಳಿಗೆ ತಮ್ಮ ಕುದುರೆಗಳನ್ನು ಕಟ್ಟುತ್ತಿದ್ದರೆಂದೂ, ಅವರ ಅಜ್ಞಾತ ಸ್ಥಳವೇ ಈ ಶಿಲಾಸ್ಮಾರಕಗಳೆಂದೂ ಹೇಳುತ್ತಾರೆ. ಅದೇ ರೀತಿ ಇಲ್ಲಿ ನಿಲ್ಲಿಸಿರುವ ಎರಡು ನೆಡುಗಲ್ಲುಗಳಲ್ಲಿ ಒಂದು ಕಲ್ಲಿನ ಮೇಲ್ಭಾಗವು ಕತ್ತಿಯ ತುದಿ ಬಾಗಿದ್ದು ಕತ್ತಿಯ ರೀತಿಯಲ್ಲಿಯೇ ಇರುವುದರಿಂದ ಈ ಗ್ರಾಮಕ್ಕೆ "ಕತ್ತಿರಾಜನಹಳ್ಳಿ" ಎಂದು ಕರೆಯುತ್ತಾರೆಂದೂ ತಿಳಿಸಿರುವರು.

**ಶಿಲಾಸ್ಮಾರಕಗಳ ಮಾದರಿ :** ಹಾಳಾಗಿರುವ ಶಿಲಾಸ್ಮಾರಕಗಳ ಮಾದರಿಯನ್ನು ಅರಿಯಲು ಸಹಾಯಕವಾಗಿವೆ. ಇವುಗಳೆಲ್ಲವುಗಳ ಮಾದರಿಯನ್ನು ತಿಳಿಯಲಾಗದಿದ್ದರೂ ಹಾಳಾಗಿರುವ ಸ್ಮಾರಕಗಳ ಮಾದರಿಯನ್ನು ತಿಳಿಯಬಹುದಾಗಿದೆ. ೧) ನೆಡುಗಲ್ಲು ಅಥವಾ ನಿಲಸುಗಲ್ಲುಗಳು (Menhirs) ೨) ಸ್ವಸ್ತಿಕ ಮಾದರಿಯ ಶಿಲಾ ತೊಟ್ಟಿಗಳು (Swastika type of Dalmenoid Cist) ೩) ಕಲ್ಲು ಚಪ್ಪಡಿಗಳಿಂದ ನಿರ್ಮಿತವಾದ ಶಿಲಾ ತೊಟ್ಟಿಗಳು (Stone Cists) ಮತ್ತು ೪) ಕಂಡಿಕೋಣೆ ಗೋರಿಗಳು (Port-hole Cists)

**೧) ನೆಡುಗಲ್ಲು ಅಥವಾ ನಿಲುಸುಕಲ್ಲು :** ನೆಡುಗಲ್ಲು ಅಥವಾ ನಿಲಸುಕಲ್ಲು ಬೃಹತ್ ಶಿಲಾ ಗೋರಿಗಳ ಒಂದು ಮಾದರಿ. ಇದು ಯಾವುದೇ ಒಂದು ನಿರ್ದಿಷ್ಟ ಧಾರ್ಮಿಕ ವಿಧಿ ಎಂದು ಹೇಳಲು ಸಾಧ್ಯವಿಲ್ಲ. ಇದು ಒಂದು ನೆನಪಿನಕಲ್ಲು ಎಂಬುದಾಗಿಯೂ, ಇವುಗಳನ್ನು "ನಡುಕಲ್ಲು" ಎಂದು ಕರೆಯುತ್ತಾರೆಂದೂ ತಮಿಳು ಗ್ರಂಥ ತಿಳಿಸುತ್ತದೆ. ಇಂತಹ ಶಿಲಾಸ್ಮಾರಕಗಳನ್ನು ದಕ್ಷಿಣ ಭಾರತದ ಕೆಲವು ಪ್ರದೇಶಗಳಲ್ಲಿ ಗುರ್ತಿಸಲಾಗಿದೆ. ಇಂತಹ ನೆಡುಕಲ್ಲುಗಳನ್ನು ಕಗ್ಗಲ್ಲಿನಲ್ಲಿ (Granite) ಮಾಡಿದ್ದಾಗಿವೆ. ಕೇರಳದಲ್ಲಿಯೂ ಕಗ್ಗಲ್ಲನ್ನೇ ಉಪಯೋಗಿಸಿ ಮಾಡಿರುವರು. ಕೆಲವು ಬಾರಿ ಒರಟಾದ ಕಲ್ಲಿನ ಗುಂಡನ್ನೇ ನೇರವಾಗಿ ನಿಲ್ಲಿಸಿರುತ್ತಾರೆ. ಮತ್ತೆ ಕೆಲವು ಬಾರಿ ಕಲ್ಲನ್ನು ನಿರ್ದಿಷ್ಟ ಪ್ರಮಾಣದಲ್ಲಿ ಕತ್ತರಿಸಿ ಕಂಬದಂತೆ ತಯಾರಿಸಿ ನಿಲ್ಲಿಸಿರುವುದು ಕಂಡುಬರುತ್ತದೆ.

ಕತ್ತಿರಾಜನಹಳ್ಳಿಯ ಶಿಲಾಸ್ಮಾರಕಗಳ ಗುಂಪಿನಲ್ಲಿ ಎರಡು ನೆಡುಗಲ್ಲುಗಳಿದ್ದು ಒಂದು ಸುಮಾರು ೧೨ ಅಡಿ ಎತ್ತರವಾಗಿದೆ. ಈ ನೆಡುಗಲ್ಲಿನ ಬುಡದಲ್ಲಿ ಒಂದು ಶಿಲಾ ಗೋರಿ ಇದ್ದು ಅದಕ್ಕೆ ಶಿಲಾವರ್ತುಲವೂ ಇದೆ. ಈ ನೆಡುಗಲ್ಲು ನೇರವಾಗಿದ್ದು ಮೇಲ್ಭಾಗ ಓರೆಯಾಗಿದೆ ಮತ್ತು ತುದಿಯಭಾಗ ಅರ್ಧ ವೃತ್ತಾಕಾರದಂತಿದೆ.

ಎರಡನೇ ನೆಡುಗಲ್ಲು ಸುಮಾರು ೮ ಅಡಿ ಎತ್ತರ ವಿದ್ದು ಬುಡದ ಭಾಗ ಅಗಲವಾಗಿದ್ದು ಮೇಲೆ ಹೋದಂತೆ ಕಿರಿದಾಗಿದೆ. ಇದರ ಮೇಲ್ಭಾಗವೂ ಬಾಗಿದ್ದು ತುದಿಭಾಗ ಒಡೆದು ಹೋಗಿರುವಂತೆ ಕಾಣುತ್ತದೆ.

೨) **ಸ್ವಸ್ತಿಕ ಮಾದರಿಯ ಶಿಲಾ ತೊಟ್ಟಿಗಳು :** ಆಯತಾಕಾರದ ಅಥವಾ ಚೌಕಾಕಾರದ ಸ್ವಸ್ತಿಕ ಮಾದರಿಯಲ್ಲಿ ಜೋಡಿಸಿರುವ ಕೆಲವು ಶಿಲಾಸ್ಮಾರಕಗಳು ಇಲ್ಲಿವೆ. ನಿಲ್ಲಿಸಿರುವ ನಾಲ್ಕು ಕಲ್ಲುಗಳು ಒಂದಕ್ಕೊಂದು ಹಿಡಿದುಕೊಂಡಂತೆ ಜೋಡಿಸಲಾಗಿದೆ. ಮುಚ್ಚಳದ ಕಲ್ಲನ್ನು ಒಡೆದುಹಾಕಲಾಗಿದೆ. ಇದೇ ಮಾದರಿಯ ಶಿಲಾ ಗೋರಿಗಳು ಬ್ರಹ್ಮಗಿರಿಯ ಉತ್ಖನನದಲ್ಲಿಯೂ ದೊರೆತಿವೆ.

೩) **ಕಲ್ಲು ಚಪ್ಪಡಿಗಳಿಂದ ನಿರ್ಮಿತವಾದ ಶಿಲಾ ತೊಟ್ಟಿಗಳು :** ತೆಳುವಾದ ಕಲ್ಲು ಚಪ್ಪಡಿಗಳನ್ನು ಪೆಟ್ಟಿಗೆಯಾಕಾರದ ತೊಟ್ಟಿಯಂತೆ ಜೋಡಿಸಿ ಶಿಲಾ ಸ್ಮಾರಕಗಳನ್ನು ರಚಿಸಿರುವುದು ಕಂಡುಬರುತ್ತದೆ. ಇಂತಹ ಶಿಲಾ ತೊಟ್ಟಿಗಳು ಹೆಚ್ಚು ನಾಜೂಕಾಗಿದ್ದು ಇವುಗಳ ಸುತ್ತಲೂ ಶಿಲಾವರ್ತುಲಗಳನ್ನು ರಚಿಸಿರುವುದು ಕಂಡುಬರುತ್ತದೆ. ಇದೇ ಮಾದರಿಯ ಶಿಲಾಗೋರಿಗಳು ಬ್ರಹ್ಮಗಿರಿಯಲ್ಲಿಯೂ ದೊರೆತಿವೆ.

೪) **ಕಂಡಿಕೋಣೆ ಗೋರಿಗಳು :** ಕಲ್ಲು ಚಪ್ಪಡಿಗಳನ್ನು ಪೆಟ್ಟಿಗೆಯಾಕಾರದಲ್ಲಿ ಜೋಡಿಸಿ ಕೆಳಕ್ಕೂ ಮತ್ತು ಮೇಲ್ಭಾಗಕ್ಕೂ ಇದೇ ರೀತಿಯ ಕಲ್ಲು ಚಪ್ಪಡಿಗಳನ್ನು ಬಳಿಸಿ ಶಿಲಾಸ್ಮಾರಕಗಳನ್ನು ರಚಿಸಿರುವುದು ಕಂಡುಬರುತ್ತದೆ. ಪೂರ್ವ ಭಾಗದ ಕಲ್ಲು ಚಪ್ಪಡಿಯ ಮಧ್ಯಭಾಗದಲ್ಲಿ ರಂಧ್ರವಿರುವುದು ಕಂಡುಬರುತ್ತದೆ. ಇದರ ವ್ಯಾಸವು ೧೫ ರಿಂದ ೩೦ ಸೆಂ.ಮೀ. ಇದೆ. ಈ ರಂಧ್ರದ ನಿರ್ದಿಷ್ಟ ಉಪಯೋಗ ತಿಳಿದುಬಂದಿಲ್ಲವಾದರೂ ಬಹುಶಃ ಮೃತನ ಆತ್ಮದ ಸಂಚಾರಕ್ಕಾಗಿಯೋ ಅಥವಾ ಸತ್ತವನಿಗೆ ಆಗಿಂದ್ದಾಗ್ಗೆ ಕೆಲವು ವಸ್ತುಗಳನ್ನೊದಗಿಸಲು ಈ ರಂಧ್ರವನ್ನು ಉಪಯೋಗಿಸಿರಬೇಕೆಂದು ತಿಳಿಯುತ್ತದೆ.

ಒಟ್ಟಿನಲ್ಲಿ ಹಲವಾರು ಮಾದರಿಯ ಶಿಲಾ ಸ್ಮಾರಕಗಳು ಈ ಸ್ಥಳವಲ್ಲಿ ದೊರಕಿದ್ದು, ವೈಜ್ಞಾನಿಕ ಉತ್ಖನನವು ಈ ಸಂಸ್ಕೃತಿಯ ಬಗ್ಗೆ ಸಾಕಷ್ಟು ಬೆಳಕು ಚೆಲ್ಲಬಹುದು.

## ಆಧಾರ ಗ್ರಂಥಗಳು


Gururaja Rao B. K., 1972, *The Megalithic Culture in South India,* Prasarang, Mysore University, Mysore.

Krishnaswami V. D., 1949, *"Megalithic Types of South India" Ancient India* Number-5, Archaeological Survey of India, New Delhi.

Seshadri M., 1960, *Report on the Jadigenahalli Megalithic Excavation,* Govt. Branch Press, Mysore.

Slater H. K., 1906, *Mysore Geological Department Records-VIII.* Bangalore.

Srinivasan K. R., 1946, "The Megalithic Burials and Urn.fields of South India in the Light of Tamil Literature and Tradition", *Ancient India,* Number-2, Archaeological Survey of India, New Delhi.

Sundara A., 1971, *The Early Chamber Tombs of South India,* University Publishers, (India) Delhi.

ಗುರುರಾಜರಾವ್ ಬಿ. ಕೆ., 1971, ಕರ್ನಾಟಕದ ಲೋಹಯುಗ ಸಂಸ್ಕೃತಿಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

ಶಿವತಾರಕ್ ಕೆ. ಬಿ., 1992, "ತುಮಕೂರು ಜಿಲ್ಲೆಯ ಪ್ರಾಗಿತಿಹಾಸ" (ಪಿ ಎಚ್.ಡಿ. ಸಂಶೋಧನೆಯ ನೋಂದಣಿಗಾಗಿ ಒಪ್ಪಿಸಿದ ಸಂಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀಮತಿ ಅಮಿತ್ರ ಎಚ್. ಪಟೇಲ್*

# ಕಿಂಡಿ ಕೊಠಡಿಯ ಚಪ್ಪಡಿ ಸಮಾಧಿಗಳು : ತಳಹದಿಗಳೇ ಅಥವಾ ಸಮಾಧಿಗಳೇ ?

## (ಒಂದು ಜನಾಂಗಶಾಸ್ತ್ರೀಯ ದೃಷ್ಟಿ)

ಬೃಹತ್ ಶಿಲಾಯುಗದ ನಿವೇಶನಗಳ ಕಲ್ಲು ಚಪ್ಪಡಿಗಳ ಕಿಂಡಿ ಕೊಠಡಿಗಳು ಮೃತದೇಹಗಳ ವಿಧಿಯುಕ್ತ ಸಮಾಧಿಗಳೆಂಬುದು ಪರಂಪರಾಗತ ನಂಬಿಕೆ. ಇವುಗಳ ಒಳಗೆ ಇಲ್ಲವೇ ಹೊರಗೆ ಮೃತದೇಹವನ್ನು ಹೂತಿರಬಹುದು ಇಲ್ಲವೇ ಬಹಳಷ್ಟು ಸಲ ಸುಟ್ಟ ದೇಹದಿಂದ ಅಥವಾ ಮೃತ ದೇಹದಿಂದ ತೆಗೆದ ಮೂಳೆಗಳನ್ನು ಶವದ ಪೆಟ್ಟಿಗೆಗಳಲ್ಲಿ ಇಟ್ಟು ಹೂತಿರಬಹುದು. ಬೆಂಗಳೂರಿನ ಹೊರಭಾಗದ ಕಣ್ಣೂರಲ್ಲಿ ಮೂರು ಕಿಂಡಿ ಕೊಠಡಿ ಸಮಾಧಿಗಳು ಇತ್ತೀಚೆಗೆ ಬೆಳಕಿಗೆ ಬಂದವು (ಬ್ರಹ್ಮಗಿರಿ ಮಾದರಿಯವು[1]). ಇವು ಕಲ್ಲಿನ ಆವರಣವಿಂದ ಮಾಡಿದ ಧಾನ್ಯಸಂಗ್ರಹಣೆಯ ಹಗೇವು ಅಥವಾ ಕಣಜಗಳಾಗಿದ್ದಿರಬಹುದೆಂದು ಒಬ್ಬ ಸ್ಥಳೀಯ ತಿಳುವಳಿಕಸ್ಥ ವ್ಯಕ್ತಿ ನನಗೆ ಹೇಳಿದರು. ಇಲ್ಲಿ ವೃತ್ತಾಕಾರದ ಮಣ್ಣಿನ ಗೋಡೆಯ ಹಾಗೂ ಹುಲ್ಲಿನ ಛಾವಣಿಯ ಮನೆಗಳುಳ್ಳ ಒಂದಾನೊಂದು ಕಾಲದ ಸುಸಂಬಂದ್ಧ ಯೋಜಿತ ಪಟ್ಟಣವಿತ್ತೆಂದು ಅವರು ಹೇಳಿದರು. ಈ ಪ್ರಬಂಧವಲ್ಲಿ ಈ ನಂಬಿಕೆಗೆ ಆಧಾರವಾಗಿರಬಹುದಾದ ಕಾರಣಗಳ ಸಾರಾಂಶ ಹೇಳುತ್ತಿದ್ದು ಈ ಸಂಗತಿಯನ್ನು ಇನ್ನಷ್ಟು ಸಂಶೋಧನೆಗೆ ಒಳಪಡಿಸಿ ಈ ನಿವೇಶನದ ತಾರೀಕನ್ನು ಖಚಿತಗೊಳಿಸಲು ಒತ್ತಾಸೆ ನೀಡುತ್ತದೆ. ಮೇಲಿನ ಕಾರಣಗಳಿಗೆ ಪ್ರತಿಯಾಗಿ ಇರಬಹುದಾದ ಕಾರಣಗಳನ್ನು ಇಲ್ಲಿ ನಿಮ್ಮ ಮುಂದೆ ಇಡಲಾಗುತ್ತದೆ.

### ನಿವೇಶನ

ಕಣ್ಣೂರು ಗ್ರಾಮವು ಬೆಂಗಳೂರು ನಗರದ ಗಡಿಯ ಲಿಂಗರಾಜಪುರದಿಂದ ೧೩ ಕಿ.ಮೀ. ಈಶಾನ್ಯೋತ್ತರವಾಗಿದ್ದು ಕಾಡು ಸೋಮನಹಳ್ಳಿಯಿಂದ ಮೂರು–ನಾಲ್ಕು ಕಿ.ಮೀ. ಪಶ್ಚಿಮಕ್ಕೆ ಇದೆ. ಜಡಿಗೇನಹಳ್ಳಿ ಉತ್ಖನನದ (೧೯೫೭) ವರದಿಯ ಪುಟ ೨ರಲ್ಲಿ ಹೇಳಿದ ಹಳ್ಳಿ ಇದೇ ಇರಬಹುದು. ಕಣ್ಣೂರು ಗ್ರಾಮದಿಂದ ಒಂದು ಕಿಲೊಮೀಟರ್ ಉತ್ತರಕ್ಕೆ ಜೇಗುಟ್ಲಬಂಡೆ ಅಥವಾ ಜೇಗುಟ್ಟ ಎಂಬ ಕಲ್ಲು ಗಣಿಗಾರಿಕೆಗಾಗಿ ಅಗೆದ ಒಂದು ಬಂಡೆಯಿದೆ ('ಜೇ' ಎಂದರೆ 'ಹಿರಿಯರು'). ಮುಚ್ಚಳಗಲ್ಲು (Cap Stone) ಇಲ್ಲದ ಆಯತಾಕಾರದ ಶಿಲಾಕಿಂಡಿ ಕೊಠಡಿಗಳ ಸಾಲು ಇಲ್ಲಿದ್ದು ಅವುಗಳ ಸುತ್ತ ಕಲ್ಲು ಚಪ್ಪಡಿಗಳ ಸಾಲುಗಳಿವೆ. ಇವು ಭೂಮಟ್ಟದಿಂದ ಕೆಳಕ್ಕೆ ಇವೆ. ಪಾಂಡವಲಗುಡ್ಡ ಒಂದು ಪರಿಚಿತವಾದ, ಕೆಳಮಟ್ಟದ ನೆಲದಿಂದ ಸ್ವಲ್ಪ ಮೇಲಕ್ಕಿದ್ದು ಒಂದೊಂದರ

---

* ಕೊತ್ತೂರು, ಬೆಂಗಳೂರು ೫೬೦ ೦೭೭

1 Dr A. Sundara, 1975 : *The Early Chamber Tombs of South India*, University Publishers, New Delhi.

ಪೂರ್ವದ ಕಿಂಡಿಭಾಗ ಭಗ್ನವಾಗಿದ್ದು ಇದರ ಮೇಲೆ ೧೧ ಅಡಿ ಉದ್ದ ೧೫ ಅಡಿ ಅಗಲದ ಭಾರೀ ಚಪ್ಪಡಿ ಮುಚ್ಚಳಗಳಿವೆ (capstone). ಇದರ ಸುತ್ತಲ ನಿಲುಗಲ್ಲುಗಳು ಅಪ್ರದಕ್ಷಿಣೆಯ ವಿನ್ಯಾಸದಲ್ಲಿದ್ದು, ಕಿಂಡಿ ಕೊಠಡಿಗಳನ್ನು ತೆಳುವಾದ ಚಪ್ಪಡಿಗಳಿಂದ ಮುಚ್ಚಿದೆ. ದಕ್ಷಿಣ ಭಾರತದ ಎಲ್ಲ ಬೃಹತ್ ಶಿಲಾಯುಗದ ನಿವೇಶನ ಗಳಂತೆ ಇದು ಕೂಡ ಒಂದು ವಿಶಾಲಕೆರೆಯ ಬಳಿ ಇದ್ದು ಇದರ ಪಕ್ಕದಲ್ಲಿ ಕಲ್ಲುಗಣಿಗಾರಿಕೆಗೆ ಬಳಸು ತ್ತಿರುವ ಒಂದು ಬೆಣಚುಕಲ್ಲಿನ ಬೆಟ್ಟವಿದೆ.

### ವಿಧ್ವಂಸ

ಹೆಣ್ಣೂರು-ಬೆಂಗಳೂರು ರಸ್ತೆಯಲ್ಲಿರುವ ಕಣ್ಣೂರು ಬೆಂಗಳೂರಿನ ಹಸಿರುಪಟ್ಟಿಗೆ ಒಳಪಟ್ಟಿದ್ದು ಮಾಸ್ಟರ್ ಪ್ಲ್ಯಾನ್‌ನ ಗಡಿಯ ಮೂರು ಕಿಲೋಮೀಟರ್ ಹೊರಗಿದ್ದು ಅರ್ಬನ್ ಎಗ್ಲಮರೇಶನ್‌ನ ಮಿತಿಯ ಎಂಟು ಕಿ.ಮೀ. ಒಳಗಿದೆ. ಬೆಂಗಳೂರು ಆದರೆ ಹೊರಚಾಚುವ ಅನೇಕ ರಸ್ತೆಗಳ ಉದ್ದಕ್ಕೂ ಇರುವ ಅನೇಕ ಕೃಷಿ ಭೂಮಿಗಳಂತೆ ಈ ಪಟ್ಟಿಯ ಭೂಮಿಗಳೂ ಶೀಘ್ರ ನಗರೀಕರಣಕ್ಕೆ ಒಳ ಪಟ್ಟು ಪ್ರತೀ ಚುನಾವಣೆಗಳಿಗೂ ಮೊದಲು ಇಂಥ ಅಸಿಂಧು ಒತ್ತುವರಿಗಳನ್ನು ಹಲವು ಬಾರಿ ಕಾನೂನು ಬದ್ಧವಾಗಿ ಮಾಡಲಾಗುತ್ತವೆ. ಇದು ಪ್ರತೀನಗರದ ಪರಿಸರದಲ್ಲಿ ಕಾಣಬರುವ ಸಮಸ್ಯೆಯಾಗಿರಬೇಕು. ಇದರಿಂದ ಎಲ್ಲ ಐತಿಹಾಸಿಕ ಮತ್ತು ಪ್ರಾಗೈತಿಹಾಸಿಕ ನಿವೇಶನಗಳ ರಕ್ಷಣೆ ಅಥವಾ ಪಾಲನೆ ಸದಾ ಕಷ್ಟಕರ ವಾಗುತ್ತಿದೆ. ಇದರಿಂದ ಅವುಗಳನ್ನು ಪುರಾತಾತ್ತ್ವಿಕ ಹಾಗೂ ಗ್ರಾಮೀಣ ಹಿನ್ನೆಲೆಯ ಜನಾಂಗಶಾಸ್ತ್ರೀಯ ದೃಷ್ಟಿಗಳಿಂದ ದಾಖಲಿಸಿಕೊಳ್ಳುವುದು ತುರ್ತಾಗಿ ಆಗ ಬೇಕಾದ ಕಾರ್ಯವಾಗಿದೆ. ನಗರೀಕರಣವು ಅವನ್ನು ನುಂಗಿ ಹಾಕುವ ಮೊದಲೇ ಈ ಕೆಲಸವಾಗಬೇಕು. ಸಾಧ್ಯವಿದ್ದಲ್ಲಿ ಬೃಹತ್ ಶಿಲಾಯುಗದ ಉದ್ಯಾನಗಳನ್ನು ನಿರ್ಮಿಸಬೇಕು.

ಕಣ್ಣೂರಿನ ಬೃಹತ್ ಶಿಲಾಸ್ಮಾರಕಗಳು ಒತ್ತುವರಿ ನಡೆಸಿದ ಸರಕಾರೀ ಭೂಮಿಯಲ್ಲಿ ಕೇಂದ್ರೀಕೃತವಾಗಿವೆ. ಇದರಲ್ಲಿ ಎರಡು ಎಕ್ರೆ ಭೂಮಿಯನ್ನು ೧೯೯೩ರಷ್ಟು ಇತ್ತೀಚೆಗೆ ಒಬ್ಬ ಪಟ್ಟಣವಾಸಿಗೆ ಮಾರಲಾಯಿತು. ದಕ್ಷಿಣೋತ್ತರವಾಗಿರುವ ಬೃಹತ್ ಶಿಲಾಯುಗದ ಮೂರು ಗೋರಿಗಳನ್ನು ಅಗೆದು ನಾಶಮಾಡಿದರು. ಅವುಗಳ ಹೊರ ಚಾಚಿರುವ ಕಲ್ಲು ಚಪ್ಪಡಿಗಳನ್ನು ಸುತ್ತುವರಿದ ಕಲ್ಲುಗಳ ಆವರಣಗಳನ್ನೂ ನಾಶಮಾಡಿದರು. ಸಲಿಕೆ, ಪಿಕಾಸಿ ಗಳಿಂದ ಆತುರಾತುರವಾಗಿ ಅಗೆದ ಆವರಣಶಿಲೆಗಳನ್ನೂ ಕಿಂಡಿಕೊಠಡಿಗಳನ್ನೂ ತೆಗೆದುಹಾಕಲು ನೆಲೆಯಿಂದ ಕೀಳ ಲಾಯಿತಲ್ಲದೆ ಅದರೊಳಗಿದ್ದ ವಸ್ತುಗಳನ್ನು ಚೆಲ್ಲಾಡಿ ಅಗೆದು ತೆಗೆದ ಮಣ್ಣಿನಲ್ಲಿ ಪುಡಿಮಾಡಿ ಹಾಕಲಾಯಿತು.

ಅನಂತರ ಈ ಲೇಖಕಿ ಮುಂದಿನ ಧ್ವಂಸ ಕಾರ್ಯವನ್ನು ನಿಲ್ಲಿಸಿ, ಭಾರತೀಯ ಪುರಾತತ್ತ್ವ ಸರ್ವೇಕ್ಷಣೆ ಯರ್ವೆ ಈ ಕ್ಷೇತ್ರದ ಛಾಯಾಚಿತ್ರ, ನಕ್ಷೆಗಳನ್ನು ತಯಾರಿಸುವಂತಾಯಿತು. ರಾಜ್ಯ ಪುರಾತತ್ತ್ವ ಇಲಾಖೆಯ ನಿರ್ದೇಶಕರೂ ಇಲ್ಲಿಗೆ ಸಂದರ್ಶನವಿತ್ತರು. ಮೂರು ವಾರಗಳ ಕಾಲ ಎಚ್ಚರಿಕೆಯಿಂದ ಸುತ್ತಲ ಮಣ್ಣಿನರಾಶಿ ಯನ್ನೂ ಸಮಾಧಿಗಳನ್ನೂ ಶೋಧಿಸಿ ೩೦–೪೦ ಕೆ.ಜಿ. ತೂಕದ ಮಡಿಕೆ ಕುಡಿಕೆಗಳ ಭಾಗಗಳನ್ನು ಪ್ರತೀ ಸಮಾಧಿ ಯಿಂದ ಮೇಲೆತ್ತಲಾಯಿತು. ಜೊತೆಗೆ ಅಲ್ಪಸ್ವಲ್ಪ ಕಬ್ಬಿಣ ಹಾಗೂ ಚಿಕ್ಕ ಮೂಳೆಗಳ ಚೂರುಗಳೂ ಸಿಕ್ಕಿದೆ.

### ವರ್ಣನೆ

ಎಲ್ಲ ಸಮಾಧಿಗಳೂ ನಾಲ್ಕು ಅಡಿ ಆಳವಾಗಿದ್ದು ಸರಿಯಾಗಿ ಪೂರ್ವ ಪಶ್ಚಿಮ ದೆಸೆಗೆ ಹೊಂದಿಕೊಂಡು ರಚಿತವಾಗಿವೆ. ಅವುಗಳಿಗೆ ೫ ಅಡಿ ಅಗಲ, ೭–೮ ಅಡಿ ಉದ್ದದ ಏಕಶಿಲೆಯ ನೆಲೆಗಟ್ಟುಗಳಿದ್ದು ಅವುಗಳ ಸುತ್ತ ಅಪ್ರದಕ್ಷಿಣಾ ವಿನ್ಯಾಸದಲ್ಲಿ ಜೋಡಿಸಿದ ಏಕಶಿಲಾ ಗೋಡೆ ಗಳಿವೆ. ಕುದುರೆ ಲಾಳದಾಕಾರದ ಕಿಂಡಿಗಳು ಎರಡು ಅಡಿ ವ್ಯಾಸದವಾಗಿ ಪೂರ್ವದ ಚಪ್ಪಡಿಯ ತುದಿಯಲ್ಲಿ ಇದ್ದು, ಚಪ್ಪಡಿಯ ಕೇಂದ್ರರೇಖೆಗಿಂತ ಸ್ವಲ್ಪ ಉತ್ತರಕ್ಕೆ ಸರಿದಿದ್ದು, ಅವುಗಳನ್ನು ಸ್ವಲ್ಪ ತೆಳುವಾದ ಮತ್ತು ಗಾತ್ರದಲ್ಲಿ ಸಣ್ಣದಾದ ಚಪ್ಪಡಿಗಳ ಬಾಗಿಲುಗಳಿಂದ ಕಿಂಡಿಗಳಿಗೆ ಸರಿಯಾಗಿ ಮುಚ್ಚಿರುತ್ತಾರೆ. ಎಲ್ಲ ಊರ್ಧ್ವ ಶಿಲೆಗಳ ಮೇಲ್ಭಾಗ ಮತ್ತು ಕಿಂಡಿಯ ಮೇಲ್ಭಾಗ ನೆಲದಿಂದ ಕೆಲವೇ ಇಂಚು ಕೆಳಮಟ್ಟದಲ್ಲಿದೆ. ಅವುಗಳ ಮುಚ್ಚಳಗಳು ನೆಲದ ಮಟ್ಟದಲ್ಲಿದ್ದು ಕೃಷಿಯ ಉದ್ದೇಶಕ್ಕಾಗಿ ಅವುಗಳನ್ನು ಕಿತ್ತುಹಾಕಿರಬೇಕು (ಇದರ

ಸಮಾಂತರ ಸಾಲಿನಲ್ಲಿ ಇರುವ ಒಂದು ಸಮಾಧಿಗೆ ಮಾತ್ರ ಮುಚ್ಚಳವು (capstone) ಯಥಾಸ್ಥಿತಿಯಲ್ಲಿ ಇದ್ದು ಅದು ಭೂಮಟ್ಟದಲ್ಲಿದೆ. ಇದನ್ನು ಉತ್ಖನನ ಮಾಡಿದರೆ ಹೆಚ್ಚಿನ ಪ್ರಯೋಜನವಾಗ ಬಹುದು.)

ಈ ಸಮಾಧಿಗಳ ಪಶ್ಚಿಮದ ಕಡೆಯ ಗೋಡೆಯಲ್ಲೇ ಎಲ್ಲ ಮಡಿಕೆ–ಕುಡಿಕೆಗಳು ಸಿಕ್ಕವೆಂದು ಅಲ್ಲಿನ ಕಾರ್ಮಿಕರು ಹೇಳಿದರು. ಮಾಮೂಲಿನ ಕಪ್ಪು–ಕೆಂಪು ಪಾತ್ರೆಗಳು ಮತ್ತು ತೆಳುವಾದ ಚನ್ನಾಗಿ ತೀಡಿದ ಕಪ್ಪುಬಣ್ಣದ ಬಟ್ಟಲು ಹಾಗೂ ಮೊಗೆಗಳೂ ದೊರೆತಿವೆ. ಅಲ್ಲದೆ ತೀರ ದೊಡ್ಡ, ಉರುಳೆ(ಕೊಳವೆ)ಯಾಕಾರದಲ್ಲಿರುವ ಒರಟು ಮಡಿಕೆಗಳ ಭಾಗಗಳು ದೊರಕಿದ್ದು ಇವುಗಳ ದಪ್ಪನಾದ ದುಂಡನೆ ತುದಿಗಳಿರುವ ಕಾಲುಗಳ ತುಣುಕು ಗಳೂ ಸಿಕ್ಕಿವೆ. ಕೆಲವೇ ಗ್ರ್ಯಾಂ ತೂಗುವ, ತೀರ ಚಿಕ್ಕ, ಬಹುಶಃ ಮನುಷ್ಯರದಲ್ಲದ ಎಲುಬುಗಳೂ, ಕೆಲವೇ ಬಾಣಶಿರ, ತೀರ ಮುರಿದ ಅಲಗುಗಳು, ಚೂರಾದ ಸಲಾಕೆಗಳು ಹಾಗೂ ತುಕ್ಕು ಹಿಡಿದ ತುಣುಕುಗಳನ್ನೊಳ ಗೊಂಡ ಕಬ್ಬಿಣದ ವಸ್ತುಗಳು ಸಿಕ್ಕಿದ್ದು ಕಾರ್ಮಿಕರು ಅವುಗಳನ್ನು ಗುರುತಿಸದಿದ್ದರಿಂದ ಎಲ್ಲಿದ್ದವೆಂದು ಅವುಗಳ ಉಪಲಬ್ಧ ಸ್ಥಾನವನ್ನು ಹೇಳಲು ಬಾರದಾಗಿದೆ.

ಮಧ್ಯದ ಸಮಾಧಿಯಿಂದ ಮಾಲಿಕರು ಏಳು ಸಣ್ಣ ಮಡಿಕೆ ಚೂರುಗಳನ್ನು ಹೊರತೆಗೆದಿದ್ದರು. ಇವುಗಳಲ್ಲಿ ಚಿಕ್ಕ ಕಪ್ಪು ಮೊಗೆಗಳು, ಮೂರು ಕಾಲಿನ ಒಂದು ಕೆಂಪು ಮಡಿಕೆ, ಕೆಂಪು ಮತ್ತು ಕಪ್ಪು ವೃತ್ತಾಕಾರದ ಪೀಠಗಳು (stands) ನಾಜೂಕಾಗಿ ಸಿದ್ಧಪಡಿಸಿದ ಒಂದು ಕಲ್ಲಿನ ಒರಳು ಮತ್ತು ಕುಟ್ಟಣಿ (ಪ್ರತಿಯೊಬ್ಬರೂ ಇದು ಆಯುರ್ವೇದ ವೈದ್ಯರ ಸಲಕರಣೆ ಎಂದೇ ಹೇಳಿದರು) ದೊರೆತವು. ಅಲ್ಲದೆ ಮೇಲೆ ಶಿರವಿರುವ ಒಂದು ಸಣ್ಣ ಕೆಂಪು ಮಡಿಕೆಯ ಬಾಯಿ ತೆರೆದಿದ್ದು ಅದರಿಂದ ಚಾಚಿರುವ ಒಂದು ಸೂಸುವ ಕೊಳವೆಯಿತ್ತು. ಇದನ್ನು 'ಕಿಂಡಿ' ಅಥವಾ ಊಡುವ ಪಾತ್ರೆ (ಆಲಂಡೆ ಅಥವಾ ಪಾಲಂಡೆ) ಎಂದು ಗುರುತಿಸಿದರು. ಈ ಪಾತ್ರೆಗಳನ್ನು ತೀರ್ಥದ ಗಿಂಡಿ, ಬಿತ್ತನೆಯ ಸಾಧನ ಎಂದೆಲ್ಲ ವರ್ಣಿಸಿದರೂ ಈ ಪಾತ್ರೆಗಳ ಒಳಗಿದ್ದ ಎಲುಬುಗಳಿಂದ ವಿಧಿವತ್ತಾಗಿ ಹೂಳಲು ಬಳಸುವ ಸಾಧನ ಎಂದೂ ಕರೆಯಲಾಯಿತು.

ಇಲ್ಲಿ ದೊರೆತ ಎಲ್ಲ ಕಬ್ಬಿಣ ಮತ್ತು ಎಲುಬಿನ ಚೂರುಗಳೂ ಈ 'ವೈದ್ಯರ ಸಮಾಧಿ'ಯಲ್ಲಿ ದೊರೆತವು. ಜೊತೆಗೆ ಬಹುಶಃ ಮಸೆಯಲು ಬಳಸುವ ಒಂದು ನಯವಾದ ಮೈಯ ವಿಷಮ ಚತುಸ್ರಾಕಾರದ ವಕ್ರ ಅಂಚಿನ ಶಿಲೆ ಸಿಕ್ಕಿತು.

ಈ ಸಮಾಧಿಗಳ ಬಳಿ ನಾಲ್ಕು (ಇಲ್ಲವೆ ಐದು) ಬಲು ವಿಶಾಲವಾದ ಕಲ್ಲಿನ ಚಪ್ಪಡಿಗಳ ವೃತ್ತಗಳಿದ್ದು, ಇವು ದುರ್ದೈವದಿಂದ ಹೆಣ್ಣೂರು–ಬಾಣಸವಾಡಿ ರಸ್ತೆ ಯಿಂದ ವಿಭಜಿತವಾಗಿವೆ. ಈಗ ಇವುಗಳ ಕಂಸಗಳು ಉಳಿದಿವೆ. ಅವುಗಳ ವ್ಯಾಸ ೧೩.೯ ಮೀಟರ್, ೧೯ ಮತ್ತು ೨೦.೮ ಮೀಟರ್ (೬೮ ಅಡಿ) ಇದ್ದು ಕೊನೆಯದೇ ಬಹುಶಃ ಅತೀ ದೊಡ್ಡದು.

ಇಲ್ಲಿನ ಕೊತನೂರು ಗ್ರಾಮದ ತಿಳುವಳಿಕಸ್ಥ (ಪಟೇಲ್‌ರ ಹಿರೀಮಗ ಹಾಗೂ ಪಾಳೆಯಗಾರರ ವಂಶಕ್ಕೆ ಸೇರಿದ್ದ) ಕೆ. ಆರ್. ಕೃಷ್ಣಮೂರ್ತಿ (ಜನನ–೧೯೪೫) ಹೇಳುವಂತೆ ಈ ನಾಲ್ಕು ಕಲ್ಲಿನ ಆವರಣಗಳು ಸೀತಾ ಕಲ್ಯಾಣಿ ಎಂಬ ಕೆರೆಯೊಂದನ್ನು ಸುತ್ತುವರಿದಿದ್ದವು. ಈ ಕಲ್ಯಾಣಿಯ ಪಶ್ಚಿಮದಲ್ಲಿ ಆಳ ಕಡಿಮೆಯಿದ್ದು ಅಲ್ಲಿ ಒಂದು ಬಂಡಿಜಾಡು ಇದೆ. ಇಲ್ಲಿನ ಪ್ರದೇಶದಲ್ಲಿ ಕಲ್ಲಿನ ಗಣಿಗಾರಿಕೆ ಮತ್ತು ಕೃಷಿಗೆ ೧೯೨೪–ಶಿಶಿರ ನಂತರವೇ ಅವಕಾಶವಾಯಿತು. ಕಣ್ಣೂರಿನಿಂದ ಮೂರು ಕಿ. ಮೀ. ದೂರದಲ್ಲಿ ಒಂದು ನಯವಾದ ದುಂಡನೆಯ ಬಂಡೆಯಿದ್ದು ಅದರ ಮೇಲೆ ಇರುವ ಅಗಲ ಜಾಗದಲ್ಲಿ ಪಾಂಡವಪಾದ ವೆಂಬ ಜೋಡಿ ಹೆಜ್ಜೆ ಗುರುತುಗಳಿದ್ದವು. ಇದರ ಸುತ್ತು ೧೦೧ ಕಿರುತೂತುಗಳಿದ್ದು ಉಗಾದಿ ಕಾಲದಲ್ಲಿ ಅವುಗಳಲ್ಲಿ ಎಣ್ಣೆ ಸುರುವಿ ದೀಪ ಉರಿಸುತ್ತಿದ್ದುದು ಅಂದಿನ ಅರಣ್ಯದ ವಾತಾವರಣದಲ್ಲಿ ಅದು ಒಂದು ಮೋಡಿ ಹಾಕುವ ದೃಶ್ಯ ವಾಗಿತ್ತು. ಇದರ ಬದಿ ದೋಣಿಯಾಕಾರದ ಒಂದು ದೋಣೆಯಿದ್ದು ಕುರಿಕಾಯಲು ಹೋದ ಹುಡುಗರು ಅದರಲ್ಲಿ ಮೀಯುತ್ತಿದ್ದರು. ಈ ಪಾದಗಳನ್ನು ೧೯೫೩ರಲ್ಲಿ ಸಮೀಪದ ಮುನೇಶ್ವರ ಗುಡಿ ಬಳಿ ಒಯ್ದು ಪೂರ್ವ ಮುಖವಾಗಿ ಪ್ರತಿಷ್ಠಾಪಿಸಿದೆ. ಹಿಂದಣ ಆ ಬಂಡೆ, ಕಲ್ಲಿಗಾಗಿ ಒಡೆಯಲ್ಪಟ್ಟು ಈ ಗಣಿಕೆಲಸ ಮಾಡಿದ ಧನಿ ಅನಂತರ ಅನೇಕ ವೈಯಕ್ತಿಕ ದುರಂತಗಳನ್ನು ಎದುರಿಸಿದ.

ಇಂಥ ಐತಿಹಾಸಿಕ ಅವಶೇಷಗಳು ಸಾಮಾನ್ಯವಾಗಿ ಇಲ್ಲಿ ಸುತ್ತಲೂ ಇವೆ. ಕಣ್ಣೂರಲ್ಲಿ ವಿಚಿತ್ರ (ಹೊರಗಿನಿಂದ ತಂದ) ಶಿಲೆಯ ನಯವಾದ ಒಂದು ಶಿವಲಿಂಗವಿದ್ದು ಅದು ಒಂದು ಕಲ್ಯಾಣಿ ಚಾಳುಕ್ಯರ[3] ಕಾಲದ ಶೈಲಿಯ ಒಡ್ಡೊಡ್ಡಾದ ಮಂಟಪದಲ್ಲಿ ಇದೆ. ಇಲ್ಲಿರುವ ಒಂದು ಕೆಳಹಂತದ ಇಟ್ಟಿಗೆಯ ರಚನೆಯಲ್ಲಿ ಸಾಧು ಒಬ್ಬ ಸಮಾಧಿ ಹೊಂದಿದ್ದನೆಂದು ಹೇಳುತ್ತಾರೆ. ಇಲ್ಲೇ ಒಂದು ಭಾರೀ ಗಾತ್ರದ ಶಿಲಾಶಾಸನವಿದ್ದು ಇದು ೧೪ನೆಯ ಶತಮಾನದ್ದು;[4] ಅಲ್ಲೇ ಬಿಲ್ಲು, ಖಡ್ಗ–ಗುರಾಣಿಯ ಶಿಲ್ಪವಿರುವ ಒಂದು ವೀರಗಲ್ಲಿದೆ. ಸಮೀಪದ ಕಾಡುಸೋಮನಹಳ್ಳಿಯಲ್ಲಿ ಇದೇ ರೀತಿಯ ಶಿಲ್ಪವಿರುವ ವೀರಗಲ್ಲಿನ ಗುಡಿಯಿದ್ದು ಇದರ ಪೂಜಾರಿ ಮಹಿಳೆಯರಿಗೆ ತಗಲಿದ ಭೂತ ಬಿಡಿಸುತ್ತಾನಂತೆ.ಇದನ್ನು 'ಕಾಡಾರಮ್ಮ' (ಭೂತಗಳ ನಾಯಕ ಭೂತ) ಎನ್ನುತ್ತಾರೆ. ಇದರ ಬಳಿ ಐದು ಕಲ್ಲಿನ ಚಪ್ಪಡಿಗಳ ವೃತ್ತಗಳೂ ಸಮಾಧಿಗಳೂ ಇದ್ದು ಅವುಗಳ ಮುಚ್ಚಳಗಳು ನಾಪತ್ತೆಯಾಗಿವೆ.

ಬೆಟ್ಟದಕೋಟೆ ಎಂಬ ೧೮ ಕಿ. ಮೀ. ದೂರದ ಸರಕಾರೀ ಅರಣ್ಯದಲ್ಲಿ ಒಂದು ಎತ್ತರದ ಸಮತಟ್ಟು ಪ್ರದೇಶವಿದ್ದು ಅದರ ಬುಡದಲ್ಲಿ ಹೂಜಿಯಾಕಾರದ ಹತ್ತಿಪ್ಪತ್ತು ಗುಳಿಗಳು ಜಂಬಿಟ್ಟಿಗೆ (laterite) ಕಲ್ಲಿನಲ್ಲಿ ಕೊರೆದಿದ್ದು ಅವುಗಳಲ್ಲಿ ಬೂದಿ, ಮಣ್ಣು ತುಂಬಿದೆ. ಸುಮಾರು ಎಂಟಡಿ ಆಳ, ಆರಡಿಯ ವ್ಯಾಸದ ಈ ಗುಳಿಗಳನ್ನು ಸ್ಥಳೀಕರು ಗದ್ದೆಗಳಿಗೆ ಗೊಬ್ಬರವಾಗಿ ಬಳಸಲು ಬೂದಿಗಾಗಿ ಅಗೆಯುತ್ತಿದ್ದು ಇವು ಹಗೇವು (ಉಗ್ರಾಣ) ಗಳಾಗಿದ್ದುವೆಂದು ಸ್ಥಳೀಕರು ಭಾವಿಸಿದ್ದಾರೆ.

ಬಹುಪಾಲು ಶಿಲಾಗೋರಿಗಳನ್ನು ಹಾವು ಅಥವಾ ಪಿಶಾಚಿಗಳ ಭಯದಿಂದ ಜನ ಮುಟ್ಟದೇ ಬಿಟ್ಟಿದ್ದಾರೆ. ನೂರು ವರ್ಷಗಳ ಹಿಂದೆ ಧನಗಾಹಿಗಳು ಈ ಗೋರಿಗಳನ್ನು ಅಗೆದು ಅದರಲ್ಲಿನ "ಚಿನ್ನ ಬೂದಿಯಾಗಿದೆ" ಯೆಂದು ನಂಬಿದ್ದರು. ಕಾಡುಸೋಮನಹಳ್ಳಿಯ ಕಾಡಾರಮ್ಮನ ಗುಡಿ ಬಳಿಯ ಒಂದು ಸಮಾಧಿಯನ್ನು ೭–೮ ವರ್ಷಗಳ ಹಿಂದೆ ಅಗೆದಾಗ ಅದರಲ್ಲಿನ ಮಡಿಕೆಗಳು ಬೂದಿ ಅಥವಾ ಭತ್ತದ ಹೊಟ್ಟು ಅಥವಾ (ರಾಗಿ)ಯ ಹಿಟ್ಟಿನಿಂದ ತುಂಬಿದ್ದು ಅವನ್ನು ಒಡೆದು ಎಸೆದರು. ಪಕ್ಕದ ಬೆಟ್ಟದಿಂದ ನಾಗರಹಾವೊಂದು ಹರಿದುಬರಲು ಬೆದರಿ ತಮ್ಮ ಕೆಲಸ ಬಿಟ್ಟು ಮತ್ತೆ ಆ ಗೋರಿಗಳ ತಂಟೆಗೆ ಹೋಗಲಿಲ್ಲ. ಇಲ್ಲೆಲ್ಲ ಈಗ ಚಿಕ್ಕ ಮಡಕೆ ಚೂರುಗಳಿದ್ದು ಸುತ್ತಲೂ ಹುತ್ತ ಬೆಳೆದಿದೆ.

ಜೀಗುಟ್ಟದ ಒಂದೇ ಒಂದು ಗೋರಿ ಮಾತ್ರ ಸುಸ್ಥಿತಿಯಲ್ಲಿ ಇದ್ದು ಇದರ ಮೇಲೆ ಆಯತಾಕಾರದಲ್ಲಿ ಹುಲ್ಲು ಬೆಳೆದಿದ್ದು ಈ ಲೇಖಕಿಯ ಪತಿ ಒಬ್ಬ ಜಲ–ಶೋಧಕರಾಗಿದ್ದು (water diviner) ಅವರು ಇದರಲ್ಲಿ ಕಬ್ಬಿಣ ಮುಂತಾದವುಗಳು ಇರಬಹುದೆಂದು ಹೇಳಿದರು. ಇದರ ಸುತ್ತ ಭೂಮಿಯಡಿ ೩೦–೪೦ ಸ್ಥಳಗಳಲ್ಲಿ ಬಂಡೆಗಳು ಇರುವ ಲಕ್ಷಣವನ್ನೂ ಗುರುತಿಸಿದರು.

## ನಗರವೆ, ಸ್ಮಶಾನವೆ ?

ಕಣ್ಣೂರಿನ ಈ ಸಮಾಧಿಗಳು ಜನರನ್ನು ಹೂತ ಸಮಾಧಿಗಳೇ ಎಂದು ಒಪ್ಪಲು ಕೆ. ಆರ್. ಕೃಷ್ಣಮೂರ್ತಿ ಸಿದ್ಧರಿಲ್ಲ. ಅದು ನಗರದ ಅವಶೇಷವೆನ್ನಲು ಅವರು ಕೆಳಗಿನ ಕಾರಣ ಕೊಡುತ್ತಾರೆ.

ಕಲ್ಲುಗಳ ವೃತ್ತವು ಬಹುಶಃ ಮನೆಯ ಗೋಡೆಗಳ ತಳಹದಿ. ಈ ಗೋಡೆಗಳು ೦.೫ ರಿಂದ ೦.೭ ಮೀಟರ್ ಎತ್ತರವಾಗಿವೆ. ಆ ಕಲ್ಲುಗಳು ಸಮಾನವಾಗಿ ಹೊರಬಾಗಿರುವುದು (೨೫°ಯಷ್ಟು) ಮೇಲಣ ಹುಲ್ಲು ಛಾವಣಿಯ ಭಾರ ಹೊರಲು. ನಡುವಣ ಮರದಕಂಬದಿಂದ ಸುತ್ತ ಚಾಚಿದ ಮರದ ತೊಲೆಗಳು ಅವನ್ನು ಆಧರಿಸಿದ್ದವು. ಸಮಾಧಿಯು ಈ ವೃತ್ತದ ತೀರ ಮಧ್ಯಬಿಂದುವಿನಲ್ಲಿ ಇರದೆ ಸ್ವಲ್ಪ ಪಕ್ಕಕ್ಕಿದ್ದು (ಸ್ವಲ್ಪ ದಕ್ಷಿಣಕ್ಕೆ) ಮಧ್ಯದ ಕಂಬಕ್ಕೆ ಸ್ಥಳಾವಕಾಶ ಕೊಡಲು ಹಾಗೆ ಮಾಡಿರಬೇಕು. ಈ ವಸತಿ ಸ್ಥಳಗಳ ಮಧ್ಯದಲ್ಲಿ ಊರ ಕೆರೆ ಇತ್ತು. ಇದು ಬೆಂಕಿ ಬಿದ್ದ ಪ್ರಸಂಗಗಳ ಬಗ್ಗೆ ಮುಂಜಾಗ್ರತೆಗಾಗಿ. ಒಂದು ಸಮಾಧಿ ಸ್ಥಳಕ್ಕೆ ಇಂಥ ಭಾರೀ ಕೆರೆಯ ವ್ಯವಸ್ಥೆಯ ಅವಶ್ಯಕತೆ ಇಲ್ಲ. ಅವುಗಳ ಮೇಲೆ ಹುಲ್ಲಿನ ಮಾಡಿದ್ದುದರಿಂದ ಹೀಗೆ ಯೋಜಿಸಲಾಗಿತ್ತು. ಜೀಗುಟ್ಟದಲ್ಲಿ ಈಗಿರುವ ಕೆರೆಯ ಸುತ್ತ ಮೆಗಲಿತ್‌ಗಳ ಸಾಲು ಇದ್ದು ಕೆಲವು ಈಗಿದ್ದ ರಸ್ತೆಯ ಆಚೆ ಪೂರ್ವಕ್ಕೂ ಪಶ್ಚಿಮಕ್ಕೂ ಇದ್ದವು. ಇವು ೨೦–೩೦ ಎಕರೆ ವಿಶಾಲ ಪ್ರದೇಶದಲ್ಲಿ ಹರಡಿವೆ. ಈಗಿನ ನಗರಗಳಲ್ಲೂ ಇಷ್ಟೊಂದು ವಿಶಾಲ ಪ್ರಮಾಣದ ಸ್ಮಶಾನ

ಗಳಿಲ್ಲ. ಹೀಗಾಗಿ ಇವು ಮನೆಗಳೇ ಆಗಿದ್ದು ಇಡೀ ಪ್ರದೇಶ ಪಟ್ಟಣವೇ ಆಗಿತ್ತು. ಇಷ್ಟೊಂದು ವಿಶಾಲ ಕೆರೆ ಒಂದು ಪಟ್ಟಣಕ್ಕಷ್ಟೇ ಬೇಕಾಗುವುದು. ಸಿಸ್ಟ್‌ಗಳ ನಡುವಣ ಅಂತರ ಕನಿಷ್ಠ ಏಳು ಮಿ. ಆಗಿರುವುದು ಮತ್ತು ಅವುಗಳು ಆಯತಾಕಾರದ ವಿನ್ಯಾಸದ ಸಾಲುಗಳಲ್ಲಿರುವುದು. ಒಂದು ಪಟ್ಟಣದ ವಿನ್ಯಾಸವನ್ನು ಸೂಚಿಸುವುದಲ್ಲದೆ ಸ್ಮಶಾನವನ್ನಲ್ಲ. ಇಲ್ಲಿರುವ ಬಂಡಿ ಜಾಡು ಅಂದಿನ ಮುಖ್ಯ ರಸ್ತೆಯಾಗಿದ್ದು ಅದರ ಅಕ್ಕಪಕ್ಕದಲ್ಲಿ ಇದ್ದ ಎರಡು ಸಿಸ್ಟ್‌ಗಳನ್ನು ಇತ್ತೀಚೆಗೆ ಧ್ವಂಸಗೊಳಿಸಿರುವುದೂ ಇದಕ್ಕೆ ಆಧಾರ.

ದೊಡ್ಡದಾಗಿರುವ ವೃತ್ತಗಳು (ದೊಡ್ಡ ಮನೆಗಳು) ಕೆರೆಯ ಹತ್ತಿರವಿದ್ದು ದೂರದಲ್ಲಿರುವ ವೃತ್ತಗಳು ಕಿರಿದಾಗಿದ್ದು ಬಡವರ ಮನೆಗಳಾಗಿರಬೇಕು.

ಸಿಸ್ಟ್‌ನ ವೃತ್ತಗಳು ಶ್ರೀಮಂತರ ಉಗ್ರಾಣಗಳ ತಳಗಳಾಗಿದ್ದು ಹೊಂಡದಂತಿರುವ ವೃತ್ತಗಳು ಬಡವರ ಉಗ್ರಾಣಗಳಾಗಿರಬೇಕು. ಸ್ಮಶಾನಗಳು ಸಾಮಾನ್ಯವಾಗಿ ಊರ ಪಶ್ಚಿಮಕ್ಕೆ ಇರುತ್ತವೆ. ಈ ಸಿಸ್ಟ್‌ಗಳು ಸ್ಮಶಾನದಲ್ಲೇ ಇದ್ದರೆ, ವಸತಿಯು ಇದಕ್ಕೆ ಪೂರ್ವದಲ್ಲಿ ಇರಬೇಕು. ಆದರೆ ಕೆರೆಯ ಪೂರ್ವಕ್ಕೆ ಮತ್ತು ಸಿಸ್ಟ್‌ಗಳ ಪೂರ್ವ ದಿಕ್ಕಿಗೆ ಪುರಾತತ್ತ್ವ ದೃಷ್ಟ್ಯಾ ಮಹತ್ವದ್ದಾದ ಏನೂ ಸಿಕ್ಕಿಲ್ಲ. ವಾಸ್ತವವಾಗಿ ಪೂರ್ವ ದಿಕ್ಕಿನಲ್ಲೂ ಚದರಿಹೋದ ಕೆಲವು ಸಿಸ್ಟ್‌ಗಳಿವೆ. ಈ ಎಲ್ಲ ಸಿಸ್ಟ್‌ಗಳು ಪೂರ್ವ–ಪಶ್ಚಿಮ ವಿನ್ಯಾಸದ ಅಕ್ಷ ರೇಖೆಯಲ್ಲಿವೆ.

ವಾಸ್ತುಶಾಸ್ತ್ರದಂತೆ ಮನೆಯ ದ್ವಾರ ಪೂರ್ವಕ್ಕೆ, ಸ್ವಲ್ಪ ಉತ್ತರದೆಡೆಗೆ ಇರಬೇಕು. ಎಲ್ಲ ಕಿಂಡಿ ಕೊಠಡಿಗಳೂ ಪೂರ್ವಕ್ಕೆ ಊರ್ಧ್ವ ಗೋಡೆಗಳನ್ನು ಹೊಂದಿದ್ದು, ಚಪ್ಪಡಿಯು ಕೇಂದ್ರಕ್ಕಿಂತ ಸ್ವಲ್ಪ ಉತ್ತರಕ್ಕಿವೆ. ಯುಗಾದಿಯಂದು ಸೂರ್ಯನು ಪೂರ್ವಕ್ಕೆ ಬರಲಿದ್ದು ಅದಕ್ಕೆ ಹೊಂದುವಂತೆ ಈ ಸಿಸ್ಟ್‌ಗಳ ವಿನ್ಯಾಸ ಮಾಡಲಾಗಿದೆ. ಆರ್. ಕೆ. ಕೋಚಾರ್ ಅವರು ಹೇಳುವಂತೆ ಇದು ವೇದ ಕಾಲದಲ್ಲಿ ನಿಜವಾಗಿದ್ದು ಈಗ ಇಂಥ ಸನ್ನಿವೇಶ ಮೂರು ವಾರ ತಡವಾಗಿ ಆಗುತ್ತದೆ. ಮೇಲೆ ಹೇಳಿದ ಯುಗಾದಿಯ ದಿನ ಪೂಜೆ ಇಲ್ಲಿನ ವಾಸಿಗಳ ಧಾರ್ಮಿಕ ವಿಧಿಯಲ್ಲಿ ಮಹತ್ವದ ಸ್ಥಾನ ಪಡೆದಿತ್ತು.

## ಹಳ್ಳಿಯ ರೂಢಿಗಳು

ವಾಸ್ತುಶಾಸ್ತ್ರದಂತೆ ಆಗ್ನೇಯವು ಒಂದು ಮನೆಯ ಅಗ್ನಿದಿಶೆ. ಸೂರ್ಯನ ದಕ್ಷಿಣ–ಉತ್ತರ ಪ್ರವಾಸಕ್ಕೆ ಅನುಗುಣವಾಗಿ ದೇವರ ಮೂಲೆ ಬದಲಾಗುತ್ತಿದ್ದು, ಸೂರ್ಯ ಬೇಸಿಗೆಯಲ್ಲಿ ಉತ್ತರದೆಸೆಯಲ್ಲಿ ಇದ್ದಾಗ ದೇವರ ಮೂಲೆ ಆಗ್ನೇಯಕ್ಕೆ ಚಳಿಗಾಲದ ಆರು ತಿಂಗಳಲ್ಲಿ ದೇವರ ಮೂಲೆ ನೈಋತ್ಯಕ್ಕೆ ಇದ್ದು, ಎಲ್ಲ ಮನೆಗಳ ಭೂಗತ ಉಗ್ರಾಣ (ಹಗೇವು)ಗಳು ಇದೇ ಮೂಲೆಯಲ್ಲಿ ಇರುತ್ತವೆ. ನಾಶವಾದ ಸಿಸ್ಟ್‌ಗಳಲ್ಲಿ ಸಿಕ್ಕ ಧಾನ್ಯ ತುಂಬಿದ ಮಡಿಕೆಗಳು ಈ ನೈರುತ್ಯ ಮೂಲೆಯಲ್ಲೇ (ಪಶ್ಚಿಮ ಭಾಗದಲ್ಲೇ) ಸಿಕ್ಕವು.

ಕಣ್ಣೂರಿನ ಸಿಸ್ಟ್‌ಗಳ ಸರಣಿ ವ್ಯಾಪಕವಾದುದು. ಮೂರು ಮೀಟರ್ ದೂರದ ಕಾಡುಸೊಣ್ಣಪ್ಪನಹಳ್ಳಿಯಲ್ಲಿ ಈ ಸಿಸ್ಟ್‌ಗಳು ಚದರಿದ ಗುಂಪುಗಳಾಗಿ ೨, ೨ ಮತ್ತು ೧ ಹೀಗೆ ಪ್ರತ್ಯೇಕವಾಗಿ ಕಾಣಬರುತ್ತವೆ. ಇವು ಕಾಡಾರಮ್ಮನ ಗುಡಿ ಬಳಿ ಇವೆ. ಅಪರಾಧಿಗಳನ್ನು ಊರಿನಿಂದ ಬಹಿಷ್ಕರಿಸುವ ಪದ್ಧತಿ ಇದ್ದು ಹೀಗೆ ಬಹಿಷ್ಕೃತರಾದವರು ಮತ್ತೆ ಊರಿಗೆ ಸೇರಿಸಲ್ಪಟ್ಟರೂ ಊರ ಹೊರಗೆ ಇರುವಂತೆ ಅವಕಾಶ ಕಲ್ಪಿಸಿದ್ದರಿಂದ ಈ ಮನೆಗಳು ಅಲ್ಲಿ ಆಗಿರಬೇಕೆಂಬ ಅವರ ಅಭಿಪ್ರಾಯ. ಅಪರಾಧಿಗಳು ಸತ್ತಮೇಲೆ ಅವರ ಮಕ್ಕಳನ್ನು ಊರಲ್ಲಿ ಸೇರಿಸಿಕೊಳ್ಳುತ್ತಾರೆ.

ಎಲ್ಲ ಬೃಹತ್ಶಿಲಾಯುಗದ ನಿವೇಶನಗಳು ಕ್ವಾರ್ಟ್ಸ್‌ನ ಕಲ್ಲುಚೂರುಗಳಿಂದ ತುಂಬಿದ್ದು ಅವು ನಿವೇಶನದ ಮೇಲ್ಪದರಲ್ಲಿ ಇರುತ್ತವೆ. ಜೇಗುಟ್ಟದಲ್ಲೂ ಸಮಾಧಿಯ ಸುತ್ತ ಒಂದರಿಂದ ನಾಲ್ಕು ಇಂಚು ಆಳದವರೆಗೆ ಈ ಹರಳುಗಳನ್ನು ಹರಡಿದೆ. ಈ ಹರಳುಗಳನ್ನು ಈಗಲು ವೈದ್ಯಕೀಯ ಉದ್ದೇಶಕ್ಕೆ ಬಳಸುತ್ತಾರೆ. ನೀರುಭೇದಿಯಾದಾಗ ಈ ಕಲ್ಲನ್ನು ಕೆಂಡದಂತೆ ಕಾಯಿಸಿ ಕಂಚಿನ ತಟ್ಟೆಯಲ್ಲಿ ಇಟ್ಟು ಅದರ ಮೇಲೆ ಮೊಸರನ್ನ ಹಾಕಿ ತಿರುವಿ ತಣಿಸಿದ ನಂತರ ಅನ್ನ ಉಂಡರೆ ೩–೪ ತಾಸುಗಳ ವರೆಗೆ ರೋಗಿಗೆ ತೇಗು ಬರಿಸುತ್ತ ಭೇದಿ ವಾಸಿಯಾಗುತ್ತ ಬರುತ್ತದೆ. ಜೇಗುಟ್ಟದ ಕಲ್ಲುಗಳನ್ನು ಈ ಉದ್ದೇಶದಿಂದ ಸುಣ್ಣದ ಕಲ್ಲಿನಿಂದ ಸಂಸ್ಕರಿಸಿರಬಹುದೆ ?

ಮಧ್ಯದ ಸಿಸ್ಟ್‌ನಲ್ಲಿ ಸಿಕ್ಕ ಒರಳು ಮತ್ತು ಕುಟ್ಟಣೆ (ಕಿಂಡ) ಸಮಾಧಿಯಲ್ಲಿ ರೂಢಿಯಂತೆ ಇಟ್ಟ ವಸ್ತುವಾಗಿರದೆ ಅಲ್ಲಿ ವಾಸಿಸುತ್ತಿದ್ದ ವೈದ್ಯನೊಬ್ಬನ ಸಲಕರಣೆಯಾಗಿರಬಹುದು.

### ಆಕ್ಷೇಪಗಳು

ಎಲ್ಲ ಹಗೇವುಗಳಿಗೆ ಮೇಲಿನಿಂದ ತೆರಪು ಇದ್ದು ಅವುಗಳಲ್ಲಿ ಏಣಿಗಳನ್ನು ಇಳಿಸಬಹುದು. ಇದರಿಂದ ಗೋಡೆಯು ಒಂದು ಪಕ್ಕದಿಂದ ತೆರಪನ್ನಿಡುವುದು ಅನವಶ್ಯಕ ಮತ್ತು ಅನನುಕೂಲದ್ದು.

ಇನ್ನು ಈ ತೆರಪುಗಳನ್ನು ಮುಚ್ಚಿರುವ ಜಾರು ಬಾಗಿಲುಗಳನ್ನು ಏಕೆ ಬಳಸಿದರು ? ಮನೆಗಳನ್ನು ತ್ಯಜಿಸಿದಾಗ ಈ ಕಿಂಡಿಗಳನ್ನು ಮುಚ್ಚಿ ಹಾಕಿದರೆ ? ಮನೆಯಲ್ಲಿ ಸಾವಾದಾಗ ಹೀಗೆ ಮಾಡಿದರೆ ? ಅಥವಾ ಗ್ರಾಮ ಧಾಳಿಗೊಳಗಾದಾಗ ಅಮೂಲ್ಯ ವಸ್ತುಗಳ ರಕ್ಷಣೆಗೆ ಹೀಗೆ ಮಾಡಿದರೆ ?

ಇದಲ್ಲದೆ ಅಪ್ರದಕ್ಷಿಣಾಕಾರದಲ್ಲಿ ಸುತ್ತಲು ಚಪ್ಪಡಿಗಳ ವಿನ್ಯಾಸ ಮಾಡಿರುವುದು ಮನೆಗಳ ದೃಷ್ಟಿಯಿಂದ ಶುಭಕರವಲ್ಲ. ಅದು ಸಾಮಾನ್ಯ ವಿಧಾನವೂ ಅಲ್ಲ.

ಕಲ್ಲಿನ ವೃತ್ತಗಳ ನಡುವಣ ಮಣ್ಣಿನ ಗುಪ್ಪೆಗಳು ಅಧ್ಯಯನಕ್ಕೆ ಒಳಪಡಬೇಕಾಗಿದ್ದು ಅವು ಮೃತರ ರಕ್ಷಣೆಗೆ ಹಾಕಿದ್ದ ರಾಶಿಗಳಾಗಿರದೆ, ಸುಡದ ಮಣ್ಣು ಅಥವಾ ಇಟ್ಟಿಗೆಗಳ ಗೋಡೆಗಳು ಒಳಕ್ಕೆ ಕುಸಿಯದಂತೆ ಹಾಕಿದ ರಾಶಿಗಳು.

### ನಿರ್ಣಯಗಳು

ಬೃಹತ್ ಶಿಲಾಯುಗದ ನಿವೇಶನಗಳಲ್ಲಿ ದಫನ ಮಾಡುವ ಗೋರಿಗಳ ಗ್ರಾಮಗಳ ಸುಳಿವು ಸಿಕ್ಕಿಲ್ಲ. ಈ ಸಿಸ್ಟ್‌ಗಳ ಮೇಲೇ ಜನ ತಮ್ಮ ಮನೆಗಳನ್ನು ಕಟ್ಟಿಕೊಂಡರೆ ಹೇಗೆ ? ಸತ್ತವರ ದೇಹದ ಅವಶೇಷಗಳನ್ನು ವಿಸರ್ಜಿಸುವ ನವಶಿಲಾಯುಗದ ವಿಧಾನಗಳನ್ನು ಬದಲಾಯಿಸಿ, ಅವುಗಳನ್ನು ಮನೆಯ ತಳದ ಹಗೇವು (ಉಗ್ರಾಣ)ಗಳಲ್ಲಿ ಗೌರವದಿಂದ ರಕ್ಷಿಸಿಡುವ ವಿಧಾನ ರೂಢಿಗೆ ಬಂತೆ ಹೇಗೆ ?

### ಮುಂದಿನ ಪ್ರಶ್ನೆಗಳು

ವಾಸ್ತು ಹಾಗೂ ಪರಂಪರಾಗತ ಕಟ್ಟಡ ರಚನೆಯ ಪರಿಚಯವುಳ್ಳ ವಿದ್ವಾಂಸರು ಬೃಹತ್ ಶಿಲಾಯುಗದ ರಚನೆಗಳ ನಗರ ಯೋಜನೆಗಳನ್ನು ಹೊಸದಾಗಿ ಪರಿಶೀಲಿಸಿ, ಐತಿಹಾಸಿಕ ನಗರ ಮತ್ತು ಸ್ಮಶಾನಗಳ ವಿನ್ಯಾಸಗಳ ಜೊತೆ ತುಲನೆ ಮಾಡುವುದು ಅವಶ್ಯವೆನಿಸುತ್ತದೆ. ಆರಂಭದ ಗುಡಿಸಲುಗಳು ಹಾಗೂ ವಿಶೇಷತಃ ಹಗೇವುಗಳ ವರ್ಣನೆಗೆ ಸಂಬಂಧಿಸಿದ ಋಗ್ವೇದದ ವರ್ಣನೆಯ ಅಧ್ಯಯನ ಅವಶ್ಯವಾದೀತು.

ಕಲ್ಲುಚಪ್ಪಡಿಯ ವೃತ್ತಗಳ ನಕಾಶೆ ತಯಾರಿಸಿ ಅವುಗಳಲ್ಲಿರುವ ಕಟ್ಟಣೆಗಳನ್ನು ಪರಿಶೀಲಿಸಿ ಮಧ್ಯಸ್ತಂಭ ಮತ್ತು ಮೂಲೆಗಂಬಗಳು ಮುಂತಾದುವನ್ನು ಗುರುತಿಸಿದಲ್ಲಿ ಈ ವೃತ್ತಗಳು ವಾಸದ ರಚನೆಗಳೇ ಎಂದು ತಿಳಿಯಬಹುದು. ಇದೇ ರೀತಿ ಈಗಿರುವ ಕಲ್ಲಿನ ಬಾಗಿಲ ಮುಚ್ಚಳಗಳನ್ನು (ಕಿಂಡಿಗಳನ್ನು ಮುಚ್ಚಲು ಬಳಸುವಂಥವು) ಪರಿಶೀಲಿಸಿ ಈಗಿರುವ ಬುಡಕಟ್ಟಿನ ಸಾಂಪ್ರದಾಯಿಕ ಸಂಸ್ಕೃತಿಯ ಜನ ಇದೇ ಪದ್ಧತಿ ಅನುಸರಿಸುತ್ತಾರೆಯೇ ಎಂದು ಗಮನಿಸಬಹುದು. ಇದರಿಂದ ಈ ಕಲ್ಲುಬಾಗಿಲುಗಳ ಉದ್ದೇಶ ಮತ್ತು ಪಾತ್ರಗಳನ್ನು ಗಮನಿಸಬಹುದು. ಊರ್ಧ್ವ ಶಿಲೆಗಳನ್ನು ಕೊಠಡಿಗಳಲ್ಲಿ ಅಪ್ರದಕ್ಷಿಣಾ ವಿಧಾನದಿಂದ ನಿಲ್ಲಿಸಿದ್ದು ಇತರ ಇಂಥ ಸಂಸ್ಕೃತಿ ಮತ್ತು ಅವಕ್ಕೆ ಸಂಬಂಧಿಸಿದ ಪ್ರಕಟಿತ ಸಾಹಿತ್ಯದ ಅಧ್ಯಯನದಿಂದ ತಿಳಿಯಬಹುದು.

### ಬೃಹತ್ ಶಿಲಾಗೋರಿಗಳ ಕಾಲಮಾನ

ಖಚಿತವಾದ ಪಂಚಾಂಗ ಸೂಚಿಸಿದ ವರ್ಷದ ದಿನದಲ್ಲಿ ಸೂರ್ಯರಶ್ಮಿ ಒಳಕ್ಕೆ ಪ್ರವೇಶಿಸುವಂತೆ ದೇವಾಲಯಗಳ ಪ್ರವೇಶದ್ವಾರವನ್ನು ಜಗದಗಲಕ್ಕೂ ರಚಿಸಿದ್ದಾರೆ. ಇಂಥ ಪ್ರಸಂಗಗಳಿಗೆ ಸಂಬಂಧಿಸಿದ (ಸೂರ್ಯರಶ್ಮಿ ಪ್ರವೇಶದ ದಿನ) ಈ ಬೃಹತ್ ಶಿಲಾಗೋರಿಗಳ ಕುರಿತು ತಾಂತ್ರಿಕ ಅಧ್ಯಯನ ಆಗಬೇಕು. ಯಾವ ದಿನ ಸೂರ್ಯೋದಯ ಇವುಗಳ ಕಿಂಡಿಗಳಲ್ಲಿ ಪ್ರಕಾಶ ಬೀಳುವಂತೆ ಆಗುತ್ತವೆಂದು ತಿಳಿಯಬೇಕು. ಈಗ ಗುರುತಿಸಲಾದ ಬೃಹತ್ ಶಿಲಾಗೋರಿಗಳ ಕಾಲಮಾನದ ವಿಶಾಲ ವ್ಯಾಪ್ತಿಯನ್ನು ಗಮನಿಸಿ, ತಾರೀಕುಗಳನ್ನು ಖಚಿತವಾಗಿ ಗೊತ್ತುಪಡಿಸಲು ಈ ಪದ್ಧತಿ ಸಹಾಯಕವಾಗಬಹುದು.

ಮತ್ತು ಇದು ಒಂದು ನವೀನ ಮತ್ತು ಸ್ವಾರಸ್ಯಕರ ವಿಧಾನವೂ ಕಾಲಮಾನದ ನಿರ್ಧಾರಕ್ಕೆ ನೆರವಾಗಬಹುದು. ಪೂರ್ವಕ್ಕೆ ಬಾಗಿಲಿರದ ಕಿಂಡಿಕೊಠಡಿಗಳ ಅಧ್ಯಯನ ಮತ್ತು ಅವುಗಳಿಗೆ ಸಂಬಂಧಿಸಿದ ಜನರ ವಿಶಿಷ್ಟ ಧಾರ್ಮಿಕ ವಿಧಿ, ನಂಬಿಕೆಗಳ ಅಧ್ಯಯನಕ್ಕೂ ಇದು ನೆರವಾಗಿ ಬೃಹತ್ ಶಿಲಾ ಸಂಸ್ಕೃತಿಯ ಪಂಚಾಂಗ ಕೂಡ ಸಿದ್ಧವಾಗ ಬಹುದು.

## ಆಧಾರ


1. Dr. A. Sundara 1975 : *The Early Chamber Tombs of South India, University Publishers, New Delhi.*
2. Prof. M. Sheshadri, 1960 : *Report on the Jadigenahally Megalithic Excavations for the year 1957* (Dept. of Archaeology, Mysore)
3. Dr. H. S. Gopal Rao's personal comments on his visit to Kannur.
4. Dr. B. K. Gururaja Rao, 1972 . *Megalithic Culture in South India,* Prasaranga, Mysore, University. Mysore-570 006

ಶರಣಬಸಪ್ಪ. ಪಿ. (ಕೋಲ್ಕಾರ)*

# ಕನಕಗಿರಿಯ ನಾಲ್ಕು ಲೌಕಿಕ ಶಿಲ್ಪ ಪಟ್ಟಿಕೆಗಳು : ಒಂದು ವಿವೇಚನೆ

ಕನಕಗಿರಿ ರಾಯಚೂರ ಜಿಲ್ಲೆಯ ಗಂಗಾವತಿ ತಾಲೂಕಿನ ಒಂದು ದೊಡ್ಡ ಗ್ರಾಮ. ಇಲ್ಲಿ ೧೫-೧೮ ನೇ ಶತಮಾನಗಳ ಅವಧಿಯಲ್ಲಿ ಗುಜ್ಜಲ ವಂಶದ ನಾಯಕರು ತಮ್ಮ ಪಾಳೆಯಗಾರಿಕೆ ನಡೆಸಿದ್ದಾರೆ. ಇವರು ತಮ್ಮ ಆಳ್ವಿಕೆಯ ಕಾಲದಲ್ಲಿ ರಾಜಧಾನಿ ಕನಕಗಿರಿಯಲ್ಲಿ ಅನೇಕ ದೇವಾಲಯ, ಮಂಟಪ, ಬಾವಿ, ಪುಷ್ಕರಣಿ ಕೋಟೆ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ನಾಯಕರ ಕಾಲದ ಮೂರ್ತಿಶಿಲ್ಪಗಳಲ್ಲಿ ನಾಯಕರಿಗೆ ಸಂಬಂಧಿಸಿದ ಘಟನೆಗಳನ್ನು ಒಳಗೊಂಡಿರುವ ಕೆಲವು ಲೌಕಿಕ ಶಿಲ್ಪಪಟ್ಟಿಕೆಗಳು ವಿಶಿಷ್ಟವಾಗಿವೆ. ಈ ಶಿಲ್ಪಪಟ್ಟಿಕೆಗಳು ಬಿಂಬಿಸುವ ಸನ್ನಿವೇಶ ಅಥವಾ ಸಂದರ್ಭಗಳ ನಿರೂಪಣಾ ಪ್ರಯತ್ನವೇ ಈ ಲೇಖನದ ಉದ್ದೇಶ.

ಕನಕಗಿರಿಯಲ್ಲಿ ಒಟ್ಟು ನಾಲ್ಕು ಲೌಕಿಕ ಶಿಲ್ಪ ಪಟ್ಟಿಕೆಗಳು ಕಂಡುಬರುತ್ತವೆ ಅವುಗಳ ವಿವೇಚನೆ ಇಂತಿದೆ.

ಶಿಲ್ಪಪಟ್ಟಿಕೆ ಒಂದು : ಕಪ್ಪು ಶಿಲೆಯ ಈ ಶಿಲ್ಪಪಟ್ಟಿಕೆಯು ಕನಕಾಚಲಪತಿ ದೇವಾಲಯದ ಮುಂದಿದೆ. ಇದರ ಎತ್ತರ ೮೭ ಸೆಂ.ಮೀ. ಅಗಲ ೧.೬೧ ಮೀ. ಅಳತೆಯುಳ್ಳದ್ದಾಗಿದೆ. ಫಲಕದಲ್ಲಿ ವೃದ್ಧ ಸ್ತ್ರೀಯೊಬ್ಬಳು ಪೀಠದ ಮೇಲೆ ಆಸೀನಳಾಗಿದ್ದಾಳೆ. ಅವಳ ಇಕ್ಕೆಲಗಳಲ್ಲಿ ಇರುವ ಇಬ್ಬರು ದಾಸಿಯರಲ್ಲಿ ಒಬ್ಬಳು ಚಾಮರಧಾರಿಣಿ, ಪೀಠದ ಮುಂದೆ ಅಶ್ವಾರೋಹಿಯೊಬ್ಬ ಇದ್ದು ಬಲಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ಕುದುರೆಯ ಹಿಂದೆ ಛತ್ರ ಹಿಡಿದ ಸೇವಕ, ಮುಂದೆ ಖಡ್ಗ ಹಿಡಿದು ನಿಂತ ಸೇವಕರ ಶಿಲ್ಪಗಳಿವೆ. ಕುದುರೆಯ ಇನ್ನೊಂದು ಮಗ್ಗುಲಿನಲ್ಲಿ ಇರುವ ವ್ಯಕ್ತಿ ಪತಾಕೆಯನ್ನು ಹಿಡಿದಿದ್ದಾನೆ.

ಹೀಗೆ ಈ ಶಿಲ್ಪಫಲಕದಲ್ಲಿಯ ವ್ಯಕ್ತಿಗಳ ಕ್ರಿಯೆಯಿಂದ ಇಲ್ಲಿಯ ಘಟನೆಯನ್ನು ಹೀಗೆ ನಿರ್ಧರಿಸಬಹುದು ! 'ಅಶ್ವಾರೂಢನಾಗಿ ಯುದ್ಧಕ್ಕೆ ಹೊರಟ ಅರಸನು ರಾಜಮಾತೆಯ ದರ್ಶನಕ್ಕೆ ಬಂದಂತೆ ತೋರುತ್ತದೆ'. ಪೀಠದ ಮೇಲೆ ಕುಳಿತ ಸ್ತ್ರೀಯನ್ನು ರಾಜಮಾತೆ ಎಂದು ಗುರುತಿಸಲು ಮುಖ್ಯ ಕಾರಣ ವೃದ್ಧೆಯ ಲಕ್ಷಣಗಳಿರುವುದು ಮತ್ತು ತಲೆಗೆ ವೃತ್ತಾಕಾರದ ಮುಂಡಾಸನ್ನು ಸುತ್ತಿರುವುದು. ಕನಕಾಚಲಪತಿಯ ಮುಂದಿನ ಮಂಟಪದಲ್ಲಿರುವ ನಾಯಕರ ಪ್ರತಿಮೆಗಳ ಸಾಲಿನಲ್ಲಿ ಇರುವ ದೊರೆಸಾನಿಯ ತಲೆಯ ಮೇಲೆ ಕೂಡ ಇಂತಹ ಮುಂಡಾಸು ಇದೆ. ಆದರೆ ಅದೇ ಸಾಲಿನಲ್ಲಿರುವ ರಾಣಿಯ ತಲೆಯ ಮೇಲೆ ಮುಂಡಾಸು ಇಲ್ಲ. ಹೀಗಾಗಿ ಪೀಠದ ಮೇಲೆ ಕುಳಿತ ಸ್ತ್ರೀಯನ್ನು ದೊರೆಸಾನಿ ಅಥವಾ ರಾಜಮಾತೆಯೆಂದು ನಿರ್ಧರಿಸಬಹುದು. ಇನ್ನು ಅಶ್ವಾರೋಹಿಯು ಅರಸನಾಗಿದ್ದಾನೆ. ಅವನ ಉಡುಪು ಮೇಲೆ ಸೂಚಿಸಿದ ನಾಯಕರ ಪ್ರತಿಮೆಯ ಉಡುಪಿನಂತಿದೆ ಮತ್ತು ಅವನ ಹಿಂದೆ ಮುಂದೆ ಛತ್ರದಾರರು, ಸೇವಕರಿರುವುದರಿಂದ ಈ ಅಶ್ವಧಾರಿ, ಅರಸನೇ ಇರಬೇಕು. ಕುದುರೆಯ ಸನ್ನದ್ಧತೆ ಹಾಗೂ ಇತರ ವ್ಯಕ್ತಿಗಳ ಚಟುವಟಿಕೆಗಳಿಂದ ಅರಸನು ತನ್ನ ತಾಯಿಯಿಂದ ಯುದ್ಧಕ್ಕೆ ಹೋಗಲು ಅನುಮತಿಯನ್ನು ಪಡೆಯುತ್ತಿರುವಂತಿದೆ.

* ಇತಿಹಾಸ ಉಪನ್ಯಾಸಕರು, ಶ್ರೀ ಕಲ್ಮಠ ಚೆನ್ನಬಸವಸ್ವಾಮಿ ಮಹಿಳಾ ಮಹಾವಿದ್ಯಾಲಯ, ಗಂಗಾವತಿ, ರಾಯಚೂರು ಜಿಲ್ಲೆ.

ಶಿಲ್ಪಪಟ್ಟಿಕೆ ಎರಡು : ಗಂಗಾವತಿ ರಸ್ತೆಯ ಎಡ ಬದಿಯ ಗ್ರಾನೈಟ್ ಗುಂಡೊಂದರಲ್ಲಿ ಈ ಶಿಲ್ಪ ಕೆತ್ತನೆ ಇದೆ. ಈ ಶಿಲ್ಪದ ಕೆತ್ತನೆ ಭಾಗ ೬೦ ಸೆಂ.ಮೀ. ಎತ್ತರ ಮತ್ತು ೩.೯ ಮೀಟರ್ ಅಗಲವಾಗಿದೆ. ಈ ಶಿಲ್ಪ ಫಲಕದಲ್ಲಿಯ ಶಿಲ್ಪಗಳ ಕ್ರಮ ವಿವರ ಹೀಗಿದೆ. ಮೊದಲಿಗೆ ದೀವಟಿಗೆ ಹಿಡಿದ ವ್ಯಕ್ತಿ, ಖಡ್ಗ ಹಿಡಿದ ಅಶ್ವ ಸವಾರ, ಇಬ್ಬರು ಛತ್ರಧಾರರು, ಕೈಗಳನ್ನು ಅಂಜಲಿ ಮುದ್ರೆಯಲ್ಲಿ ಹಿಡಿದು ನಿಂತ ಇಬ್ಬರು ಸ್ತ್ರೀಯರು ನಂತರ ಈಟಿಯನ್ನು ಹಿಡಿದ ಭಟ, ಪುನಃ ಖಡ್ಗಧಾರಿ ಅಶ್ವಸವಾರ, ಛತ್ರ ಹಿಡಿದ ವ್ಯಕ್ತಿ ನಂತರ ಹುಲಿಯೊಡನೆ ಹೋರಾಡುತ್ತಿರುವ ವ್ಯಕ್ತಿ ಹಾಗೂ ಈಟಿ ಹಿಡಿದ ವ್ಯಕ್ತಿ ಈ ರೀತಿ ಒಟ್ಟು ದೃಶ್ಯವಿದೆ. ಒಟ್ಟಾರೆ ಇದನ್ನು 'ರಾಜ ಪರಿವಾರದ ಪ್ರಯಾಣ'ದ ದೃಶ್ಯವೆಂದು ಹೇಳಬಹುದು. ಮಧ್ಯದಲ್ಲಿ ಇರುವ ಇಬ್ಬರು ಸ್ತ್ರೀಯರು ರಾಣಿಯರಿದ್ದು, ಈ ಇಬ್ಬರಿಗೂ ಛತ್ರ ಹಿಡಿಯುವ ಸೇವಕರಿದ್ದಾರೆ. ಇವರಲ್ಲಿ ಒಬ್ಬನು ಮಾತ್ರ ಛತ್ರವನ್ನು ಹಿಡಿದಿದ್ದರೆ ಇನ್ನೊಬ್ಬ ಅದನ್ನು ಮಡಚಿ ಕಂಕುಳಲ್ಲಿ ಇಟ್ಟುಕೊಂಡಂತಿದೆ. ರಾಣಿಯರ ಮುಂದೆ ಇರುವ ಅಶ್ವಸವಾರ ರಕ್ಷಣಾ ಪಡೆಯವನಿರಬೇಕು. ರಾಣಿಯರ ನಂತರದ ಅಶ್ವಸವಾರನಿಗೆ ಕುದುರೆಯ ಮುಂದೆ ಅದನ್ನು ಹಿಡಿದು ಹೊರಟ ಸೇವಕ ಹಿಂದೆ ಛತ್ರ ಹಿಡಿದ ಇನ್ನೊಬ್ಬ ಸೇವಕ ಇರುವುದರಿಂದ ಅಶ್ವಸವಾರ ಅರಸನೇ ಎನ್ನಬಹುದು. ಎಲ್ಲ ಶಿಲ್ಪಕ್ಕೂ ಮುಂದೆ ದೀವಟಿಗೆ (ಪಂಜು) ಯನ್ನು ಹಿಡಿದ ವ್ಯಕ್ತಿ ಇರುವುದರಿಂದ ಇದೊಂದು ರಾತ್ರಿಯ ದೃಶ್ಯವೆಂದು ಹೇಳಬಹುದು. ಆದರೆ ಆರಸನ ನಂತರದ ದೃಶ್ಯ ಈ ಸಂದರ್ಭಕ್ಕೆ ಹೊಂದಲಾರದು ಇಲ್ಲಿ ಹುಲಿಯೊಂದಿಗೆ ಹೋರಾಡುತ್ತಿರುವ ವ್ಯಕ್ತಿ ಮತ್ತು ಈಟಿ ಹಿಡಿದ ಭಟರಿರುವುದರಿಂದ ಬಹುಶಃ ರಾತ್ರಿಯ ಈ ಪ್ರಯಾಣದ ಸಂದರ್ಭದಲ್ಲಿ ಬಂದಿರಬಹುದಾದ ಹುಲಿಯನ್ನು ಹಿಂದಿರುವ ಕಾವಲು ಪಡೆಯವರು ಸಂಹರಿಸುತ್ತಿರಬೇಕು.

ಶಿಲ್ಪಪಟ್ಟಿಕೆ ಮೂರು : ಗ್ರಾನೈಟ್ ಶಿಲೆಯ ಈ ಶಿಲ್ಪ ಫಲಕವು ಹಿರೇನಾಯಕನ ದೇವಾಲಯದಲ್ಲಿದೆ. ಇದರ ಎತ್ತರ ೭೧ ಸೆಂ.ಮೀ., ಅಗಲ ೧.೨ ಮೀಟರ್ ಇದೆ. ಈ ಫಲಕದಲ್ಲಿಯ ದೃಶ್ಯ ಇಂತಿದೆ : ನಾಲ್ಕು ಜನ ಮೇನೆಯನ್ನು ಹೊತ್ತು ಹೊರಟಿದ್ದಾರೆ. ಮೇನೆಯಲ್ಲಿ ಒಬ್ಬ ವ್ಯಕ್ತಿ ಕುಳಿತಿದ್ದಾನೆ. ಮೇನೆಯ ಮುಂದೆ ಅಲಂಕೃತ ಅಶ್ವವನ್ನು ವ್ಯಕ್ತಿಯೊಬ್ಬ ಹಿಡಿದು ಹೊರಟಿದ್ದಾನೆ. ಮೇನೆಯ ಕೆಳಗೆ ಮೂರು ಜನರ ಚಿಕ್ಕ ಆಕೃತಿಗಳಿವೆ ಇವರ ಕೈಗಳಲ್ಲಿ ಕ್ರಮವಾಗಿ ಪತಾಕೆ, ಛತ್ರ ತ್ರಿನಾಮ ಶಂಖ ಚಕ್ರಗಳಿರುವ ಫಲಕ ಇವೆ.

ಇದೊಂದು 'ಮೇನೆಯಲ್ಲಿ ಹೊರಟ ಯತಿ'ಯ ದೃಶ್ಯ ಶಿಲ್ಪವೆಂದು ಹೇಳಬಹುದು. ಏಕೆಂದರೆ ಮೇನೆಯಲ್ಲಿ ಕುಳಿತ ವ್ಯಕ್ತಿಯ ವೇಷ ಭೂಷಣಗಳು ಅವನನ್ನು ಅರಸನೆಂದು ಸೂಚಿಸಲಾರವು. (ಇಲ್ಲಿರುವ ಇತರ ನಾಯಕರ ಪ್ರತಿಮೆಗಳ ವೇಷ ಭೂಷಣಗಳನ್ನು ಗಮನಿಸಿ) ಬಲ ಕೈಯಲ್ಲಿ ಗಂಟೆಯಾಕಾರದ ಒಂದು ವಸ್ತು ಇದೆ. ತಲೆಯ ಮೇಲೆ ಒಂದು ವಿಧವಾದ ಪೇಟವಿದ್ದು, ಅದರಲ್ಲಿ ಅಡ್ಡ, ಉದ್ದ ಗೆರೆಗಳಿವೆ ಮತ್ತು ಬಲಭಾಗದಲ್ಲಿ ಗರಿಯನ್ನು ಸಿಕ್ಕಿಸಲಾಗಿದೆ. ಹೀಗಾಗಿ ಇವನೊಬ್ಬ ಯತಿ ಎಂದು ಹೇಳಬಹುದು. ಸ್ಥಳೀಯ ಕನಕಾಚಲಪತಿ ದೇವಾಲಯದ ರಂಗಮಂಟಪದಲ್ಲಿ ಮೇಲ್ಗಡೆ ಇರುವ ಗಾರೆ ಶಿಲ್ಪಗಳಲ್ಲಿ ಒಂದು ದೃಶ್ಯ ನಾಯಕನು ಒಬ್ಬ ಯತಿಗಳನ್ನು ಸತ್ಕರಿಸುವ ದೃಶ್ಯವಿದೆ. ಈ ಯತಿಗಳನ್ನು ಕನಕಗಿರಿಯಲ್ಲೆ ತಮ್ಮ ಕೊನೆ ಕಾಲ ಕಳೆದ ಚಿದಾನಂದ ಅವಧೂತರೆಂದು ಸ್ಥಳೀಯರ ಹೇಳಿಕೆ. ಇಲ್ಲಿರುವ ಅವಧೂತರ ಗಾರೆ ಶಿಲ್ಪದಂತೆ ಮೇನೆಯಲ್ಲಿರುವ ವ್ಯಕ್ತಿಯ ಶಿಲ್ಪವಿದೆ. ಇನ್ನು ಸ್ಥಳೀಯ ಹೇಳಿಕೆಯಂತೆ ಕನಕಗಿರಿಗೆ ಸಮೀಪವಿರುವ ಅಂಬಾಮಠದಲ್ಲಿದ್ದ ಚಿದಾನಂದಪಧೂತರನ್ನು ಕನಕಗಿರಿಗೆ ಸಕಲ ರಾಜ ಮರ್ಯಾದೆಗಳೊಂದಿಗೆ ಮೇನೆಯಲ್ಲಿ ಕರೆದುಕೊಂಡು ಬರಲಾಯಿತು ಎಂದು ಇದೆ. ಈ ಎಲ್ಲಾ ಸಂಗತಿಗಳನ್ನು ಗಮನದಲ್ಲಿರಿಸಿ ಪ್ರಸ್ತುತ ಶಿಲ್ಪವು ಯತಿಯೊಬ್ಬರ ಮೆರವಣಿಗೆಗೆ ಸಂಬಂಧಿಸಿದ್ದು ಎನ್ನಬಹುದು.

ಶಿಲ್ಪಪಟ್ಟಿಕೆ ನಾಲ್ಕು : ಈ ಶಿಲ್ಪ ಪಟ್ಟಿಕೆಯು ಕೂಡ ಹಿರೇನಾಯಕನ ದೇವಾಲಯದಲ್ಲಿದೆ. ಇದು ೭೧ ಸೆಂ.ಮೀ. ಎತ್ತರ, ೧.೬೨. ಮೀಅಗಲವಾಗಿದೆ.ಈ ಫಲಕದಲ್ಲಿಯ ಶಿಲ್ಪಿ ವಿವರ ಇಂತಿದೆ. ಖಡ್ಗ ಮತ್ತು ಗುರಾಣಿಯನ್ನು ಹಿಡಿದ ವ್ಯಕ್ತಿ, ನಂತರ ಖಡ್ಗ ಮತ್ತು ಕೋವಿಯನ್ನು ಹಿಡಿದ ವ್ಯಕ್ತಿ, ಮೂರನೇಯದಾಗಿ ಎರಡನೇಯ ವ್ಯಕ್ತಿಯ ಬಲಗಾಲಿನ ಹತ್ತಿರ ವ್ಯಕ್ತಿಯ

ಚಿಕ್ಕ ಆಕೃತಿ ಇದ್ದು, ಕೈಯಲ್ಲಿ ಛತ್ರ ಇದೆ. ಇವನ ನಂತರ ಈಟಿ ಹಿಡಿದ ಹಾಗೂ ಬಿಲ್ಲು ಹಿಡಿದ ಇಬ್ಬರ ಶಿಲ್ಪಗಳಿವೆ. ಇಲ್ಲಿ ಖಡ್ಗ ಮತ್ತು ಕೋವಿಯನ್ನು ಹಿಡಿದ ವ್ಯಕ್ತಿಗೆ ಛತ್ರ ಹಿಡಿದ ಸೇವಕನಿರುವುದರಿಂದ ಅವನು ರಾಜನಿರಬೇಕು. ಉಳಿದವರೆಲ್ಲ ಭಟರಿರಬೇಕು. ಒಟ್ಟಿನಲ್ಲಿ ಇದೊಂದು ರಾಜ ಬೇಟೆಗೆ ಹೊರಟ ದೃಶ್ಯ ಎಂದು ಹೇಳಬಹುದು.

ಜೊತೆಗೆ ಈ ಎಲ್ಲಾ ಶಿಲ್ಪಗಳಿಂದ ಸಮಕಾಲೀನ ವೇಷ–ಭೂಷಣಗಳನ್ನು ತಿಳಿಯಬಹುದು ಮತ್ತು ಇವು ನಾಯಕರ ಕಾಲದ ಒಂದೊಂದು ಘಟನೆಯನ್ನು ಬಿಂಬಿಸುತ್ತವೆ.

(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನಗೈದ ನನ್ನ ಗುರುಗಳಾದ ಡಾ॥ ಅ. ಸುಂದರ ಅವರಿಗೆ ನನ್ನ ಕೃತಜ್ಞತೆಗಳು)

ಪ್ರೊ॥ ಕ. ನೆಂ. ರಾಜಗೋಪಾಲ*

# 'ಬಾದಾಮಿಯ ಗುಹೆಗಳು - ಒಂದು ಟಿಪ್ಪಣಿ'

ಬಾದಾಮಿಯ ಗುಹೆಗಳನ್ನು ಪುನರ್ಪರಿಶೀಲನೆಗೆ ಒಡ್ಡುವಲ್ಲಿ ಈ ವಿವರ ಸಹಿತ ಒಕ್ಕಣೆಯನ್ನು ಸಿದ್ಧಪಡಿಸುತ್ತಿದ್ದೇನೆ. ಏಕೆಂದರೆ ಐತಿಹಾಸಿಕ ನೆಲೆಯಲ್ಲಿ ಈವರೆಗೂ ವಿದ್ವಾಂಸರು ಪರಿಗಣಿಸುತ್ತಿರುವ ರೀತಿ ನೀತಿಯಲ್ಲಿ ಗೊಂದಲವುಂಟಾಗಿರುತ್ತದೆ. ಚಾಲುಕ್ಯ ಮತ್ತು ಪೊಲಕೇಶಿ ೧ ಮತ್ತು ೨ ಇಂಥ ಪಾರಿಭಾಷಿಕಗಳಿಗೆ ಸ್ಪಷ್ಟವಾದ ಅರ್ಥವಂತಿಕೆಯು ಅವಶ್ಯವಾಗಿರುವುದರಿಂದ ಈ ಗುಹೆಗಳ ಸ್ವರೂಪ ಮತ್ತು ಇದಕ್ಕೆ ಕಾರಣರಾಗಿರುವಂಥ ವರ್ಗದ ಪರಿಶೀಲನೆಯಿಂದ ಒಂದು ನೆಲೆಯನ್ನು ಮುಟ್ಟಲು ಸಾಧ್ಯವಾದೀತೆಂಬ ನಂಬಿಕೆಯಾಗಿದೆ. (ಇದಕ್ಕಾಗಿ ನಾನು ಹಲವು ಬಾರಿ ಈ ಗುಹೆಗಳನ್ನು ಕಂಡು ಪರಿಶೀಲಿಸಿದ್ದೇನೆ ಮತ್ತು ಒಂದು ನಿರ್ಧಾರದ ನೆಲೆಯನ್ನು ಮುಟ್ಟಿದ್ದೇನೆ. ಈ ನೆಲೆಯನ್ನೇ ನಮ್ಮ ಘನ ವಿದ್ವಾಂಸರು ಪರಿಶೀಲಿಸಬೇಕಾಗಿ ಕೋರುತ್ತೇನೆ).

೧. ಒಟ್ಟು ಐದು ಗುಹೆಗಳು ನಮ್ಮ ಗಮನಕ್ಕೆ ಬೀಳುತ್ತವೆ. ಕೊನೆಯದು ಜೈನ ಗುಹೆ ನಿವಾಸಿಕರಿಲ್ಲದಿದ್ದರೂ 'ಬಾಹುಬಲಿ'ಯ ಅತ್ಯಂತ ಐತಿಹಾಸಿಕವೆನ್ನಬಹುದಾದ ಪ್ರತಿಮೆಯಿರುವುದೇ ಇದರ ವಿಶೇಷ. ಈ ಗುಹೆಯು ಅಂಗುಲಂಗುಲದಲ್ಲೂ ಜೈನ ಧರ್ಮದ ಸಂಕೇತಗಳಾಗಿ ಉಬ್ಬು ಕೆತ್ತನೆ ಪ್ರತಿಮೆಗಳಿವೆ. ಒಂದೆರಡು ಶತಮಾನಗಳ ಕಾಲವಾದರೂ ಇಂತಹ ಸಿದ್ಧತೆಗೆ ಆಧಾರವಾಗಿರಬಹುದು. ಆದರೆ ಜೈನಮುನಿ ಯಾರು ? ಎಂದರೆ ತಿಳಿಯುವುದಿಲ್ಲ. ಅಲ್ಲದೆ ಬಾದಾಮಿ-ಐಹೊಳೆ-ಪಟ್ಟದಕಲ್ಲು-, ಈ ಸ್ಥಳಗಳ ಪರಿಸರದಲ್ಲಿ ಏಳುನೂರರವರೆಗೂ ಆಧಾರ ಶಾಸನಗಳು ದೊರಕಿದಂತಿಲ್ಲ. ಎರಡನೇ ಪೊಲಕೇಶಿಯ ಐಹೊಳೆ ಶಾಸನವು ಒಂದೇ ಒಂದು ದಾಖಲೆಯಾಗಿರುತ್ತದೆಯಷ್ಟೆ.

ರವಿಕೀರ್ತಿಯು ಕಟ್ಟಿಸಿದ ಜಿನೇಂದ್ರಾಲಯವು ಐಹೊಳೆಯಲ್ಲೇ ಇರಲು ಸಾಧ್ಯ. ಆದುದರಿಂದ ಬಾದಾಮಿಯ ಜಿನಾಲಯದ ವಿಷಯವು ಸ್ಪಷ್ಟವಾಗುವುದಿಲ್ಲ. ಆದರೂ ಇಲ್ಲಿಯ ಪ್ರತಿಮೆಗಳು ದಟ್ಟವಾಗಿರುವುದರಿಂದ ರವಿಕೀರ್ತಿಯ ಕಾಣಿಕೆಯು ಇದಕ್ಕೂ ಸೇರಿರಬಹುದು. ಒಟ್ಟಿನಲ್ಲಿ ಜೈನ ಶಿಲ್ಪಗಳು ಒಂದು ಪ್ರತ್ಯೇಕ ಮಾದರಿಯಾಗಿ ಉಳಿದುಬಿಡುತ್ತವೆ ಮತ್ತು ಇಲ್ಲಿಯವು ನಗ್ನ ಉಬ್ಬು ಪ್ರತಿಮೆಗಳಾದರೂ 'ಶಾಂತ' ಸ್ವಭಾವನೆಗೆ ಸೇರುವಂಥವೇ ಆಗಿವೆ.

೨. ಉಳಿದ ಮೂರು ಗುಹೆಗಳನ್ನು ಗಮನಿಸಿದಲ್ಲಿ ಅವುಗಳ ಆಯಃತಗಳು (Foundation Structure) ಮತ್ತು ತಟಾಕದ ಪಕ್ಕದಲ್ಲಿ ಅದಕ್ಕೆ ಅಭಿಮುಖವಾಗಿ ಏರುತ್ತಾ ಏರುತ್ತಾ ಮೆಟ್ಟಿಲುಗಳ ಆಧಾರದಿಂದ ಸಮೀಪಿಸಲು ಅನುಕೂಲವಾಗುವಂತೆ ರಚಿತವಾಗಿರುವುದೂ ಅಲ್ಲದೆ ಮೂರನೆಯ ಪ್ರಸಿದ್ಧ ಗುಹಾಲಯವು ಸುರಕ್ಷಿತವಾಗಿರುವಂತೆ ಇರುವುದನ್ನೂ ಗಮನಿಸಿದಲ್ಲಿ ಎಲ್ಲೋರ ಮತ್ತು ಅಜಂತಾಗಳ 'ಗುಹಾಲಯ'ಗಳನ್ನು ನೆನಪಿಗೆ ತರುತ್ತವೆ.

---

* ನಿವೃತ್ತ ಪ್ರಾಧ್ಯಾಪಕರು, ಎಂ.ಐ.ಜಿ. ೬೧, ೮೦ ಅಡಿ ರಸ್ತೆ, ಕೆಂಗೇರಿ ಉಪನಗರ, ೨ನೇ ಹಂತ, ಬೆಂಗಳೂರು-೫೬೦೦೫೬

ಎರಡು ಮತ್ತು ಮೂರನೆಯ ಗುಹೆಗಳ ಮಧ್ಯೆ ಕೊಂಚ ಹಿಂದಕ್ಕೆ ರಚಿತವಾಗಿರದ ಒಂದು ಗುಹೆಯು ಗಮನ ಸೆಳೆಯುತ್ತದೆ, ಇದನ್ನು 'ಬೌದ್ಧ ಗುಹೆ'ಯೆಂದು ಡಾ. ರಾ. ಗೋಪಾಲ್ ಅವರು ಗುರುತಿಸಿದ್ದಾರೆ. ಇದರ ಬಲಗೋಡೆಯಲ್ಲಿ ಬೋಧಿಸತ್ವನ ಉಬ್ಬು ಚಿತ್ರವನ್ನು ಅರೆಮನಸ್ಸಿನಿಂದ ರಚಿಸಿ ಬಿಟ್ಟಂತಿದೆ. ಆದರೆ ನೇರವಾಗಿ ಎದುರುಗಡೆಯ ಗೋಡೆಯಲ್ಲಿ ಒಂದು ಸಣ್ಣ ಗೂಡಿನಲ್ಲಿ (ಸುಮಾರು ೩" × ೪") ಒಂದು ಪುಟ್ಟ ಗಣಪತಿಯಿದೆ. ಅದಕ್ಕೂ ಮುಂದೆ ಓರೆಕೋರೆಯಾದ ಮೂಲೆಯ ಕಡೆಯ ಬಂಡೆಯಲ್ಲಿ ಕೆಂಪು ಬಣ್ಣದ ಪ್ರಾಗೈತಿಹಾಸಿಕ ರಚನೆಗಳಿವೆ. (ಇವು ಇಂಥವೇ ರೂಪಗಳೆಂದು ಹೇಳಲು ಬರುವುದಿಲ್ಲ). ಆದುದರಿಂದ ಇದೊಂದು ಅಪೂರ್ಣ ಗುಹೆಯೆಂದರೆ ತಪ್ಪಾಗಲಾರದು. ಒಟ್ಟಿನಲ್ಲಿ ಇದರಿಂದ ಚಾಲುಕ್ಯ ಗುಹೆಗಳು ಆಲಯಗಳಾಗುವ ಪೂರ್ವದಲ್ಲಿ (ಬೌದ್ಧ– ತಾತ್ಕಾಲಿಕ ತಂಗುದಾಣವಾಗಿದ್ದಿರಲೂ ಬಹುದು.) ಇಲ್ಲಿಯ ನಾಲ್ಕೈದು ಗುಹೆಗಳು ಪ್ರಾಗೈತಿಹಾಸಿಕ ನೆಲೆಯಾಗಿದ್ದಿರಬಹುದು.

ಇವುಗಳ ಪ್ರಾಗೈತಿಹಾಸಿಕತೆಗೆ ಬೇರೆ ಆಧಾರಗಳೂ ಇವೆ. ೧) ಇಲ್ಲಿಯ ಪರಿಸರವನ್ನು (ಮುಖ್ಯವಾಗಿ ಮಧ್ಯಪ್ರದೇಶದ Deccan traps ನಂತೆ) ಪರಿಶೀಲಿಸಿದಲ್ಲಿ ಈ ಎತ್ತರೆತ್ತರಕ್ಕೆ ಪೇರಿಸಿದಂತಿರುವ ಬಂಡೆಗಳು ಭಿಂಬೇಟ್ಕದ ನೆನಪನ್ನೂ ತರುತ್ತವೆ. ಮಳೆಗಾಲದಲ್ಲಿ ಒಂದು ಅಬ್ಬಿಯು ಈ ಗುಹೆಗಳ ಕಡೆಯಿಂದ ಕೆಳಗಿನ ತಟಾಕಕ್ಕೆ ಬೀಳುವುದನ್ನು ಗಮನಿಸಿದಲ್ಲಿ ಎಲ್ಲೋರದ ನೆನಪಾಗುತ್ತದೆಯಷ್ಟೆ. ೨) ಇಲ್ಲಿಗೆ ಅಂದರೆ ಈ ಗುಹೆಗಳಿಗೆ ಹಿನ್ನೆಲೆಯಾದಂತಿರುವ ಉತ್ತರ ಭಾಗದಲ್ಲಿ ಮಹಾಕೂಟದ ಕಡೆಗೆ ಸರಿದಂತೆ ಬಂಡೆಗಳ ಕಾಡು ಗಮನಕ್ಕೆ ಬರುತ್ತದೆ. ಅದರಲ್ಲೂ ಬಾದಾಮಿಯ ರೈಲು ನಿಲ್ದಾಣದ ಕಡೆಗೆ ೨-೩ ಕಿಲೋಮೀಟರು ಅಂತರದಲ್ಲಿರುವ 'ಸಿಡ್ಲಪಡಿ'ಯು (ಇದನ್ನು ಮೊದಲು ಪ್ರಸಿದ್ಧಿಗೆ ತಂದವರು ಪ್ರೊ॥ ಶೆಟ್ಟರ್-ಕರ್ನಾಟಕ ವಿಶ್ವವಿದ್ಯಾಲಯದ ತಮ್ಮ ವಿದ್ಯಾರ್ಥಿಗಳ ಸಂಗಡ ಅಲೆದು, ಜೊತೆಗೆ ಅಮೆರಿಕದ ಕೆಲವು ವಿದ್ಯಾರ್ಥಿಗಳೂ–ವಿದ್ವಾಂಸರೂ ಆದವರ ಸಂಗಡ ಪರಿಶೀಲಿಸಿ ಬೆಳಕಿಗೆತಂದ ಪ್ರಾಗೈತಿಹಾಸಿಕ ವಿಶೇಷ 'ರಚನೆ'). ಇಲ್ಲಿಯ ಬಣ್ಣದ ಚಿತ್ರಗಳಲ್ಲದೆ ಹೋರಿಗಳ ಕಾಳಗದ ಕೆತ್ತನೆ ('ಇದನ್ನು ಗೀರುಕೆತ್ತನೆ' ಎನ್ನಬಹುದು) ಯನ್ನೂ ಗುರುತಿಸಿದಲ್ಲಿ ಅಲ್ಲದೆ ಹೀಗೆಯೇ ಹಲವಾರು ಸಹಜ ಬಂಡೆಗಳಿಂದ ರಚಿತ ಗುಹೆಗಳಲ್ಲಿ ಇಲ್ಲಿಯ ಬೌದ್ಧ ಗುಹೆಯಲ್ಲಿರುವಂಥ ಕೆಂಪು ಬಣ್ಣದ ರಚನೆಗಳು ತುಂಬಿರುವುದನ್ನೂ ಗಮನಿಸಿದಲ್ಲಿ (ಗೆಳೆಯ ಹಿರೇಮಠ್ ; ಬಾದಾಮಿಯ ಶಾಲಾಧ್ಯಾಪಕರು, ಅಲ್ಲದೆ ೧೯೮೩ರ ವೇಳೆಗೇ ಗುರುತಿಸಿ ಪೊಲಕೇಶಿಯ ಸ್ಮಾರಕ ಶಾಸನವಿರುವ ಗುಹೆಯನ್ನು ಬೆಳಕಿಗೆ ತಂದ ಗೆಳೆಯರಾದ ಶ್ರೀನಿವಾಸಪಾಡಿಗಾರರನ್ನೂ ನೆನೆಯುತ್ತೇನೆ. ಶ್ರೀಯುತರು ನನಗೆ ಸಿಡ್ಲಪಡಿಯನ್ನು ನೋಡಲು ಮಾರ್ಗದರ್ಶಿಯನ್ನು ಕೊಟ್ಟಿದ್ದರು–೧೯೮೩ ರಲ್ಲಿ). ಇಲ್ಲೊಂದು ಪ್ರಾಗೈತಿಹಾಸಿಕ ನೆಲೆಯಿದ್ದಿರಬೇಕೆಂಬುದು ವಿದಿತವಾಗುತ್ತದೆ.

೩. ಇಂತಹ ಪ್ರಾಗೈತಿಹಾಸಿಕ ಚಿತ್ರಗಳನ್ನು ಮರೆಯದೆ ಈ ಗುಹೆಗಳನ್ನು ಪರಿಶೀಲಿಸಬೇಕಾದ ಅಗತ್ಯವಿದೆ.

ಮೊದಲಿಗೆ ಈ ಮೂರು ಗುಹೆಗಳನ್ನು (ವೈಷ್ಣವ ಗುಹೆಗಳೆಂದು ಕರೆಯುವುದು ರೂಢಿ) ಪರಿಶೀಲಿಸಬಹುದು. ಇವು ಬರಿಯ ವೈಷ್ಣವ ಗುಹೆಗಳಲ್ಲ ಶೈವ ಪ್ರತಿಮೆಗಳೂ ತುಂಬಿವೆ. ಪ್ರತಿಯೊಂದರ ಒಳಗಿನ ಕೋಣೆಯಲ್ಲಿ 'ಲಿಂಗ'ವಿದೆ. ಮೊದಲ ಗುಹೆಯಲ್ಲಿ ಹರಿಹರ ಮತ್ತು ಲಕ್ಷ್ಮೀ, ಪಾರ್ವತಿಯರ ಒಂದು ಕೆತ್ತನೆಯಿದೆಯಷ್ಟೆ. ದ್ವಾರಪಾಲಕರಲ್ಲಿ ಗುಹೆಯ ಬಲ ಬದಿಗೆ ತ್ರಿಶೂಲಪಾಣಿಯೂ–ಎಡಗಡೆಯಲ್ಲಿ ಹೊರಚಾಚಿದ ಪಕ್ಕದಲ್ಲಿ ನಟರಾಜನ ಕೆತ್ತನೆಯೂ ಇವೆಯಷ್ಟೆ. ನಟರಾಜನ ಹಿಂದೆ ಒಂದು ವಿಶಿಷ್ಟ ಗೂಡಿನಲ್ಲಿ ಗಣಪತಿಯ ಪ್ರತಿಷ್ಠೆಯಿದೆ. ಆದುದರಿಂದ ಈ ಗುಹೆಗಳು ವೈಷ್ಣವ–ಶೈವ ಗುಹೆಗಳೆಂದು ಕರೆಯಲು ಅವಕಾಶ ಮಾಡಿಕೊಡುತ್ತಿವೆ.

ಆದರೂ ಈ ಮೂರು ಗುಹೆಗಳಲ್ಲಿ ಎರಡು ಬಗೆಯ ಶಿಲ್ಪಗಳು ಅಡಕವಾಗಿವೆ. ಇದರಿಂದಾಗಿ ಇವುಗಳನ್ನು (ಡಾ॥ ವಿ. ರಾಘವನ್ ಹೇಳುವಂತೆ). ಸ್ಮಾರ್ತ ಸಂಪ್ರದಾಯಕ್ಕೆ ಸೇರಿದುವೆಂದು ಹೇಳಬಹುದು.

(ಮಧ್ವರಲ್ಲಿ ಈ ಸ್ಮಾರ್ತ ಸಂಪ್ರದಾಯದವರೂ 'ಸ್ಮಾರ್ತ'ರೆಂಬ ಕಮ್ಮೆ-ಕರ್ನಾಟಕರು ಇದೇ ಸಂಪ್ರದಾಯಕ್ಕೆ ಸೇರಿದವರಿದ್ದಾರೆ) ಇಂತಹ ಹರಿ-ಹರ ಅಭೇದ ಅಥವಾ ಸಮಾನತೆಯ 'ಆಶಯ'ಗಳು ಈ ಗುಹೆಗಳ 'ಉಬ್ಬು ಕೆತ್ತನೆ'ಗಳಾಗಿರುವುದರಿಂದ ಮೇಲು ನೋಟಕ್ಕೆ ಒಂದೆ 'ಬಗೆ'ಯವೆಂದು ತೋರಬಹುದು. (ಇದನ್ನು ಮುಂದೆ ವಿವರಿಸಲಾಗುತ್ತದೆ).

೪. ಬಾದಾಮಿಯ ಶಿಲ್ಪಗಳನ್ನು ಗಮನಿಸುವಲ್ಲಿ ಇವುಗಳ ಉತ್ತರಕ್ಕೆ ಮೂರು ಮೈಲಿಗಳಾಚೆಗೆ ಇರುವ 'ಮಹಾಕೂಟ' ಎಂಬ ಸ್ಥಳವಿದೆ (ಇದರಲ್ಲಿ 'ಹೊಸ ಮಹಾಕೂಟ' ಎಂದು ಈಚಿನವರು ಗುರುತಿಸಿದಂತೆ ಬಳಕೆಯಿದೆ. ಆದರೆ ಹೊಸದು-ಹಳೆಯದು ಎರಡೂ ಒಂದೇ ಎಂಬುದನ್ನು ಬಳಸಬೇಕಾಗಿದೆ.) ಇದೊಂದು ಸದಾ ಜಲ ಸಂಚಾರವಿರುವ ಅಥವಾ ನಿವಾಸ ಯೋಗ್ಯ ವಾದ ಚೌಕಟ್ಟಾಗಿದೆ. (ಇದನ್ನು complex ಅನ್ನಬೇಕಾ ಗುತ್ತದೆ). ಇದರಲ್ಲಿನ ಮಹಾಕೂಟೇಶ್ವರ, ಸಂಗಮೇಶ್ವರ, ಮಲ್ಲಿಕಾರ್ಜುನ ಗುಡಿ ಮತ್ತು ಹೆಸರಿಲ್ಲದ ಕೆಲವು ಸಣ್ಣ ಸಣ್ಣ ದೇಗುಲ ರಚನೆಗಳೂ ಮಂಟಪಗಳೂ ಇವೆ.

ಇಷ್ಟೆಲ್ಲಾ ಅನುಕೂಲ ಸ್ಥಳವನ್ನು ಈ ಪರಿಸರದ ಜನತೆಯು ಉಳಿಸಿಕೊಂಡು ಬಂದಿದೆ. ಇಲ್ಲಿಯ ಮುಖ್ಯ 'ಜನಾಶಯ' (Peoples desire)ವು 'ಸಂತಾನಾಭಿಲಾಷೆ' ಯಾಗಿದೆ. ಈ ಅಭಿಲಾಷೆಗೆ ಇಂದಿಗೂ ಇಲ್ಲಿಯ 'ಪಾಶುಪತ' ಕೆತ್ತನೆಗಳಿಂದ ತುಂಬಿರುವ ವಾತಾವರಣವೇ ಆಗಿದೆ. ಇಲ್ಲಿಯ ಉಬ್ಬು ಕೆತ್ತನೆಗಳಲ್ಲಿ 'ಊರ್ಧ್ವ ರೇತೇಶ್ವರ' ಮತ್ತು 'ಅರ್ಧನಾರೀಶ್ವರ' ಅಲ್ಲದೆ ಒಂದು ವಿಶಿಷ್ಟ ವಿಘ್ನೇಶ್ವರ ಇವುಗಳಲ್ಲದೆ ನೀರಿನಲ್ಲಿದ್ದ ಕಮಲ ಗಂಗವ್ವ ಎಂಬ ಕೆತ್ತನೆ (ಈಗ ಇದರ ಭಗ್ನ ಪ್ರತಿಮೆ ಯನ್ನು ನೆಲದ ಮೇಲೆ ಚಲ್ಲಿದ್ದಾರೆ ಮತ್ತು ಪೂರ್ಣ ವಾದುದನ್ನು ಮ್ಯೂಸಿಯಂನಲ್ಲಿರಿಸಿದ್ದಾರೆ.)

ಇಲ್ಲಿಯ ಕೆತ್ತನೆಗಳು ಶಿವಲಿಂಗಗಳೂ ಸಹಿತ (ಒಂದು 'ವಿರೂಪಾಕ್ಷ'ನ ಗುಡಿಯಿದೆ. ಅದರಲ್ಲಿ ಪೀಠ ಮಾತ್ರವಿದೆ,) ಅದರ ಗೋಡೆಯಲ್ಲಿ ಹೊರಕ್ಕೆ 'ಅರ್ಧನಾರೀಶ್ವರ' ಇದ್ದು ಒಂದು ಉಗ್ರನರಸಿಂಹ ಅಂದರೆ ಹಿರಣ್ಯಕಶ್ಯಪುವಿನ ವಧೆಯ ಕೆತ್ತನೆಯೂ ಇದೆ. ಅಂದರೆ ಈ ವಾತಾವರಣವೂ ಪೂರ್ಣಶೈವವಾಗಿಲ್ಲ 'ಸ್ಮಾರ್ತ' ಸಂಪ್ರದಾಯಕ್ಕೆ ಸೇರಿದ್ದೆಂದು ಹೇಳಬಹುದು.

ಈ 'ಮಹಾಕೂಟ'ಕ್ಕೂ ಬಾದಾಮಿಯ ಗುಹೆ ಗಳಿಗೂ ನೇರವಾದ ಒಂದು 'ಕಲ್ಲುರುಟು'ಗಳ ಹಾದಿ ಯಿದೆ. ಇದು ಬಹು ಹಳೆಯದೆಂದು ಹೇಳಲು 'ಹಾದಿಯೇ' ಆಗಿದೆ. ಇದಕ್ಕೆ ಉರುಟು ಅಥವಾ ಓರೆ ಕೋರೆಯ ದುಂಡುಕಲ್ಲುಗಳನ್ನು ಹೊದಿಸಲಾಗಿದೆ. ಕಲ್ಲು ಗಳು ಮಳೆಯಿಂದಲೋ ಏನೋ ಮನುಷ್ಯರು ತುಳಿದಂತೆ ಸವೆದಿವೆ. ಮಧ್ಯೆ ಮಧ್ಯೆ ಹಾದಿಯ ಕಲ್ಲುಗಳನ್ನು ಕೀಳ ಲಾಗಿದೆ. ಆದರೆ ಇದು ನೇರವಾಗಿ ಬಾದಾಮಿಯ ಉತ್ತರ ಕೋಟೆಯ ಕಡೆಗೆ ಒಂದು-ಎರಡು ಕಲ್ಲು ಕಂಬಗಳು, ೮ ಅಡಿ ಎತ್ತರ ಮತ್ತು ೧ ೧/೨ ಅಡಿ ಅಗಲದ ಚೌಕಟ್ಟು; ಮೇಲೆ ಹಾಸುಗಲ್ಲೂ ಇದೆ. ಇದರ ಕಂಬಗಳಲ್ಲಿ ಕೆತ್ತನೆ ಗಳಿವೆ. ಮೇಲಿನವರಲ್ಲಿ ಮಧ್ಯೆ 'ಗಜಲಕ್ಷ್ಮೀ' ಕೆತ್ತನೆ ಯಿದೆ. ಎಲ್ಲಾ ಕಾಲದಿಂದ ಸವೆದಿವೆ.

ಈ ಹಾದಿಯು ಬಾದಾಮಿಯ ಗುಹೆಗಳಿಗೂ ಮಹಾಕೂಟ ಪ್ರದೇಶಕ್ಕೂ ಸಂಬಂಧವಿರಬೇಕೆಂಬುದನ್ನು ಸೂಚಿಸುತ್ತದೆ. ಮಹಾಕೂಟದ ಹೆಬ್ಬಾಗಿಲೂ ಬಾದಾಮಿಯ ಕಡೆಗೇ ಇದೆಯಷ್ಟೆ. ಮಹಾಕೂಟದ ಪರಿಸರದಲ್ಲಿ ಅಥವಾ ಚೌಕಟ್ಟಿನಲ್ಲಿರುವ ಕೆಲವು ಉಬ್ಬು ಕೆತ್ತನೆಗಳನ್ನು ಗುರುತಿಸಲು ವಿದ್ವಾಂಸರು 'ಲಕುಲೀಶ ಪಾಶುಪತ' ಎಂದು ಕರೆದಿದ್ದಾರೆ. ಆದರೆ ಲಾಕುಲದ ಬದಲು 'ಪರಶು' ಹಿಡಿದ (ಸೊಂಟದಲ್ಲಿ ಕತ್ತಿಯೂ ನೇತಿದೆ) ಊರ್ಧ್ವರೇತೇಶ್ವರ ಎಂಬ ಮತ್ತು ಅರ್ಧ ನಾರೀಶ್ವರ ಎಂಬುದು, ಇವೆರಡೂ (ನಾಲ್ಕೈದು ಜೊತೆ ಗಳಿವೆ) 'ನಗ್ನ' ಕೆತ್ತನೆಗಳು ಜೊತೆಗೆ 'ಕಮಲ ಗಂಗವ್ವ' ಎಂಬುದೂ ಸೇರಿದಲ್ಲಿ ಇದೊಂದು 'ನಗ್ನ' ಪ್ರಾಧಾನ್ಯ 'ಲೋಕ'ವಾಗುತ್ತದೆ. ಈ 'ಫಾಲಸ್' ಕೆತ್ತನೆಗಳನ್ನು ಇಂದಿಗೂ ಆಶ್ಚರ್ಯ-ಭಯಗಳಿಂದ ಪರಿಗಣಿಸಬಹುದು. ಇವು ಪಾಶುಪತ ಸಂಕೇತಗಳೆಂದರೆ ತಪ್ಪಾಗಲಾರದು. ಇದೊಂದು ಅಂದಿನ ಪಾಶುಪತ ನೆಲೆ-ಇಲ್ಲಿನ ನೀರಿನ ಸೌಕರ್ಯ ಮತ್ತು ಗುಡ್ಡ ಬೆಟ್ಟಗಳು ಪರಿಸರ ಮುಖ್ಯ. ಇದಕ್ಕೆ ಸಮೀಪದಲ್ಲಿ ಅಂದರೆ ೧ ೧/೨ ಕಿಲೋಮೀಟರು ಅಂತರದಲ್ಲಿ ಒಂದು ಗುಹಾಲಯ, ಬಾಣಂತಿಯ ಗುಹೆ ಇದೆ. ಇದು ಇಂದಿಗೂ ಮುಖ್ಯ ಆಶಯವಾಗಿರುವಂತಿದೆ.

(ಬಹುರೂಪಿಗಳು ಈ ಅರ್ಧನಾರೀಶ್ವರ ವೇಷವನ್ನೂ ಬಾಣಂತಿಯ ವೇಷವನ್ನೂ ಅಭಿನಯಿಸುತ್ತಾರೆ.) ಇದೇ 'ಬಾದುಬ್ಬೆ'ಯ ಅಥವಾ 'ಬಾದುಬೆ'ಯ ಆಶಯದ ದೇಗುಲ !

ಈ 'ಪಾಶುಪತ' ವಾತಾವರಣಕ್ಕೂ ಬಾದಾಮಿಯ ಗುಹೆಗಳ ಕೆತ್ತನೆಗಳಿಗೂ ನೇರ ಸಂಪರ್ಕವಿದ್ದಿರಬೇಕೆಂಬು ದನ್ನು, ಈ ಮೇಲಿನ ವಿವರಗಳಿಂದ, ಸೂಚಿಸಲಾಗಿದೆ.

೫. ಈಗ 'ಬಾದಾಮಿ'ಯ (ಗ್ರೀಕರಿಗೆ ಇದು 'ಬೊದಿವೋಯ್') ಗುಹೆಗಳ ಕಡೆ ವಿಚಾರ ಮಾಡ ಬಹುದು. ಎರಡು ಮತ್ತು ಮೂರನೆ ಗುಹೆಗಳ ನಡುವೆ ಮೇಲುಗಡೆಗೆ ಹೋಗಲು ಒಂದು ಸುಂದರ (?) ದ್ವಾರ ವಿದೆ. ಇದು ಟಿಪ್ಪುಸುಲ್ತಾನನ ಆಳ್ವಿಕೆಗೂ ಮುಂಚೆ ಕೇವಲ ಬಾಗಿಲಾಗಿ ಗುಹೆಗಳಿಗೆ 'ಪ್ರವೇಶ ದ್ವಾರ'ವಾಗಿ ರಲು ಸಾಕು. ಮಹಾಕೂಟದ ಕಡೆಯಿಂದ ಬಂದಲ್ಲಿ ಕಪ್ಪೆ ಅರಭಟ್ಟನ ಶಾಸನದ ಮುಂದಕ್ಕೆ ಈಗಲೂ ಒಂದು ಬಂಡೆ ಗಳ ನಡುವಿನ ಭಾಗವಿದೆ. ಇದು ಹಳೆಯ 'ದ್ವಾರ'ಗಳಲ್ಲಿ ಪ್ರಮುಖವಾದದ್ದಿರಬೇಕು. ಅಲ್ಲಿಂದ ಏರಿ ಬಂದರೆ ಗುಹೆ ಗಳಿಗೆ ಬರಲು ಮೇಲೆ ಹೇಳಿರುವ ದ್ವಾರ ಪಟ್ಟವು ಕಾಣ ಸಿಗುತ್ತದೆ !....ಈ ಸೂಚನೆಯು ನನಗೆ ಪೂರ್ವಭಾವಿ ಯೆಂದು ಅನ್ನಿಸಿದ್ದುಂಟು. ಆದರೆ ಕ್ರಮೇಣ ವಿಚಾರ ಮಾಡಬೇಕಾಗಿ ಈ ನಿರ್ಧಾರಕ್ಕೆ ಬಂದಿದ್ದೇನೆ.

ಈಗ ಮೊದಲ ಗುಹೆಯ ವಿಶೇಷಗಳಲ್ಲಿ ನಟರಾಜನ ಕೆತ್ತನೆಯಿಂದ ಹಿಂದಕ್ಕೆ ಕೊಂಚ ಕತ್ತಲಲ್ಲಿರುವ ಗೂಡಿನಲ್ಲಿ ಕೆತ್ತಿರುವ ಎರಡು ವಿಗ್ರಹಗಳು ಉಬ್ಬುಶಿಲ್ಪಗಳು ಮತ್ತು ಕೆಳಗಡೆ ಅದೇ ಗೂಡಿನಲ್ಲಿ ತೊಟ್ಟಿಲಾಕಾರದಲ್ಲಿ ಸುತ್ತಲೂ ಕೆತ್ತಿರುವ ಯಕ್ಷರ ಉಬ್ಬು ಶಿಲ್ಪಗಳು– ತೊಟ್ಟಿಲು ಆರೇಳಡಿ ಉದ್ದವೂ ಒಳಕ್ಕೆ ಸು. ಮೂರಡಿ ಅಗಲವೂ ೨ ೧/೨ ಅಡಿಗಳಷ್ಟು ಆಳವೂ ಇದೆ. ಇದರಲ್ಲಿ ಹಣತೆಗಳನ್ನು ಹೊತ್ತಿಸಿಡಬಹುದು. ನೀರು ಅಥವಾ 'ಗಂಧಜಲ' ತುಂಬಬಹುದು. ಅಂದರೆ ಆಚರಣೆಯ ಪೂಜೆಗೆ ಇಲ್ಲಿ ಅವಕಾಶವಿದೆ. 'ಗಂಧ ಜಲ' ಎಂಬುದಕ್ಕೆ ಹಳಗನ್ನಡದಲ್ಲಿ ಯಕ್ಷ–ಕರ್ದಮ, ಕರ್ದಮ=ಕೆಸರು, 'ಯಕ್ಷ' ಅಂದರೆ ಮಾಂತ್ರಿಕತೆಯದು. 'ಗಂಧ' ಎಂಬ ವಿಚಾರವನ್ನು ಡಾ॥ ಡಿ. ಎಲ್. ನರಸಿಂಹಾಚಾರ್ಯರು ನಿರ್ಧರಿಸಿದ್ದಾರೆ.

ಈ ಆಚರಣೆಯ ಗೂಡು ಮುಖ್ಯವಾಗಿ ಗಣಪತಿಗೆ. ಎಂದರೆ ಇದೇ 'ವಾತಾಪಿ'ಯ ಗಣಪತಿ. ನಮ್ಮ ಸಂಗೀತ ದಲ್ಲಿ ಈ ದೇವತೆಯ ಪ್ರಾರ್ಥನೆಯಿದೆ. ಕಳೆದ ಶತಮಾನದ ಕೊನೆಯಲ್ಲಿ ಡಾ॥ ಮುತ್ತುಸ್ವಾಮಿ ದೀಕ್ಷಿತರು ರಚಿಸಿದ್ದು ಪ್ರಸಿದ್ಧ. (ಈತ ದೇವಿ ಔಪಾಸಕರು ಎಂಬುದು ಮುಖ್ಯ. ಅಂಥ ಪರಂಪರೆಗೆ ಯಾವ ಇತಿಹಾಸವಿದೆಯೋ ಸ್ಪಷ್ಟ ವಿಲ್ಲ). ಆದರೆ ಬಾದಾಮಿಯ ಈ ಗುಹೆಯ ಗೂಡಿನಲ್ಲಿ ದೇವಿ (ಚಾಮುಂಡಿ)ಯ ಒಂದು ಉಬ್ಬು ಕೆತ್ತನೆಯಿದೆ. ಅದೂ ಗಣಪತಿಯ 'ಗಣ'ಕ್ಕೆ ಸೇರಿದ್ದಿರಬಹುದು. ಈ ವಾತಾಪಿ ಗಣಪತಿಯ ಕೆತ್ತನೆ, ಎರಡು ಕೈಗಳದ್ದು ಮತ್ತು ಕೆತ್ತನೆಯ Proportion– 'ಪ್ರಮಾಣ'ದಲ್ಲಿ ಬಹು ಸುಂದರವಾದುದು. ಇದೇ ಮೊದಲನೆಯ ಮುಖ್ಯ ಪಾಶುಪತ 'ಕೆತ್ತನೆ'ಯೆಂದರೆ ಆಶ್ಚರ್ಯವೂ ಆದೀತು. ಹೊಕ್ಕುಳಿನವರೆಗೂ ಊರ್ಧ್ವ ಮುಖ ಲಿಂಗವಿದ್ದಿರ ಬೇಕೆಂಬುದಕ್ಕೆ ಗುರುತು ಕಾಣುತ್ತದೆ. ಇದು 'ವಿನಾಯಕ'ನಾಗಿ ಪಾಶುಪತ ಸಂಕೇತ ಪ್ರಧಾನತೆಯಿದ್ದಿರ ಬೇಕೆಂಬುದಕ್ಕೆ ಮೂರನೆಯ ಗುಹೆಯ ಮೇಲುಗಡೆಯಲ್ಲಿ (ಒಳಗೆ) ಒಂದು ಗಣಪತಿ–ಪಾಶುಪತ ಸಂಕೇತವಿರುವುದು, ಇನ್ನೂ ಉಳಿದಿದೆ.

ಅದೇ 'ನಟರಾಜ'ನ ಕೆತ್ತನೆಯಲ್ಲಿ ಇಂಥ ಪಾಶುಪತ ಸಂಕೇತವಿರುವುದಿಲ್ಲ. ಅದನ್ನು ಎದೆಕಟ್ಟಿನಿಂದ ಜೋತುಬಿದ್ದ ಒಂದು ವಸ್ತ್ರದ ಸೆರಗು 'ಈ ಭಾಗ'ವನ್ನು ಮರೆ ಮಾಡಿಕೊಂಡು ಮುಂಡಿಯಿಂದ ಕೆಳಕ್ಕೂ ಜೋತಾಡು ತ್ತದೆ.

ಮೊದಲ ಎರಡು ಗುಹೆಗಳು ಹೋಲಿಕೆಗಳಲ್ಲಿವೆ. ಮೊದಲಿಗೆ 'ಕೊರೆದ'ವಾಗಿರಬಹುದು. ಅಥವಾ ಮಂಗಳೇಶನಿಗೂ ಮುಂಚೆ ರಚಿತವಾದದ್ದಿರಬಹುದು. ಮೂರನೆಯ ಗುಹೆಯನ್ನು 'ವೈಷ್ಣವ ಗುಹೆ' ಎನ್ನುತ್ತಾರೆ. ಇಲ್ಲಿಯ ಶೇಷ ಪೀಠಸ್ಥ ವಿಷ್ಣು, ತ್ರಿವಿಕ್ರಮ ಮತ್ತು ಉಗ್ರನರಸಿಂಹ, ಕೆತ್ತನೆಗಳು ಸುಪ್ರಸಿದ್ಧವಾಗಿವೆ. ಇವು ಗಳನ್ನು ಎಚ್ಚರಿಕೆಯಿಂದ ಪರೀಕ್ಷಿಸಿದಲ್ಲಿ ಪಾಶುಪತ ಸಂಕೇತ ಗಳಿದ್ದವೆಂಬುದೂ ಅರಿವಾಗುತ್ತದೆ.

ಆದರೆ ಒಂದು ಸಮಯದಲ್ಲಿ ಈ 'ಪಾಶುಪತ ಸಂಕೇತ'ವನ್ನು ವ್ಯವಸ್ಥಿತವಾಗಿ ಅಂದರೆ ಮೂಲ ರಚನೆಗೆ

ಮೊದಲ ನೋಟಕ್ಕೆ ಕೊರತೆಯಿಲ್ಲದಂತೆ, ತೆಗೆದುಹಾಕಲಾಗಿದೆ. ಇದು 'ಊಹೆ'ಯಾದರೂ ಈ ಕೆತ್ತನೆಗಳು ಸಹಜ ಆಧಾರಗಳಾಗಿವೆ. ಇದು ಕೇವಲ ತಾರತಮ್ಯದ ಮಾತಲ್ಲ. ಏಕೆಂದರೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲೂ ಮಹಾಕೂಟವೂ ಒಂದು ಪ್ರಮುಖ ಕ್ಷೇತ್ರವಾಗಿದ್ದಿರಬೇಕೆನ್ನಲು ಈ ಕಾಂಪ್ಲೆಕ್ಸಿನ ಲಕುಲೀಶ–ಪಾಶುಪತ ಕೆತ್ತನೆಗಳೂ ಒಂದು ವೀರಭದ್ರನ ವಿಗ್ರಹವೂ ಆಧಾರವಾಗುತ್ತಿವೆ. ಬಾದಾಮಿಯ ಗುಹೆಗಳಲ್ಲಿ (ಮೊದಲ ಮೂರು) ವೈಷ್ಣವ ಕೆತ್ತನೆಗಳಿಗೆಲ್ಲಾ 'ಪಾಶುಪತ' ಸಂಬಂಧವಿದೆ. ಎಂದಾದರೆ ಅದೇ 'ನಟರಾಜ' ಸಮೇತವಾಗಿ ಐಹೊಳೆಯ 'ರಾವಳಫಡಿ' ಕೆತ್ತನೆಗಳಲ್ಲಿ ಈ ಸಂಕೇತವನ್ನು ಕೌಪೀನದಿಂದ ಅಲಂಕರಿಸಲಾಗಿದೆ. 'ಕಮಲಗಂಗವ್ವ'ನ ಕೆತ್ತನೆಯಂತೂ ಪಾಶುಪತ ಸಂಕೇತ ವಿಶೇಷವೆಂಬುದೂ ಅದನ್ನು ಯಾವ ರೀತಿಯಲ್ಲೂ ಮರೆಮಾಚುವುದಕ್ಕೆ ಸಾಧ್ಯವಿಲ್ಲವೆಂಬುದೂ ಮುಖ್ಯ.

೬. ಆದುದರಿಂದ Phallus Worship ನ ಸಂಬಂಧವುಳ್ಳ 'ಪಾಶುಪತ' ಪದ್ಧತಿಯಲ್ಲಿ ವೈಷ್ಣವ ಕೆತ್ತನೆಗಳೆಲ್ಲಾ ಬಾದಾಮಿಯ ಗುಹೆಗಳ ಪ್ರಸಿದ್ಧಿಯನ್ನು ಸಾರುತ್ತಿವೆ. ಉಗ್ರನರಸಿಂಹನ ಪ್ರತಿಮೆಯೂ ಅರ್ಧಪ್ರಾಣಿ ರೂಪದಿಂದ ದಿಗಿಲುಂಟು ಮಾಡಬಲ್ಲುದಾಗಿದೆ. (ಕರ್ನಾಟಕದಲ್ಲಿ ನರಸಿಂಹ ದೇಗುಲಗಳಲ್ಲಿ ಒಂದೆರಡೆಡೆ 'ಸಾಲಿಗ್ರಾಮ' ರೂಪಗಳಿವೆ. ಮಾಧ್ವರು ಅದರಲ್ಲೂ ಸ್ಮಾರ್ತ ಸಂಪ್ರದಾಯದವರು ಶಿವಲಿಂಗಕ್ಕೂ ನಡೆದುಕೊಳ್ಳುತ್ತಾರೆ ಮಕ್ಕಳಿಗೆ ಹೆಸರಿಡುತ್ತಾರೆ. ಲಕ್ಷ್ಮೀದೇವಿಯ ಆರಾಧನೆ ಮಾಡುತ್ತಾರೆ. ಅಂದರೆ ನರಸಿಂಹಾರಾಧನೆ ಇವರಲ್ಲಿ ಹಾಸುಹೊಕ್ಕಾಗಿದೆ.) ಈ ಪ್ರತಿಮೆಗೆ ನಡೆಸಿರಬಹುದಾದ 'ಶಸ್ತ್ರಕ್ರಿಯೆ' ಗಮನಾರ್ಹವಾದುದು.

ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ ಬಾದಾಮಿಯ ಗುಹೆಗಳು 'ಪಾಶುಪತ ಪ್ರಧಾನ ಗುಹೆಗಳು' ಎನ್ನಿಸಿಕೊಳ್ಳುತ್ತವೆ. ಜಯಸಿಂಹನಿಂದ ಹಿಡಿದು ಮಂಗಳೇಶನ ನಂತರವೂ ಪೊಲಕೇಶಿಗೆ 'ಪರಮೇಶ್ವರ' ಬಿರುದು ಬರುವತನಕವೂ 'ಪಾಶುಪತ' ಆಡಳಿತಕ್ಕೆ ಈ ಗುಹೆಗಳು ಕೇಂದ್ರಗಳಾಗಿರಬಹುದು, ಎಂದರೆ ತಪ್ಪಾಗಲಾರದು. ಮಹಾಕೂಟವು ಪಾಶುಪತ ಕೇದ್ರವಾಗಿ ಕಲ್ಯಾಣಿ ಚಾಲುಕ್ಯರ ಆಳ್ವಿಕೆಯಲ್ಲೂ ಪ್ರಧಾನ ಪಾತ್ರ ವಹಿಸಿರಲು ಸಾಕು. ಆದರೆ ಕ್ರಿ.ಶ. ಐದು, ಆರು, ಏಳನೆಯ ಶತಮಾನಗಳಲ್ಲಿ ಬಾದಾಮಿ ಗುಹೆಗಳು ನಮ್ಮ ಚಾಲುಕ್ಯ ಸಾರ್ವಭೌಮ ವಾಸಕ್ಕೆ ಅರಮನೆಗಳಾಗಿ ಇದ್ದಿರಲೂ ಸಾಕು. ಹೀಗೆಂದರೆ ಮುಂದಿನ ವಿಚಾರಕ್ಕೆ ಇದು ಗಟ್ಟಿಯಾದ ತಳಹದಿಯಾಗುತ್ತದೆ.

೭. ಮಹಾಕೂಟದ ಎರಡು ಪ್ರಸಿದ್ಧ ವಿಗ್ರಹಗಳಲ್ಲಿ ೧. ಊರ್ಧ್ವಕೇಶೇಶ್ವರ ಮತ್ತೊಂದು ೨. ಅರ್ಧನಾರೀಶ್ವರ; ಇವೆರಡರ ಹೆಸರೂ ಈಚಿನವಾಗಿವೆ. ಏಕೆಂದರೆ ಇವುಗಳಲ್ಲಿ 'ಶೈವ' ಲಕ್ಷಣಗಳು ಖಚಿತವಾಗಿಲ್ಲ. ಬದಲು Phallus Worship ಸಂಕೇತಗಳು ಖಚಿತವಾಗಿವೆ.

ಈ ಸಂಕೇತಗಳನ್ನು ಪ್ರಾಗೈತಿಹಾಸಿಕ ನೆಲೆಯಿಂದ ಪರಿಶೀಲಿಸಿದರೆ ತಟ್ಟನೆ ಪುರಾತನ ಮಾನವನ Totem Pillar ಗಳಲ್ಲಿ ಇದಕ್ಕಿಂತಲೂ ಕಲಾತ್ಮಕವಾಗಿ (ಅಂದರೆ ಒಂದು ಬಾತುಕೋಳಿಯ ತಲೆಯು ಸೇರಿದಂತೆ ಆದರೆ ಲಿಂಗದ ಸ್ಥಾನದಿಂದ ಊರ್ಧ್ವಮುಖವಾಗಿ) ಕಾಣಿಸಿಕೊಳ್ಳುತ್ತದೆ. ನಮ್ಮ ಮಲಪ್ರಭಾ ಕಣಿವೆಯು ಪ್ರಾಗೈತಿಹಾಸಿಕತೆಯಲ್ಲಿ ಹಳೆಯ ಶಿಲಾಯುಗದ ಲಕ್ಷಣಗಳ ಹೆಗ್ಗುರುತುಗಳೆಲ್ಲಾ (ಶಿಲಾಯುಗದ ಆಯುಧಗಳ ಸಹಿತ) ಸಿಗುತ್ತಿವೆಯೆಂದು ಆರ್. ವಿ. ಜೋಷಿಯವರು Pleistocene Studies in the Malaprabha Basin ಎಂಬ ಗ್ರಂಥದಲ್ಲಿ ವಿಶದಪಡಿಸಿದ್ದಾರೆ. ಆದುದರಿಂದ ಮಹಾಕೂಟದ ಕೇಂದ್ರದಲ್ಲಿ ಮೊದಲು ನೆಲಸಿದ 'ಜನತೆ'ಯು ಶಿಲಾಯುಗದ ಲಕ್ಷಣಗಳಲ್ಲಿ ಒಂದಾದ Phallus Worship ನ್ನು ಆಚರಿಸುತ್ತಿದ್ದವರೆಂದರೆ ತಪ್ಪಾಗಲಾರದು. ಅವರ ಪ್ರತಿನಿಧಿಗಳಾಗಿ ಚಾಲುಕ್ಯ 'ಜಯಸಿಂಹ' ಮೊದಲ ದೊರೆಯಾದಂತಿದೆ.

ಮುಂದಿನದು ಒಂದು ಮಾನವ ನಿರ್ಮಿಸುವ ಇತಿಹಾಸ ಮತ್ತು ಅದರ ಪರಿಣಾಮಗಳು 'ಮಹಾಕೂಟ'ವೂ ಇಂಥ ಪರಿಣಾಮಗಳಿಗೆ ಮೈಗೊಟ್ಟಿರಬೇಕಾದರೂ Phallus Worship ಮತ್ತು ಅದರ ಮೂಲಕ ಸಂತಾನಪೇಕ್ಷೆಗಳ ಆಚರಣೆಗಳಿಗೆ ಪಕ್ಕಾಗಿರಬಹುದಾಗಿದೆ.

೮. ಕೊನೆಯದಾಗಿ ಬಾದಾಮಿಯ ಚಾಲುಕ್ಯ ಗುಹೆಗಳು ಅರಮನೆಗಳು ಎಂದರೆ ತಪ್ಪಾಗಲಾರದು ಮತ್ತು ಅವರೂ ಪಾಶುಪತರಿರಬೇಕಾಗುತ್ತದೆ.

### ಉಪಸಂಹಾರ

೧. ಚಾಲುಕ್ಯರು ಬೊಗಸೆಯಿಂದ ಹುಟ್ಟಿದವರಾದರೆ ಸೂರ್ಯಾರಾಧಕರು.

೨. ವೈದಿಕ ಧರ್ಮದಲ್ಲಿ ಶಂಕರಾಚಾರ್ಯರಿಗಿಂತ ಪೂರ್ವ ಸ್ಥಿತಿಯಲ್ಲಿ ಯಜ್ಞ ಯಾಗಾದಿಗಳಿಗೆ ಆಧಾರವಾಗಿರುವವರು ಈ ಚಾಲುಕ್ಯರೆನ್ನಬಹುದು. (ಚಲೂಕ್ಯ ಎಂಬುದಕ್ಕಿಂತ ಚಾಲುಕ್ಯ ಎಂಬುದು ಹೆಚ್ಚು ಪ್ರಚಾರದಲ್ಲಿದೆಯಷ್ಟೇ).

(ಸುಪ್ರಸಿದ್ಧ ಆಧಾರ ಗ್ರಂಥಗಳನ್ನೆಲ್ಲಾ ಬಳಸಲಾಗಿದೆ).

೩. ವಾಸ್ತುಶಿಲ್ಪ ಮತ್ತು ಶಿಲ್ಪ ರಚನೆಗಳಲ್ಲಿ 'ಪಾಶುಪತ ಶೈಲಿ' ಎನ್ನುವುದನ್ನು ಚಾಲುಕ್ಯ ಶಿಲ್ಪದಲ್ಲಿ ಮೊಟ್ಟಮೊದಲ 'ಶೈಲಿ' ಎನ್ನಬೇಕಾಗುತ್ತದೆ.

೪. ಇವುಗಳ ಅಂದರೆ ಈ ಪಾಶುಪತ ಶೈಲಿಯ ಜೊತೆಗೇ ಕಂಡುಬರುವ ಶೈವ ವಿಗ್ರಹಗಳ ಸಂಪ್ರದಾಯವನ್ನು ಬೇರೆ ಶೈಲಿಯಾಗಿಯೇ ನೋಡಬೇಕಾಗಿದೆ.

ಎಂ. ಎಸ್. ಪ್ರಭಾಕರ*

# ದಾಕ್ಷಿಣಾತ್ಯ ದೇವಾಲಯಗಳ ಅಧಿಷ್ಠಾನ ಹಾಗೂ ಇನ್ನಿತರ ರಚನೆಗಳು

ದಾಕ್ಷಿಣಾತ್ಯ ದೇವಾಲಯಗಳ ಸಾಮಾನ್ಯ ರಚನೆಯು ಷಡ್ವರ್ಗ ಸ್ವರೂಪವೆನ್ನಿಸಿದ್ದು ಷಡ್ವರ್ಗಗಳ ಆರೋಹಣ ಕ್ರಮವನ್ನು ಹಲವಾರು ಗ್ರಂಥಗಳು ವಿವರಿಸಿವೆ. ಅಧಿಷ್ಠಾನ, ಪಾದ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ ಇವೇ ಷಡ್ವರ್ಗದ ಸ್ತರಗಳು. ಈ ಜೋಡಣೆಯನ್ನು ಏಕತಲ ಅಥವಾ ಏಕಭೂಮಿ ವಿಮಾನವೆಂದೂ ಕರೆಯಲಾಗಿದೆ.

ಕಾಮಿಕಾಗಮ ಗ್ರಂಥದಲ್ಲಿ ಷಡ್ವರ್ಗ ರಚನೆಯೊಂದಿಗೆ ಜನ್ಮ ಮತ್ತು ಉಪಪೀಠ ರಚನೆಯೂ ಗುರುತಿಸಲ್ಪಟ್ಟಿದೆ. ಅಧಿಷ್ಠಾನದ ಪೂರ್ವದಲ್ಲಿ ಜನ್ಮ ಮತ್ತು ಉಪಪೀಠಗಳ ರಚನೆಯಿದೆ.

ಜನ್ಮೋಪಪೀಠ ಅಧಿಷ್ಠಾನ ಪ್ರಸ್ತರಕಂಧರೈಃ
ಶಿಖರ ಸ್ತೂಪಿಕಾಭ್ಯಾಂಚ ಷಡ್ವರ್ಗ ಸಹಿತಂ ನ ಯೇತ್[1]

ಅಧಿಷ್ಠಾನವು ಆದ್ಯಂಗವೆಂದು ಗುರುತಿಸಲ್ಪಟ್ಟಿದ್ದರೂ, ಜನ್ಮಭಾಗದಿಂದ ವಾಸ್ತುರಚನೆಯು ಆರಂಭಗೊಳ್ಳುತ್ತದೆ. ಉಪಪೀಠ ಮತ್ತು ಅಧಿಷ್ಠಾನಗಳು ಹೊರಗೆ ಕಾಣುವಂತಿದ್ದು ಜನ್ಮಭಾಗವು ಭೂಮಿಯಲ್ಲಿ ಸೇರಿದೆ.

ದೇವಾಲಯ ನಿರ್ಮಾಣದ ಆರಂಭದಲ್ಲಿ ಜಲಾಂತ ಅಥವಾ ಶಿಲಾಂತದವರೆಗೆ ಭೂಮಿಯನ್ನು ತೋಡಿ, ಶಿಲಾ, ಇಷ್ಟಿಕಾ, ವಾಲುಕಾದಿಗಳಿಂದ ದೃಢವಾದ ಪ್ರಕೃತಿಯನ್ನು ನಿರ್ಮಿಸಬೇಕು.

ಖನಯೇತ್ ಭೂತಲಂ ಶ್ರೇಷ್ಠ ಪುರುಷಾಂಜಲಿ ಮಾತ್ರಕಂ
ಜಲಾಂತಂ ವಾ ಶಿಲಾಂತಂ ವಾ ಪುರಯೇತ್ ವಾಲುಕೈರ್ಜಲೈಃ
ಹಸ್ತಿ ಪಾದಾಕೃತಿ ದಾರು ಸ್ತಂಭೇನ ಪ್ರಹಾರಯೇತ್, ಏವಂ
ದೃಢಂ ಕೃತ್ವಾಚೋರ್ಧ್ವೇ ಹರ್ಮ್ಯಂಕಾರಯೇತ್[2]

ಈ ದೃಢವಾದ ಪ್ರಕೃತಿಯ ಮೇಲೆ, ಭಿತ್ತಿ ಮೂಲ ಅಥವಾ ಭಿತ್ತಿ ಪಾದವನ್ನು ನಿರ್ಮಿಸಬೇಕು.

ದೇವಾಲಯಗಳ ಆರಂಭವನ್ನು ಸೂಚಿಸುವ ಶಾಸನಗಳಲ್ಲಿ "ಕಿಸಱುಗಲ್ಲು ಆದಿಯಾಗಿ", "ಕಿಸಱುಗಲ್ಲಿಕ್ಕಿ" ಎಂದು ಗುರುತಿಸಿದ್ದಾರೆ. ಕಿಸರುಗಲ್ಲು ಎನ್ನುವುದು ಭಿತ್ತಿ ಪಾದಕ್ಕೆ ಸಮಾನ ಪದವಿರಬಹುದು.

ಬೆಂಗಳೂರು ಜಿಲ್ಲೆ ಮಣ್ಣೆ ಗ್ರಾಮದಲ್ಲಿ ಗಂಗರ ಕಾಲಕ್ಕೆ ಸೇರಿದ ಪ್ರಾಚೀನ ಬಸದಿಯ ಅವಶೇಷಗಳಿವೆ. ಬಸದಿಯ ಕಟ್ಟಡದ ಕೆಳಭಾಗದ ಮಣ್ಣು ಕೊಚ್ಚಿ ಹೋಗಿದ್ದು ಅಧಿಷ್ಠಾನದ ಮೇಲೆ ನಿಂತಿರುವ ಸ್ತಂಭಗಳಿಗೆ ಸಮನಾಗಿ ಕೆಳಗೆ ಒರಟು ಗಂಭಗಳಿವೆ. ಇವು ತಳಗಂಬಗಳೆನಿಸಿದ್ದು ಭಿತ್ತಿಪಾದವೆಂದು ಗುರುತಿಸಬಹುದು. ಭಿತ್ತಿ ಪಾದ, ಭಿತ್ತಿ ಮೂಲ, ಜನ್ಮ. ತಳಗಂಬ, ಇವು ಪರ್ಯಾಯ ಪದಗಳೆನಿಸಿವೆ.

* ಡೆಪ್ಯೂಟಿ ಮ್ಯಾನೇಜರ್. ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೆ. ಆರ್. ರಸ್ತೆ. ಬೆಂಗಳೂರು-೫೬೦ ೦೦೨.

1 ಸಿ. ಸ್ವಾಮಿನಾಥ ಶಿವಾಚಾರ್ಯ (ಸಂ) ಕಾಮಿಕಾಗಮ. ಮದ್ರಾಸ್, ೧೯೫೦, ಪು. ೧೨೫, ಪ. ೪೯, ಶ್ಲೋ ೧೨-೧೩.

2 ಪಿ. ಕೆ. ಆಚಾರ್ಯ (ಸಂ.) ಮಾನಸಾರ, ನವದೆಹಲಿ, ೧೯೭೯, ಪು. ೧೨೭. ಅ. ೧೮, ಶ್ಲೋ ೩-೪.

ಪ್ರಕೃತ್ಯರ್ಧ್ಯಪರಿಜನ್ಮಭೋಃ
ತದುಪಾನ ಮಿತಿ ಪ್ರೋಕ್ತಾ ಸೈವಭೌಮಾ ಪರಿಕೀರ್ತಿತಾ
ತದೂರ್ಧ್ವಸ್ತಂ ಅಧಿಷ್ಠಾನಂ ಕೇವಲಂ ತು ವಿಧೀಯತೇ[3]

ಭಿತ್ತಿ ಪಾದಸ್ಯ ವಿಷ್ಕಂಭಂ ದ್ವಿಗುಣಂ ತ್ರಿಗುಣಂತುವಾ
ಹೋಮ ನೀವ್ರ ಮಿತಿ ಖ್ಯಾತಂ[4]

ತಳಗಂಬದ ಮೇಲ್ಭಾಗವನ್ನು ಹೋಮ ನೀವ್ರ ಎಂದು ಗುರುತಿಸಿದ್ದು ಮಯಮತ ಹಾಗೂ ಕಾಶ್ಯಪ ಶಿಲ್ಪಗ್ರಂಥಗಳು ಈ ಭಾಗದಲ್ಲಿ ಕೆಲವು ಸ್ತರಗಳನ್ನು ಗುರುತಿಸಿವೆ.

ಉಪಾನೋಪರಿ ಪದ್ಮಂ ಜೋಪಪಾನಂಚತದೂರ್ಧ್ವತಃ
ಯಥಾ ಶೋಭಾಂಶ ಮಾನೇನ ಕುರ್ಯಾತ್ ತತ್ರವಿಚಕ್ಷಣಃ[5]

ಉಪಾನ, ಪದ್ಮ, ಪುನಃ ಉಪಾನಾದಿ ಸ್ತರಗಳನ್ನು ಮಯಮತ ಗ್ರಂಥವು ಹೆಸರಿಸಿದೆ. ಕಾಶ್ಯಪಶಿಲ್ಪವು ಹೋಮ, ಅಬ್ಜ, ವೇಶ ಮುಂತಾಗಿ ಹೆಸರಿಸಿದೆ.

ಭಿತ್ತಿ ಮೂಲದ ನಂತರ ಉಪಪೀಠ ರಚನೆಯನ್ನು ಅಧಿಷ್ಠಾನ ರಚನೆಯನ್ನೂ ಕಾಣಬಹುದು.

ತೇನೈವಕ್ರಮೇಣ ದೃಢಂ ಕಾರಯಿತ್ವಾ ಉಪರಿಷ್ಟಾದ್
ಭಿತ್ತಿ ಮೂಲಂ ಸೋಪಪೀಠಾಧಿಷ್ಠಾನಂ ಕೇವಲಾಧಿಷ್ಠಾನಂ
ಕಾರಯಿತ್ವಾ[6]
ಅಧಿಷ್ಠಾನಾದ್ವಿಗುಣಂ ಅದ್ಯರ್ಧಂ ಸಮಂವಾ ಖಾತಕುಡ್ಯಂ
ಪ್ರಕಲ್ಪಯೇತ್ ತದೂರ್ಧ್ವೇದಂಡ ಪ್ರಮಾಣೇನ ಹೋಮಂ
ಕೃತ್ವಾ, ತದೂರ್ಧ್ವೇ ಅಧಿಷ್ಠಾನಂ ಉಪಪೀಠಂವಾ
ಕಾರಯೇತ್[7]

ವಿಮಾನಾರ್ಚನಕಲ್ಪ ಗ್ರಂಥಕಾರನು ಖಾತಕುಡ್ಯ ವೆಂಬ ಪದವನ್ನು ಬಳಸಿದ್ದಾನೆ. ಖಾತಕುಡ್ಯವು ತೋಡಿದ ಗುಣಿ ಅಥವಾ ತಳಗಂಬಕ್ಕೆ ಸಂಬಂಧಿಸಿದೆ. ಈ ವಿವರವು ಕೊಂಚ ಅಸ್ಪಷ್ಟವೆನಿಸಿದೆ.

ಹೋಮ ಅಥವಾ ಭಿತ್ತಿ ಮೂಲದ ನಂತರ ಉಪಪೀಠ ರಚನೆಯಿದೆ. ದೇವಾಲಯಗಳಲ್ಲಿ ಉಪಪೀಠ ರಚನೆಯಿದ್ದರೂ ಷಡ್ವರ್ಗಗಳ ಎಣಿಕೆಯಲ್ಲಿ ಸ್ಥಾನವಿಲ್ಲ. ಬೃಹದಾಕಾರದ ದೇವಾಲಯಗಳಲ್ಲಿ ಉಪಪೀಠವು ವ್ಯವಸ್ಥಿತವಾಗಿ ರೂಪುಗೊಂಡಿದೆ.

ಉಪಪೀಠವಿಲ್ಲದೆ ಅಧಿಷ್ಠಾನವನ್ನು ರಚಿಸಬಾರದೆಂಬ ನಿಯಮವನ್ನು ಪಾದ್ಮ ಸಂಹಿತೆಯಲ್ಲಿ ಕಾಣಬಹುದು.

ವಿನಾ ವಾಪ್ಯುಪ ಪೀಠೇನ ಸ್ಯಾದಧಿಷ್ಠಾನ ಕಲ್ಪನಂ[8]

ಉಪಪೀಠದ ಕಾರ್ಯವು ದೇವಾಲಯಗಳಿಗೆ ಮೂಲತಃ ಶೋಭೆಯನ್ನೂ ರಕ್ಷಣೆಯನ್ನು ನೀಡುವಂಥದ್ದು. ಇದರೊಂದಿಗೆ ಎತ್ತರವನ್ನೂ ಹೆಚ್ಚಿಸುತ್ತದೆ. ಆದ್ದರಿಂದ ಪಾದ್ಮ ಸಂಹಿತಾಕಾರನು

"ಶೋಭಾರ್ಥಂ ರಕ್ಷಣಾರ್ಥಂ ಸಮುಚ್ಛ್ರಾಯಾರ್ಥ
ಮೇವವಾ"[9]

ಎಂದು ಗುರುತಿಸುತ್ತಾನೆ. ಅಜಿತಾಗಮದ ಗ್ರಂಥ ಕರ್ತೃವು ಪ್ರಾಸಾದ ಮಂಡಪಾದಿಗಳಿಗೂ ಉಪಪೀಠ ರಚನೆಯನ್ನು ವಿಧಿಸಿದ್ದಾನೆ.

"ಪ್ರಾಸಾದ ಮಂಟಪಾದೀನಾಂ ಉನ್ನತಾರ್ಥ ವಿಶೇಷತಃ[10]

ಉಪಪೀಠ ರಚನೆಯಲ್ಲಿ ಮೂರು ಪ್ರಭೇದಗಳಿವೆ.

ವೇದಿಭದ್ರಂ ಪ್ರತಿಭದ್ರಂ ಸುಭದ್ರಂ ತ್ರಿಧಾಸ್ಮೃತಂ[11]

ವೇದೀಭದ್ರ ರಚನೆಯಲ್ಲಿ ಅಷ್ಟಾಂಗ ಮತ್ತು ಷಡಂಗ ಎಂದು ಪುನಃ ಪ್ರಭೇದಗಳಿವೆ.

---

3 ಕಾಮಿಕಾಗಮ, ಪು. ೧೩೬, ಅ. ೫೨, ಶ್ಲೋ. ೯-೧೦
4 ಡಿ. ಕೃಷ್ಣರಾಯ ಮತ್ತು ವಿ. ಜಿ. ಆಪ್ಟೆ (ಸಂ.), ಕಾಶ್ಯಪಶಿಲ್ಪ, ಪೂನಾ, ೧೯೨೧, ಪು. ೧೬, ಪ. ೬, ಶ್ಲೋ. ೮
5 ಬ್ರೂನೋ ಡಗೆನ್ಸ್ (ಸಂ.), ಮಯಮತ, ಪಾಂಡಿಚೆರಿ, ೧೯೭೦, ಪು. ೨೪೧, ಅ. ೧೪, ಶ್ಲೋ. ೮
6 ಪಿ. ರಘುನಾಥಚಕ್ರವರ್ತಿ ಭಟ್ಟಾಚಾರ್ಯ ಮತ್ತು ಸೇತೂಮಾಧವಾಚಾರ್ಯ (ಸಂ.), ಶ್ರೀ ವಿಮಾನಾರ್ಚನಕಲ್ಪ, ಮದ್ರಾಸ್, ೧೯೨೬, ಪು. ೨೮, ಪ. ೬
7 ಆದೇ., ಪು. ೨೯
8 ಜಿ. ಆರ್. ಜೋಪ್ಯರ್ (ಸಂ.), ಪಾದ್ಮಸಂಹಿತಾ, ಮೈಸೂರು, ೧೯೭೬, (ಕ್ರಿಯಾಪಾದ) ಪು. ೨೫, ಅ. ೪, ಶ್ಲೋ. ೩೮
9 ಆದೇ., ಪು. ೪೧, ಅ. ೭, ಶ್ಲೋ. ೧
10 ಎನ್. ಆರ್. ಭಟ್ (ಸಂ.), ಅಜಿತಾಗಮ, ಪಾಂಡಿಚೆರಿ, ೧೯೬೪, ಪು. ೬೫, ಪ. ೧೧, ಶ್ಲೋ. ೧
11 ಪಾದ್ಮಸಂಹಿತೆ, ಪು. ೪೧, ಅ. ೭, ಶ್ಲೋ. ೫

ವೇದೀಭದ್ರಂ ದ್ವಿಧಾಪ್ರೋಕ್ತಂ ಸರ್ವಹರ್ಮ್ಯೇಷು
ಯೋಗ್ಯಕಂ12

ಕಾಶ್ಯಪಶಿಲ್ಪ ಗ್ರಂಥವು ಅಷ್ಟಾಂಗ ಮತ್ತು ಷಡಂಗ ರಚನೆಗಳೊಂದಿಗೆ ಪಂಚಾಂಗವೆಂಬ ಪ್ರಭೇದವನ್ನೂ ಉಲ್ಲೇಖಿಸಿದೆ. ಅಷ್ಟಾಂಗ ರಚನೆಯು ಇನ್ನಿತರ ಪ್ರಭೇದಗಳಿಗೆ ಮೂಲವೆನಿಸಿದೆ. ಅಷ್ಟಾಂಗ ರಚನೆಯ ವಿವರಗಳು ಕೆಳಕಂಡಂತಿವೆ.

ಉತ್ಸೇಧೇ ದ್ವಾದಶಾಂಶೇ ತುದ್ವಾಭ್ಯಾಂ ಪಾದುಕಮುಚ್ಯತೇ
ತದೂರ್ಧ್ವೇ ಪದ್ಮಮಂಶೇನ ಕ್ಷೇಪಣಂಚಾರ್ಧಭಾಗತಃ
ಗಲಂ ಭೂತಾಂ ಶಕಂ ಜ್ಞೇಯಂ ಕಂಪಮರ್ಧಾಂಶ ಸಮ್ಮಿತಂ
ಅಂಶೇನ ಪದ್ಮ ಮೂರ್ಧ್ವಂ ಸ್ಯಾದ್ವಾಜನಂಚಾಂಶೇನತು
ಕಂಪಮಂಶೇನ ಕರ್ತವ್ಯ ಮೇವ ಅಷ್ಟಾಂಶ ಸಮ್ಮಿತಂ13

ಉಪಾನ (ಪಾದುಕ), ಪದ್ಮ, ಕ್ಷೇಪಣ, ಕಂಠ, ಕಂಪ, ಪದ್ಮ (ಅಂಬುಜ), ವಾಜನ ಮತ್ತು ಕಂಪ ಇವೇ ಅಷ್ಟಾಂಗ ರಚನೆಯ ಸ್ತರಗಳು.

ಷಡಂಗು ವಿಧಾತವ್ಯಾ ಊರ್ಧ್ವಾಧಸ್ತಾತ್ ವಿನಾಂಬುಜಂ14

ಅಷ್ಟಾಂಗ ರಚನೆಯಲ್ಲಿರುವ ಪದ್ಮಸ್ತರಗಳನ್ನು ಹೊರತುಪಡಿಸಿ ಷಡಂಗ ರಚನೆಯು ರೂಪುಗೊಳ್ಳುತ್ತದೆ.

ಊರ್ಧ್ವೇ ಕಂಪಂ ವಿನಾ ವಾಪಿ ಪಂಚಾಂಗಮುಪ ಪೀಠಕಂ15

ಷಡಂಗರಚನೆಯಮೇಲ್ಭಾಗದಲ್ಲಿರುವ ಕಂಪವನ್ನೂ ಹೊರತುಪಡಿಸಿ ಪಂಚಾಂಗವು ರಚನೆಗೊಳ್ಳುತ್ತದೆ.

ಪಾದ್ಮಸಂಹಿತೆ, ಅಜಿತಾಗಮ, ಕಾಶ್ಯಪಶಿಲ್ಪ ಗ್ರಂಥಗಳಲ್ಲಿ ವಿವರಿಸಿರುವ ಅಷ್ಟಾಂಗ ರಚನೆ ಒಂದೇ ರೀತಿಯದು. ಮಾನಸಾರ ಗ್ರಂಥದಲ್ಲಿ ವೇದೀಭದ್ರ, ಪ್ರತಿಭದ್ರ ಮತ್ತು ಮಂಚಭದ್ರವೆಂದು ಗುರುತಿಸಿದ್ದು ಇವುಗಳಲ್ಲಿ ಪುನಃ ನಾಲ್ಕು ನಾಲ್ಕು ಪ್ರಭೇದಗಳು ವಿವರಿಸಲ್ಪಟ್ಟಿವೆ. ಈ ವಿವರಗಳನ್ನು ಸೂತ್ರೀಕರಿಸಿ ಹೇಳಲು ಸಾಧ್ಯವಾಗದು. ಈ ಗ್ರಂಥದಲ್ಲಿ ಷಡಂಗ ರಚನೆಯು ಮೊದಲಿಗೆ ಹೇಳಲ್ಪಟ್ಟಿದ್ದು ಆನಂತರ ಅಷ್ಟಾಂಗ ರಚನೆಯಿದೆ. ಆದರೆ ಅಷ್ಟಾಂಗ ಮತ್ತು ಷಡಂಗ ಎಂಬ ಹೆಸರುಗಳ ಪ್ರಸ್ತಾಪವಿಲ್ಲ. ಕೆಳಗಿನ ವಿವರಣೆ ಷಡಂಗ ರಚನೆಗೆ ಸಮನಾದುದು.

ಉತ್ಸೇಧೇ ಚತುರ್ವಿಂಶಂತ್ ಪಂಚಾಂಶಾ ಉಪಾನಮೀರಿತಂ
ಏಕೇನಕಂಪಮಿತ್ಯುಕ್ತಂ ಗ್ರೀವೋಚ್ಚಂದ್ವಾದಶಾಂತಿಕಂ
ಕಂಪಮೇಕಂ ತು ವೇದಾಂಶಂ ವಾಜನಂ ಕಂಪಮಂಶಕಂ
ವೇದೀಭದ್ರ ಮಿತಿ ಪ್ರೋಕ್ತಮಥವಾ ದ್ವಾದಶಾಂಶಕಂ16

ಪ್ರತಿಭದ್ರ ರಚನೆಯಲ್ಲಿ ಎರಡು ಪ್ರಭೇದಗಳಿವೆ. ಇವನ್ನು ಕಾಶ್ಯಪಶಿಲ್ಪ ಹಾಗೂ ಪಾದ್ಮಸಂಹಿತೆ ಗ್ರಂಥಗಳು ವಿವರಿಸಿವೆ.

ದ್ವಿವಿಧಂ ಪ್ರತಿಭದ್ರಂ ಸ್ಯಾದೇಕ ಭಾಗಾಧಿಕಂ ತತಃ17

ಮಯಮತ ಮತ್ತು ಪಾದ್ಮಸಂಹಿತೆಯ ವಿವರಗಳು ಒಂದೇ ಮೂಲದಿಂದ ಕ್ರೋಢೀಕರಿಸಲ್ಪಟ್ಟಿದ್ದು ಈ ವಿವರಗಳಿಗೂ ಕಾಶ್ಯಪಶಿಲ್ಪದ ವಿವರಣೆಗೂ ಸಾಮ್ಯತೆ ಇದೆ. ಪ್ರತಿಭದ್ರ ರಚನೆಯು ಕಪೋತದೊಂದಿಗೆ ಕೂಡಿದ್ದು ಪ್ರತಿ ಮತ್ತು ವಾಜನ ಸ್ತರಗಳೊಂದಿಗೆ ಅಂತ್ಯಗೊಳ್ಳುತ್ತದೆ. ಪಾದುಕ, ಪದ್ಮ (ಪಂಕಜ), ಕಂಪ, ಕಂಠ, ಉತ್ತರ, ಪದ್ಮ (ಅಂಬುಜ), ಕಪೋತ, ಆಲಿಂಗ, ಪಟ್ಟಿಕಾ, ಪ್ರತಿ, ವಾಜನ ಮೊದಲಾದ ಸ್ತರಗಳನ್ನು ಪ್ರತಿಭದ್ರ ರಚನೆಯಲ್ಲಿ ಕಾಣಬಹುದು. ಕಾಶ್ಯಪಶಿಲ್ಪ ಗ್ರಂಥದಲ್ಲಿ ಪ್ರತಿಭದ್ರ ಮತ್ತು ಪ್ರತಿಸುಂದರ ಎಂಬ ಪ್ರಭೇದಗಳಿದ್ದು ಇವುಗಳ ವಿವರಣೆ ಕೆಳಕಂಡಂತಿದೆ.

---

12 ಪಾದ್ಮಸಂಹಿತೆ, ಪು. ೪೨, ಶ್ಲೋ. ೮
13 ಅಜಿತಾಗಮ, ಪು. ೬೬, ಅ. ೧೧, ಶ್ಲೋ. ೫–೭
14 ಮಯಮತ, ಪು. ೨೩೪, ಅ. ೧೩, ಶ್ಲೋ. ೮
15 ಕಾಶ್ಯಪಶಿಲ್ಪ, ಪು. ೧೪, ಪ. ೬, ಶ್ಲೋ. ೧೨
16 ಮಾನಸಾರ, ಪು. ೭೩, ಅ. ೧೩, ಶ್ಲೋ. ೧೮–೨೦
17 ಪಾದ್ಮಸಂಹಿತೆ, ಪು. ೪೨, ಅ. ೭, ಶ್ಲೋ. ೧೪

ಉಪಪೀಠಸ್ಯ ಉತ್ಸೇಧಂ ಸಪ್ತವಿಂಶತಿ ಭಾಜತೇ
ದ್ವಿಭಾಗಂ ಪಾದುಕೋತ್ಸೇಧಂ ಪಂಕಜಂ ತತ್ಸಮಂಭವೇತ್
ಕಂಪಮೇಕಾಂಶಮಿತ್ಯುಕ್ತಂ ದ್ವಾದಶಂ ಗಲೋದಯಂ
ಉತ್ತರಂ ಚೈಕ ಭಾಗಂ ಸ್ಯಾತ್ ಸಮಂಮಂಚೋರ್ಧ್ವ
ಮಂಬುಜಂ
ಅಗ್ನಿಭಾಗಂ ಕಪೋತೋಚ್ಚ ಕೃಶಮಾಲಿಂಗ ಮುಚ್ಚತೇ
ತ್ರಯಶ್ರಮೇಕಭಾಗೇನ ಪ್ರತಿಮಾನಂ ದ್ವಿಭಾಗಯಾ
ವಾಜನಂಚೈಕಭಾಗೇನ ಮಾನಂ ತತ್ಪ್ರತಿಭದ್ರಕಂ[18]

ದ್ವಿಭಾಗಂ ಪಾದುಕೋತ್ಸೇಧಂ ದ್ವಿಭಾಗಂ ಪಂಕಜೋದಯಂ
ಕಂಪಮೇಕೇನ ಕರ್ತವ್ಯಂ ಏಕೇನಾಂತರಿತಂ ಭವೇತ್
ದ್ವಿಭಾಗಂ ಪ್ರತಿ ತುಂಗಂ ತು ಏಕೇನೈವ ವಾಜನಂ
ಅಷ್ಟಾಂಶಂಗಲಮಾನಂ ತು ಕಂಪಮೇಕೇನಕಾರಯೇತ್
ಆಬ್ಜಮೇಕೇನ ಕರ್ತವ್ಯಂ ಕಪೋತೋಚ್ಚಂ ಗುಣಾಂಶಕಂ
ಏಕೇನಾಲಿಂಗ ಮೇಕೇನಾಂತರಿತಂ ತು ಕಲ್ಪಯೇತ್
ಸಪ್ತವಿಂಶತಿ ಭಾಗೇತು ನಾಮತಃ ಪ್ರತಿಸುಂದರಂ[19]

ಕೆಲವು ಹಂತಗಳ, ತುಸು ಎತ್ತರವಾದ, ಉಪಪೀಠ ರಚನೆಯನ್ನು ಸುಭದ್ರ ಅಥವಾ ಸೌಭದ್ರ ಪ್ರಭೇದವೆಂದು ಗುರುತಿಸಬಹುದಾಗಿದೆ. ಈ ಉಪಪೀಠ ರಚನೆಯಲ್ಲಿ ಕಂಠವು ಉಬ್ಬು ಶಿಲ್ಪಗಳನ್ನೊಳಗೊಂಡಿದೆ. ಪಾದ್ಮ ಸಂಹಿತೆಯ ಪ್ರಕಾರ ಸುಭದ್ರ ರಚನೆಯಲ್ಲಿಯೂ ಎರಡು ಪ್ರಭೇದಗಳು.

ಸುಭದ್ರಂ ದ್ವಿಧಾಪ್ರೋಕ್ತಂ ಸರ್ವಾಲಂಕಾರ ಸಂಯುತಂ
ಸಿಂಹೇಭ ಮಕರೈರ್ವ್ಯಾಲೈರ್ಭೂತಾದ್ಯೈರಪ್ಯಲಂಕೃತಂ[20]

ಉಪಪೀಠದ ಕಂಠಭಾಗದಲ್ಲಿ ಆನೆ, ಸಿಂಹ, ಮಕರ, ಭೂತಾದಿ ಅಲಂಕಾರವನ್ನು ರಚಿಸಬಹುದು.

ಭೂತಾಶ್ಚ ವ್ಯಾಲ ಸಿಂಹೈಶ್ಚ ಮಕರೈಃ ಪತ್ರಜಾತಿಭಿಃ
ಉಪಪೀಠ ಗಲೋನ್ಮಿಶ್ರಂ ಭೂಷಯಂತು ಸಲಕ್ಷಣಂ[21]

ಕಾಶ್ಯಪ ಶಿಲ್ಪಗ್ರಂಥದಲ್ಲಿ ವಿವರಿಸಿರುವ ಸೌಭದ್ರ ರಚನೆಯ ಒಂದು ಪ್ರಭೇದದಲ್ಲಿ ಕಾಣುವ ವಿವರ ಕೆಳಕಂಡಂತಿದೆ.

ಉಪಪೀಠಸ್ಯ ಚೋತ್ಸೇಧಮೇಕ ವಿಂಶತಿ ಭಾಜತೇ
ಉಪಾನಂ ತು ದ್ವಿಭಾಗೇನ ತತ್ಸಮಂ ಅಂಬುಜೋದಯಂ
ಕಂಠಮಂಶೇನ ಕರ್ತವ್ಯಂ ಪದ್ಮಮಂಶೇನಕಾರಯೇತ್
ಮಹಾಪದೀ ದ್ವಿಭಾಗೇನ ಪದ್ಮಮಂಶೇನಕಾರಯೇತ್
ಕಂಪಮಂಶೇನ ಕರ್ತವ್ಯಂ ಕಂಠೋಚ್ಚಂ ವಸುಧಾರಯಾ
ಭಾಗೇನ ಕಂಪಮನ್ಯೇನ ಪದ್ಮಂ ಕಂಪೋಥ ಕರ್ತೃಭಿಃ
ಕಂಪಮಂಶೇನ ಕರ್ತವ್ಯಮೇತತ್ ಸೌಭದ್ರ ಮುಚ್ಯತೇ[22]

ಕರ್ನಾಟಕದಲ್ಲಿ ಔತ್ತರೇಯ ಸಂಪ್ರದಾಯದ ದೇವಾಲಯಗಳಲ್ಲಿ ಉಪಪೀಠಕ್ಕೆ ಬದಲಾಗಿ ಜಗತಿಯ ರಚನೆಯಿದೆ. ಜಗತಿ ಇಲ್ಲದ ರಚನೆಗಳೂ ಉಂಟು. ಜಗತಿಯನ್ನು ಕಲ್ಯಾಣಿ ಚಾಲುಕ್ಯರ ಕಾಲದಿಂದ ಕಾಣಬಹುದಾಗಿದ್ದು ಹೊಯ್ಸಳರ ದೇವಾಲಯಗಳಲ್ಲಿ ಗಮನಾರ್ಹ ರಚನೆಯೆನಿಸಿತು. ಜಗತಿಯು ಪೀಠದ ಕೆಳಗೆ ದೇವಾಲಯದ ಸುತ್ತ ವಿಸ್ತಾರವಾಗಿ ಬೆಳೆದಿದ್ದು ದೇವಾಲಯದ ಒಟ್ಟಂದಕ್ಕೆ, ಔನ್ನತ್ಯ ಹಾಗೂ ಶೋಭೆಯನ್ನು ನೀಡಿತು.

ಉಪಪೀಠಾ ನಂತರ, ಅಧಿಷ್ಠಾನ ರಚನೆಯನ್ನು ಕಾಣಬಹುದು. ಕಾಶ್ಯಪಶಿಲ್ಪವು ಗುರುತಿಸುವಂತೆ, ಅಧಿಷ್ಠಾನಕ್ಕೆ ಕೆಳಕಂಡ ಪರ್ಯಾಯ ಶಬ್ದಗಳಿವೆ.

ಧರಾತಲಮಧಿಷ್ಠಾನಮಾಧಾರಂ ಧರಣೀ ತಥಾ
ಭುವನಂ ಪೃಥ್ವೀ ಭೂಮಿಃ ಪರ್ಯಾಯ ವಚನಾದಿಭಿಃ[23]

ಸಭಾ, ಮಂಡಪ, ಶಾಲಾ, ದೇವತಾಗೃಹಗಳಲ್ಲಿ ಅಧಿಷ್ಠಾನವನ್ನು ರಚಿಸಬಹುದು. ಮನುಷ್ಯರು ವಾಸಿಸುವ ರಚನೆಗಳಲ್ಲಿ ಅಧಿಷ್ಠಾನ ರಚನೆ ನಿಷಿದ್ಧವೆನಿಸಿದೆ.

ದೇವಾಲಯೇ ಸಭಾಸ್ಥಾನೇ ಆಧಾರಸ್ಯ ಪ್ರಮಾಣತಃ
ನರವಾಸೇ ನ ಕರ್ತವ್ಯಂ ಕರ್ತೃಭರ್ತೃ ವಿನಾಶನಂ
ಪಾದಬಂಧಂ ಪ್ರತಿಬಂಧಂ ದ್ವಿವಿಧಂ ಬಂಧ ಮುಚ್ಯತೇ[24]

---

18 ಕಾಶ್ಯಪಶಿಲ್ಪ, ಪು. ೧೪, ಪ. ೬, ಶ್ಲೋ. ೧೨-೧೫
19 ಅದೇ., ಶ್ಲೋ. ೧೬–೧೯
20 ಪಾದ್ಮಸಂಹಿತೆ. ಪು. ೪೩, ಅ. ೭, ಶ್ಲೋ. ೧೯
21 ಕಾಶ್ಯಪಶಿಲ್ಪ, ಪು. ೧೫, ಪ. ೬, ಶ್ಲೋ. ೨೮
22 ಅದೇ., ಪು. ೧೪-೧೫, ಪ. ೬, ಶ್ಲೋ. ೨೦-೨೨
23 ಅದೇ., ಪು. ೧೫–೧೬, ಪ. ೭, ಶ್ಲೋ. ೧–೨
24 ಪಾದ್ಮಸಂಹಿತೆ, ಪು. ೪೮, ಅ. ೭, ಶ್ಲೋ. ೭೨-೭೩

ಅಧಿಷ್ಠಾನ ರಚನೆಯಲ್ಲಿ ಪಾದಬಂಧ ಮತ್ತು ಪ್ರತಿಬಂಧ ಎಂದು ಗುರುತಿಸಿದ್ದು, ಪಟ್ಟಿಕಾಂಗ ಮತ್ತು ಪ್ರತ್ಯಂಗ ಎಂದೂ ವಿಂಗಡಿಸಲಾಗಿದೆ.

ದ್ವಿವಿಧಂ ತದಿಹಂ ಪ್ರೋಕ್ತಂ ಪ್ರತ್ಯಂಗಂ ಪಟ್ಟಿಕಾಂಗಂ25

ಪಾದಬಂಧ ಮತ್ತು ಪ್ರತಿಬಂಧ ಪ್ರಭೇದಗಳನ್ನು ಈವರೆಗೆ ವಿದ್ವಾಂಸರು ಕುಮುದ ರಚನೆಯೊಂದಿಗೆ ಸಮೀಕರಿಸಿ ವಿವರಿಸಿದ್ದಾರೆ. ಆದರೆ ಈ ವಿವರಗಳಿಗಿಂತ ಭಿನ್ನವಾದ ಅಂಶಗಳೂ ವ್ಯಕ್ತವಾಗಿದ್ದು ಈ ಪ್ರಭೇದಗಳ ಲಕ್ಷಣಗಳನ್ನು ಪುನರ್ ಪರಿಶೀಲಿಸಿ ಗಮನಿಸಬೇಕಾಗಿದೆ. ಪಾದಬಂಧ ಮತ್ತು ಪ್ರತಿಬಂಧ ಎನ್ನುವಲ್ಲಿ ಮೂಲತಃ ಅಧಿಷ್ಠಾನ ಹಾಗೂ ಸ್ತಂಭಗಳ ನಡುವಣ ಸಂಬಂಧವನ್ನು ಸೂಚಿಸುವಂಥದ್ದು. ಇದೇ ವಿವರಣೆಯು ದ್ವಾರ, ಜಾಲಕ ಇತ್ಯಾದಿಗಳ ರಚನೆಯಲ್ಲಿಯೂ ಅನ್ವಯವಾಗುತ್ತದೆ.

ಪಾದಾನಾಂ ಬಂಧನತ್ವಾ ಪಾದ ಬಂಧನ ಮಿಷ್ಯತೇ
ಪ್ರತೇನ ಪ್ರತಿಬಧ್ನಿಯಾ ಪ್ರತಿಬಂಧನ ಮಿಷ್ಯತೇ26

ಸ್ತಂಭಗಳ ರಚನೆಯಲ್ಲಿ ಖಾತಸ್ತಂಭ ಮತ್ತು ವಿಶಾಲಸ್ತಂಭ ಎಂದು ಎರಡು ವಿಧ. ಖಾತಸ್ತಂಭವು ಗುಣಿ ಅಥವಾ ಕುಳಿಯಲ್ಲಿ ನೆಟ್ಟದ್ದು. ನೆಡುಸ್ತಂಭವೆಂದೂ ಕರೆಯಬಹುದು. ನೆಡುಸ್ತಂಭವನ್ನು ಅಧಿಷ್ಠಾನದೊಳಗೆ ಪಾದಬಂಧ ರಚನೆಯ ಸ್ತರಗಳ ಮೇಲೆ ನೆಡಲಾಗುತ್ತದೆ. ಗುಣಿಯ ಸಹಾಯವಿಲ್ಲದೆ ಪೀಠ ಅಥವಾ ಅಧಿಷ್ಠಾನದ ಮೇಲೆ ನಿಲ್ಲಿಸಿದ್ದು ವಿಶಾಲಸ್ತಂಭ. ಪ್ರತಿಬಂಧದಲ್ಲಿ ಪ್ರತಿ ಸ್ತರದ ಮೇಲೆ ನಿಲ್ಲಿಸಲಾಗುತ್ತದೆ. ದೇವಾಲಯಗಳಲ್ಲಿ ವಿಶಾಲಸ್ತಂಭಗಳಿವೆಯೇ ಹೊರತು ಖಾತಸ್ತಂಭಗಳಿಲ್ಲ.

ಅಧಿಷ್ಠಾನದ ಸ್ತರಗಳಲ್ಲಿ ಪಟ್ಟಿಕೆಯಿದ್ದಲ್ಲಿ ಪಟ್ಟಿಕಾಂಗವೆಂದೂ ಪ್ರತಿಸ್ತರವಿದ್ದಲ್ಲಿ ಪ್ರತ್ಯಂಗವೆಂದೂ ಗುರುತಿಸಲಾಗುತ್ತದೆ.

ಪಾದಬಂಧೇ ಜನ್ಮಾದಿ ಪಂಚ ವರ್ಗೇಷು ತತ್ರದಂಗ
ಅವಸಾನಕೇ
ದ್ವಾರಸ್ಥಲಂ ಸಂಕಲ್ಪಯೇತ್. ಅನ್ಯೇಷು ಪಟ್ಟಿಕಾಂತೇಚ
ಏವಂ ಯುಕ್ತ್ಯಾಕಾರಯೇತ್. ಪ್ರತ್ಯಂಗೇಷು ಪ್ರತೇರುಪರಿ
ದ್ವಾರಸ್ಥಲಂ ಸಂಕಲ್ಪಯೇತ್ ಪ್ರತಿಚ್ಛೇದಂ
ನ ಕುರ್ಯಾತ್27

ವಿಮಾನಾರ್ಚನ ಕಲ್ಪಗ್ರಂಥವು ದ್ವಾರ ರಚನೆಯೊಂದಿಗೆ ಅಧಿಷ್ಠಾನದ ಪ್ರಭೇದಗಳನ್ನು ಗುರುತಿಸಿದ್ದು ಪಾದಬಂಧದ ಸ್ತರಗಳಾದ ಉಪಾನ, ಜಗತಿ, ಕುಮುದ, ಕಂಠ, ಪಟ್ಟಿಕಾ, ಸ್ತರಗಳ ಮೇಲೆ ಕ್ರಮವಾಗಿ ದ್ವಾರವನ್ನು ರಚಿಸಬಹುದು. ಪ್ರತಿಬಂಧ ಅಧಿಷ್ಠಾನದಲ್ಲಿ ಪ್ರತಿ ಸ್ತರದ ನಂತರ ದ್ವಾರವನ್ನು ನಿರ್ಮಿಸಬೇಕು. ಪ್ರತಿಸ್ತರವನ್ನು ಭೇದಿಸಲಾಗದು. ವಿಮಾನಾರ್ಚನ ಕಲ್ಪ ಮತ್ತು ಪಾದ್ಮಸಂಹಿತೆಯಲ್ಲಿ ಈ ವಿವರಗಳು ಸ್ಪಷ್ಟವಾಗಿ ಗುರುತಿಸಲ್ಪಟ್ಟಿವೆ. ಅಜಿತಾಗಮವು ದ್ವಾರ ರಚನೆಯನ್ನು ವಿವರಿಸುವಾಗ "ಪ್ರತೇರುತ್ತರ ಸೀಮಾಂತೇ ದ್ವಾರೋತ್ಸೇಧಂ ವಿಧೀಯತೇ" ಎಂದು ಹೇಳಿದೆ. ಮಯಮತವು ಜಾಲಕಗಳ ಜೋಡಣೆಯಲ್ಲಿ ಪ್ರತಿಯನ್ನು ಭೇದಿಸಬಾರದು ಎಂದು ವಿಧಿಸಿದೆ.

ನೈವಚ್ಛೇದ್ಯಾ ವೇದಿಕಾ ಜಾಲಕಾರ್ಥಂ
ನ ಪ್ರತ್ಯಂಗಂ ಸರ್ವತಃ ಛೇದನೀಯಂ28

ಪಾದ್ಮ ಸಂಹಿತೆಯು ಪ್ರಾಕಾರ, ಗೋಪುರದ್ವಾರಗಳಲ್ಲಿ ಅಧಿಷ್ಠಾನವನ್ನು ಭೇದಿಸಬಹುದೆಂದು ಸೂಚಿಸಿದೆ.

ಪ್ರಾಕಾರ ಗೋಪುರ ದ್ವಾರಂ ಸ್ಯಾದಧಿಷ್ಠಾನ ಭೇದನಂ29

ವಾಸ್ತುಗ್ರಂಥಗಳು ಗುರುತಿಸುವ ಎಲ್ಲಾ ನಿಯಮಗಳನ್ನು ದೇವಾಲಯ ರಚನೆಯಲ್ಲಿ ಪಾಲಿಸಿಲ್ಲವೆಂದು ಗಮನಿಸಬಹುದು. ಕಾಲದೇಶಗಳು ಬದಲಾದಂತೆ

---

25 ಕಾಮಿಕಾಗಮ, ಪು. ೧೩೭, ಪ. ೫೨, ಶ್ಲೋ. ೩೧
26 ಪಾದ್ಮಸಂಹಿತೆ, ಪು. ೪೪, ಅ. ೭, ಶ್ಲೋ. ೨೯–೩೦
27 ವಿಮಾನಾರ್ಚನಕಲ್ಪ, ಪು. ೩೨, ಪ. ೮
28 ಮಯಮತ, ಪು. ೩೩೯, ಅ. ೧೬, ಶ್ಲೋ. ೬೮
29 ಪಾದ್ಮಸಂಹಿತೆ, ಪು. ೪೪, ಅ. ೭, ಶ್ಲೋ. ೩೩

ನಿಯಮಗಳೂ ಬದಲಾಗಿವೆ ಹಾಗೂ ಅವನ್ನು ಉಲ್ಲಂಘಿಸಲಾಗಿದೆ ! ಆದರೂ ಈ ನಿಯಮಗಳ ಖಚಿತ ತಿಳುವಳಿಕೆ ಅವಶ್ಯಕ.

ಅದಿಷ್ಠಾನದ ಕುಮುದ ರಚನೆಗೆ ಸಂಬಂಧಿಸಿದ ಕೆಲವು ವಿವರಗಳನ್ನು ಈ ದಿಸೆಯಲ್ಲಿ ಪರೀಕ್ಷಿಸಬಹುದು.

ಅಧಿಷ್ಠಾನ ರಚನೆಯಲ್ಲಿ ಕುಮುದ ಸ್ತರವು ಪಾದಬಂಧಗಳಲ್ಲಿ ವಸ್ವಶ್ರವೆಂದೂ ಪ್ರತಿಬಂಧ ಪ್ರಭೇದಗಳಲ್ಲಿ ವೃತ್ತಾಕಾರವುಳ್ಳದ್ದು ಎಂದು ಕಾಶ್ಯಪ ಶಿಲ್ಪ ಗ್ರಂಥವು ಉಲ್ಲೇಖಿಸಿದೆ.

> ಸರ್ವೇಷಾಂ ಪ್ರತಿಬಂಧಾನಾಂ ಕುಮುದಂ ವೃತ್ತಮುಚ್ಯತೇ
> ಪಾದಬಂಧ ತಲಾನಾಂತು ವಸ್ವಶ್ರಂ ಕುಮುದಂ ಭವೇತ್30

ಇದೇ ಗ್ರಂಥದಲ್ಲಿ ಪುನಃ ಮತ್ತೊಂದು ನಿಯಮವೂ ವಿಧಿಸಲ್ಪಟ್ಟಿದೆ. ಕುಮುದ ರಚನೆಯೊಂದಿಗೆ ಮೇಲೆ ಮತ್ತು ಕೆಳಗೆ ಪದ್ಮ ರಚನೆಯಿದ್ದಲ್ಲಿ ವೃತ್ತ ಕುಮುದವೂ, ಇನ್ನಿತರ ಅಧಿಷ್ಠಾನಗಳಲ್ಲಿ, ಪ್ರತಿಬಂಧ ಪ್ರಭೇದದಲ್ಲಿ ವೃತ್ತವೂ, ಪಾದಬಂಧ ರಚನೆಯಲ್ಲಿ ಅಷ್ಟಾಶ್ರವೆಂದೂ ತಿಳಿಸಿದೆ.

> ಊರ್ಧ್ವಾ ಅಧಸ್ತಾತ್ ಅಂಬುಜೋಪೇತಂ ಕುಮುದಂ
> ವೃತ್ತಮಾಚರೇತ್
> ಅನ್ಯೇಷ್ವೈ ಕುಮುದಂ ಸರ್ವೇ ಪ್ರತಿಬಂಧಾಂಘ್ರಿ ಬಂಧಯೋಃ
> ವೃತ್ತಂಚ ವಸು ಕೋಣಂಚ ಕ್ರಮೇಣೈವತು ಕಲ್ಪಯೇತ್31

ಕುಮುದ ರಚನೆಯಲ್ಲಿ ವಸ್ವಶ್ರ ರಚನೆಯನ್ನು ತ್ರಿಪಟ್ಟ ಕುಮುದವೆಂದು ವಿಮಾನಾರ್ಚನ ಕಲ್ಪ ಗ್ರಂಥಕಾರನು ಗುರುತಿಸುತ್ತಾನೆ. ವಸ್ವಶ್ರ ರಚನೆಯು ಹೊರಭಾಗದಲ್ಲಿ ಮೂರು ಮುಖಗಳನ್ನು ತೋರುವುದರಿಂದ ಕುಮುದ ತ್ರಿವರ್ಗ, ತ್ರಿಪಟ್ಟ ಕುಮುದ ಎಂದು ಹೆಸರಿಸಲಾಗಿದೆ. ತ್ರಿಪಟ್ಟ ಕುಮುದವೆಂದೂ ಪರ್ಯಾಯವಾಗಿ ಬಳಸಲ್ಪಟ್ಟಿದೆ.

ತ್ರಿಪಟ್ಟ ಕುಮುದ ಮತ್ತು ವೃತ್ತ ಕುಮುದಗಳಗೊಂದಲ ವಿಮಾನಾರ್ಜನಕಲ್ಪ ಗ್ರಂಥಕಾರನನ್ನೂ ಕಾಡಿದೆ. ಪುಷ್ಪಬಂಧ ಅಧಿಷ್ಠಾನದ ಲಕ್ಷಣಗಳನ್ನು ಹೇಳುವಾಗ "ವೃತ್ತ ಕುಮುದಂ, ತ್ರಿವರ್ಗೇತಿಕೇಚಿತ್" ಎಂದು ಎರಡು ರೀತಿಯ ಕುಮುದ ರಚನೆಯನ್ನೂ ಹೇಳಿದ್ದಾನೆ.

ವೃತ್ತ ಕುಮುದ ಹಾಗೂ ತ್ರಿಪಟ್ಟ ಕುಮುದ ರಚನೆಗಳನ್ನು ನಂದಿಯ ಅರುಣಾಚಲೇಶ್ವರ ಮತ್ತು ಭೋಗ ನಂದೀಶ್ವರ ದೇವಾಲಯಗಳಲ್ಲಿ ಅಕ್ಕಪಕ್ಕದ ರಚನೆಗಳಾಗಿ ಗುರುತಿಸಬಹುದು. ಇದೇ ರೀತಿ ಬೇಗೂರಿನ ದೇವಾಲಯಗಳಲ್ಲಿ ಕಾಣಬಹುದು. ಕಂಬದಹಳ್ಳಿಯ ಬಸದಿಯಲ್ಲಿಯೂ ಸಹ ಎರಡು ವಿಧಗಳನ್ನು ಗುರುತಿಸಬಹುದು.

ಚಿಕ್ಕವೋಲುವಿನ ಗೋಲಿಂಗೇಶ್ವರ ಮತ್ತು ಬನವಾಸಿ ಸಂಗಂನಲ್ಲಿರುವ ಭುಜಂಗೇಶ್ವರ ದೇವಾಲಯಗಳಲ್ಲಿ ಮೇಲೆ ಗುರುತಿಸುವ ಲಕ್ಷಣಗಳನ್ನು ಗಾಳಿಗೆ ತೂರಿವೆ. ಈ ದೇವಾಲಯಗಳಲ್ಲಿ ಕರ್ಣಭಾಗದಲ್ಲಿ ವೃತ್ತ ಕುಮುದವೂ ಮಧ್ಯ ಅಥವಾ ಭದ್ರಭಾಗದಲ್ಲಿ ತ್ರಿಪಟ್ಟ ಕುಮುದ ರಚನೆಯಿದೆ ! ತ್ರಿಪಟ್ಟ ಕುಮುದ ಹಾಗೂ ತ್ರಿಪಟ್ಟ ರಚನೆಗೆ ಪರಸ್ಪರ ಸಂಬಂಧವಿಲ್ಲವೆಂದು ತಿಳಿಯಬೇಕು. ತ್ರಿಪಟ್ಟ ರಚನೆಯು ಪ್ರತಿಬಂಧದ ಪ್ರಭೇದಗಳಿಗೆ ಸೀಮಿತವಾಗಿದೆ. ತ್ರಿಪಟ್ಟದ ನಂತರ ಪ್ರತಿಯನ್ನು ರಚಿಸಬೇಕು. ತ್ರಿಪಟ್ಟವು ಕೆಲವೆಡೆ ಅಂತರಿತಕ್ಕೆ ಪರ್ಯಾಯವೆಂಬಂತೆ ಬಂದಿದೆ.

> ತ್ರಿಪಟ್ಟೋರ್ಧ್ವೇ ಪ್ರತಿಹ್ಯೇವಂ ಸರ್ವತ್ರ ಪರಿಕಲ್ಪಯೇತ್32

ತ್ರಿಪಟ್ಟ ರಚನೆಯಲ್ಲಿಯೂ ಪುನಃ ಎರಡು ಪ್ರಭೇದಗಳು ಗುರುತಿಸಲ್ಪಡುತ್ತವೆ. ಆದರೆ ತ್ರಿಪಟ್ಟವನ್ನು ಖಚಿತವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಕಾಶ್ಯಪ ಶಿಲ್ಪ ಗ್ರಂಥಕಾರನು ಪ್ರತಿವಕ್ರ, ನಲಿನಕಾಂತ, ಸ್ಕಂದ ಸ್ಕಂದ ಎಂಬ ಪ್ರಭೇದಗಳಲ್ಲಿ ತ್ರಿಪಟ್ಟ ರಚನೆಯನ್ನು ವಿಧಿಸಿದ್ದಾನೆ. ಈ ಶಾಸ್ತ್ರ ಗ್ರಂಥಗಳು ಗುರುತಿಸುವ ಅಧಿಷ್ಠಾನದ ಪ್ರಭೇದಗಳನ್ನು ಒಟ್ಟಾರೆ ಸೂತ್ರೀಕರಿಸಿ ಹೇಳಲು ಸಾಧ್ಯವಿಲ್ಲ. ಇವು ನಿಶ್ಚಿತ ಪ್ರದೇಶದಲ್ಲಿ

---

30 ಕಾಶ್ಯಪ ಶಿಲ್ಪ, ಪು. ೧೭, ಪ : ೬, ಶ್ಲೋ : ೨೬

31 ಅದೇ., ಪು. ೨೪, ಪ : ೬, ಶ್ಲೋ : ೧೧೮-೧೧೯

ನಿಶ್ಚಿತ ಅವಧಿಯಲ್ಲಿ ಪ್ರಚಲಿತದಲ್ಲಿದ್ದ ಪ್ರಭೇದಗಳಿರಬಹುದು. ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಪಾದಬಂಧ ಮತ್ತು ಪ್ರತಿಬಂಧ ರಚನೆಗಳಲ್ಲಿ ಗ್ರಂಥದಿಂದ ಗ್ರಂಥಕ್ಕೆ ಹಲವು ವ್ಯತ್ಯಾಸಗಳುಂಟು.

ಪಾದಬಂಧ

ಜನ್ಮಾದಿ ವಾಜನಾಂತಂಸ್ಯಾತ್ ಕುಟ್ಟಿ ಮೋದಯಮೀರಿತಂ
ತದುತ್ಸೇಧಂ ಚತುರ್ವಿಂಶತ್ ಕೃತ್ವಾಷ್ಟಭಾಗಂತು ವಪ್ರಕಂ
ಕುಮುದೋತ್ಸೇಧಂ ಸಪ್ತಾಂಶಂ ಕಂಪಮೇಕೇನಕಾರಯೇತ್
ಕರ್ಣತುಂಗಂ ತ್ರಯಂಶಂ ಸ್ಯಾತ್ತದೋರ್ಧ್ವೇ ಕಂಪಂ
ಶಿವಾಂಶಕಂ
ಪಟ್ಟಿಕೋಚ್ಚ ಗುಣಾಂಶಂ ಸ್ಯಾತ್‌ಕಂಪಮಂಶೇನ
ಯೋಜಯೇತ್ (ಮಾನಸಾರ)33

ಅಧಿಷ್ಠಾನಸ್ಯಚೋತ್ಸೇಧಂ ಪಂಚವಿಂಶತಿ ಭಾಜಿತೇ
ಶಿವಾಂಶಂ ಪಾದುಕೋತ್ಸೇಧಂ ಜಗತೀ ವಸುಭಾಗಯಾ
ಧಾತ್ವಂಶಂ ಕುಮುದೋತ್ಸೇಧಂ ವ್ಯೋಮಾಂಶಂ
ಕಂಪಮಾನಕಂ
ಅತಲಾಂಶಂ ಗಲೋತ್ಸೇಧಂ ಶಶ್ಯಂಶೇ ಊರ್ಧ್ವಕಂಪಕಂ
ಮಹಾಪಟ್ಟೀ ಗುಣಾಂಶಂ ತು ತದೂರ್ಧ್ವಾಂಶಕೇನ ಕಂಪಕಂ
ಪಾದ ಬಂಧಮಿತಿ ಖ್ಯಾತಮುಪಾನ ರಹಿತಂ ತಥಾ
(ಕಾಶ್ಯಪ ಶಿಲ್ಪ)34

ತೇಷಾಂಕ್ರಮೇಣ ಭಾಗಾನ್ ವಕ್ಷಾಮಿ ತತ್ರ
ಅಧಿಷ್ಠಾನೋತ್ಸೇಧಂ
ತ್ರಯೋ ವಿಂಶತಿ ಭಾಗಂಕೃತ್ವಾಂ ಜನ್ಮತಲೋಪರಿ, ಏಕಾಂಶಂ ಖುರಂ, ಅಷ್ಟಾಂಶಾಜಗತೀ, ಸಪ್ತಾಂಶಂ ತ್ರಿಪಟ್ಟ ಕುಮುದಂ ಏಕಾಂಶಂ ಕಂಪಂ, ದ್ವಯಂಶಂ ಕಂಠಂ, ಏಕಾಂಶಂ ಕಂಪಂ ದ್ವಯಂಶಂ ಮಹಾಪಟ್ಟೀ, ಏಕಾಂಶೋರ್ಧ್ವೇ ಪಟ್ಟಿಕಾಚ
ಏತತ್‌ಪಾದಬಂಧಂಸ್ಯಾತ್
(ವಿಮಾನಾರ್ಚನ ಕಲ್ಪ)35

ಪ್ರತಿಬಂಧ

ಉತ್ಸೇಧಂ ಅಷ್ಟದಶಾಂಶಂ ಕೃತ್ವಾ ಏಕಾಂಶಂ
ಖುರಂ ಏಕಾಂಶಂ
ಪದ್ಮಂ ಷಡಶಂ ಜಗತೀ, ಪಂಚಾಂಶಂ ವೃತ್ತಕುಮುದಂ
ಏಕಾಂಶಂ ಅಲಿಂಗ
ಏಕಾಂಶಂ ಅಂತರಿತಂ ದ್ವಯಂಶಂ ಪ್ರತಿಮುಖಂ
ಏಕಾಂಶಂ ವಾಜನ
ಏತತ್ ಪ್ರತಿಬಂಧಂ ಸ್ಯಾತ್
(ವಿಮಾನಾರ್ಚನ ಕಲ್ಪ)36

ಅಧಿಷ್ಠಾನಸ್ಯ ಚ್ಯೋತ್ಸೇಧಮೇಕೋನ ವಿಂಶದಂಶಿತೇ
ಉಪಾನಂ ಚೇತ್ ಭಾಗೇನ ಸಪ್ತಾಂಶೇ ಜಗತೀಭವೇತ್
ಷಡಂಶಂಕುಮುದೋತ್ಸೇಧಮಲಿಂಗಂ ತ್ವೇಕ ಭಾಗಯಾ
ತ್ರಿಪಟ್ಟಂತ್ವೇಕ ಭಾಗೇನ ಪ್ರತ್ಯುತ್ಸೇಧಂ ದ್ವಿಭಾಗಯಾ
ವಾಜನಂ ಚೈವಭಾಗೇನ ಪ್ರತಿಬಂಧ ಮಿದಂ ಜಗತ್
(ಕಾಶ್ಯಪ ಶಿಲ್ಪ)37

ಯಸ್ಮಾಧಿಷ್ಠಾನಮುತ್ಸೇಧಂ ಪಂಚಾದಶ ವಿಭಾಗಂ ಕೃತ್ವಾ
ಪ್ರಥಮಶ್ಚೈಕಭಾಗಸ್ತು ಪಂಚಾಂಶೂ ಜಗತೀ ಭವೇತ್
ಕುಮುದಂ ತಚ್ಚತುರ್ಥಾಂಶಂ ಸ್ಕಂದಂತದ್ವಯಶಂಕಂ
ದ್ವಯಂಶಂ ಪ್ರತಿರುತ್ಸೇಧಂ ವಾಜನಂ ಚೈಕ ಭಾಗಿಕಂ
ಪ್ರತಿಬಂಧ ಮಿದಂ ನಾಮ್ನಾ ಕೀರ್ತಿತಂ ಕಮಲೋದ್ಭವ
(ಪಾದ್ಮ ಸಂಹಿತೆ)38

ಅಧಿಷ್ಠಾನ ರಚನೆಯಲ್ಲಿ ಉಪಾನ (ಖುರ/ಪಾದುಕೆ), ಜಗತಿ (ಮಹಾ ಪದ್ಮ) ಕುಮುದ, ಕಂಠ (ಕರ್ಣ/ಗಲ/ಕಂಧರ/ಸ್ಕಂದ/ಗ್ರೀವ) ಮತ್ತು ಪಟ್ಟಿಕಾ ಸ್ತರಗಳಿವೆ. ಇವು ಪಾದಬಂಧದ ಸಾಮಾನ್ಯ ಸ್ತರಗಳು. ಪ್ರತಿಬಂಧ ರಚನೆಯಲ್ಲಿ ಪಟ್ಟಿಕೆಗೆ ಬದಲಾಗಿ ಪ್ರತಿ ಮತ್ತು ವಾಜನ ಸ್ತರಗಳು ಕಾಣಿಸಿಕೊಳ್ಳುತ್ತವೆ. ಸ್ತರಗಳ ವೈವಿಧ್ಯ ಮಯ ಜೋಡಣೆಯೇ ಹಲವು ಪ್ರಭೇದಗಳ ಉತ್ಪತ್ತಿಗೆ

32 ಕಾಶ್ಯಪ ಶಿಲ್ಪ, ಶ್ಲೋ : ೧೧೭

33 ಮಾನಸಾರ.

34 ಕಾಶ್ಯಪಶಿಲ್ಪ. ಪು. ೧೮, ಪ : ೬, ಶ್ಲೋ : ೩೩–೩೫

35 ವಿಮಾನಾರ್ಚನ ಕಲ್ಪ, ಪು. ೩೦, ಪ. ೮

36 ಅದೇ., ಪು. ೩೧

37 ಕಾಶ್ಯಪ ಶಿಲ್ಪ. ಪು. ೧೫. ಪ. ೬. ಶ್ಲೋ: ೩೦-೩೨

38 ಪಾದ್ಮ ಸಂಹಿತೆ. ಪು. ೪೬, ಅ. ೭. ಶ್ಲೋ : ೪೬-೪೮

ಕಾರಣವಾಗಿದೆ. ಈ ಪ್ರಮುಖ ಸ್ತರಗಳೊಂದಿಗೆ ಕಂಪ/ಕ್ಷೇಪಣ ಮತ್ತು ಪದ್ಮ ಸ್ತರಗಳಿವೆ. ಸ್ತರಗಳ ಗಾತ್ರ ಹಾಗೂ ಜೋಡಣೆಯನ್ನು ಶೋಭೆಗೆ ತಕ್ಕಂತೆ ಶಾಸ್ತ್ರಗಳು ನಿರ್ದೇಶಿಸಿವೆ.

ತದೇವ ಕ್ಷೇಪಣಂ ಸರ್ವೇ ಯಥಾ ಶೋಭಂ ತು
ಕಾರಯೇತ್[39]

ದೇವಾಲಯದ ಕರ್ತೃವನ್ನು ಅನುಸರಿಸಿ ಅವನ ಇಚ್ಛೆಗೆ ತಕ್ಕಂತೆ ಅಧಿಷ್ಠಾನವನ್ನು ರಚಿಸಬಹುದು.

ಷ್ಠಾನಂ ವಾಪ್ಯಧಿಕಂ ವಾಪಿಕಾರಯೇತ್ ಕರ್ತೃರಿಚ್ಛಯಾ[40]

ವಿಮಾನಾರ್ಚನಕಲ್ಪ ಗ್ರಂಥದಲ್ಲಿ,ಪಾದಬಂಧ,ಪದ್ಮ ಬಂಧ, ಪುಷ್ಪಬಂಧ, ಶ್ರೀಪ್ರಿಯಾಂಬುಜ, ಪ್ರತಿಬಂಧ, ಪ್ರತಿಕ್ರಮ, ಕಪೋತಬಂಧ, ಶ್ರೀಬಂಧ ಎಂದು ಎಂಟು ಪ್ರಭೇದಗಳಿವೆ. ಮೊದಲ ನಾಲ್ಕು ಪಾದಬಂಧದ ಪ್ರಭೇದಗಳೆನಿಸಿದ್ದು, ನಂತರದ ನಾಲ್ಕು ಪ್ರತಿಬಂಧಕ್ಕೆ ಸಂಬಂಧಿಸಿದೆ. ಪಾದಬಂಧ ಮತ್ತು ಪದ್ಮಬಂಧಗಳಲ್ಲಿ ತ್ರಿಪಟ್ಟ ಕುಮುದ ರಚನೆಯಿದೆ. ಪುಷ್ಪಬಂಧ ಮತ್ತು ಶ್ರೀಪ್ರಿಯಾಂಬುಜಗಳಲ್ಲಿ ಕುಮುದದ ಕೆಳಗೆ ಮತ್ತು ಮೇಲ್ಗಡೆ ಪದ್ಮವಿದ್ದು ವೃತ್ತ ಕುಮುದವನ್ನು ಹೊಂದಿವೆ.

ಪದ್ಮಬಂಧ ರಚನೆಯು ಪಾದಬಂಧದ ಪ್ರಭೇದ ವೆನಿಸಿದ್ದು ಉಪಾನಾನಂತರ ಪದ್ಮ ರಚನೆಯಿದೆ. ಕೆಲವು ಪ್ರಭೇದಗಳಲ್ಲಿ ಜಗತಿಗೆ ಪರ್ಯಾಯವಾಗಿ ತುಸು ಎತ್ತರ ವಾದ ಪದ್ಮ ರಚನೆಯಿದ್ದು ಮಹಾ ಪದ್ಮ ಎಂದು ಗುರುತಿಸಲಾಗುತ್ತದೆ. ಕೆಲವೊಮ್ಮೆ ಜಗತಿಯ ತುದಿಯು ಚೌಕಾಕಾರವಾಗಿರದೆ ವೃತ್ತಾಕಾರವಾಗಿದ್ದು ಕುಂಭ ಎಂದು ಗುರುತಿಸಲಾಗುತ್ತದೆ. ತಮಿಳುನಾಡಿನ ಕೆಲವು ದೇವಾ ಲಯಗಳಲ್ಲಿ ಜಗತೀ ರಚನೆಯ ಮೇಲೆ ಉಬ್ಬು ಶಿಲ್ಪಗಳುಂಟು.

ಪ್ರತಿಬಂಧ ಮತ್ತು ಪ್ರತಿಕ್ರಮಗಳಲ್ಲಿ ವೃತ್ತ ಕುಮುದವಿದ್ದು ನಂತರ ಆಲಿಂಗ, ಅಂತರಿತ, ಪ್ರತಿ ಮತ್ತು ವಾಜನ ಸ್ತರಗಳಿವೆ.

ಕಪೋತಬಂಧ, ಮತ್ತು ಶ್ರೀಬಂಧ ಪ್ರಭೇದಗಳಲ್ಲಿ ಕುಮುದ ರಚನೆಯ ನಂತರ ಕಂಠ, ಕಪೋತ ರಚನೆಯಿದ್ದು ತದನಂತರ ಆಲಿಂಗ, ಅಂತರಿತ, ಪ್ರತಿ, ವಾಜನ ಸ್ತರ ಗಳಿವೆ. ಈ ಪ್ರಭೇದಗಳಲ್ಲಿ ಸಾಮಾನ್ಯವಾಗಿ ವೃತ್ತ ಕುಮುದವನ್ನು ಕಾಣಬಹುದು. ಪ್ರತಿ ರಚನೆಯೊಂದಿಗೆ ಹಲವಾರು ಅಲಂಕಾರಗಳನ್ನು ಪಾದಸಂಹಿತೆಯು ವಿವರಿಸಿದೆ.

ತಧ್ವ್ಯಯಾರ್ಥಂ ಪ್ರತಿಮುಖಂ ಸರ್ವಾವಯವ ಶೋಭಿತಂ
ಸಿಂಹೈಶ್ಚ ಮಕರೈರ್ವಾ್ಯಲೈರ್ವಲ್ಲೀ ಪತ್ರೈರಲಂಕೃತಂ
ಪ್ರಮುಖಂ ಮಕರಾಸ್ಯಂ ಸ್ಯಾನ್ಮಕರಧ್ವಜ ಸಂಯುತಂ
ಮಕರಾಸ್ಯೇಭ ನಿಷ್ಕ್ರಾಂತಂ ವ್ಯಾಲ ವಿದ್ಯಾಧರೀಗಣಾಃ[41]

ಕಾಶ್ಯಪಶಿಲ್ಪ, ಮಯಮತ, ಮಾನಸಾರ ವಾಸ್ತು ಗ್ರಂಥಗಳಲ್ಲಿ ಹಲವಾರು ಪ್ರಭೇದಗಳನ್ನು ವಿವರಿಸಲಾಗಿದ್ದು ಇವೆಲ್ಲವನ್ನೂ ಪ್ರಸ್ತುತ ಕಾಣುವ ರಚನೆಗಳಲ್ಲಿ ಖಚಿತ ವಾಗಿ ಗುರುತಿಸಲು ಸಾಧ್ಯವಾಗಿಲ್ಲ.

ಅಧಿಷ್ಠಾನಾ ನಂತರ ಕೆಲವು ದೇವಾಲಯಗಳಲ್ಲಿ ವೇದಿಕಾ ರಚನೆಯನ್ನು ಕಾಣುತ್ತೇವೆ. ವೇದಿಕಾ ರಚನೆ ಯನ್ನು ದೇವಾಲಯಗಳಲ್ಲಿ ಎರಡು ಕಡೆಗಳಲ್ಲಿ ಗುರುತಿಸ ಬಹುದು. ಅಧಿಷ್ಠಾನದ ಮೇಲ್ಭಾಗದಲ್ಲಿಯೂ, ಮತ್ತೊಂದೆಡೆ ಪ್ರಸ್ತರದ ಮೇಲ್ಭಾಗದಲ್ಲಿಯೂ ಕಾಣ ಬಹುದು.

ಅಧಿಷ್ಠಾನೋಪರಿಷ್ಠಾತ್ತು ಸ್ತಂಭಮೂಲೇ ಚ ಕಲ್ಪಯೇತ್
ಪ್ರಸ್ತರಸ್ಯೋಪರಿಷ್ಠಾತ್ತು ಕರ್ತವ್ಯಾ ವೇದಿಕಾದ್ವಿಜಾ[42]

ಅಧಿಷ್ಠಾನದ ಸ್ತರಗಳನ್ನು ವೇದಿಕೆಯ ಸ್ತರಗಳೂ

---

39 ಪಾದ್ಮ ಸಂಹಿತೆ,

40 ಕಾಮಿಕಾಗಮ, ಪು. ೧೪೦, ಪ. ೫೨, ಶ್ಲೋ ೬೭

41 ಪಾದ್ಮ ಸಂಹಿತೆ, ಪು. ೪೭, ಅ. ೭, ಶ್ಲೋ ೫೬-೫೭

42 ಕಾಶ್ಯಪ ಶಿಲ್ಪ, ಪು. ೩೦, ಅ. ೧೦, ಶ್ಲೋ ೧-೨

ಅನುಸರಿಸುವುದರಿಂದ ಅಧಿಷ್ಠಾನದೊಂದಿಗೆ ಗುರುತಿಸುವುದು ಸಮಂಜಸವೆನಿಸಿದೆ. ಕೆಲವ್ರೊಮ್ಮೆ ಅಧಿಷ್ಠಾನದ ಸ್ತರಗಳು ಭೂಮಿಯಲ್ಲಿ ಮರೆಯಾಗಿದ್ದು ಅಧಿಷ್ಠಾನದ ನಂತರ ಕಾಣುವ ವೇದಿಕಾ ಸ್ತರಗಳು ಗಲಿಬಿಲಿಗೊಳಿಸುತ್ತವೆ. ವೇದಿಕಾ ರಚನೆಯನ್ನು ವಾಸ್ತುಗ್ರಂಥಗಳು ಸವಿಸ್ತಾರವಾಗಿ ಬಣ್ಣಿಸಿವೆ.

ಷಡಂಶೇ ವೇದಿಕೋತ್ಸೇಧಂ ಗುಣಾಂಶಂಗಲಮಾನಕಂ
ಗಲೋರ್ಧ್ವೇ ಕಂಪಮೇಕಾಂಶಯೇಕೇನಾಬ್ಜಂ ಕಲ್ಪಯೇತ್
ತದೂರ್ಧ್ವೇ ಕಂಪಮೇಕಾಂಶಂ ಕರ್ತವ್ಯಂದ್ವಿಜಸತ್ತಮಾ
ಸಪ್ತಾಷ್ಟಾಂಶೇ ತು ವೇದ್ಯುಚ್ಛ್ರೈರ್ವೇದ ಭೂತಂ ಕ್ರಮಾದಲಂ
ಕಂಠಂ ಪದ್ಮಂ ಚ ಕಂಪಂ ಪ್ರಾಗಿವೈವ ಪ್ರಕಲ್ಪಯೇತ್[43]

ಕಾಶ್ಯಪ ಶಿಲ್ಪ ಗ್ರಂಥದಲ್ಲಿರುವ ವಿವರಣೆಯಂತೆ, ವೇದಿಕೆಯು ಕಂಠ, ಕಂಪ, ಪದ್ಮ, ಪುನಃ ಕಂಪಸ್ತರವನ್ನು ಹೊಂದಿದೆ.

ಆರು ಭಾಗವುಳ್ಳ ವೇದಿಕೆಯಲ್ಲಿ ಕಂಠವು ಮೂರು ಭಾಗವುಳ್ಳದ್ದು. ಇನ್ನಿತರ ಸ್ತರಗಳು ಒಂದೊಂದು ಭಾಗವಿದೆ. ಏಳು ಅಥವಾ ಎಂಟು ಭಾಗಗಳಿರುವ ವೇದಿಕಾ ರಚನೆಯಲ್ಲಿ ಕಂಠವು ನಾಲ್ಕು ಅಥವಾ ಐದು ಭಾಗಗಳಿಂದ ಕೂಡಿದೆ. ಕಂಠಭಾಗದಲ್ಲಿ ನಿಯಿತ ಅಂತರದಲ್ಲಿ ಗಲಪಾದ ರಚನೆಯಿದೆ.

ಸರ್ವೇಷಾಂ ವೇದಿಕಾನಾಂ ತು ಗಲಮಂತ್ರ ವಿಭೂಷಿತಂ[44]

ಕೆಲವು ದೇವಾಲಯಗಳಲ್ಲಿ ಗಲಪಾದವೂ ಅಲಂಕರಣವುಳ್ಳದ್ದು ಅಜಿತಾಗಮ ಗ್ರಂಥವು ಒಂಬತ್ತು ಭಾಗಗಳಿರುವ ವೇದಿಕಾ ರಚನೆಯನ್ನು ಗುರುತಿಸಿದೆ. ಈ ವಿವರಣೆಯಂತೆ ಅಧಿಷ್ಠಾನಾ ನಂತರ ಕಂಪ–೧ ಭಾಗ, ಗಲ–೪ ಭಾಗ, ಪಟ್ಟ–೧ ಭಾಗ, ವೇದಿಕಾ–೨ ಭಾಗ, ಪುನಃ ಪಟ್ಟಿಕಾ–೧ ಭಾಗ ಎಂದು ಸೂಚಿಸಿದೆ.

ಪಾದಮೂಲೇ ಅಂಶತಃ ಕುರ್ಯಾತ್ ಕಂಪಂ
ವೇದಾಂಶಕೈರ್ಗಲಂ
ತದೂರ್ಧ್ವೇ ಪಟ್ಟಮೇಕಾಂಶಂ ಸ್ಯಾತ್ದ್ವಯಂಶೇನೋಪರಿ
ವೇದಿಕಾ
ತದೋರ್ಧ್ವೇಪಟ್ಟಿಕಾಂಶಾಸ್ಯಾತ್ತದೂರ್ಧ್ವೇ ಅಂಘ್ರಿಂ
ಪ್ರಕಲ್ಪಯೇತ್[45]

43 ಕಾಶ್ಯಪಶಿಲ್ಪ., ಪು. ೩೧, ಅ. ೧೮. ಶ್ಲೋ : ೮-೧೦
44 ಅದೇ., ಶ್ಲೋ : ೧೨
45 ಅಜಿತಾಗಮ, ಪು. ೯೩, ಪ. ೨೪, ಶ್ಲೋ ೩-೪

ಶ್ರೀಮತಿ ಸಿ. ಆರ್. ಶ್ಯಾಮಲ*

# ಬೆಳಕಿಗೆ ಬಂದಿರದ ಅಂಬರೇಶ್ವರ ದೇವಾಲಯ

ಮುಂಬಯಿಯಿಂದ ಪುಣೆಗೆ ಹೋಗುವ ರೈಲು ಮಾರ್ಗದಲ್ಲಿ ಅಂಬರನಾಥ ನಿಲ್ದಾಣ ಸಿಗುತ್ತದೆ. ಇದು ಕೊಲಾಬಾ ತಾಲ್ಲೂಕಿನ ಥಾನಾ ಜಿಲ್ಲೆಗೆ ಒಳಪಟ್ಟಿದೆ. ಇಲ್ಲಿ ಇಳಿದು ಪೂರ್ವಾಭಿಮುಖವಾಗಿ ಮೂರು ನಾಲ್ಕು ಕಿ. ಮೀ. ಹೋದರೆ ವಾಲ್ದನ್ ನದಿಯು ಒಂದು ಶಾಖೆ ಹರಿಯುವುದು ಕಂಡುಬರುತ್ತದೆ. ಈ ಹೊಳೆಯನ್ನು ದಾಟಿ (ಈಗ ಸೇತುವೆ ಕಟ್ಟಿದ್ದಾರೆ) ಆ ಕಡೆಯ ದಡಕ್ಕೆ ಹೋದರೆ ಸುಂದರವಾದ ಒಂದು ಪುರಾತನ ದೇವಾಲಯ ವನ್ನು ಕಾಣುತ್ತೇವೆ. ಇದೇ ಇಲ್ಲಿಯ ಅಂಬರೇಶ್ವರ ದೇವಾಲಯ. ಇದನ್ನು ನೋಡಿದಾಗ ಡಂಬಳದ ಈಶ್ವರ ದೇವಾಲಯ, ಇಟ್ಟಗಿ (ಕೊಪ್ಪಳ)ಯ ಮಹದೇವ ಹಾಗೂ ಲಕ್ಷ್ಮೇಶ್ವರದ ಸೋಮನಾಥ ದೇವಾಲಯಗಳು ಕಣ್ಮುಂದೆ ಸುಳಿಯುವುವು. ಈ ಅಂಬರೇಶ್ವರ ದೇವಾಲಯದ ಒಂದು–ಒಂದೂವರೆ ಕಿ.ಮೀ ಪಶ್ಚಿಮದಲ್ಲಿ ಒಂದು ಹಳ್ಳಿಯಿದೆ. ಈ ಹಳ್ಳಿಗೂ, ಈ ಹಳ್ಳಿಯಿಂದಾಗಿ ನಿಲ್ದಾಣಕ್ಕೂ ಈ ದೇವಾಲಯದಿಂದಲೇ ಅಂಬರನಾಥ ಎಂಬ ಹೆಸರು ಬಂದಿದೆ. ಈ ಸ್ಥಳ ಎತ್ತರವಾದ ಪ್ರದೇಶದಿಂದ ಆವೃತವಾಗಿದೆ. ದಕ್ಷಿಣದಲ್ಲಿ ತಾವಳಿ ಮತ್ತು ಶ್ರೀಮಲಂಗ ಎಂಬ ಬೆಟ್ಟಗಳು ನಿಂತಿವೆ.

ಅಂಬರೇಶ್ವರ ದೇವಾಲಯವು ತಗ್ಗಿನಲ್ಲಿದೆ. ಇದನ್ನು ಕರಿಶಿಲೆ (ಅಗ್ನಿಶಿಲೆ)ಯಿಂದ ಕಟ್ಟಲಾಗಿದೆ. ಆದರೆ ಈಗ ಕರಿಕಲ್ಲು ಗಾಳಿ ಬಿಸಿಲು ಮಳೆಯಿಂದಾಗಿ ಅಲ್ಲಲ್ಲಿ ಹಾವಸೆಯಿಂದಲೋ, ಬೂಸಲು ಬಂದೋ ಬೂದು ಬಣ್ಣಕ್ಕೆ ತಿರುಗಿದ್ದರೆ ಕೆಲವು ಕಡೆ ಹಳದಿಯಲಾಗಿದೆ. ಈ ಕಟ್ಟಡವು ಚಾಲುಕ್ಯ ಅಥವಾ ಹೇಮಾಡ ಪಂಥ ರೀತಿಯಲ್ಲಿ ಬಹುಕೋಣಾಕಾರವಾಗಿ ಎಂದರೆ ನಕ್ಷತ್ರಾಕಾರವಾಗಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು ಗರ್ಭ ಗೃಹ, ಅಂತರಾಳ ಹಾಗೂ ಸಭಾಮಂಟಪಗಳಿಂದ ಕೂಡಿ ದ್ದಾಗಿದೆ. ಸುತ್ತಲೂ ಪ್ರದಕ್ಷಿಣಾಪಥವಿದೆ. ಈ ದೇವಾಲಯಕ್ಕೆ ಉತ್ತರ, ಪಶ್ಚಿಮ ಹಾಗೂ ದಕ್ಷಿಣ ದಿಕ್ಕಿನಲ್ಲಿ ಮೂರು ಪ್ರವೇಶ ದ್ವಾರಗಳಿವೆ. ಪುರಾತನ ಕಾಲದ ಎರಡು ನಂದಿಗಳಿವೆ. ಒಂದು ಅಲಂಕೃತಗೊಂಡ ನಂದಿ, ಕಾಲದ ಹೊಡೆತಕ್ಕೆ ಒಡೆದಿದೆ. ಇನ್ನೊಂದು ಸಾದಾ ನಂದಿ ಇದೆ. ಆದ್ದರಿಂದ ಮುಖ್ಯ ಪ್ರವೇಶದ್ವಾರ ಪಶ್ಚಿಮ ದಿಕ್ಕಿನಲ್ಲಿದೆ. ಈ ದ್ವಾರ ಮಂಟಪಗಳಿಗೆ ಗುಮ್ಮಟಗಳಿವೆ. ಈ ದ್ವಾರ ಮಂಟಪಗಳು ಸುಮಾರು ೧೨ ಅಡಿ ಇದ್ದು ಚತುಸ್ರಾಕಾರವಾಗಿದೆ. ಗುಮ್ಮಟಗಳು ಸುಂದರವಾಗಿ ಕೆತ್ತಿರುವ ನಾಲ್ಕು ಜೊತೆ ಕಂಬಗಳ ಮೇಲೆ ನಿಂತಿವೆ.

ದ್ವಾರಮಂಟಪಗಳ ಹೊಸಲುಗಳು ಹಂಸಗಳ ಸಾಲಿನಿಂದ ಕೆತ್ತಲ್ಪಟ್ಟು, ಸುಂದರವಾಗಿ ತೋರುವುವು. ಆದರೂ ಅಲ್ಲಲ್ಲಿ ಸವೆದ ಭಾಗವನ್ನೂ ಕಾಣುತ್ತೇವೆ. ಒಳಗೆ ಉತ್ಕೃಷ್ಟವಾದ ಕೆತ್ತನೆ ಕೆಲಸ ಮಾಡಿದಂತಹ ೧೨ ಕಂಬಗಳಿರುವ ಸುಮಾರು ೨೨ ಅಡಿ ಉದ್ದಗಲದ ವಿಶಾಲ ವಾದ ಸಭಾಮಂಟಪ. ಮಧ್ಯದಲ್ಲಿ ನಾಲ್ಕು ಇಂಚು ಎತ್ತರದಲ್ಲಿ ಸುಮಾರು ೧೩ ಅಡಿಯ ಒಂದು ಚೌಕವಿದ್ದು,

* ನಿವೃತ್ತ ಕನ್ನಡ ಅಧ್ಯಾಪಕಿ, ಮುಂಬೈ.

ಈ ಚೌಕದ ಸುತ್ತಲೂ ಇರುವ ನಾಲ್ಕು ಕಂಬಗಳ ಕೆತ್ತನೆ ಯಂತೂ ವರ್ಣಿಸಲಸದಳ. ಒಂದೊಂದು ಕಂಬದಲ್ಲಿಯೂ ಒಂದೊಂದು ಭಂಗಿಯಲ್ಲಿ ಗಣಪತಿಯ ಮೂರ್ತಿಯನ್ನು ಕೆತ್ತಿ ನಿಲ್ಲಿಸಲಾಗಿದೆ. ಈ ಕಂಬಗಳು ಸುಮಾರು ಹತ್ತು ಅಡಿ ಎತ್ತರವಿದೆ. ಅವುಗಳ ರಚನೆ ಅಡಿಯಲ್ಲಿ ಹತ್ತು ಅಡಿ ಇದ್ದು, ಮೇಲೆ ಅರ್ಧದ ನಂತರ ಐದು ಅಡಿ ಇವೆ. ಅವು ಕೆಳಗೆ ಚೌಕೋನಾಕಾರದಲ್ಲಿದ್ದು ಅನಂತರ ಅಷ್ಟ ಕೋನದಲ್ಲಿ ಬೆಳೆದು ಕೊನೆಗೆ ಮೇಲೆ ವರ್ತುಳಾಕಾರದಲ್ಲಿ ಮುಕ್ತಾಯಗೊಳ್ಳುತ್ತದೆ. ಈ ಕಂಬಗಳ ಮೇಲೆ ಮದನ ಕೈಗೊಂಬೆಗಳು, ವಿವಿಧ ಭಂಗಿಯಲ್ಲಿಯ ಮೂರ್ತಿಗಳನ್ನು ಕೆತ್ತಿದ್ದಾರೆ. ಮೇಲ್ನೋಟಕ್ಕೆ ಇವು ಒಂದೇ ರೀತಿಯಾಗಿ ತೋರಿದರೂ ಸೂಕ್ಷ್ಮವಾಗಿ ವೀಕ್ಷಿಸಿದಾಗ ಅವುಗಳ ವ್ಯತ್ಯಾಸ ಜೋಡಿಗಳಲ್ಲಿರುವುದು ಕಂಡುಬರುತ್ತವೆ. ಈ ಕಂಬಗಳ ಮೇಲೆ ಸಭಾಮಂಟಪದ ಗುಮ್ಮಟ ಅಥವಾ ಭುವನೇಶ್ವರಿ ಇದೆ. ಮಧ್ಯದಲ್ಲಿ ಕಮಲದ ಆಕೃತಿ ಇದ್ದು ಅದರ ಸುತ್ತಲೂ ಐದು ವರ್ತುಳ ರೇಖೆಗಳಿವೆ. ಇವುಗಳ ಸುತ್ತಲೂ ಬಳ್ಳಿ ಎಲೆಗಳನ್ನೂ ಕೆಲವು ರೇಖಾಚಿತ್ರಗಳನ್ನೂ ಈ ಗುಮ್ಮಟದ ಅಂಚಿನಲ್ಲಿ ಕೆಲವು ಮೂರ್ತಿಗಳನ್ನೂ ಕೊರೆದಿದ್ದಾರೆ.

ದ್ವಾರಮಂಟಪ, ಸಭಾಮಂಟಪ ಹಾಗೂ ಗರ್ಭ ಗೃಹಗಳಿಗೆ ಬೇರೆ ಬೇರೆ ಗೋಪುರಗಳಿವೆ. ಪಶ್ಚಿಮ ದ್ವಾರಮಂಟಪದ ಗೋಪುರದ ಕಳಸವನ್ನು ಇತ್ತೀಚೆಗೆ ಏರಿಸಿದ್ದಾರೆ. ಬಹುಶಃ ಯಾವುದಾದರೂ ದಾಳಿಯಲ್ಲಿ ಅದು ನಾಶವಾಗಿರಬೇಕು.

ಸಭಾಮಂಟಪದ ಪೂರ್ವಕ್ಕೆ ಅಂತರಾಳವಿದೆ. ಇಲ್ಲಿ ಗರ್ಭಗೃಹದ ಪ್ರವೇಶದ್ವಾರವಿದೆ. ಈ ದ್ವಾರದ ಎರಡೂ ಕಡೆಗಳಲ್ಲಿ ಗೂಡುಗಳಿವೆ. ಈ ದ್ವಾರದಲ್ಲೂ ಸುಮಾರು ಒಂದಡಿ ಎತ್ತರದ ಹೊಸಲಿದೆ. ಅದರ ಮೇಲೆ ಕೊರೆ ದಿರುವ ಹಂಸಗಳ ಸಾಲು ಮನಸೆಳೆಯುತ್ತವೆ. ಇದರ ಮೇಲ್ಭಾಗದಲ್ಲಿ ಯೋಗಾಸನದಲ್ಲಿರುವ ಶಿವ, ಆನೆ, ಹುಲಿ ಮತ್ತು ಇನ್ನೂ ಇತರ ಆಕೃತಿಗಳಿವೆ. ಈ ಆಕೃತಿಗಳು ಸವೆದಿರುವುದರಿಂದ, ಅಸ್ಪಷ್ಟವಾಗಿ ಗೋಚರಿಸುವುವು. ಗರ್ಭಗೃಹದ ದ್ವಾರದ ಎಡಬಲಗಳಲ್ಲಿ ಮೂರು ಮೂರು ಮಾನವಾಕೃತಿಗಳಿವೆ. ಬಾಗಿಲಿನ ಹತ್ತಿರ ವಿರುವ ಎರಡೂ ಆಕೃತಿಗಳು ಹೆಣ್ಣಿನದಾಗಿದ್ದು, ತಲೆಗೆ ಆಭರಣ ಹಾಗೂ ಇತರ ಆಭರಣಗಳನ್ನು ಧರಿಸಿದಂತಿವೆ. ಮಧ್ಯದಲ್ಲಿರುವ ಎರಡೂ ಕಡೆಯ ಗಂಡು ಆಕೃತಿಗಳು ಶಂಖಾಕಾರದ ಟೊಪ್ಪಿಗೆಯನ್ನು ಧರಿಸಿ, ಎಡ ಕೈಯಲ್ಲಿ ಏನನ್ನೋ ಹಿಡಿದಿರುವಂತಿವೆ. ಇವರಿಬ್ಬರು ರಾಜರಾಣಿ ಯರಿರಬಹುದು. ಮೂರನೆಯ ಆಕೃತಿಗಳು ಸವೆದು ಹೋದ ಕಾರಣ ರಾಜಪುರೋಹಿತನೋ ಮಂತ್ರಿಯೋ ಇರುವಂತೆ ತೋರುವುವು. ಚಿಕ್ಕ ಚಿಕ್ಕ ಆಕಾರದ ಮೂರ್ತಿಗಳೆಲ್ಲಾ ಪುರಜನರಿರಬಹುದು. ಗೋಡೆ ಗಳಲ್ಲಿ ಕಂಬಗಳ ಗುರುತುಗಳು ಕಂಡುಬರುತ್ತವೆ. ಇಲ್ಲಿಯ ಹೊಸಲನ್ನು ದಾಟಿ ಹೋದರೆ ಸುಮಾರು ೧೩ ಅಡಿ ಕೆಳಗೆ ಗರ್ಭಗೃಹವಿದೆ.

ಗರ್ಭಗೃಹಕ್ಕೆ ಹೋಗಲು ಒರಟಾದ, ಅಸಮವಾದ ಒಂಭತ್ತು ಮೆಟ್ಟಿಲುಗಳನ್ನು ಇಳಿಯಬೇಕು. ಗರ್ಭಗೃಹ ಒಂದು ಗುಹೆಯಂತಿದೆ. ಇದು ಸುಮಾರು ೧೪ ಅಡಿ ಚೌರಸವಾಗಿದೆ. ಸುತ್ತಲಿನ ಗೋಡೆಗಳಲ್ಲಿ ಯಾವ ಕೆತ್ತನೆಯ ಕೆಲಸವೂ ಇಲ್ಲದ ಕಲ್ಲುಗಳನ್ನು ಜೋಡಿಸಿರುವ ಗೋಡೆಗಳು. ಮಧ್ಯದಲ್ಲಿ ಎರಡು ಶಿವಲಿಂಗಗಳಿವೆ, ಅವು ಗಳಲ್ಲಿ ಒಂದು ಸ್ವಯಂಭೂಲಿಂಗ, ಸ್ವಲ್ಪ ಎತ್ತರದಲ್ಲಿ ಗೋಡೆಗಳು ಕಿರಿದಾಗುತ್ತಾ ಕೊನೆಗೆ ವರ್ತುಳಾಕಾರ ವಾಗಿದೆ. ಈ ವರ್ತುಳಾಕಾರದ ಮೇಲೆ ಗರ್ಭಗೃಹದ ಶಿಖರ ಇದ್ದಿರಬೇಕು. ಈಗ ಅದು ಬಿದ್ದುಹೋಗಿದೆ. ಗರ್ಭಗೃಹದ ನಾಲ್ಕೂ ಮೂಲೆಗಳಲ್ಲಿ ದೀಪ ಹಚ್ಚಿಡಲು ಗೂಡುಗಳಿವೆ. ಗರ್ಭಗೃಹದ ಉತ್ತರದ ಗೋಡೆಯಲ್ಲಿ ಕೆಳಗೆ ನೆಲಕ್ಕೆ ತಗಲಿ ಒಂದು ಕಿಂಡಿ ಇದೆ. ಲಿಂಗಗಳಿಗೆ ಪೂಜೆ ಮಾಡಿದ ಹಾಲು–ನೀರು ಶಾಲುಂಖೆಯ ಮುಖಾಂತರ ಈ ಕಿಂಡಿಯಿಂದ ಹಾಯ್ದು ನದಿಗೆ ಹೋಗಿ ಸೇರುತ್ತವಂತೆ. ಆಗ್ನೇಯ ದಿಕ್ಕಿನಲ್ಲಿ ನೆಲದಿಂದ ಸ್ವಲ್ಪ ಎತ್ತರದಲ್ಲಿ ಒಂದು ಕಿಂಡಿ ಇದೆ. ಇದು ಒಂದು ಕೊಳವೆ ಯಾಕಾರದಲ್ಲಿದ್ದು ಸ್ವಲ್ಪ ಓರೆಯಾಗಿ ಮೇಲೆರುತ್ತಾ ಹೋಗುತ್ತದೆ. ಇದರ ಹೊರ ಭಾಗ ಸ್ವಲ್ಪ ಅಗಲವಾಗಿ ತೊಟ್ಟಿಯಾಕಾರದಲ್ಲಿದೆ. ಒಳಗೆ ಶಿವನ ಪೂಜೆ ಮಾಡಿ ಎದ್ದುನಿಂತು ಈ ಕಿಂಡಿಯಿಂದ ನೋಡಿದರೆ ಶ್ರೀಮಲಂಗ ಬೆಟ್ಟ ಕಾಣುತ್ತದೆ. ಒಳಗೆ ಬರಲು ಸಾಧ್ಯವಾಗದಿದ್ದರೆ ಹೊರಗಡೆಯಿಂದ ದೇವರಿಗೆ ಹಾಲು–ನೀರನ್ನು ತೊಟ್ಟಿ ಯಲ್ಲಿ ಹಾಕಿದರೆ ಅದು ನೇರವಾಗಿ ಸ್ವಯಂಭೂ ಲಿಂಗದ

ಮೇಲೆಯೇ ಬೀಳುತ್ತದೆ. ಆ ಕಿಂಡಿಯ ಮುಖಾಂತರ ದೇವರ ದರ್ಶನವನ್ನೂ ಪಡೆಯಬಹುದು.

ಈ ದೇವಾಲಯವು ಸುಮಾರು ೬೦ ಅಡಿ ಉದ್ದ ಇದೆ. ನೆಲದಿಂದ ಮೇಲೆ ಯಾವ ರೀತಿಯ ಕೆತ್ತನೆಯೂ ಇಲ್ಲದಂತಹ ತಳವಿನ್ಯಾಸ. ಅದರ ಮೇಲೆ ಕೀರ್ತಿ ಮುಖದ ಸಾಲು. ಕೀರ್ತಿಮುಖ ಶಿವಗಣರಲ್ಲಿ ಒಬ್ಬನು. ಅದರ ಮೇಲಿನ ಚಿತ್ರಪಟ್ಟಿ ಆನೆ. ಅದರ ಮೇಲೆ ಚಿತ್ರ ಪಟ್ಟಿ. ಅದರ ಮೇಲೆ ಸಂಗೀತಗಾರರ ಪಟ್ಟಿ. ಮಧ್ಯ ಮಧ್ಯದಲ್ಲಿ ಗಣಪತಿ, ಲಕ್ಷ್ಮಿ, ವಿಷ್ಣು, ಪಾರ್ವತಿ, ಈಶ್ವರ, ಮುಂ. ಅದರ ಮೇಲೆ ದೇವತೆಗಳು. ಈ ಭಿತ್ತಿಶಿಲ್ಪಗಳು ಆಧಾರ ಪೀಠಗಳ ಮೇಲಿವೆ. ಇವು ದೊಡ್ಡದಾಗಿವೆ, ಪ್ರತಿಯೊಂದು ಶಿಲ್ಪಗಳು ಸುಂದರವಾಗಿ, ಕಲಾಪೂರ್ಣವಾಗಿ ಹಾಗೂ ಭಾವಯುಕ್ತವಾಗಿವೆ. ಈ ದೇವಾಲಯದಲ್ಲಿಯ ಕೆಲವು ವಿಶಿಷ್ಟವಾದ ಮೂರ್ತಿಗಳ ಬಗ್ಗೆ ಕೆಲವು ವಿವರವನ್ನು ಇಲ್ಲಿ ಹೇಳಲಾಗಿದೆ–

೧. ಉತ್ತರದ ಕಡೆಗೆ ಗರ್ಭಗೃಹದ ಶಿಖರದ ಮೇಲೆ ಸಂಜೀವಿನೀ ಪರ್ವತವನ್ನು ಎತ್ತಿ ಹಾರುತ್ತಿರುವ ಹನುಮಂತ.

೨. ಗಜಾಸುರ ವಧೆ : ಶಿವನ ಹಿಂಭಾಗದಲ್ಲಿ ಆನೆಯ ದೇಹ, ಎಡತೊಡೆಯ ಹತ್ತಿರ ಆನೆಯ ಶಿರ, ಬಲ ತೊಡೆಯ ಹತ್ತಿರ ಆನೆಯ ಬಾಲ ಕಂಡುಬರುತ್ತದೆ. ಶಿವ ತ್ರಿಶೂಲದಿಂದ ಗಜಾಸುರನನ್ನು ಕೊಲ್ಲುತ್ತಿದ್ದಾನೆ. ಇದು ಗರ್ಭಗೃಹದ ಹೊರವಲಯದಲ್ಲಿ ದಕ್ಷಿಣದಲ್ಲಿದೆ.

೩. ಮಾರ್ಕಂಡೇಯನ ಕಥೆ : ಲಿಂಗವನ್ನು ಅಪ್ಪಿಕುಳಿತ ಬಾಲಕ ಮಾರ್ಕಂಡೇಯ, ಕೋಣನ ಮೇಲೆ ಕುಳಿತಿರುವ ಯಮ, ಲಿಂಗದಿಂದ ಪ್ರಕಟನಾದ ಶಿವ.

೪. ತ್ರಿಮುಖಿ ಶಿವ : ಶಿವನ ಮೂರು ಮುಖಗಳು. ಮೂರೂ ಮುಖಗಳಿಗೆ ಜಟೆ ಹಾಗೂ ಮುಕುಟಗಳಿವೆ. ಕೊರಳಲ್ಲಿ ಹಾರ, ಸೊಂಟಪಟ್ಟಿ, ಕೈಕಾಲುಗಳಲ್ಲಿ ಅಲಂಕಾರಗಳು ಎಲ್ಲವೂ ಸುಂದರವಾಗಿವೆ. ಎರಡೂ ಕೈಗಳ ಮುಂಭಾಗ ಭಗ್ನವಾಗಿವೆ, ಎಡಗೈಯಲ್ಲಿ ಸರ್ಪ ಹಿಡಿದಿದ್ದಾನೆ, ಸ್ವಲ್ಪಭಾಗ ಕಾಣುತ್ತದೆ. ಎರಡೂ ಕಡೆಗಳಲ್ಲಿ ಸಣ್ಣ ಆಕಾರಗಳಲ್ಲಿ ಎರಡೆರಡು ಗಣಗಳಿವೆ. ಈ ಮೂರ್ತಿ ಪೂರ್ವದಿಕ್ಕಿನ ಕಡೆ ಮುಖ ಮಾಡಿ ನಿಂತಿವೆ. ಗರ್ಭಗೃಹದ ಹಿಂಬದಿಯಲ್ಲಿದೆ.

೫. ಲಿಂಗಪೂಜೆ : ಮಧ್ಯದಲ್ಲಿ ಕಂಬದಂತಹ ಲಿಂಗವಿದೆ. ಅದರ ಮೇಲೆ ಒಬ್ಬ ವ್ಯಕ್ತಿ (ನಾಲ್ಕು ತಲೆ ಯಿರುವುದರಿಂದ ಬ್ರಹ್ಮನಿರಬೇಕು) ಆಕಾಶಕ್ಕೆ ಹಾರು ತ್ತಿರುವಂತೆ, ಮತ್ತೊಬ್ಬ ವ್ಯಕ್ತಿ ಮಧ್ಯದಲ್ಲಿ ಧ್ಯಾನಾಸಕ್ತ (ಶಿವನಿರಬೇಕು)ನಂತೆ, ಮೂರನೆಯ ವ್ಯಕ್ತಿ ಕಿರೀಟ ಧರಿಸಿ ಕೈಯಲ್ಲಿ ಏನನ್ನೋ ಹಿಡಿದು (ವಿಷ್ಣು ಇರಬೇಕು) ಪಾತಾಳಕ್ಕೆ ಹೋಗುತ್ತಿರುವಂತಿದೆ. ಲಿಂಗದ ಎಡಗಡೆ ಬ್ರಹ್ಮ, ಬಲಗಡೆ ವಿಷ್ಣು ಕೈಮುಗಿದು ನಿಂತಿದ್ದಾರೆ. ಆಕಾಶದಿಂದ ದೇವತೆಗಳು ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಇದು ಆ ಲಿಂಗದ ಪೂಜೆಯ ಮಹತ್ವವನ್ನು ಹೇಳುವಂತಿದೆ. ಈ ಶಿಲಾಕೃತಿ ಗರ್ಭಗೃಹದ ಆಗ್ನೇಯ ದಿಕ್ಕಿನಲ್ಲಿ, ಗಜಾಸುರ ವಧೆಯ ಪಕ್ಕದಲ್ಲಿದೆ.

೬. ಗರ್ಭಗೃಹದ ಉತ್ತರ ಭಾಗದ ಸ್ವಲ್ಪ ಮೇಲೆ ಗೋಪುರದ ಹತ್ತಿರ ಧ್ಯಾನಾಸಕ್ತನಾಗಿರುವ ಮಹೇಶ್ವರ.

೭. ಮಹಾಕಾಳಿ : ಧ್ಯಾನಸ್ಥ ಮಹೇಶ್ವರನ ಕೆಳಗೆ ಮುಂಡಗಳ ಮಾಲೆಯನ್ನು ಧರಿಸಿ, ಅಷ್ಟಭುಜ ಗಳುಳ್ಳ, ಕೈಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದು, ನೃತ್ಯಭಂಗಿಯಲ್ಲಿರುವ ಮಹಾಕಾಳಿ.

೮. ಮಹಾಕಾಳಿಯ ಗೂಡಿನ ಕೆಳಗೆ ಮತ್ತೊಂದು ಗೂಡು. ಅದರಲ್ಲಿ ಮೂರು ತಲೆಯುಳ್ಳ ಗಡ್ಡಗಳಿರುವ ಒಂದು ಮೂರ್ತಿ. ಎಡ ತೊಡೆಯ ಮೇಲೆ ಒಂದು ಹೆಣ್ಣಿನ ಆಕೃತಿ. ಅದಾವ ಮೂರ್ತಿ ಎಂದು ಅಲ್ಲಿ ವಿಚಾರಿಸಿದಾಗ ಕೆಲವರು ಇದು ಬ್ರಹ್ಮ, ವಿಷ್ಣು, ಮಹೇಶ್ವರರ ತ್ರಿಮೂರ್ತಿ ಎಂದರು. ಮತ್ತೆ ಕೆಲವರು ಬ್ರಹ್ಮ ಎಂದರು. ಆದರೆ ತೊಡೆಯ ಮೇಲೆ ಕುಳಿತಿರು ವುದು ಸಾಮಾನ್ಯವಾಗಿ ಪಾರ್ವತಿಯೇ. ಆದ್ದರಿಂದ ಈ ಮೂರ್ತಿ ಪಾರ್ವತಿ ಸಹಿತನಾದ ಮಹೇಶ್ವರನೇ ಇರಬೇಕು.

೯. ತ್ರಿಮುಖಿ ಸ್ತ್ರೀ : ಮೂರು ಮುಖವುಳ್ಳ ಹೆಣ್ಣಾಕೃತಿಯನ್ನು ಗರ್ಭಗೃಹದ ದಕ್ಷಿಣದಲ್ಲಿ ಕಾಣ

ಬಹುದು. ಕೆಲವರು ಇದು ಗಂಗಾ, ಯಮುನಾ ಮತ್ತು ಸರಸ್ವತಿ ಎಂದರು. ಇನ್ನು ಕೆಲವರು ಲಕ್ಷ್ಮಿ, ಸರಸ್ವತಿ ಮತ್ತು ಪಾರ್ವತಿ ಎಂದರು. ಅಂತು ಅಲಂಕೃತಳಾದ, ಕಣ್ಣು ಮೂಗು ನೇರವುಳ್ಳ, ಮೂರು ತಲೆಗಳುಳ್ಳ ಒಂದು ಹೆಣ್ಣಿನ ಆಕೃತಿ.

೧೦. ವಿಷ್ಣು : ನಾಲ್ಕು ಕೈಗಳು, ಶಂಖ, ಚಕ್ರ ಮತ್ತು ಕಮಲಗಳನ್ನು ಹಿಡಿದಿದ್ದಾನೆ. ಬಲಗೈಯನ್ನು 'ಇದೇ ವೈಕುಂಠ'ವೆಂದು ತೋರಿಸುತ್ತಿದ್ದಾನೆ. ಕಿರೀಟಧಾರಿಯಾಗಿ, ಎಲ್ಲಾ ರೀತಿಯ ಅಲಂಕಾರಗಳನ್ನೂ ಧರಿಸಿ ನೈಋತ್ಯ ದಿಕ್ಕಿನಲ್ಲಿ ನಿಂತಿದ್ದಾನೆ. ಎಡಬಲ ಕಡೆಗಳಲ್ಲಿ ವಿಷ್ಣುವಿನ ಬೇರೆ ಬೇರೆ ರೀತಿಯ ಮೂರ್ತಿಗಳಿವೆ.

೧೧. ವಾಯುವ್ಯ ದಿಕ್ಕಿನಲ್ಲಿ, ಉತ್ತರದ ಕಡೆ ಮುಖ ಮಾಡಿ ನಿಂತಿರುವ ವಿಷ್ಣುವಿನ ವರಾಹ ಅವತಾರದ ಸುಂದರ ಮೂರ್ತಿಯನ್ನು ಕಾಣಬಹುದು.

೧೨. ಸಭಾಗೃಹದ ಉತ್ತರದ ಕಡೆಯ ಬಲಗಡೆ ನೃಸಿಂಹನ ಆಕೃತಿ ಭಗ್ನಾವಸ್ಥೆಯಲ್ಲಿದೆ. ಬಾಗಿಲಿನ ಹೊಸಲಿನ ಮೇಲೆ ಹಿರಣ್ಯಕಶ್ಯಪನನ್ನು ಅಡ್ಡವಾಗಿ ತೊಡೆಯ ಮೇಲೆ ಮಲಗಿಸಿಕೊಂಡು, ನಖಗಳಿಂದ ಅವನ ಹೊಟ್ಟೆಯನ್ನು ಸೀಳುತ್ತಿರುವ ರೀತಿಯಲ್ಲಿದೆ. ಪಕ್ಕದಲ್ಲಿಯೇ ಬಲಗಡೆ ಪ್ರಹ್ಲಾದ ಕೈ ಮುಗಿದು ನಿಂತಿದ್ದಾನೆ.

೧೩. ಗರುಡಾರೂಢ ವಿಷ್ಣು : ಮಾನವ ರೂಪದಲ್ಲಿರುವ ಆ ಮೂರ್ತಿ ಆಕಾಶಕ್ಕೆ ಹಾರುವಂತಿದೆ. ಅವನ ಭುಜದ ಮೇಲೆ ವಿಷ್ಣು ಶಂಖ ಚಕ್ರಸಹಿತನಾಗಿ ಆರೂಢನಾಗಿದ್ದಾನೆ. ಗರುಡನ ಹರಡಿದ ಕೈಕಳಗೆ ರೆಕ್ಕೆಯನ್ನು ಕೊರೆದಿದೆ. ಗರುಡನ ಮುಖ ಭಗ್ನವಾಗಿದೆ.

೧೪. ಲಕ್ಷ್ಮಿ : ಶಂಖ ಚಕ್ರ ಸಹಿತವಾಗಿ, ಅಭಯ ಹಸ್ತವನ್ನು ತೋರಿಸುತ್ತದೆ. ಈ ಮೂರ್ತಿ ಅತ್ಯಂತ ಸುಂದರವಾಗಿದೆ.

೧೫. ಮಹಿಷಾಸುರ ಮರ್ದಿನಿ, ಚಂಡಿಕಾ ಇನ್ನೂ ಇತರ ಮೂರ್ತಿಗಳನ್ನೂ ಇಲ್ಲಿ ಕಾಣಬಹುದು. ಪೂರ್ವದಲ್ಲಿ ನೆಲದ ಮೇಲಿನ ಗೂಡಿನಲ್ಲಿ ಭಗ್ನವಾದಂತಹ ಗಣಪತಿಯಿದೆ. ಮೊದಲು ಇದು ಒಳಗಡೆ ಸಭಾಮಂಟಪದಲ್ಲಿ ಗೂಡಿನಲ್ಲಿತ್ತಂತೆ. ಉತ್ತರ ಪ್ರವೇಶ ದ್ವಾರದ ಎಡಗಡೆಗೆ ಒಂದು ಸಣ್ಣ ದೇವಸ್ಥಾನವಿದೆ. ಇದರ ದ್ವಾರ ಬಂಧ, ಬಾಗಿಲಿನ ಚೌಕಟ್ಟಿನ ಮೇಲ್ಭಾಗ ಎಲ್ಲಾ ಮುಖ್ಯ ದೇವಾಲಯದಲ್ಲಿಯಂತೆಯೇ ಇದೆ. ಮಧ್ಯದಲ್ಲಿ ಒಂದು ಅಡಿ ಎತ್ತರದ, ಮೂರು ಅಡಿ ವರ್ತುಳದ ಒಂದು ಶಿಲೆ ಇದೆ. ಇದನ್ನು ಪಾರ್ವತಿಯ ಮಂದಿರವೆಂದು ಹೇಳುತ್ತಾರೆ. ಇದೂ ಕೂಡ ಸ್ವಯಂಭೂ. ಇದರ ಮೇಲೆ ಕೂಡ ಕೆಲವು ಆಕೃತಿಯನ್ನು ಕಾಣಬಹುದು. ಈ ರೀತಿಯ ಪಾರ್ವತಿಯ ಮಂದಿರ ಇದೊಂದೇ ಎನಿಸುತ್ತದೆ.

ಚಾಲುಕ್ಯರ ವಾಸ್ತುಶಿಲ್ಪದ ಶೈಲಿಯಂತೆ ದ್ವಾರ ಮಂಟಪ, ನವರಂಗ ಹಾಗೂ ಗರ್ಭಗೃಹವಿದೆ. ಪ್ರತಿಯೊಂದಕ್ಕೂ ಗೋಪುರಗಳು. ಈ ದೇವಾಲಯದಲ್ಲಿ ನವರಂಗ (ಸಭಾಮಂಟಪ)ದ ಮೇಲಿನ ಗೋಪುರವು ಮೆಟ್ಟಲು ಮೆಟ್ಟಲಾಗಿ ಮೇಲೇರಿದೆ. ಮಧ್ಯಮಧ್ಯದಲ್ಲಿ ಚಿತ್ರಪಟ್ಟಿಗಳನ್ನೂ ವಿಗ್ರಹಗಳನ್ನೂ ಕಾಣಬಹುದು. ಗರ್ಭಗೃಹದ ಗೋಪುರವು ಬಿದ್ದುಹೋಗಿದ್ದರೂ ಉಳಿದಿರುವ ಅವಶೇಷಗಳಿಂದ ಅದು ಸೂಚ್ಯಾಕಾರವಾಗಿ ಎತ್ತರವಾಗಿತ್ತೆಂದು ಹೇಳಬಹುದು.

ಚಾಲುಕ್ಯರು ಶೈವ, ವೈಷ್ಣವ ಸಮನ್ವಯ ಸಾಧಕರಾಗಿದ್ದುದರಿಂದ ಶೈವ ದೇವಾಲಯದಲ್ಲಿ ವಿಷ್ಣುವಿನ ಕೆಲವು ಮೂರ್ತಿಗಳನ್ನೂ ಕಾಣಬಹುದು.

ಚಾಲುಕ್ಯರ ಕಾಲದ ದೇವಾಲಯ ಇದಾಗಿತ್ತೆಂದು ಹೇಳಲು ಈ ದೇವಾಲಯದ ಉತ್ತರ ಭಾಗದ ಒಳಬಾಗಿಲುವಾಡದ ಮೇಲೆ ಸಂಸ್ಕೃತದಲ್ಲಿ ಆರು ಸಾಲಿನ ಒಂದು ಶಾಸನ ಕೊರೆಯಲ್ಪಟ್ಟಿತ್ತು ಎಂದು ಔರಂಗಾಬಾದ್‌ನ ವಾಸ್ತುಶಿಲ್ಪ ಸಂಶೋಧನಾ ಇಲಾಖೆಯವರು ಹೇಳಿದ್ದಾರೆ. ಆ ಶಾಸನದಲ್ಲಿ ಹೀಗಿದೆ– ಶ್ರಾವಣ ಶುದ್ಧ ಶುಕ್ರವಾರ ಸಂವತ ೯೮೨ (ಕ್ರಿ.ಶ. ೧೦೬೦ರಲ್ಲಿ) ಮಹಮಂಡಲೇಶ್ವರ ಮಾಮ್ವಾಣಿರಾಜದೇವನ ಆಳ್ವಿಕೆಯಲ್ಲಿ ರಾಜಪುರೋಹಿತ ಮತ್ತು ಮೂರು ಜನ ಇತರೇ ಅಧಿಕಾರಿಗಳು ಈ ದೇವಾಲಯವನ್ನು ಅವನ ಸಹೋದರ ಮಹಾಮಂಡಲೇಶ್ವರ ಚಿತ್ತರಾಜದೇವನ (ಕ್ರಿ. ಶ. ೮೧೦–೧೨೪೦) ಹೆಸರಿನಲ್ಲಿ ಕಟ್ಟಿಸಿದರು. ಈ ಸಹೋದರರು ಶಿಲಾಹಾರ ವಂಶದವರು. ಮಹಾಮಾತ್ಯ ಬಿಂಬಪ್ಪಯ್ಯ, ಮಹಾಪ್ರಧಾನ ನಾಗನಯ್ಯ, ಲೇಖಸಂಧಿ ವಿಗ್ರಹಿ ವಾಕಡ್ಡಯ್ಯ, ಮಹಾಸಂಧಿವಿಗ್ರಹಿ ಜಗಳಯ್ಯ,

ಮುಖ್ಯ ಭಂಡಾರಿ ಮಹಾದೇವಯ್ಯ, ದ್ವಿತೀಯ ಭಂಡಾರಿ ಭೈಲಯ್ಯ ಮೊದಲಾದ ಪಾರುಪತ್ಯಗಾರರ ಸಹಕಾರದಿಂದ ಅರಸನು ರಾಜ್ಯವಾಳಿದನು ; ಆಗ ರಾಜ್ಯವು ಸುಭಿಕ್ಷ ವಾಗಿತ್ತು. ರಾಜಗುರು ನಾಭಟ, ಮರಿರಾಜಗುರು ವಿಲಾಂಡ ಶಿವಭಟ್ಟ, ಜಿಲ್ಲಾ ಸಾಮಂತ ಶ್ರೀ ಸಿವರಾಜ (ಒಂಭತ್ತು ಅಕ್ಷರಗಳು ಹೋಗಿವೆ) ಇವರುಗಳು ಅಂಬರ ನಾಥ ದೇವಾಲಯವನ್ನು ಪಾಟಪಲ್ಲಿಯ ಮಹಾಮಂಡಲೇ ಶ್ವರ ಚಿತ್ತರಾಜನ ಹೆಸರಿನಲ್ಲಿ ಕಟ್ಟಿಸಿದರು. ಭಾಗಲನಿಂದ ಜೀರ್ಣೋದ್ಧಾರ ಮಾಡಲಾಯಿತು. (J.B.B.R.A.S. XII ೩೩೧) ಇದರಲ್ಲಿ ಬಂದಿರುವ ಹೆಸರುಗಳೆಲ್ಲ ಕನ್ನಡ ದವುಗಳೆನ್ನಿಸುತ್ತವೆ.

ಇಮ್ಮಡಿ ಜಯಸಿಂಹನ ಮೊದಲನೆ ಮಗ ಇಮ್ಮಡಿ ಸೋಮೇಶ್ವರನು ಕ್ರಿ. ಶ. ೧೦೪೨ ರಿಂದ ೧೦೬೮ ರವರೆಗೆ ರಾಜ್ಯ ಆಳಿದನು. ಆದರೆ ಅವನು ಭೋಗಜೀವಿ, ಕರ್ತವ್ಯ ವಿಮುಖನು ಆದ್ದರಿಂದ ಅವನ ತಮ್ಮ ೬ನೆಯ ವಿಕ್ರಮಾದಿತ್ಯನು ರಾಜ್ಯಭಾರ ನೋಡಿಕೊಳ್ಳುತ್ತಿದ್ದನು (ಕರ್ನಾಟಕ ಪರಂಪರೆ, ಸಂ. ೧). ಇವನ ಕಾಲದಲ್ಲಿ ಶಿಲಾಹಾರ ವಂಶಸ್ಥನಾದ ಮಹಾಮಂಡಲೇಶ್ವರ ಮಾಮ್ವಣಿರಾಜ ಮತ್ತು ಅವನ ಸಹೋದರ ಮಹಾ ಮಂಡಲೇಶ್ವರ ಚಿತ್ತರಾಜದೇವ ಇವರು ಠಾಣಾ ಮತ್ತು ಕೊಲಾಬಾ ಜಿಲ್ಲೆಗಳನ್ನು ಆಳುತ್ತಿರಬೇಕು. ಯಾಕೆಂದರೆ ಇವರ ರಾಜಧಾನಿ ಪುರಿಯಾಗಿತ್ತು. ಅದು ಈಗಿನ ಕೊಂಕಣದಲ್ಲಿರುವ ಘೋರಪುರಿಯಾಗಿದೆ (ಕರ್ನಾಟಕ ಸಂಸ್ಕೃತಿ ಸಮೀಕ್ಷೆ).

ಇದೇ ಶೈಲಿಯ ದೇವಾಲಯಗಳು ವಾಳ್ಕೇಶ್ವರ ಮತ್ತು ನಾಸಿಕ ಹತ್ತಿರವಿರುವ ಸನ್ನಾರ ಗ್ರಾಮಗಳಲ್ಲಿಯೂ ಕಂಡುಬರುತ್ತವೆ. ಇದೆಲ್ಲದರ ಮೇಲಿಂದ ಅಂಬರೇಶ್ವರ ದೇವಾಲಯವು ಚಾಲುಕ್ಯರ ಕಾಲದಾಗಿದ್ದು, ಇದು ಕನ್ನಡಿಗರ ಕಲಾಕೃತಿ ಎಂಬ ಹೆಮ್ಮೆ ನಮಗೆ ಮೂಡ ದಿರದು, ಆದ್ದರಿಂದ ಆಸಕ್ತಿ ಮೂಡಿಸುತ್ತದೆ, ನಷ್ಟ ವಾಗುತ್ತಿರುವ ಈ ಶಿಲ್ಪಾಕೃತಿಯ ಕಡೆಗೆ ಇತಿಹಾಸಕಾರರು ವಿಶೇಷವಾಗಿ ಕನ್ನಡ ಶಿಲ್ಪಕಲೆಯ ಅಭ್ಯಾಸಿಗರು ಲಕ್ಷ್ಯ ಕೊಡದಿದ್ದರೆ ಸುಂದರವಾದ ಒಂದು ಸಾಂಸ್ಕೃತಿಕ ಸ್ಮಾರಕ ವನ್ನು ನಾವು ಕಳೆದುಕೊಂಡಂತಾದೀತು.

ಡಾ|| ಆರ್. ಎಂ. ಷಡಕ್ಷರಯ್ಯ*

# ಧಾರವಾಡ ಜಿಲ್ಲೆಯಲ್ಲಿ ಕಂಡುಬಂದ ಕ್ರಿ.ಶ. ೧೦ನೇ ಶತಮಾನದವರೆಗಿನ ದೇವಾಲಯ ಶಿಲ್ಪಗಳು

ಧಾರವಾಡ ಜಿಲ್ಲೆಯಲ್ಲಿ ೧೯೯೨ ರಿಂದ ೧೯೯೪ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಆಗಾಗ್ಗೆ ಕೈಕೊಂಡ ಅನ್ವೇಷಣೆಯಿಂದ ಹಾವೇರಿ ತಾಲೂಕಿನ ಹತ್ತಿಮತ್ತೂರ, ಬ್ಯಾಡಗಿ ತಾಲೂಕಿನ ಶಿಡೇನೂರ, ರಾಣೆಬೆನ್ನೂರ ತಾಲೂಕಿನ ಹಿರೇಬಿದರಿ, ಇಟಗಿ, ಬೆನಕನ ಕೊಂಡ, ಹೂಲಿಹಳ್ಳಿ, ಹಿರೇಮಾಗನೂರ, ಯಲವದ ಹಳ್ಳಿ, ಹಿರೇಕೆರೂರ ತಾಲೂಕಿನ ಅರಳಿಕಟ್ಟಿ, ಶಿರಗುಂಬಿ ಮತ್ತು ಮೋದೂರು ಗ್ರಾಮಗಳಲ್ಲಿ ಹಲವಾರು ದೇವಾಲಯ–ಶಿಲ್ಪಗಳಿರುವುದು ತಿಳಿದುಬಂದಿತು. ಅಲ್ಲಿಯ ಪ್ರಕಟಿತ ಶಾಸನಗಳಿಂದ ಈ ಅನ್ವೇಷಣೆಯನ್ನು ಲೇಖಕರು ಕೈಗೊಂಡಿದ್ದರು.

ಈಗಾಗಲೇ ಈ ಭಾಗದಲ್ಲಿ ಕಂಡುಬಂದ ಕೆಲವು ದೇವಾಲಯ, ಶಿಲ್ಪ–ವೀರಗಲ್ಲು, ಗೋಸಾಸ ಕಲ್ಲುಗಳು, ಮಹಿಷಾಸುರಮರ್ಧಿನಿ ಇತ್ಯಾದಿ ಶಿಲ್ಪಾವಶೇಷಗಳ ಬಗ್ಗೆ ಅಭ್ಯಾಸ ಮಾಡಿ ಪ್ರಕಟಣೆಗೆ ಕೊಡಲಾಗಿದೆ.[1] ಉಳಿದ ಕೆಲವುಗಳನ್ನು ಮಾತ್ರ ಇಲ್ಲಿ ಅಧ್ಯಯನ ಮಾಡಲಾಗಿದೆ.

**ಕಲ್ಲೇಶ್ವರ ಗುಡಿ :** ರಾಣೆಬೆನ್ನೂರು ತಾಲೂಕಿನ ಹಿರೇಬಿದರಿ ಗ್ರಾಮದ ಒಂದು ಹೊಲದಲ್ಲಿ ಕಲ್ಲೇಶ್ವರ ಗುಡಿಯಿದೆ. ಪೂರ್ವಕ್ಕೆ ಮುಖ ಮಾಡಿದ ಈ ಗುಡಿಯ ಹಿಂಭಾಗದ ಮೇಲೆ ಸಂಪೂರ್ಣ ಮಣ್ಣಿನ ಗುಡ್ಡೆಯಿವೆ. ಈ ಸ್ಥಳದಲ್ಲಿ ಈಗಾಗಲೇ ಕ್ರಿ. ಶ. ೧೦ನೇ ಶತಮಾನದ ವರೆಗಿನ ಕ್ರಿ.ಶ. ೮ನೇ ಶತಮಾನ, ಕ್ರಿ.ಶ. ೮೭೮–೮೭೯ರ ಎರಡು ವೀರಗಲ್ಲು ಶಾಸನಗಳು ಪ್ರಕಟವಾಗಿದ್ದು ಅವುಗಳನ್ನು ಈ ದೇವಾಲಯದ ಮುಂದೆ ನಿಲ್ಲಿಸಲಾಗಿದೆ.

ಈ ದೇವಾಲಯಕ್ಕೆ ಚಚ್ಚೌಕ ಗರ್ಭಗೃಹ, ಚಚ್ಚೌಕ ಅಂತರಾಳ ಮತ್ತು ನವರಂಗಗಳಿವೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲು ಚೌಕಟ್ಟಿನ ಮೇಲೆ ಗಜಲಕ್ಷ್ಮಿಯ ಚಿತ್ರಗಳಿವೆ. ಹಾಗೂ ಅಂತರಾಳದ ಬಾಗಿಲು ಚೌಕಟ್ಟಿನ ತಳಭಾಗದಲ್ಲಿ ಪೂರ್ಣಕುಂಭಗಳನ್ನು ತೋರಿಸಲಾಗಿದೆ. (ಚಿತ್ರ ನಂ. ೧)

ಈ ಪೂರ್ಣ ಕುಂಭಗಳ ಮೇಲಿನ ಭಾಗದಲ್ಲಿ ರಂಧ್ರಗಳನ್ನು ಹೊಂದಿದ ಕಿಡಕಿಯಂತೆ ರಚಿತವಾಗಿದೆ. ಈ ಮಾದರಿಯನ್ನು ಅದರ ಗರ್ಭಗೃಹದ ಬಾಗಿಲು ಚೌಕಟ್ಟಿನಲ್ಲಿ ತೋರಿಸಿಲ್ಲ. ಗರ್ಭಗೃಹದ ಛತ್ತಿನಲ್ಲಿ ಕಮಲದ

* ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

1 ಡಾ|| ಆರ್. ಎಂ. ಷಡಕ್ಷರಯ್ಯ.,೧) "ಧಾರವಾಡ ಜಿಲ್ಲೆಯಲ್ಲಿ ದೊರೆತ ರಾಷ್ಟ್ರಕೂಟರ ಕಾಲದ ದೇವಾಲಯಗಳು", ಈ ಲೇಖನವನ್ನು ಕ.ವಿ.ವಿ.ಯ ಕರ್ನಾಟಕ ಭಾರತಿಯಲ್ಲಿ ಪ್ರಕಟಣೆಗೆ ಕೊಡಲಾಗಿದೆ. (೧೯೯೩), ಮತ್ತು ೨) "ಧಾರವಾಡ ಜಿಲ್ಲೆಯಲ್ಲಿ ದೊರೆತ ರಾಷ್ಟ್ರಕೂಟರ ಕಾಲದ ಶಿಲ್ಪ ದೇವಾಲಯಗಳು" ಈ ಲೇಖನವನ್ನು ಇತಿಹಾಸ ದರ್ಶನ, ಬೆಂಗಳೂರು ಇದರಲ್ಲಿ ಪ್ರಕಟಿಸಲು ಕೊಡಲಾಗಿದೆ. (೧೯೯೩)

ಅಲಂಕಾರವಿದೆ. ನವರಂಗದಲ್ಲಿರುವ ಕಂಬಗಳು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿವೆ. ಬಹುಶಃ ಈ ಭಾಗವನ್ನು ತದನಂತರ ಕೂಡಿಸಿರುವ ಸಾಧ್ಯತೆಯಿದೆ. ಶೈಲಿಯ ದೃಷ್ಟಿಯಿಂದ ಇದು ಸು. ಕ್ರಿ.ಶ. ೧೦ನೇ ಶತಮಾನ. ಅಲ್ಲಿಯ ಕ್ರಿ.ಶ. ೧೨೮೩ರ ಶಾಸನದಲ್ಲಿ ಈ ದೇವಾಲಯದ ಹೆಸರು ಕಮಲನಾಥನೆಂದು ಇದಕ್ಕೆ ಗುತ್ತ ವಿಕ್ರಮಾದಿತ್ಯನ ರಾಣಿ ಪದ್ಮಲದೇವಿ ದಾನ ಬಿಟ್ಟಳೆಂದು ಉಲ್ಲೇಖವಾಗಿದೆ.[2]

ಈ ಗ್ರಾಮದಲ್ಲಿ ಕಲ್ಲಪ್ಪನ ಗುಡಿಯಿದ್ದು ಅದರ ಕೆಲವು ಶಿಲ್ಪಾವಶೇಷಗಳು ಮಾತ್ರ ಉಳಿದುಕೊಂಡಿವೆ. ಇದರಲ್ಲಿ ಕೇವಲ ಕೋಣೆಯಂಥ ಭಾಗ ಉಳಿದಿದೆ. ಅದರಲ್ಲಿ ಬಾಗಿಲು ಚೌಕಟ್ಟಿದ್ದು ಅದರ ಲಲಾಟದಲ್ಲಿ ಗಜಲಕ್ಷ್ಮಿಯಿರುವಳು. ಇದರಲ್ಲಿ ನಾಲ್ಕು ಶಾಖೆಗಳಿವೆ. ತಳಭಾಗ ಸರಳವಾಗಿದೆ. ಈ ಲಕ್ಷ್ಮಿಗೆ ಎರಡು ಆನೆಗಳು ಸೊಂಡಿಲಲ್ಲಿ ಕುಂಭಗಳನ್ನು ಹೊತ್ತು ತಲೆಯ ಮೇಲಿಂದ ನೀರು ಹಾಕಿ ಅಭಿಷೇಕ ಮಾಡುವುದನ್ನು ಚಿತ್ರಿಸಲಾಗಿದೆ. ಹಾಗೂ ಬದಿಯ ನಾಲ್ಕು ಶಾಖೆಗಳು ಲಲಾಟ ಭಾಗದಲ್ಲೂ ಹರಿದಿವೆ. ಅಲ್ಲಿ ದುಂಡಾದ ಚಿಕ್ಕ ಎರಡು ಅರ್ಧ ಗಂಭಗಳಿವೆ. ಕಾಲಮಾನ ದೃಷ್ಟಿಯಿಂದ ಇವು ಸು. ಕ್ರಿ.ಶ. ೧೦ನೇ ಶತಮಾನಕ್ಕೆ ಸೇರಿವೆ. (ಚಿತ್ರ ನಂ. ೨)

**ಪ್ರಾಚೀನ ನೆಲೆ :** ಈ ಗ್ರಾಮದಲ್ಲಿ ಒಂದು ಕೋಣನ ಕಲ್ಲಿದೆ. ಹಾಗೂ ಕಲ್ಲೇಶ್ವರ ಗುಡಿ ಸುತ್ತ ಪ್ರಾಚೀನ ಜನವಸತಿಯ ನೆಲೆಯಿದ್ದು ಅಲ್ಲಿ ದೊರೆತ ಅವಶೇಷಗಳು ಸು. ಕ್ರಿ. ಪೂ. ೨ನೇ ಶತಮಾನದಿಂದ ಕ್ರಿ.ಶ. ೨ನೇ ಶತಮಾನಕ್ಕೆ ಸೇರಿದ್ದಾಗಿವೆ.

**ಬಸವಣ್ಣನ ಗುಡಿ :** ಇಟಗಿ (ರಾಣಿಬೆನ್ನೂರ ತಾಲೂಕು) ಗ್ರಾಮದಲ್ಲಿ ಬಸವಣ್ಣನ ಗುಡಿಯಿದ್ದು ಇದು ದ್ವಿಕೂಟದಲ್ಲಿದೆ. ಒಂದು ಗರ್ಭಗೃಹವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ದೇವಾಲಯಕ್ಕೆ ಗರ್ಭಗೃಹ, ಅಂತರಾಳ ಮತ್ತು ನವರಂಗವಿದೆ. ನವರಂಗವು ದಕ್ಷಿಣಕ್ಕೆ ಮುಖ ಮಾಡಿದೆ. ನಂದಿಯನ್ನು ನವರಂಗದಲ್ಲಿ ಶಿವಲಿಂಗಕ್ಕೆ ಮುಖ ಮಾಡಿ ಕೂಡಿಸಲಾಗಿದೆ. ಗರ್ಭಗೃಹದ ಮಧ್ಯ ಸು. ಕ್ರಿ.ಶ. ೮ನೇ ಶತಮಾನ ಶೈಲಿಯ ಬ್ರಹ್ಮಸೂತ್ರವುಳ್ಳ ಶಿವಲಿಂಗವಿದೆ. ಬಾಗಿಲು ಚೌಕಟ್ಟಿನಲ್ಲಿ ಮೂರು ಶಾಖೆಗಳಿವೆ. ಈ ದೇವಾಲಯದಲ್ಲಿ ಕರೆಮ್ಮ ದೇವಸ್ಥಾನದಲ್ಲಿ ದೊರೆತ ಮಹಿಷಾಸುರಮರ್ಧಿನಿ, ಎರಡು ಕಾರ್ತಿಕೇಯ ಶಿಲ್ಪಗಳಿವೆ. ಹೊರಗಡೆ ಬಾದಾಮಿ-ರಾಷ್ಟ್ರಕೂಟರ ಕಾಲದ ಮತ್ತು ಕಲ್ಯಾಣ ಚಾಲುಕ್ಯರ ಕಾಲದ ಕೆಲವು ವೀರಗಲ್ಲುಗಳಿವೆ. ಹಾಗೂ ಅಲ್ಲಿ ದೊರೆತ ದ್ವಿಭುಜ ಗಣೇಶದ ಅಪೂರ್ವ ಶಿಲ್ಪವನ್ನು ಈಗಾಗಲೇ ಅಭ್ಯಾಸ ಮಾಡಲಾಗಿದೆ.[3]

**ಕಲ್ಲೇಶ್ವರ ಗುಡಿ :** ಈ ಗ್ರಾಮದ ಬಸವಣ್ಣನ ಗುಡಿ ಬದಿಗೆ ಒಂದು ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯಕ್ಕೆ ಒಂದು ಚೌಕಾಕಾರದ ಗರ್ಭಗೃಹ ಮತ್ತು ಒಂದು ಅಂತರಾಳವಿದೆ. ಈ ಗರ್ಭಗೃಹದಲ್ಲೂ ಮೇಲೆ ಹೇಳಿದಂಥ ಸು. ಕ್ರಿ.ಶ. ೮ನೇ ಶತಮಾನ ಶೈಲಿಯ ಒಂದು ಶಿವಲಿಂಗವಿದೆ. ಅದರ ಛತ್ತಿನಲ್ಲಿ ಕಮಲದ ಚಿತ್ರವಿದೆ. ಅಂತರಾಳ ತೆರೆದಿದೆ. ಗರ್ಭಗೃಹದ ಲಲಾಟದಲ್ಲಿ ಗಜಗಳು ಲಕ್ಷ್ಮಿಯನ್ನು ಅಭಿಷೇಕ ಮಾಡುವದನ್ನು ಚಿತ್ರಿಸಲಾಗಿದೆ. ಬಾಗಿಲು ಫಲಕಗಳಲ್ಲಿ ಮೂರು ಶಾಖೆಗಳಿವೆ. ಈ ದೇವಾಲಯವು ಪೂರ್ವಕ್ಕೆ ಮುಖ ಮಾಡಿದೆ.

**ವೀರಗಲ್ಲು :** ಬೆನಕನ ಕೊಂಡದಲ್ಲಿ ಬಾದಾಮಿ ಚಾಲುಕ್ಯರ ಕಾಲದ ಒಂದು ವೀರಗಲ್ಲು ಕಂಡುಬಂದಿದೆ. ಎತ್ತರದ ಈ ವೀರಗಲ್ಲಿನಲ್ಲಿ ತೋರಿಸಿದ ಚಿತ್ರಗಳು ವೈವಿಧ್ಯಮಯವಾಗಿವೆ.

**ಕಲ್ಮೇಶ್ವರ ದೇವಾಲಯ :** ಬೆನಕನಕೊಂಡದ ಕಲ್ಮೇಶ್ವರ ದೇವಾಲಯಕ್ಕೆ ಗರ್ಭಗೃಹ, ಅಂತರಾಳ ನವರಂಗವಿದ್ದು ಅದರಲ್ಲಿಯ ಶಿವಲಿಂಗ ಮತ್ತು ನವರಂಗ ಭಾಗ ತದನಂತರ ಕಾಲದಲ್ಲಿ ಕೂಡಿಸಿದ್ದಾಗಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲು ಚೌಕಟ್ಟುಗಳಲ್ಲಿ ಎರಡು ಶಾಖೆಗಳಿವೆ. ಮತ್ತು ಲಲಾಟದಲ್ಲಿ

---

2 ಎಸ್. ಐ. ಐ., ೨೦, ೨೨೧

3 ಡಾ॥ ಆರ್. ಎಂ. ಷಡಕ್ಷರಯ್ಯ., "ಇಟಗಿಯಲ್ಲಿ ಅಪೂರ್ವ ಗಣೇಶ ವಿಗ್ರಹ ಪತ್ತೆ", ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ (೧೬-೯-೯೩)

ಗಜಲಕ್ಷ್ಮಿ ಮತ್ತು ಬಾಗಿಲು ಫಲಕದ ಕೆಳಗೆ ಪೂರ್ಣ ಕುಂಭಗಳನ್ನು ಚಿತ್ರಿಸಲಾಗಿದೆ.

ಈ ದೇವಾಲಯದ ಹೊರಗಡೆ ಸು. ಕ್ರಿ.ಶ. ೧೨೮೪ರ ಒಂದು ಅಪೂರ್ವ ಸತಿ ವೀರಗಲ್ಲಿದೆ.[4] ಅದರಲ್ಲಿ ಸತಿಯ ಕೈಯನ್ನು ಸಾಂಕೇತಿಕವಾಗಿ ವೀರಗಲ್ಲಿಗೆ ಹೊಂದಿ ಪ್ರತ್ಯೇಕವಾಗಿ ಒಂದು ಚೌಕಟ್ಟಿನಲ್ಲಿ ತೋರಿಸಲಾಗಿದೆ. ಇದೊಂದು ಈ ಮಾದರಿಯ ಅಪೂರ್ವ ಶಿಲ್ಪ. (ಚಿತ್ರ ನಂ. ೩)

ರಾಮಲಿಂಗ ದೇವಾಲಯ : ಹೂಲಿಹಳ್ಳಿ (ರಾಣೆಬೆನ್ನೂರ ತಾ.) ಗ್ರಾಮದಿಂದ ಸುಮಾರು ಅರ್ಧ ಕಿಲೋಮೀಟರ್ ಅಂತರದಲ್ಲಿ ಒಂದು ರಾಮಲಿಂಗ ದೇವಾಲಯವಿದೆ. ಈ ದೇವಾಲಯವು ಒಂದು ಹಾಳಾದ ಪ್ರಾಚೀನ ಜನವಸತಿಯ ನೆಲೆಯಲ್ಲಿದೆ. ಈ ನೆಲೆಯು ಸು. ಕ್ರಿ.ಪೂ. ೨ ರಿಂದ ಕ್ರಿ.ಶ. ೨ನೇ ಶತಮಾನಕ್ಕೆ ಸೇರಿದ್ದಾಗಿದೆ.

ಇಲ್ಲಿಯ ರಾಮಲಿಂಗ ದೇವಾಲಯದ ಮುಂದೆ ಬಲಕ್ಕೆ ಹನ್ನೆರಡು ಗೋಸಾಸ ಕಂಬಗಳಿವೆ. ಇವುಗಳನ್ನು ಈಗಾಗಲೇ ಪ್ರತ್ಯೇಕವಾಗಿ ಅಭ್ಯಾಸ ಮಾಡಿ ಪ್ರಕಟಣೆಗೆ ಕೊಡಲಾಗಿದೆ. ಶಿಥಿಲಾವಸ್ಥೆಯಲ್ಲಿರುವ ಈ ದೇವಾಲಯಕ್ಕೆ ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗವಿದೆ. ಗರ್ಭಗೃಹ ಛತ್ತಿನಲ್ಲಿ ಕಮಲದ ಚಿತ್ರವಿದೆ. ಶಿವಲಿಂಗ ಅದರ ಮಧ್ಯದಲ್ಲಿದೆ. ಅದರ ಬಾಗಿಲು ಚೌಕಟ್ಟಿನಲ್ಲಿ ಮೂರು ಶಾಖೆಗಳಿದ್ದು ಅವುಗಳು ಸರಳವಾಗಿವೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ನವರಂಗದ ಬಾಗಿಲು ಚೌಕಟ್ಟಿನಲ್ಲಿ ಐದು ಶಾಖೆಗಳಿವೆ. ಅವು ಎರಡು ಸರಳ, ಒಂದು ಅರ್ಧಗಂಬ, ಇನ್ನೆರಡು ಸರಳವಾಗಿವೆ. ಲಲಾಟದಲ್ಲಿ ಲಕ್ಷ್ಮಿಗೆ ಅಭಿಷೇಕ ಮಾಡುವ ಎರಡು ಗಜಗಳನ್ನು ಚಿತ್ರಿಸಲಾಗಿದೆ. ದೇವಾಲಯದ ಮೇಲೆ ಮಣ್ಣು ಆವರಿಸಿ ಒಂದು ಕುಪ್ಪೆಯಂತೆ ಕಾಣುತ್ತದೆ. ನವರಂಗ ಭಾಗ ತದನಂತರ ಕಾಲದ್ದು ಅಂದರೆ ಸು. ಕ್ರಿ.ಶ. ೧೧ನೇ ಶತಮಾನ. ಉಳಿದ ಮೂಲ ಭಾಗ ಸು. ಕ್ರಿ.ಶ. ೧೦ನೇ ಶತಮಾನ (ಚಿತ್ರ ನಂ. ೪)

ಕಲ್ಲೇಶ್ವರ ಗುಡಿ : ಹಿರೇಮಾಗನೂರ (ರಾಣಿಬೆನ್ನೂರ ತಾಲೂಕು) ಗ್ರಾಮದಲ್ಲಿ ಕಲ್ಲೇಶ್ವರ ಗುಡಿಯಿದ್ದು ಅದು ಆಗಾಗ್ಗೆ ಜೀರ್ಣೋದ್ಧಾರಗೊಂಡಿದೆ. (ಚಿತ್ರ ನಂ. ೫) ಅದು ಪೂರ್ವಕ್ಕೆ ಮುಖ ಮಾಡಿದೆ. ಈ ದೇವಾಲಯಕ್ಕೆ ಎರಡು ಗರ್ಭಗೃಹಗಳಿವೆ. ಒಂದು ಪೂರ್ವಕ್ಕೆ ಮತ್ತೊಂದು ದಕ್ಷಿಣಕ್ಕೆ ಮುಖ ಮಾಡಿವೆ. ಈ ಗರ್ಭಗೃಹಗಳ ಮುಂದೆ ಅಂತರಾಳಗಳಿವೆ. ಈ ಎರಡೂ ಅಂತರಾಳಗಳಿಗೆ ಒಂದೇ ನವರಂಗವಿದೆ.

ಒಂದು ಗರ್ಭಗೃಹದಲ್ಲಿ ಶಿವಲಿಂಗವಿದೆ. ಅದರಲ್ಲಿಯ ಬ್ರಹ್ಮಸೂತ್ರವು ಸು. ಕ್ರಿ.ಶ. ೯ನೇ ಶತಮಾನಕ್ಕೆ ಸೇರಿದೆ. ಗರ್ಭಗೃಹದ ಭುವನೇಶ್ವರಿಯಲ್ಲಿ ವೃತ್ತಾಕಾರದ ಕಮಲದ ಅಲಂಕಾರವಿದೆ. ಅದರ ಬಾಗಿಲ ಫಲಕದಲ್ಲಿ ಮೂರು ಸರಳ ಶಾಖೆಗಳು. ಲಲಾಟದಲ್ಲೂ ಈ ಶಾಖೆಗಳು ಹರಡಿವೆ. ಅಂತರಾಳದಲ್ಲೂ ಕಮಲದ ಚಿತ್ರವಿದೆ. ಅದರ ಬಾಗಿಲ ಫಲಕದಲ್ಲಿ ಎರಡು ಶಾಖೆಗಳಿವೆ : ಅವು ಲತಾಸುರುಳಿ ಮತ್ತು ಅರ್ಧಗಂಭ. ಅದರ ಬದಿಗೆ ರಂಧ್ರವುಳ್ಳ ಜಾಲಂದರ ಅದರ ಲಲಾಟದಲ್ಲಿ ಗಜಲಕ್ಷ್ಮಿ ಇರುವಳು. ಇನ್ನೊಂದರ ಗರ್ಭಗೃಹದಲ್ಲಿ ಗರುಡನ ಪೀಠವಿದೆ. ಅದರ ಮೇಲೆ ಶಿವಲಿಂಗವಿದೆ. ಆದರೆ ಪೀಠದಲ್ಲಿ ಗರುಡನ ಚಿತ್ರ ಇರುವುದರಿಂದ ಇಲ್ಲಿ ಮೂಲತಃ ವಿಷ್ಣು ವಿಗ್ರಹ ಸ್ಥಾಪಿಸಿರಬೇಕು. ಅದರ ಮುಂದೆ ನಂದಿಯಿದ್ದು ಅದರ ಕೊರಳಲ್ಲಿ ಧರಿಸಿದ ಗಂಟೆ ಸರದಲ್ಲಿ ಗಂಟೆಗಳು ಉದ್ದವಾಗಿವೆ. ಅದರ ದ್ವಾರದಲ್ಲಿ ನಾಲ್ಕು ಶಾಖೆಗಳು. ಅವುಗಳಲ್ಲಿ ಎರಡು ಸರಳ, ಒಂದು ಅರ್ಧಗಂಬ ಮತ್ತು ಕೊನೆಯದು ಸರಳವಾಗಿವೆ. ಅದರ ಬದಿಗೆ ಸಪ್ತಮಾತೃಕೆಯ ಶಿಲ್ಪವಿದೆ.

ಅದರ ಮುಂದಿನ ನವರಂಗದಲ್ಲಿ ಮಧ್ಯ ನಾಲ್ಕು ಕಂಬಗಳಿವೆ. (ಚಿತ್ರ ನಂ. ೬) ಪಶ್ಚಿಮಕ್ಕೆ ಮುಖ ಮಾಡಿದ ಅಂತರಾಳ ಹೊರಗಡೆ ಬದಿಗಳಲ್ಲಿ ಎರಡು ದೇವಕೋಷ್ಠಗಳಿವೆ. ಅವುಗಳಿಗೆ ಶಿಖರ ನಮೂನೆಗಳಿವೆ. ಒಂದರಲ್ಲಿ ಭೈರವ ಶಿಲ್ಪ ಸ್ಪಷ್ಟವಾಗಿದೆ. ನವರಂಗದ ಮಧ್ಯ ಛತ್ತಿನಲ್ಲಿ ಚಚ್ಚೌಕ ಫಲಕದಲ್ಲಿ ಅಷ್ಟದಿಕ್ಪಾಲಕರ ಮತ್ತು ಅವುಗಳ ಮಧ್ಯ ನಟರಾಜನನ್ನು ಚಿತ್ರಿಸಲಾಗಿದೆ.

---

4 ಎಸ್. ಐ. ಐ.

ನವರಂಗದ ಮಧ್ಯ ಒಂದು ನಂದಿಯಿದೆ. ನಂದಿಯ ಪೀಠವು ಮೊಟ್ಟೆಯಾಕಾರದಲ್ಲಿದೆ. ನವರಂಗದ ಕಂಬಗಳು ಚಿಕ್ಕೇರೂರಿನ ಮಾರುತಿ ಮಂದಿರದಂತಿವೆ.

ಈ ದೇವಾಲಯದ ಮುಂದೆ ಬಲಗಡೆ ಒಂಬತ್ತು ಗೋಸಾಸ (೩ × ೩ ಸಾಲುಗಳು) ಕಂಬಗಳಿವೆ, ಎಡಬದಿಗೆ ಶಿಥಿಲಗೊಂಡ ಎರಡು ದ್ವಾರಫಲಕಗಳಿವೆ. ಒಂದರಲ್ಲಿ ಐದು ಶಾಖೆಗಳಿವೆ. ಅದರಲ್ಲಿ ರತ್ನಪಟ್ಟಿಕೆ, ಸುರುಳಿಗಳಲ್ಲಿ ವೀಣೆ ಹಿಡಿದವರು, ದುಂಡು ಅರ್ಧಗಂಬದ ನಮೂನೆ, ಸರಳಪತ್ರಗಳ ಅಲಂಕಾರವಿದೆ. ಅದರಲ್ಲಿ ಕೆಳಗಡೆ ಗೂಡಿನಲ್ಲಿ ನಿಂತ ಶೈವ ದ್ವಾರಪಾಲಕನ ಚಿತ್ರವಿದೆ. (ಚಿತ್ರ ನಂ. ೭). ಇದರ ಪಕ್ಕದಲ್ಲಿ ತುಂಡಾದ ಒಂದು ಪಟ್ಟಿಕೆಯಿದ್ದು ಅದರಲ್ಲಿ ಒಬ್ಬ ಯತಿ ಮತ್ತು ಇನ್ನೊಂದು ಅಸ್ಪಷ್ಟ ಶಿಲ್ಪವಿದೆ. ಅದರಲ್ಲಿ ಚಿಕ್ಕ ಚಿತ್ರಗಳಿವೆ. ಇದೊಂದು ಕಥಾನಕ ಶಿಲ್ಪಪಟ್ಟಿಕೆಯ ಭಾಗ. ಈ ಪಟ್ಟಿಕೆ ಮತ್ತು ಕಂಬಗಳು ಮೂಲತಃ ಈ ದೇವಾಲಯದ ಭಾಗಗಳಾಗಿವೆ. ಈ ದೇವಾಲಯದ ಪ್ರಾಚೀನತೆ ಸು. ಕ್ರಿ.ಶ. ೧೦ನೇ ಶತಮಾನ.

**ಈಶ್ವರ ಗುಡಿ :** ಯಲವದಹಳ್ಳಿ (ರಾಣಿಬೆನ್ನೂರ ತಾ.) ನಲ್ಲಿ ಒಂದು ಹಾಳಾದ ಚಿಕ್ಕ ಈಶ್ವರ ಗುಡಿಯಿದೆ. ಅದರಲ್ಲಿರುವ ಶಿವಲಿಂಗದಲ್ಲಿ ಮೂರು ಭಾಗಗಳಿದ್ದು ಅದರಲ್ಲಿ ಬ್ರಹ್ಮಸೂತ್ರವಿಲ್ಲ. ಅದರ ಮುಂದೆ ನಂದಿ ಮತ್ತು ಎಂಟು ಭುಜಗಳ ಮಹಿಷಾಸುರ ಮರ್ದಿನಿ ಶಿಲ್ಪವಿದೆ.

ಈ ದೇವತೆಯು (ಮಹಿಷಾಸುರಮರ್ದಿನಿ) ತನ್ನ ಕೆಳಗಿನ ಕೈಯಲ್ಲಿ ಹಿಡಿದ ತ್ರಿಶೂಲದಿಂದ ಕೋಣನನ್ನು ಇರಿದಿದ್ದಾಳೆ. ಇನ್ನುಳಿದ ಕೈಗಳಲ್ಲಿ ಖಡ್ಗ, ಚಕ್ರ, ಬಾಣ, ತ್ರಿಶೂಲ, ದುಂಡಾದ ಆಯುಧ (ಗುರಾಣಿ?), ಬಿಲ್ಲು ಮತ್ತು ಕೊನೆಯ (ಎಡ) ಕೈಯಿಂದ ಕೋಣದ ಬಾಲವನ್ನು ಬಿಗಿಯಾಗಿ ಹಿಡಿದಿದ್ದಾಳೆ. ಬಲಗಾಲಿನಿಂದ ಕೋಣವನ್ನು ಮೆಟ್ಟಿರುವಳು. ವಸ್ತ್ರಾಭರಣಗಳಿಂದ ಭೂಷಿತಳಾಗಿರುವ ಈ ದೇವತೆಯ ಶಿಲ್ಪ ಸು. ಕ್ರಿ.ಶ. ೧೦ನೇ ಶತಮಾನದ್ದಾಗಿದೆ.

**ಕಲ್ಲೇಶ್ವರದೇವಾಲಯ :** ಅರಳಿಕಟ್ಟಿ (ಹಿರೇಕೆರೂರ ತಾಲೂಕ) ಗ್ರಾಮದಲ್ಲಿ ಒಂದು ಕಲ್ಲೇಶ್ವರ ದೇವಾಲಯವಿದೆ. ಜೀರ್ಣೋದ್ಧಾರವಾಗಿರುವ ಈ ಚಿಕ್ಕ ದೇವಾಲಯ ಪೂರ್ವಕ್ಕೆ ಮುಖ ಮಾಡಿದೆ. ಅದಕ್ಕೆ ಗರ್ಭಗೃಹ ಮತ್ತು ಅರ್ಧಮಂಟಪವಿದೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ನಂದಿ ವಿಗ್ರಹಗಳಿವೆ. ಗೋಡೆಯಲ್ಲಿ ನಾಲ್ಕು ಕಂಬಗಳಿವೆ. ಗರ್ಭಗೃಹ ದ್ವಾರಕ್ಕೆ ನಾಲ್ಕು ಶಾಖೆಗಳು. ಅವುಗಳಲ್ಲಿ ಎರಡು ರತ್ನಪಟ್ಟಿಕೆ, ಅಲಂಕಾರ ಅರ್ಧಗಂಬ ಮತ್ತು ಪತ್ರಗಳಿವೆ. ಈ ಶಾಖೆಗಳು ಲಲಾಟದಲ್ಲೂ ಹರಡಿವೆ. ಅದರ ಎರಡನೇ ಶಾಖೆಯಲ್ಲಿ ಬೇರೆ ಚಿತ್ರಗಳಿವೆ. ಅದರ ಮಧ್ಯ ಗಜಲಕ್ಷ್ಮೀ ಇರುವಳು. ಪೂರ್ಣಕುಂಭವನ್ನು ಚಿಕ್ಕ ಚೌಕಟ್ಟಿನಲ್ಲಿ ದ್ವಾರಫಲಕದ ಕೆಳಗಡೆ ಚಿತ್ರಿಸಲಾಗಿದೆ. (ಚಿತ್ರ ನಂ. ೮). ಲಲಾಟದಲ್ಲಿ ಎರಡು ಗಜಗಳು ಸೊಂಡಿಲಲ್ಲಿ ಹಿಡಿದ ಪೂರ್ಣಕುಂಭಗಳಿಂದ ಅವುಗಳ ಮಧ್ಯ ಆಸೀನಳಾದ ಲಕ್ಷ್ಮಿಯನ್ನು ಅಭಿಷೇಕ ಮಾಡಿಸುತ್ತಿವೆ. ಈಗ ಗಜಲಕ್ಷ್ಮಿಯ ಬಲಗಡೆ ಮೂರು, ಎಡಗಡೆ ಎರಡು ಚಿತ್ರಗಳಿವೆ. ಬಲಗಡೆಯಲ್ಲಿ ಒಬ್ಬ ವೀರನು ಕೈಯಲ್ಲಿ ಖಡ್ಗ ಹಿಡಿದು ನಿಂತಿದ್ದಾನೆ. ಇನ್ನೊಬ್ಬ ಕುಳಿತ ಉದ್ದ ಗಡ್ಡಧಾರಿ ಯತಿಯಿದ್ದಾನೆ. ಕೊನೆಗೆ ಕಮಲವಿಡಿದು ನಿಂತ ಸೂರ್ಯನಿದ್ದಾನೆ. ಗಜಲಕ್ಷ್ಮಿಯ ಎಡಕ್ಕೆ ಕುಳಿತ ಮತ್ತು ಅಂಜಲಿ ಮುದ್ರೆಯ ಒಬ್ಬ ಯತಿಯಿದ್ದಾನೆ. ಇನ್ನೊಬ್ಬ ವ್ಯಕ್ತಿ ಕೈಗಳಲ್ಲಿ ಕಮಲ ಹಿಡಿದು ಕುಳಿತಿದ್ದಾನೆ (?) ಶೈಲಿಯ ಲಕ್ಷಣಗಳಿಂದ ಈ ದೇವಾಲಯ ಸು. ಕ್ರಿ.ಶ. ೧೦ನೇ ಶತಮಾನದ ಮಧ್ಯಭಾಗದ್ದೆಂದು ಹೇಳಬಹುದು.

ಈ ದೇವಾಲಯದ ಎದುರಿಗೆ ಮತ್ತು ಬದಿಯಲ್ಲಿ ಐದು ವೀರಗಲ್ಲುಗಳಿವೆ. ಅವು ಸು. ಕ್ರಿ.ಶ. ೯–೧೦ನೇ ಶತಮಾನಕ್ಕೆ ಸೇರಿವೆ. ಈ ವೀರಗಲ್ಲುಗಳನ್ನು ಈಗಾಗಲೇ ಲೇಖಕರು ಪ್ರತ್ಯೇಕವಾಗಿ ಅಧ್ಯಯನ ಮಾಡಿದ್ದಾರೆ.[5]

ಮೇದೂರು (ಹಿರೇಕೆರೂರ ತಾಲೂಕು) ಗ್ರಾಮ ಪೂರ್ವಕ್ಕೆ ಬಸವಣ್ಣನ ದೇವಾಲಯವಿದ್ದು ಅದರ ಪ್ರಾಕಾರದ ಒಳಗೆ ದೊಡ್ಡಬಸವಣ್ಣ, ಸಣ್ಣಬಸವಣ್ಣ

---

5 ಡಾ॥ ಆರ್. ಎಂ. ಷಡಕ್ಷರಯ್ಯ : "ಧಾರವಾಡ ಜಿಲ್ಲೆಯಲ್ಲಿ ದೊರೆತ ಶಿಲ್ಪ ದೇವಾಲಯಗಳು", ಈ ಲೇಖನವನ್ನು ಇತಿಹಾಸ ದರ್ಶನ. ಬೆಂಗಳೂರು ಇದರಲ್ಲಿ ಪ್ರಕಟಿಸಲು ಕೊಡಲಾಗಿದೆ. (೧೯೯೩)

ಹುತ್ತದ ಗುಡಿ ಈಶ್ವರ ದೇವಾಲಯಗಳಿವೆ. ಅವುಗಳ ವಿವರ ಈ ರೀತಿಯಿದೆ,

ದೊಡ್ಡ ಬಸವೇಶ್ವರ ದೇವಾಲಯ : ಮೇದೂರ ಗ್ರಾಮ ಹತ್ತಿರವಿರುವ ದೊಡ್ಡ ಬಸವೇಶ್ವರ ದೇವಾಲಯ ಪೂರ್ವಕ್ಕೆ ಮುಖ ಮಾಡಿದೆ. ಈ ದೇವಾಲಯಕ್ಕೆ ಒಂದು ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗಗಳಿವೆ. ಚಚ್ಚೌಕಾದ ಗರ್ಭಗೃಹದಲ್ಲಿ ಶಿವಲಿಂಗವಿದೆ. ಅದರ ಮುಂದಿನ ತೆರೆದ ಅಂತರಾಳದಲ್ಲಿ ಎರಡು ಕಂಬಗಳಿವೆ. ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಮತ್ತು ಛತ್ತಿನಲ್ಲಿ ಕಮಲವಿದೆ. ಇದರ ಮಧ್ಯ ಗರ್ಭಗೃಹದ ಲಿಂಗಕ್ಕೆ ಮುಖ ಮಾಡಿ ಕೂಡಿಸಿದ ನಂದಿಯಿದೆ. ಇನ್ನೊಂದು ಕಡೆ ಸೂರ್ಯನ ಶಿಲ್ಪವಿದೆ. ಅಲ್ಲಿ ಮಹಿಷಾಸುರಮರ್ದಿನಿ, ಭೈರವನಶಿಲ್ಪಗಳೂ ಇವೆ.

ಈ ದೇವಾಲಯದ ತೆರೆದ ಅಂತರಾಳದ ಎರಡು ಕಂಬಗಳು ಶೈಲಿಯಲ್ಲಿ ಹಾವೇರಿ ತಾಲೂಕು ಕಿತ್ತೂರಿನ ಸಂಗಮೇಶ್ವರ ದೇವಾಲಯದ ಕಂಬಗಳನ್ನು ಹೋಲುತ್ತವೆ. ಇದರ ಗರ್ಭಗೃಹ ದ್ವಾರದ ಬಾಗಿಲು ಫಲಕದಲ್ಲಿ ಐದು ಶಾಖೆಗಳಿವೆ. ಹಾಗೂ ಈ ದೇವಾಲಯದ ಉತ್ತರ ಬಾಗಿಲ ದ್ವಾರದ ಫಲಕ ಇದೇ ಮಾದರಿಯಲ್ಲಿದೆ. ಅದರಲ್ಲಿ ಐದು ಶಾಖೆಗಳಿವೆ. ಅವು ರತ್ನಪಟ್ಟಿಕೆ, ಸುರುಳಿಗಳಲ್ಲಿ ವಾದ್ಯಗಾರರು, ಅರ್ಧಗಂಬ ಮತ್ತು ಇನ್ನಿತರ ಚಿತ್ರಗಳಿವೆ. ಬಾಗಿಲ ಫಲಕದಲ್ಲಿ ಕೆಳಗಡೆ ಕಡಿಮೆ ಅಗಲದ ಉದ್ದವಾದ ಶಾಖೆಗಳಲ್ಲಿ ಮೂವರು ದ್ವಾರಪಾಲಕರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಒಬ್ಬನು ಶೈವದ್ವಾರಪಾಲಕ ನಿರುಪನು. ಚತುರ್ಭುಜದಾರಿ ಆದ ಆತನ ಕೈಗಳಲ್ಲಿ ಅಭಯ, ನಾಗ, ತ್ರಿಶೂಲ ಮತ್ತು ಗಧೆಗಳಿವೆ. ಇನ್ನುಳಿದ ಇಬ್ಬರು ಸೇವಕಿಯರಾಗಿದ್ದಾರೆ. ಇದರ ಶಾಖೆಗಳು ಲಲಾಟದಲ್ಲಿ ಹರಡಿದ್ದು ಅದರ ಮಧ್ಯ ಗಜಲಕ್ಷ್ಮಿಯಿರುವಳು. (ಚಿತ್ರ ನಂ. ೯)

ಸಣ್ಣ ಬಸವೇಶ್ವರ ದೇವಾಲಯ : ಇಲ್ಲಿಯ (ಮೇದೂರಿನ) ದೊಡ್ಡ ಬಸವೇಶ್ವರ ದೇವಾಲಯ ಬದಿಗೆ ಸಣ್ಣ ಬಸವೇಶ್ವರ ದೇವಾಲಯವಿದೆ. ಈ ದೇವಾಲಯ ತ್ರಿಕೂಟ ಮಾದರಿಯಲ್ಲಿದೆ. ಎರಡು ಗರ್ಭಗೃಹಗಳಲ್ಲಿ ಶಿವಲಿಂಗಗಳು ಇನ್ನೊಂದರಲ್ಲಿ ಸೂರ್ಯನಿರುವನು. ತಲಾ ಒಂದು ಗರ್ಭಗೃಹಕ್ಕೆ ತೆರೆದ ಅಂತರಾಳವಿದೆ. ಈ ಮೂರು ಅಂತರಾಳಗಳ ಮುಂದೆ ಒಂದು ನವರಂಗ. ಈ ನವರಂಗ ಮಧ್ಯ ನಾಲ್ಕು ಕಂಬಗಳಿವೆ.

ಈ ದೇವಾಲಯದ ನವರಂಗದ ಕಂಬದಲ್ಲಿ ಪೀಠದ ಮೇಲಿನ ಭಾಗದಲ್ಲಿ ನಾಲ್ಕು ಚೌಕಾಕಾರದ ಮುಖಗಳಲ್ಲಿ ನಾಲ್ಕು ಚಿತ್ರಗಳಿವೆ. ಅವು ಒಂದು ಆನೆ ಮತ್ತು ಐದು ಪೂರ್ಣಕುಂಭ ಚಿತ್ರಗಳಿವೆ. ಈ ಪಟ್ಟಿಯ ಮೇಲೆ ನಾಲ್ಕು ಮುಖಗಳಲ್ಲಿ ತ್ರಿಕೋನಾಕೃತಿಯ ಪಟ್ಟಿಕೆಯು, ಅರ್ಧಗಂಬ ನಮೂನೆಗಳ ಮೇಲೆ ಚಿತ್ರಿಸಲಾಗಿದೆ. ಹಾಗೂ ಅವುಗಳ ಮೂಲೆಗಳನ್ನು ಕೊರೆಯಲಾಗಿದೆ. ಈ ಪಟ್ಟಿಕೆಯ ಮೇಲೆ ಒಂದು ಸಾಲಿನಲ್ಲಿ ಮುತ್ತಿನ ಹಾರದ ಚಿತ್ರವನ್ನು ಕಂಬದ ನಾಲ್ಕು ಮಗ್ಗಲು ಚಿತ್ರಿಸಲಾಗಿದೆ. ಅದರ ಮೇಲೆ ಪಟ್ಟಿಕೆ. ನಂತರ ದುಂಡಾಕಾರದ ಭೋದಿಗೆ, ಅದರ ಮೇಲೆ ಕ್ಯಾಪಿಟಲ್ ಇದೆ. (ಚಿತ್ರ ನಂ. ೧೦)

ಇದಲ್ಲದೆ ಇಲ್ಲಿಯ ಇನ್ನುಳಿದ ಕಂಬಗಳ ಮುಖಗಳಲ್ಲಿ ಕ್ರಮವಾಗಿ ನೃತ್ಯ ಮಾಡುವ ನಟರಾಜ, ಕಾಮರತಿ, ಮಿಥುನ, ಸಿಂಹ ಆನೆಯನ್ನು ಬೆನ್ನಟ್ಟಿರುವುದು, ಮಿಥುನ, ನಟರಾಜ, ಮಿಥುನ ಇತ್ಯಾದಿ ಚಿತ್ರಗಳನ್ನು ಕೊರೆಯಲಾಗಿದೆ.

ಈ ದೇವಾಲಯದ ಚಚ್ಚೌಕಾಕಾರದ ಗರ್ಭಗೃಹಗಳ ಛತ್ತಿನಲ್ಲಿ ಕಮಲದ ಚಿತ್ರವುಳ್ಳ ಪಟ್ಟಿಕೆಗಳಿವೆ. ಸೂರ್ಯನಿರುವ ಒಂದು ಗರ್ಭದ ಹೊರಗೆ ಎಡಗಡೆ ಒಂದು ವಿಷ್ಣು ಶಿಲ್ಪವಿದೆ. ಬಹುಶಃ ಮೂಲತಃ ಈ ಶಿಲ್ಪ ಅಲ್ಲಿಯ ಒಂದು ಗರ್ಭಗೃಹಕ್ಕೆ ಸೇರಿದ್ದಾಗಿದೆ. ಇದರಿಂದ ಈ ಮೂರು ಗರ್ಭಗೃಹಗಳಲ್ಲಿ ಸೂರ್ಯ, ವಿಷ್ಣು ಮತ್ತು ಶಿವಲಿಂಗಗಳು ಇದ್ದವೆಂದು ತರ್ಕಿಸಬಹುದು. ಹಾಗೂ ಇದೊಂದು ತ್ರೈಪುರುಷ ದೇವಾಲಯವೆಂದು ಹೇಳಬಹುದು.

ಈ ವಿಷ್ಣು ವಿಗ್ರಹದಲ್ಲಿ ವಿಷ್ಣು ಚತುರ್ಭುಜಧಾರಿಯಾಗಿದ್ದು ಕೈಗಳಲ್ಲಿ ಪದ್ಮ, ಚಕ್ರ, ಗಧಾ ಮತ್ತು ಶಂಖಗಳಿವೆ. ಬದಿಗಳಲ್ಲಿ ಭೂದೇವಿ ಮತ್ತು ಶ್ರೀದೇವಿಯರಿದ್ದಾರೆ. ಈ ಶಿಲ್ಪದ ಬದಿಗೆ ನಾಗ-ನಾಗಿಣಿಯರ ಶಿಲ್ಪವೂ ಇದೆ.

ಇಲ್ಲಿಯು ಸೂರ್ಯನು ಸಮಭಂಗದಲ್ಲಿದ್ದು ತನ್ನ ಎರಡು ಕೈಗಳಲ್ಲಿ ಕಮಲಗಳಿವೆ. ಆತನ ಬದಿಗಳಲ್ಲಿ ಉಷಾ ಮತ್ತು ಪ್ರತ್ಯುಷೆಯಿರಿದ್ದಾರೆ. ಪೀಠದಲ್ಲಿ ಏಳು ಅಶ್ವಗಳಿವೆ. ಆತನ ಅರ್ಧವೃತ್ತಾಕಾರದ ಪ್ರಭಾವಳಿಯನ್ನೂ ಮಕರ ತೋರಣದಲ್ಲಿ ಹೊಂದಿದ್ದು ಅದರಲ್ಲಿ ಹನ್ನೆರಡು ರಾಶಿಗಳ ಚಿಕ್ಕ ಚಿಕ್ಕ ಚಿತ್ರಗಳಿವೆ. ಮಕರ ಸವಾರರನ್ನು ಚಿತ್ರಿಸಲಾಗಿದೆ. (ಚಿತ್ರ ನಂ. ೧೧). ಈ ದೇವಾಲಯು ಶೈಲಿಯು ದೃಷ್ಟಿಯಿಂದ ಸು. ಕ್ರಿ.ಶ. ೧೦ನೇ ಶತಮಾನದ್ದಾಗಿದೆ.

ಈ ದೇವಾಲಯುದಲ್ಲಿ ಎರಡು ಕಾಳಿಯು ಶಿಲ್ಪಗಳಿವೆ. ಕುಳಿತ ಭಂಗಿಯಲ್ಲಿರುವ (ಒಂದು ಶಿಲ್ಪದಲ್ಲಿ) ಈ ದೇವಿಗೆ ನಾಲ್ಕು ಕೈಗಳಲ್ಲಿ ಖಡ್ಗ, ತ್ರಿಶೂಲ, ಡಮರು (ಒಡೆದಿದೆ) ಮತ್ತು ಕಪಾಲಗಳಿವೆ. ಪ್ರೇತನನ್ನು ಪೀಠದಲ್ಲಿ ಚಿತ್ರಿಸಲಾಗಿವೆ. ವಸ್ತ್ರಾಭರಣಗಳನ್ನು ಈಕೆ ಧರಿಸಿರುವಳು.

ಇಲ್ಲಿ ಎರಡು ಮಹಿಷಾಸುರಮರ್ದಿನಿ ಶಿಲ್ಪಗಳಿವೆ. ಒಂದು ಶಿಲ್ಪದಲ್ಲಿ ದೇವಿಯು ಕೈಗಳೆಲ್ಲ ಮುರಿದು ಹೋಗಿವೆ. ಆದರೆ ದೇವಿಯು ಬಲಗಾಲನ್ನು ಕೋಣನ ಮೇಲಿಟ್ಟು ಸುರನ ಸಂಹಾರ ಮಾಡುತ್ತಿರುವಳು. ಇಲ್ಲಿ ಮೂವರು ಸುರರನ್ನು ಚಿತ್ರಿಸಿರುವುದು ಗಮನೀಯ. ಜತೆಯಲ್ಲಿ ಸಿಂಹವನ್ನು ಚಿತ್ರಿಸಲಾಗಿದೆ. ಇದೇ ರೀತಿ ಇನ್ನೊಂದು ಅಲ್ಲಿಯು ಶಿಲ್ಪದಲ್ಲಿ ದೇವಿಗೆ ಎಂಟು ಕೈಗಳಿವೆ. ವಿವಿಧ ಆಯುಧಧಾರಿಯಾಗಿ ನಿಂತ ಈಕೆಯು ಈ ಶಿಲ್ಪದಲ್ಲೂ ಮೂವರು ಸುರರನ್ನು ಸಂಹಾರ ಮಾಡುವದನ್ನು ಕಾಣಬಹುದು. ಬದಿಗೆ ಸಿಂಹವನ್ನು ತೋರಿಸಲಾಗಿದೆ. ಪೀಠದಲ್ಲಿ ಪ್ರೇತನನ್ನು ಚಿತ್ರಿಸಲಾಗಿದೆ. (ಚಿತ್ರ ನಂ. ೧೨).

ಈ ದೇವಾಲಯುದಲ್ಲಿ ಒಂದು ಒಡೆದ ಸಪ್ತ ಮಾತೃಕೆಯರ ಶಿಲ್ಪವಿದೆ. ಆದರಲ್ಲಿ ಏಳು ದೇವತೆಯರ ವಾಹನಗಳು ಉಳಿದುಕೊಂಡಿವೆ. ಶೈಲಿಯು ದೃಷ್ಟಿಯಿಂದ ಈ ಶಿಲ್ಪಗಳು ಸು. ಕ್ರಿ.ಶ. ೧೦ನೇ ಶತಮಾನಕ್ಕೆ ಸೇರಿವೆ.

**ಹುತ್ತದ ಈಶ್ವರ ಗುಡಿ :** ಈ ಮೇಲಿನ ದೇವಾಲಯು ಬದಿಗೆ ಒಂದು ಚಿಕ್ಕ ಗುಡಿಯಿದೆ. ಅದಕ್ಕೆ ಹುತ್ತದ ಈಶ್ವರ ಗುಡಿ ಎಂದು ಕರೆಯುತ್ತಾರೆ. ಈ ದೇವಾಲಯಕ್ಕೆ ಚಚ್ಚೌಕಾಕಾರದ ಗರ್ಭಗೃಹ ಮತ್ತು ಅರ್ಧಮಂಟಪವಿದೆ. ಗರ್ಭಗೃಹ ದ್ವಾರದ ಬಾಗಿಲು ಫಲಕದಲ್ಲಿ ನಾಲ್ಕು ಶಾಖೆಗಳಿವೆ. ರತ್ನಪಟ್ಟಿಕೆ, ಸುರುಳಿಯಲ್ಲಿ ಮನುಷ್ಯರ ಚಿತ್ರ, ಅರ್ಧಗಂಭ ಮತ್ತು ಪತ್ರದ ಚಿತ್ರಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯಿರುವಳು. ಎರಡು ಆನೆಗಳು ಲಕ್ಷ್ಮಿಯನ್ನು ಅಭಿಷೇಕ ಮಾಡಿಸುತ್ತಿವೆ. ಈ ದೇವಾಲಯುದ ಬದಿಗೆ ಸರಸ್ವತಿ, ದುಂಡಾಕಾರದ ವಿವಿಧ ಬಗೆಯು ನಾಲ್ಕು ಕಂಬಗಳು, ಕಾಳಿಕಾ ಶಿಲ್ಪ ಇತ್ಯಾದಿ ಶಿಲ್ಪಗಳು ಅಲ್ಲಿ ಚದುರಿವೆ.

**ಕಲ್ಲೇಶ್ವರ ದೇವಾಲಯ :** ಹತ್ತಿಮತ್ತೂರು (ಹಾವೇರಿ ತಾಲೂಕು) ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿ ಸು. ಕ್ರಿ.ಶ. ೯ನೇ ಶತಮಾನದ ಎರಡು ಶಿವಲಿಂಗಗಳು ಮತ್ತು ಈ ಕಾಲದ ದೇವಾಲಯುದ ಅವಶೇಷಗಳಿವೆ. ಶಿವಲಿಂಗಗಳಲ್ಲಿ ಈ ಕಾಲದ ಬ್ರಹ್ಮಸೂತ್ರಗಳಿರುವುದು ಗಮನೀಯ.

**ಕೃತಜ್ಞತೆಗಳು :** ಧಾರವಾಡ ಮತ್ತು ಬೀದರ ಜಿಲ್ಲೆಯಲ್ಲಿ ಕನ್ನಡ ಸಂಶೋಧನ ಸಂಸ್ಥೆಯಿಂದ ಅನ್ವೇಷಣೆ–ಅಧ್ಯಯನ–ಪ್ರಕಟಣೆಗೆ ಪರವಾನಿಗೆ ನೀಡಿದ ಕುಲಪತಿಗಳಾದ ಡಾ॥ ಎಸ್. ರಾಮೇಗೌಡ ಅವರಿಗೆ ಮತ್ತು ಕುಲಸಚಿವರಾದ ಶ್ರೀ ಬಿ. ಪಿ. ಕನಿರಾಮ ಅವರಿಗೆ ಕೃತಜ್ಞತೆಗಳು.

ಡಾ|| ಆರ್. ಗೋಪಾಲ್*

# ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು

ಮುದ್ರಾಂಕಿತ ನಾಣ್ಯಗಳು ಪ್ರಾಚೀನ ಕರ್ನಾಟಕದ ಆರ್ಥಿಕ ಚರಿತ್ರೆಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿವೆ. ಇದುವರೆಗೆ ದೊರೆತಿರುವ ನಾಣ್ಯಗಳಲ್ಲಿ ಮುದ್ರಾಂಕಿತ ನಾಣ್ಯಗಳೇ ಅತ್ಯಂತ ಪ್ರಾಚೀನವಾದವು ಮತ್ತು ದೇಶದಾದ್ಯಂತ ಬಳಕೆಯಲ್ಲಿ ಇದ್ದಂತಹ ನಾಣ್ಯಗಳಾಗಿವೆ. ಮುದ್ರಾಂಕಿತ ನಾಣ್ಯಗಳಲ್ಲಿ ಯಾವುದೇ ವಿದೇಶಿ ಪ್ರಭಾವ ಕಂಡುಬರುವುದಿಲ್ಲ. ವಿದೇಶಿ ನಾಣ್ಯಗಳಲ್ಲಿ ಕಂಡುಬರುವ ವಿನ್ಯಾಸ, ಮಾದರಿ ಮತ್ತು ಲಿಪಿಗಳು ಈ ನಾಣ್ಯಗಳಲ್ಲಿ ಕಂಡುಬರುವುದಿಲ್ಲ; ಮುಖ್ಯವಾಗಿ ಮುದ್ರಾಂಕಿತ ನಾಣ್ಯಗಳು ವಿದೇಶಿಯರು ಭಾರತಕ್ಕೆ ಬರುವುದಕ್ಕೆ ಮೊದಲೇ ದೇಶದಾದ್ಯಂತ ಬಳಕೆಯಲ್ಲಿದ್ದವು. ಮುದ್ರಾಂಕಿತ ನಾಣ್ಯಗಳು ಉತ್ತರ ಭಾರತದಲ್ಲಿ ಕಿ. ಪೂ. ೬ನೇ ಶತಮಾನದಿಂದ ಕ್ರಿ. ಪೂ. ೨ನೇ ಶತಮಾನದವರೆಗೆ ಬಳಕೆಯಲ್ಲಿದ್ದರೆ, ದಕ್ಷಿಣ ಭಾರತದಲ್ಲಿ ಕ್ರಿ. ಶ. ೧ನೇ ಶತಮಾನದವರೆಗೆ ಬಳಕೆಯಲ್ಲಿದ್ದವು.[1]

ಈ ನಾಣ್ಯಗಳು ಆಕಾರದಲ್ಲಿ ಒಂದೇ ರೀತಿ ಇರುವುದಿಲ್ಲ. ವೃತ್ತಾಕಾರವಾಗಿ, ಚೌಕಾಕಾರವಾಗಿ, ಆಯತಾಕಾರವಾಗಿ ಮತ್ತು ವಿವಿಧ ಮೂಲೆಗಳು ಅಥವಾ ಕೋನಗಳ ಆಕಾರವನ್ನು ಹೊಂದಿರುತ್ತವೆ. ಪ್ರಾಚೀನ ನಾಣ್ಯಗಳು ಅಗಲವಾಗಿ, ತೆಳುವಾಗಿ ದುಂಡಾಗಿದ್ದರೆ ನಂತರದ ನಾಣ್ಯಗಳು ಕಿರಿದಾಗಿ, ದಪ್ಪವಾಗಿ ಮತ್ತು ಚೌಕಾಕಾರವಾಗಿರುತ್ತವೆ. ಪ್ರಾರಂಭದಲ್ಲಿ ರಾಜರು, ನಾಣ್ಯಗಳನ್ನು ಹೊರಡಿಸುವಾಗ ತೂಕ ಹೆಚ್ಚಾಗಿರುತ್ತದೆ. ಸಾಮ್ರಾಜ್ಯದ ಅವನತಿ ಹೊಂದಿದಂತೆ ನಾಣ್ಯಗಳ ತೂಕ ಸ್ವಲ್ಪಮಟ್ಟಿಗೆ ಕಡಿಮೆ ಇರುತ್ತದೆ ಎಂಬ ವಿಷಯವನ್ನು ನಾಣ್ಯಶಾಸ್ತ್ರಜ್ಞ ಕಾಲನಿರ್ಣಯ ಮಾಡುವಾಗ ಮರೆಯಬಾರದು. ಈ ನಾಣ್ಯಗಳ ತೂಕವನ್ನು ಮೂರು ಶ್ರೇಣಿಗಳಲ್ಲಿ ನೋಡಬಹುದಾಗಿದೆ. ೧) ೯೯ ಗ್ರೇಯಿನ್ಸ್‌ನಿಂದ ೧೦೮ ಗ್ರೇಯಿನ್ಸ್‌ವರೆಗೆ, ೨) ४೫ ಗ್ರೇಯಿನ್ಸ್‌ನಿಂದ ೫೮ ಗ್ರೇಯಿನ್ಸ್‌ವರೆಗೆ ಮತ್ತು ೩) ೨೧ ಗ್ರೇಯಿನ್ಸ್‌ನಿಂದ ೨೩ ಗ್ರೇಯಿನ್ಸ್‌ವರೆಗೆ. ಬಹುಶ ಈ ಮೂರು ಶ್ರೇಣಿಗಳು ಎ. ಎಸ್. ಅಗರ್‌ವಾಲ್‌ರವರು ಹೆಸರಿಸಿರುವ ಕರ್ಷಪಣಗಳು, ಮಾಷಗಳು ಮತ್ತು ಪಣಗಳು ಎಂಬ ಮೂರು ಶ್ರೇಣಿಗಳಿರಬಹುದು.[3]

ಮುದ್ರಾಂಕಿತ ನಾಣ್ಯಗಳಲ್ಲಿ ಯಾವುದೇ ರೀತಿಯ ಬರವಣಿಗೆಗಳಾಗಲೀ ಅಥವಾ ಐತಿಹ್ಯಗಳಾಗಲೀ ಕಂಡುಬರುವುದಿಲ್ಲ. ಸಾಮಾನ್ಯವಾಗಿ ನಾಣ್ಯದ ಮುಂಭಾಗದಲ್ಲಿ ಒಂದರಿಂದ ಆರರವರೆಗೆ ಚಿಹ್ನೆಗಳು ಕಂಡುಬಂದರೆ, ಹಿಂಭಾಗದಲ್ಲಿ ಖಾಲಿ ಇರುತ್ತದೆ ಅಥವಾ ಮುಂಭಾಗದಂತೆಯೇ ಚಿಹ್ನೆಗಳಿರುತ್ತವೆ ಅಥವಾ ಸಣ್ಣ ಸಣ್ಣ

---

* ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಕರ್ನಾಟಕ ಸರಕಾರ, ಮೈಸೂರು.

1 *Coins*, P. L. Gupta., p. 8

2 *Ibid.*, p. 11

3 *JNSI*, Vol. 15. pp. 39-40

ಬ್ಯಾಂಕರ್ಸ್ ಮಾರ್ಕ್‌ಗಳನ್ನು ಕಾಣಬಹುದಾಗಿದೆ. ಬ್ಯಾಂಕರ್ಸ್ ಮಾರ್ಕ್ ಎಂದರೆ ನಾಣ್ಯಗಳನ್ನು ಪರೀಕ್ಷಿಸಿದ ನಂತರ ನಾಣ್ಯದ ಅಸಲಿತನವನ್ನು ದೃಢೀಕರಿಸಲು ಒತ್ತುತ್ತಿದ್ದ ಸಣ್ಣ ಮುದ್ರೆಗಳಿಗೆ ಬ್ಯಾಂಕರ್ಸ್‌ಮಾರ್ಕ್ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಬ್ಯಾಂಕರ್ಸ್‌ಮಾರ್ಕ್‌ಗಳಲ್ಲೂ ಹಲವು ವಿಧಗಳಿದ್ದುದರಿಂದ ಪ್ರಾಂತವಾರು ವಿಂಗಡಣೆಯಲ್ಲಿ ಹಲವಾರು ನಾಣ್ಯ ಪರೀಕ್ಷಕರು ಇದ್ದು ನಾಣ್ಯಗಳ ಮೇಲೆ ತಮ್ಮದೇ ಆದ ಮುದ್ರೆಯನ್ನು ಹೊಂದಿದ್ದಿರಬಹುದು. ಈ ನಾಣ್ಯಗಳ ಮೇಲೆ ಕಂಡುಬರುವ ವಿವಿಧ ಚಿತ್ರಗಳೆಂದರೆ ಗಿಡಮರಗಳು, ಬೆಟ್ಟ, ಸೂರ್ಯ, ಆರು ಅಂಗವುಳ್ಳ ಚಿತ್ರ (six armed symbol), ಪ್ರಾಣಿಗಳು, ಪಕ್ಷಿಗಳು, ಮನುಷ್ಯ ಆಕೃತಿ, ಸರೀಸೃಪ, ಜ್ಯಾಮಿತಿಯ ಚಿತ್ರಗಳು ಮತ್ತು ಶ್ರೀವತ್ಸ ಮುಂತಾದ ಧಾರ್ಮಿಕ ಚಿಹ್ನೆಗಳನ್ನು ಕಾಣಬಹುದಾಗಿದೆ. ಆದರೆ ಸೂರ್ಯ ಮತ್ತು ಆರು ಅಂಗವುಳ್ಳ ಚಿತ್ರ, ಈ ಎರಡು ಚಿಹ್ನೆಗಳು ಹೆಚ್ಚಿನ ನಾಣ್ಯಗಳಲ್ಲಿ ಕಂಡುಬರುವುದು ಸಾಮಾನ್ಯವಾಗಿವೆ. ಡಾ|| ಪಿ. ಎಲ್. ಗುಪ್ತರವರು ಸುಮಾರು ಐದುನೂರಕ್ಕೂ ಹೆಚ್ಚಿನ ಚಿತ್ರಗಳನ್ನು ಪತ್ತೆ ಹಚ್ಚಿದ್ದಾರೆ.

ಮುದ್ರಾಂಕಿತ ನಾಣ್ಯಗಳನ್ನು ಅಧ್ಯಯನ ಮಾಡುವಾಗ ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ— ಒಂದು ನಾಣ್ಯದ ಕಿರಿದಾದ ಆಕಾರದ ಮೇಲೆ ಐದಾರು ಮುದ್ರೆಗಳನ್ನು ಒಂದರ ನಂತರ ಒಂದು ಮುದ್ರೆಯನ್ನು ಒತ್ತಿದಾಗ ಒಂದು ಚಿಹ್ನೆಯ ಮೇಲೆ ಮತ್ತೊಂದು ಚಿಹ್ನೆ ಮೂಡಿರುತ್ತವೆ ; ಕೆಲವು ವೇಳೆ ಮುದ್ರೆಗಳೇ ಸರಿಯಾಗಿ ಕಾಣಬರುವುದಿಲ್ಲ. ಚಿಹ್ನೆಗಳು ಸರಿಯಾಗಿ ಕಾಣದೆ ಅಸ್ಪಷ್ಟವಾಗಿರುವುದರಿಂದ ಇವುಗಳ ಅಧ್ಯಯನ ಕಷ್ಟಕರವಾಗಿರುತ್ತದೆ. ವಿದ್ವಾಂಸರು ಚಿಹ್ನೆಗಳನ್ನು ರಾಜ, ರಾಜನ ವಂಶಾವಳಿ,ರಾಜಧಾನಿ ಮತ್ತು ಟಂಕಶಾಲೆಗಳನ್ನುಪ್ರತಿನಿಧಿಸುತ್ತವೆ ಎಂದು ಹೇಳಿದ್ದಾರೆ.[4] ಆದರೆ ಇದೊಂದು ತಪ್ಪು ಅಭಿಪ್ರಾಯ ಎಂದು ಹೇಳಬಹುದು. ಆರು ಅಂಗವುಳ್ಳ ಚಿಹ್ನೆಯಲ್ಲಿ ಸುಮಾರು ೯೦ ವಿಧಗಳಿರುವುದನ್ನು ಡಾ|| ಪಿ. ಎಲ್. ಗುಪ್ತರವರು[4A] ಪತ್ತೆಹಚ್ಚಿ ವಿವರಿಸಿ ಬರೆದಿದ್ದಾರೆ. ಆರು ಅಂಗವುಳ್ಳ ಚಿಹ್ನೆಯನ್ನು ಮೇಲಿನ ನಾಲ್ಕು ಅಂಶಗಳಲ್ಲಿ ಯಾವುದಾದರೂ ಒಂದಕ್ಕೆ ಅನ್ವಯಿಸುವಂತೆ ಹೇಳಿದರೆ ತಪ್ಪಾಗಬಹುದು. ಏಕೆಂದರೆ ೯೦ ರಾಜರಾಗಲೀ ಅಥವಾ ವಂಶಾವಳಿಗಳಾಗಲೀ ಅಥವಾ ರಾಜಧಾನಿಯಾಗಲೀ ಅಥವಾ ಟಂಕಶಾಲೆಗಳಾಗಲೀ ಇದ್ದ ಬಗ್ಗೆ ಪ್ರಾಚೀನ ಭಾರತದ ಇತಿಹಾಸದಲ್ಲಿ ಕಂಡುಬರುವುದಿಲ್ಲ.

## ನಾಣ್ಯಗಳ ತಯಾರಿಕೆ

ಮುದ್ರಾಂಕಿತ ನಾಣ್ಯಗಳನ್ನು ತಯಾರಿಸುವಾಗ ಲೋಹವನ್ನು ಕಾಯಿಸಿ ನಂತರ ತಗಡಿನಂತೆ ಚಪ್ಪಟೆ ಮಾಡಿ ಗೊತ್ತಾದ ತೂಕಕ್ಕೆ ಕತ್ತರಿಸಿ, ನಾಣ್ಯದ ಆಕಾರ ಬಿಸಿ ಇರುವಾಗಲೇ ಅದರ ಮೇಲೆ ಮುದ್ರೆಗಳನ್ನು ಒತ್ತುತ್ತಿದ್ದರು. ಆದ್ದರಿಂದ ಈ ನಾಣ್ಯಗಳಿಗೆ ಮುದ್ರಾಂಕಿತ ನಾಣ್ಯಗಳು ಅಥವಾ 'ಪಂಚ್‌ಮಾರ್ಕ್‌ಡ್ ಕಾಯಿನ್ಸ್' ಎಂದು ಕರೆಯಲಾಗಿದೆ. ಈ ನಾಣ್ಯಗಳಲ್ಲಿ ಕಂಡುಬರುವ ಪ್ರತಿಯೊಂದು ಚಿಹ್ನೆಗೂ ಬೇರೆ ಬೇರೆ ಮುದ್ರೆಗಳನ್ನು ಉಪಯೋಗಿಸಲಾಗಿದೆ.

ನಮಗೆ ಇದುವರೆಗೆ ದೊರೆತಿರುವ ಮುದ್ರಾಂಕಿತ ನಾಣ್ಯಗಳಲ್ಲಿ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಮಾತ್ರ ದೊರೆತಿವೆ. ಬೆಳ್ಳಿಯ ಮುದ್ರಾಂಕಿತ ನಾಣ್ಯಗಳನ್ನು ಮಿಶ್ರ ಲೋಹಗಳಿಂದ ತಯಾರಿಸಿದ ನಾಣ್ಯಗಳಾಗಿವೆ. ಉದಾಹರಣೆಗೆ ರಾಯಚೂರು ಜಿಲ್ಲೆ ಕೊಪ್ಪಳ ತಾಲ್ಲೂಕಿನ ಚಿಕ್ಕಸಿಂಧಗಿ ಗ್ರಾಮದಲ್ಲಿ ದೊರೆತ ಮುದ್ರಾಂಕಿತ ಬೆಳ್ಳಿಯ ನಾಣ್ಯಗಳನ್ನು ಲಕ್ನೋದಲ್ಲಿರುವ ನ್ಯಾಷನಲ್ ರೀಸರ್ಚ್ ಲ್ಯಾಬೋರೇಟರಿ ಫಾರ್ ಕನ್ಸರ್ವೇಷನ್ ಆಫ್ ಕಲ್ಚರಲ್ ಪ್ರಾಪರ್ಟಿ (ಎನ್. ಆರ್. ಎಲ್. ಸಿ.) ಇವರಿಗೆ ಲೋಹದ ಪರೀಕ್ಷೆಗೆ ಕಳುಹಿಸಿದಾಗ ಅವರಿಂದ ಬಂದ ವರದಿಯ ಪ್ರಕಾರ ಈ ನಾಣ್ಯಗಳಲ್ಲಿ ಶೇಕಡ ೬೫ ಭಾಗ ಬೆಳ್ಳಿಯು ಮೂಲ ಲೋಹವಾಗಿದ್ದು (base metal) ಉಳಿದ ಶೇಕಡ ೩೫ ಭಾಗದಲ್ಲಿ ತಾಮ್ರ,

4 *PMCs in the A. P. Govt. Museums*, P. L. Gupta p. v.
4A *Silver PMC of the Magadha-Maurya Kashapana series*, P. L. Gupta and T. R. Hardaker, p. 1.

ಕಬ್ಬಿಣ ಮತ್ತು ಸೀಸದ ಲೋಹಗಳನ್ನು ಮಿಶ್ರ ಮಾಡಿರುವುದು ಕಂಡುಬಂದಿದೆ. ಆದ್ದರಿಂದ ಈ ನಾಣ್ಯಗಳನ್ನು ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಎಂದು ಕರೆಯುವುದರ ಬದಲು ಮಿಶ್ರಲೋಹಗಳ ಮುದ್ರಾಂಕಿತ ನಾಣ್ಯಗಳು ಎಂದು ಕರೆಯುವುದು ಸೂಕ್ತವಾಗಿದೆ.

ಕರ್ನಾಟಕ - ನಾಣ್ಯಶಾಸ್ತ್ರದ ವೈಶಾಲ್ಯತೆಗೋಸ್ಕರ ಕರ್ನಾಟಕ ಏಕೀಕರಣದ ಪೂರ್ವದಲ್ಲಿ ಹೈದರಾಬಾದ್–ಕರ್ನಾಟಕಕ್ಕೆ ಸೇರಿದ್ದ ಸ್ಥಳಗಳನ್ನು ತೆಗೆದುಕೊಂಡಾಗ ಬನವಾಸಿ, ಚಂದ್ರವಳ್ಳಿ, ವಡಗಾಂ ಮತ್ತು ಮಾಧವಪುರ, ಮಸ್ಕಿ ಮತ್ತು ಸನ್ನತಿ ಇವುಗಳಲ್ಲಿ ಮುದ್ರಾಂಕಿತ ನಾಣ್ಯಗಳು ಉತ್ಖನನಗಳಿಂದ ದೊರೆತಿದ್ದರೆ, ಧಾರವಾಡ, ಗುಲ್ಬರ್ಗಾ, ರಾಯಚೂರು, ಚಿಕ್ಕಸಿಂಧಗಿ ಮತ್ತು ಹಲವಾಗಲು ಇಲ್ಲಿ ಗುಪ್ತನಿಧಿ ರೂಪದಲ್ಲಿ ಪತ್ತೆಯಾಗಿವೆ. ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು ದೊರೆತಿರುವ ಪ್ರಮುಖ ಸ್ಥಳಗಳು ಈ ಕೆಳಗಿನವು.

೧. ಬನವಾಸಿ : ಉತ್ತರ ಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನ ಬನವಾಸಿಯಲ್ಲಿ ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದವರು ಕೈಗೊಂಡ ಸರ್ವೇಕ್ಷಣ ಮತ್ತು ಉತ್ಖನನದಲ್ಲಿ ಹಲವಾರು ಹೊಸ ವಿಷಯಗಳನ್ನು ಬೆಳಕಿಗೆ ತರಲಾಗಿದೆ. ಅವುಗಳಲ್ಲಿ ಚೌಕಾಕಾರದ ಮುದ್ರಾಂಕಿತ ನಾಣ್ಯ ಒಂದು. ಇದು ಪೂರ್ವ ಶಾತವಾಹನರ ಕಾಲಕ್ಕೆ ಸೇರಿದ ಪದರದಲ್ಲಿ ಪತ್ತೆಯಾಗಿರುವುದರಿಂದ ಈ ನಾಣ್ಯವನ್ನು ಪ್ರೊ॥ ಎ. ವಿ. ನರಸಿಂಹಮೂರ್ತಿಯವರು[5] ಮೌರ್ಯರ ನಂತರದ ಕಾಲಕ್ಕೆ ಸೇರಿದ್ದೆಂದು ತಿಳಿಸಿದ್ದಾರೆ. ನಾಣ್ಯವು ಪೂರ್ಣವಾಗಿ ಸವೆದಿದ್ದು ಅಲ್ಲಲ್ಲಿ ಚಿಹ್ನೆಗಳಿರುವುದು ಕಂಡುಬರುತ್ತದೆ.

೨. ಚಂದ್ರವಳ್ಳಿ : ಚಿತ್ರದುರ್ಗ ನಗರದಿಂದ ಪಶ್ಚಿಮಕ್ಕೆ ನಾಲ್ಕು ಕಿ. ಮೀ. ದೂರದಲ್ಲಿರುವ ಬೆಟ್ಟದ ತಳಭಾಗದಲ್ಲಿರುವುದೇ ಚಂದ್ರವಳ್ಳಿ. ೧೯೪೭ರಲ್ಲಿ ಸರ್ ಮಾರ್ಟಿಮರ್ ವೀಲ್ಲರ್‌ರವರು ಕೈಗೊಂಡ ಉತ್ಖನನದಲ್ಲಿ ಕೆಲವು ನಾಣ್ಯಗಳು ಪತ್ತೆಯಾಗಿದ್ದು, ಅವುಗಳಲ್ಲಿ ಶಾತವಾಹನರ ಮತ್ತು ರೋಮನ್ನರ ನಾಣ್ಯಗಳ ಜೊತೆ ನಾಲ್ಕು ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಪತ್ತೆಯಾಗಿವೆ.[6] ಈ ನಾಣ್ಯಗಳು ಆಯತಾಕಾರವಾಗಿದ್ದು, ಮುಂಭಾಗದಲ್ಲಿ ಐದು ಚಿಹ್ನೆಗಳಿದ್ದು ಹಿಂಭಾಗದಲ್ಲಿ ಯಾವುದೇ ಚಿಹ್ನೆಗಳಿರುವುದಿಲ್ಲ.

೩. ವಡಗಾಂ ಮತ್ತು ಮಾಧವಪುರ :
ಬೆಳಗಾವಿ ನಗರದ ಹೊರ ವಲಯದ ಪೂರ್ವಕ್ಕೆ ವಡಗಾಂ ಮತ್ತು ಪಶ್ಚಿಮಕ್ಕೆ ಮಾಧವಪುರ ನಗರಗಳ ಮಧ್ಯ ಇರುವ ನಿವೇಶನದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ ಮತ್ತು ಕನ್ನಡ ಸಂಶೋಧನಾ ಸಂಸ್ಥೆಯವರು ೧೯೭೨–೭೪ರ ಸಾಲಿನಲ್ಲಿ ಕೈಗೊಂಡ ಉತ್ಖನನದಲ್ಲಿ ಕೆಳಪದರದ ಕೊನೆಯ ಹಂತದಲ್ಲಿ ಸುಮಾರು ಐದು ಮುದ್ರಾಂಕಿತ ನಾಣ್ಯಗಳು ಪತ್ತೆಯಾಗಿವೆ. ಶಾತವಾಹನರ ನೆಲೆಯಲ್ಲಿ ದೊರೆತಿರುವುದರಿಂದ ಈ ನಾಣ್ಯಗಳನ್ನು ಕ್ರಿ. ಶ. ೧ನೇ ಶತಮಾನಕ್ಕೆ ಸೇರಿರಬಹುದೆಂದು ಊಹಿಸಬಹುದಾಗಿದೆ. ಇವು ಐದು ಚಿಹ್ನೆಗಳಿರುವ ನಾಣ್ಯಗಳಾಗಿವೆ. ಕೆಲವು ನಾಣ್ಯಗಳಲ್ಲಿ ಬೆಳ್ಳಿಯು ಮೂಲ ಲೋಹವಾಗಿದ್ದರೆ ಉಳಿದ ನಾಣ್ಯಗಳಿಗೆ ತಾಮ್ರದ ಮೇಲೆ ಬೆಳ್ಳಿಯ ಲೇಪನವನ್ನು ಮಾಡಲಾಗಿದೆ ಎಂದು ಡಾ॥ ಅ. ಸುಂದರರವರು ತಿಳಿಸಿದ್ದಾರೆ.[7]

೪. ಮಸ್ಕಿ : ರಾಯಚೂರು ಜಿಲ್ಲೆ ಲಿಂಗಸೂರು ತಾಲ್ಲೂಕು ತುಂಗಭದ್ರಾ ಉಪ ನದಿಯಾದ ಮಸ್ಕಿ ನದಿಯ ಬಲದಂಡೆಯ ಮೇಲಿದೆ. ಆಂಧ್ರಪ್ರದೇಶದ ಪುರಾತತ್ವ ಇಲಾಖೆಯವರು ೧೯೩೫ ಮತ್ತು ೧೯೪೨–೪೩ರಲ್ಲಿ ನಡೆಸಿದ ಉತ್ಖನನದಲ್ಲಿ ಒಟ್ಟು ೯ ಮುದ್ರಾಂಕಿತ ನಾಣ್ಯಗಳು ಪತ್ತೆಯಾಗಿವೆ. ಇವುಗಳಲ್ಲಿ ೨ ಬೆಳ್ಳಿಯ ನಾಣ್ಯಗಳಾಗಿದ್ದು, ಉಳಿದವು ತಾಮ್ರದ ನಾಣ್ಯಗಳಾಗಿವೆ.[8]

---

5 *Srikanthika*, p. 290.
6 *Ancient India*, Vol. IV.
7 *Madhu* (M. N. Deshpande Felicitation Vol.)
8 *PMC in the Govt. of A. P Museum*, P. L. Gupta, p. 36.

ತಾಮ್ರದ ನಾಣ್ಯಗಳ ಮೇಲೆ ಬೆಳ್ಳಿಯ ಲೇಪನ ಇರುವುದು ಕಂಡು ಬಂದಿದೆ. ಇವುಗಳಲ್ಲಿ ಮೂರು ನಾಣ್ಯಗಳು ಪೂರ್ಣವಾಗಿ ಸವೆದಿರುವುದರಿಂದ ಚಿಹ್ನೆಗಳು ಅಸ್ಪಷ್ಟ ವಾಗಿವೆ.

೫. ಧಾರವಾಡ : ಹನ್ನೊಂದು ಬೆಳ್ಳಿಯ ಮುದ್ರಾಂಕಿತ ನಾಣ್ಯಗಳನ್ನು ಪರಿಶೀಲನೆಗೆ ಸ್ವೀಕರಿಸ ಲಾಗಿದೆ ಎಂದು ಡಾ॥ ಎಂ. ಎಚ್. ಕೃಷ್ಣರವರು ೧೯೩೮ರ ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ (ಎಂ.ಎ.ಆರ್.)ನಲ್ಲಿ ವಿವರಣೆ ನೀಡಿ ಪ್ರಕಟಿಸಿದ್ದಾರೆ.[9] ಆದರೆ ಈ ನಾಣ್ಯಗಳು ಧಾರವಾಡದಲ್ಲಿ ಹೇಗೆ ಪತ್ತೆ ಯಾಯಿತು ಮತ್ತು ಯಾರಿಂದ ಸ್ವೀಕರಿಸಲಾಯಿತು ಎಂಬುವುದರ ಬಗ್ಗೆ ವರದಿ ಮಾಡಿರುವುದಿಲ್ಲ. ಇವುಗಳಲ್ಲಿ ಎರಡು ನಾಣ್ಯಗಳು ವೃತ್ತಾಕಾರವಾಗಿದ್ದು, ಉಳಿದವು ಆಯತಾಕಾರವಾಗಿವೆ. ಈ ನಾಣ್ಯಗಳು ೫೨–೫೩ ಗ್ರೈಯಿನ್ಸ್ ತೂಕವುಳ್ಳ ನಾಣ್ಯಗಳಾಗಿದ್ದು, ಮುಂಭಾಗದಲ್ಲಿ ಐದು ಚಿಹ್ನೆಗಳಿದ್ದು, ಹಿಂಭಾಗದಲ್ಲಿ ಸಣ್ಣ ಸಣ್ಣ ಚಿಹ್ನೆಗಳಿವೆ.

೬. ಗುಲ್ಬರ್ಗಾ : ೧೯೪೦-೪೧ರಲ್ಲಿ ಗುಲ್ಬರ್ಗಾ ತಾಲ್ಲೂಕು,ಹೆಬ್ಬಾಳ್ ಗ್ರಾಮದಲ್ಲಿ ತಿಪ್ಪಣ್ಣ ಎಂಬುವವರಿಗೆ ಒಂದು ಮಡಕೆಯಲ್ಲಿ ೨೨೫ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ದೊರೆತವು. ಅವುಗಳನ್ನು ತಹಶೀಲ್ದಾರ್ ರವರು ವಶಪಡಿಸಿಕೊಂಡು ಆಂಧ್ರಪ್ರದೇಶದ ವಸ್ತು ಸಂಗ್ರಹಾಲಯಕ್ಕೆ ಕಳುಹಿಸಿಕೊಟ್ಟರು. ಕೆಲವು ನಾಣ್ಯ ಗಳ ಮೇಲೆ ತೆಳುವಾದ ಬಟ್ಟೆಯ ಚೂರುಗಳು ಅಂಟಿ ಕೊಂಡಿರುವುದು ಕಂಡು ಬಂದಿರುವುದರಿಂದ ಬಹುಶಃ ನಾಣ್ಯಗಳನ್ನು ಬಟ್ಟೆಯಲ್ಲಿ ಸುತ್ತಿ ನಂತರ ಮಡಕೆಯಲ್ಲಿ ಇಟ್ಟು ಹೂತಿರಬಹುದು.[10] ಆದರೆ ಈ ಗುಪ್ತನಿಧಿ ಯಾವ ರೀತಿ ಪತ್ತೆಯಾಯಿತು ಎಂಬುವುದರ ಬಗ್ಗೆ ಹೆಚ್ಚಿನ ವಿವರಣೆ ದೊರೆಯುವುದಿಲ್ಲ. ೨೨೫ ನಾಣ್ಯ ಗಳಲ್ಲಿ ೨೦ ನಾಣ್ಯಗಳು ಪೂರ್ಣವಾಗಿ ಸವೆದಿರುವುದರಿಂದ ಅವುಗಳಲ್ಲಿ ಯಾವುದೇ ಚಿಹ್ನೆಗಳು ಕಂಡು ಬರುವುದಿಲ್ಲ.

ಈ ನಾಣ್ಯಗಳ ಪ್ರತಿಯೊಂದರ ತೂಕ ಸುಮಾರು ೪೦ ರಿಂದ ೫೧ ಗ್ರೇಯಿನ್ಸ್‌ವರೆಗೆ ಇವೆ.

೭. ರಾಯಚೂರು : ೧೯೩೫–೩೬ ರಲ್ಲಿ ರಾಯಚೂರು ರೈಲ್ವೆ ನಿಲ್ದಾಣದ ಸಮೀಪ ರಾಯಚೂರು ಮುನಿಸಿಪಾಲಿಟಿಯ ಸದಸ್ಯರಾದ ಶ್ರೀ ತಿಮ್ಮಪ್ಪ ಎಂಬು ವವರಿಗೆ ಅವರ ಜಮೀನನ್ನು ಉಳುವಾಗ ೬೩ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಪತ್ತೆಯಾಯಿತು. ನಂತರ ಇವುಗಳನ್ನು ಆಂಧ್ರಪ್ರದೇಶದ ವಸ್ತು ಸಂಗ್ರಹಾಲಯ ದವರು ಗುಪ್ತನಿಧಿ ಕಾಯ್ದೆ ಅನ್ವಯ ವಶಪಡಿಸಿ ಕೊಂಡರು.[11] ಎಲ್ಲಾ ನಾಣ್ಯಗಳು ಆಯತಾಕಾರ ವಾಗಿದ್ದು ಉತ್ತಮವಾಗಿವೆ. ಈ ನಾಣ್ಯಗಳ ತೂಕವು ೪೧ ರಿಂದ ೫೨ ಗ್ರೈಯಿನ್ಸ್‌ವರೆಗೆ ಇದೆ. ಗುಲ್ಬರ್ಗಾ ಮತ್ತು ರಾಯಚೂರಿನ ಗುಪ್ತನಿಧಿಗಳು ಸುಮಾರು ಕ್ರಿ.ಪೂ. ೩ನೇ ಶತಮಾನದಿಂದ ಕ್ರಿ.ಪೂ. ೧ನೇ ಶತಮಾನದ ವರೆಗೆ ಬಳಕೆಯಲ್ಲಿದ್ದ ನಾಣ್ಯಗಳು ಎಂದು ಡಾ॥ ಪಿ. ಎಲ್. ಗುಪ್ತರವರು ಅಭಿಪ್ರಾಯ ಪಟ್ಟಿದ್ದಾರೆ.

೮. ಚಿಕ್ಕ ಸಿಂಧಗಿ : ಕೊಪ್ಪಳ ತಾಲ್ಲೋಕು ರಾಯಚೂರು ಜಿಲ್ಲೆಗೆ ಸೇರಿದ ಚಿಕ್ಕ ಸಿಂಧಗಿ ಗ್ರಾಮದ ಸರ್ವೆ ನಂ. ೧೯ರಲ್ಲಿ ಶ್ರೀ ಎಚ್. ಎಸ್. ಖಾದ್ರಿ ಎಂಬು ವವರ ಜಮೀನಿನಲ್ಲಿ ಉಳುವಾಗ ಒಂದು ತಾಮ್ರದ ಚೊಂಬು ಮತ್ತು ಒಂದು ಮಣ್ಣಿನ ಮಡಕೆಯಲ್ಲಿ ೫,೫೩೪ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ದೊರೆತಿರುವುದು (ಒಟ್ಟು ತೂಕ ೧೬.೬೯ ಕೆ.ಜಿ.) ಭಾರತೀಯ ನಾಣ್ಯ ಶಾಸ್ತ್ರ ಇತಿಹಾಸದಲ್ಲಿ ಒಂದು ಹೊಸ ಮೈಲಿಗಲ್ಲಾಗಿದೆ. ತಾಮ್ರದ ಚೊಂಬಿನ ಮೇಲೆ ಒಂದು ಸಾಲಿನ 'ಚಂತಸ' ಎಂಬ ಬ್ರಾಹ್ಮೀ ಶಾಸನವಿದೆ. ಎರಡು ಬದಿಗಳಲ್ಲಿ ಶ್ರೀವತ್ಸ ಮತ್ತು ನಂದಿ ಪಾದಗಳಿವೆ. ಚಂತಸ ಎಂದರೆ ಚಂತನಿಗೆ ಸೇರಿದ್ದು (Belonging to Chanta) ಎಂದಾಗುತ್ತದೆ. ಡಾ॥ ಅಜಯಮಿತ್ರ ಶಾಸ್ತ್ರಿಯವರು ಚಂತ ಅಥವಾ ಶಂತ ಎಂದು ಇರಬಹುದೆಂದು ತಮ್ಮ ಇತ್ತೀಚಿನ ಲೇಖನದಲ್ಲಿ ತಿಳಿಸಿದ್ದಾರೆ. ಲಿಪಿಯ

---

9 *MAR*, 1938, p. 73

10 *PMC in the AP Govt. Museums*, P. L. Gupta, p. 16

11 Ibid, p. 23

ಆಧಾರದ ಮೇಲೆ ಶಾಸನವನ್ನು ಕ್ರಿ.ಶ. ೨ನೇ ಶತಮಾನಕ್ಕೆ ಸೇರಿರಬಹುದೆಂದು ಊಹಿಸಲಾಗಿದೆ. ಒಟ್ಟು ೫,೫೩೪ ಬೆಳ್ಳಿಯ ನಾಣ್ಯಗಳನ್ನು ನನಗೆ ಸೇರಿದ್ದು ಎಂದು ಹೇಳಿ ಕೊಳ್ಳಬೇಕಾದರೆ ಬಹುಶಃ ಚಂತ ಚಿಕ್ಕಸಿಂಧಗಿ ಪ್ರಾಂತ್ಯದ ಅರಸನಿರಬಹುದು ಅಥವಾ ಒಬ್ಬ ಸಾಮಂತ ರಾಜನಿರ ಬಹುದು.

ನಾಣ್ಯಶಾಸ್ತ್ರದ ಇತಿಹಾಸದಲ್ಲಿ ಪ್ರಮುಖವಾದ ಅಂಶವೆಂದರೆ ಕರ್ನಾಟಕದಲ್ಲಿ ಇದುವರೆಗೆ ದೊರೆತಿರುವ ಗುಪ್ತನಿಧಿಗಳಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ನಾಣ್ಯಗಳು ದೊರೆತಿರುವುದು ಎಂದರೆ ಚಿಕ್ಕಸಿಂಧಗಿ ಗುಪ್ತನಿಧಿ ಒಂದೇ. ನಮ್ಮ ಪಕ್ಕದ ರಾಜ್ಯವಾದ ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಅಮರಾವತಿಯಲ್ಲಿ ದೊರೆತಿರುವ ೭,೬೬೮ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳನ್ನು ಬಿಟ್ಟರೆ ಚಿಕ್ಕಸಿಂಧಗಿ ಗುಪ್ತನಿಧಿಯು ಭಾರತದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದೊರೆತಿರುವಂತಹ ಮುದ್ರಾಂಕಿತ ನಾಣ್ಯ ಗಳಲ್ಲಿ ಎರಡನೇ ಗುಪ್ತನಿಧಿಯಾಗಿದೆ. ತಮಿಳುನಾಡಿನ ತಿರುಚನಾಪಳ್ಳಿ ಮತ್ತು ಕೊಯಮುತ್ತೂರ್, ಉತ್ತರ ಭಾರತದಲ್ಲಿ ಪಶ್ಚಿಮ ಬಂಗಾಳದ ತಕ್ಷಶಿಲೆಯಲ್ಲಿ ದೊರೆ ತಿರುವ ಗುಪ್ತನಿಧಿಗಳು ಹೆಚ್ಚಿನ ಪ್ರಮಾಣದವು ಗಳಾಗಿವೆ.

೯. ಸನ್ನತಿ : ಕರ್ನಾಟಕ ಸರ್ಕಾರದ ಪುರಾ ತತ್ವ ಇಲಾಖೆಯು ಇತ್ತೀಚಿನ ಒಂದು ಹೊಸ ಸಂಶೋಧನೆ ಎಂದರೆ ೧೯೫೩-೯೪ನೇ ಸಾಲಿನ ಸನ್ನತಿ ಉತ್ಖನನದಲ್ಲಿ ನನ್ನ ಸಹೋದ್ಯೋಗಿಯಾದ ಶ್ರೀ ಎಚ್. ಟಿ. ತಳವಾರ್ ರವರು ನಮ್ಮ ನಿರ್ದೇಶಕರಾದ ಡಾ|| ಡಿ. ವಿ. ದೇವರಾಜ್‌ರವರ ಮಾರ್ಗದರ್ಶನದಲ್ಲಿ ಕೈಗೊಂಡ ಸನ್ನತಿ ಉತ್ಖನನದಲ್ಲಿ ಸುಮಾರು ಎಂಟು ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ದೊರೆತಿದ್ದು, ಅವುಗಳ ರಸಾಯ ನಿಕ ಶುದ್ಧೀಕರಣವಾಗಬೇಕಾಗಿರುವುದರಿಂದ ಅಧ್ಯಯನ ವನ್ನು ಮುಂದೆ ತೆಗೆದುಕೊಳ್ಳಲಾಗುವುದು.

ಈ ಲೇಖನವನ್ನು ಪರಿಷ್ಕರಿಸುತ್ತಿರುವ ವೇಳೆಗೆ ಮತ್ತೊಂದು ಗುಪ್ತನಿಧಿ ಬೆಳಕಿಗೆ ಬಂದಿದ್ದು, ಅದರ ವಿವರ ಕೆಳಕಂಡಂತೆ ಇದೆ.

೧೦. ಹಲವಾಗಲು : ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ಹಲವಾಗಲು ಗ್ರಾಮದಲ್ಲಿ ಶ್ರೀ ಮಾಗಳೆ ಹನುಮಂತಪ್ಪ ಇವರಿಗೆ ದಿನಾಂಕ ೧೯-೮-೧೯೮೪ರಂದು ಅದೇ ಗ್ರಾಮದ ಶ್ರೀ ಗಡ್ಡಿಗಾರ ಬರಮಪ್ಪ ಎಂಬುವವರ ಜಮೀನಿನಲ್ಲಿ ಬೆಳೆದು ನಿಂತ ಮೆಕ್ಕೆ ಜೋಳಕ್ಕೆ ನೀರನ್ನು ಹಾಯಿಸಲು ಕಾಲುವೆಯಲ್ಲಿ ಬೆಳೆದಿದ್ದ ಜೊಂಡು ಹುಲ್ಲನ್ನು ತೆಗೆಯುತ್ತಿರುವಾಗ ಸಲಾಕಿಗೆ ಒಂದು ಸಣ್ಣ ಮಣ್ಣಿನ ಕುಡಿಕೆಯಲ್ಲಿ ಒಟ್ಟು ೧೪೪ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಪತ್ತೆಯಾದವು. ಇವುಗಳ ಒಟ್ಟು ತೂಕ ೪೩೮ ಗ್ರಾಂ. ಇವುಗಳಲ್ಲಿ ೧೩೩ ನಾಣ್ಯಗಳು ಚೌಕಾಕಾರವಾಗಿಯೂ ಮತ್ತು ಉಳಿದ ೧೧ ನಾಣ್ಯಗಳು ದುಂಡಾಗಿಯೂ ಇವೆ. ಎಲ್ಲಾ ನಾಣ್ಯಗಳ ಮುಂಭಾಗದಲ್ಲಿ ಐದು ಚಿತ್ರಗಳು ಇದ್ದು, ಹಿಂಭಾಗದಲ್ಲಿ ಸಣ್ಣ ಸಣ್ಣ ಮುದ್ರೆಗಳನ್ನು ಕಾಣಬಹುದಾಗಿದೆ.

**ಖೋಟಾ ಮುದ್ರಾಂಕಿತ ನಾಣ್ಯಗಳು :** ಭಾರತೀಯ ನಾಣ್ಯಶಾಸ್ತ್ರ ಇತಿಹಾಸದಲ್ಲಿ ಮುದ್ರಾಂಕಿತ ನಾಣ್ಯಗಳೇ ಪ್ರಾರಂಭದ ನಾಣ್ಯಗಳು ಎಂಬ ಹೆಗ್ಗಳಿಕೆಯ ಜೊತೆಗೆ ಖೋಟಾ ನಾಣ್ಯಗಳ ತಯಾರಿಕೆ (Counterfiet Coins) ಕೂಡ ಇಲ್ಲಿಂದಲೇ ಪ್ರಾರಂಭವಾಗುತ್ತವೆ.

ಮುದ್ರಾಂಕಿತ ನಾಣ್ಯಗಳ ಅಸಲಿತನವನ್ನು ಪರೀಕ್ಷಿಸಲು ಬ್ಯಾಂಕರ್ಸ್ ಮಾರ್ಕ್ಸ್ ಇದ್ದ ಬಗ್ಗೆ ಹಿಂದೆ ವಿವರಿಸಲಾಗಿದೆ. ಸಾಮಾನ್ಯವಾಗಿ ಮುದ್ರಾಂಕಿತ ನಾಣ್ಯ ಗಳನ್ನು ಮುದ್ರೆಗಳನ್ನು ಒತ್ತಿ ತಯಾರಿಸುತ್ತಿದ್ದರೆ ಖೋಟಾ ನಾಣ್ಯಗಳನ್ನು ಡೈಗಳಿಂದ ತಯಾರಿಸುತ್ತಿದ್ದರು. ಮಧ್ಯಪ್ರದೇಶದ ಏರನ್‌ನಲ್ಲಿ ಖೋಟಾ ನಾಣ್ಯಗಳನ್ನು ತಯಾರಿಸುತ್ತಿದ್ದ ಒಂದು ಡೈಯನ್ನು ಅಲೆಗ್ಸಾಂಡರ್ ಕನ್ನಿಂಗ್‌ಹ್ಯಾಂ[12]ರವರು ಪತ್ತೆ ಹಚ್ಚಿದ್ದರೆ, ಮತ್ತೊಂದನ್ನು ನಾಸಿಕ್‌ನಲ್ಲಿನ ನಾಣ್ಯಶಾಸ್ತ್ರ ಸಂಶೋಧನಾ ಸಂಸ್ಥೆಯಲ್ಲಿ ಸಂಶೋಧನಾ ಸಂಘಟಕರಾಗಿರುವ ಶ್ರೀ ಪಿ. ವಿ. ರಾಧಾಕೃಷ್ಣರವರು ತಮಿಳುನಾಡಿನ ಕರೂರ್‌ನಲ್ಲಿ ಪತ್ತೆ

12 *ASI*, AR Vol. 10, 1881, pp. 77-78 pl. 24.1.2

ಹಚ್ಚಿದ್ದಾರೆ.[13] ಮುದ್ರಾಂಕಿತ ನಾಣ್ಯವನ್ನು ಇಟ್ಟು ಕೊಂಡು ಅದರಿಂದ ಮೌಲ್ಡ್(ಅಚ್ಚು)ಗಳನ್ನು ತಯಾರಿಸಿ ರುವ ಬಗ್ಗೆ ದಾಖಲೆಗಳಿವೆ. ಈ ರೀತಿಯ ಮೌಲ್ಡ್‌ಗಳು ಈಗಾಗಲೇ ಮಥುರಾ, ಜೂಸಿ, ಶಿಸುಪಾಲಗರ್, ಕೊಂಡಾ ಪುರ್, ಧೂಲಿಕಟ್ಟ, ವೀರಪುರಂ ಮತ್ತು ಕಾಂಚೀಪುರಂ[14] ಗಳಲ್ಲಿ ಪತ್ತೆಯಾಗಿವೆ. ಈ ರೀತಿಯ ಮೌಲ್ಡ್‌ಗಳನ್ನು ಖೋಟಾ ನಾಣ್ಯ ತಯಾರಕರ ಉಪಕರಣಗಳು (Forger's Tools) ಎಂದು ಕರೆಯಲಾಗಿದೆ. ಇವುಗಳಲ್ಲಿ ಮುಖ್ಯ ವಾದ ವಿಷಯವೇನೆಂದರೆ ಮಥುರಾ, ಕೊಂಡಾಪುರ ಮತ್ತು ಕಾಂಚೀಪುರಂಗಳಲ್ಲಿ ದೊರೆತ ಮೌಲ್ಡ್‌ಗಳು ಒಂದೇ ರೀತಿಯ ಚಿಹ್ನೆಗಳುಳ್ಳ ಮೌಲ್ಡ್‌ಗಳಾಗಿವೆ.

ಕರ್ನಾಟಕದಲ್ಲಿ ಖೋಟಾ ಮುದ್ರಾಂಕಿತ ನಾಣ್ಯ ಗಳನ್ನು ತಯಾರಿಸುತ್ತಿದ್ದ ಬಗ್ಗೆ ಈವರೆಗೆ ಎಲ್ಲೂ ದಾಖಲೆಗಳಿಲ್ಲ. ಆದರೆ ವಡಗಾಂ ಮತ್ತು ಮಾಧವಪುರ ಉತ್ಖನನದಲ್ಲಿ ದೊರೆತ ಕೆಲವು ತಾಮ್ರದ ನಾಣ್ಯಗಳ ಮೇಲೆ ಬೆಳ್ಳಿಯ ಲೇಪನವನ್ನು ಮಾಡಲಾಗಿದೆ ಎಂದು ದಾಖಲೆ ಇರುವುದರಿಂದ ಬಹುಶಃ ಈ ನಾಣ್ಯಗಳು ಖೋಟಾ ನಾಣ್ಯಗಳಿರಬಹುದು. ಕಾರಣ ಚಿಕ್ಕಸಿಂಧಗಿ ಗುಪ್ತನಿಧಿಯಲ್ಲಿ ದೊರೆತ ನಾಣ್ಯಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದಾಗ ೫.೫೩೪ ನಾಣ್ಯಗಳಲ್ಲಿ ಯಾವ ನಾಣ್ಯದ ಮೇಲೂ ಈ ರೀತಿಯ ಲೇಪನ ಇರುವುದು ಕಂಡು ಬಂದಿಲ್ಲ. ಆದ್ದರಿಂದ ತಾಮ್ರದ ನಾಣ್ಯಗಳ ಮೇಲೆ ಬೆಳ್ಳಿಯ ಲೇಪನ ಇರುವ ನಾಣ್ಯಗಳು ಖೋಟಾ ನಾಣ್ಯಗಳಿರಬಹುದು ಎಂದು ಊಹಿಸಬಹುದಾಗಿದೆ. ಜೊತೆಗೆ ಇತ್ತೀಚೆಗೆ ಖೋಟಾ ನಾಣ್ಯಗಳನ್ನು ತಯಾರಿಸು ವಾಗ ತಾಮ್ರದ ಮೇಲೆ ಬೆಳ್ಳಿ ಅಥವಾ ಬಂಗಾರದ ಲೇಪನ ಮಾಡಿರುವುದನ್ನು ಉದಾಹರಣೆಗೆ ತೆಗೆದುಕೊಳ್ಳ ಬಹುದಾಗಿದೆ.

ಉಪಸಂಹಾರ : ಮುದ್ರಾಂಕಿತ ನಾಣ್ಯಗಳು ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯನ್ನು ಪ್ರತಿ ನಿಧಿಸುತ್ತವೆ. ಸಾಮಾನ್ಯವಾಗಿ ಮುದ್ರಾಂಕಿತ ನಾಣ್ಯಗಳು ಉತ್ತರ ಭಾರತದಲ್ಲಿ ಚಲಾವಣೆಯಲ್ಲಿ[15] ಇದ್ದಂತಹ ನಾಣ್ಯಗಳಾಗಿದ್ದು, ಕಾಲಕ್ರಮೇಣದಲ್ಲಿ ದಕ್ಷಿಣ ಭಾರತದಲ್ಲಿ ಚಲಾವಣೆಗೆ ಬಂದವುಗಳಾಗಿವೆ. ದಕ್ಷಿಣ ಭಾರತದಲ್ಲಿ ದೊರೆತಿರುವ ಮುದ್ರಾಂಕಿತ ನಾಣ್ಯಗಳು ೩.೪ ಗ್ರಾಂ ತೂಕವಿದ್ದು, ನಾಣ್ಯಗಳ ಮುಂಭಾಗದಲ್ಲಿ ಐದು ಚಿಹ್ನೆ ಗಳಿದ್ದು, ಹಿಂಭಾಗದಲ್ಲಿ ಸಣ್ಣ ಸಣ್ಣ ಗುರುತುಗಳಿರುವ ನಾಣ್ಯಗಳಾಗಿವೆ. ಈ ರೀತಿಯ ನಾಣ್ಯಗಳನ್ನು ಮುದ್ರಾಂಕಿತ ನಾಣ್ಯಗಳ ಅಧ್ಯಯನ ಪಿತಾಮಹ ಎನಿಸಿದ ಡಾ॥ ಪಿ. ಎಲ್. ಗುಪ್ತರವರು ಮಗಧ–ಮೌರ್ಯರ ಕರ್ಷಪಣಗಳು ಎಂದು ಕರೆದಿದ್ದಾರೆ.[16] ನಂದರು ಮತ್ತು ಮೌರ್ಯರು ಭಾರತಾದ್ಯಂತ ಆಳ್ವಿಕೆ ನಡೆಸಿರುವುದರಿಂದ ಈ ಕರ್ಷಪಣಗಳು ದೇಶದ ಎಲ್ಲಾ ಮೂಲೆಗಳಲ್ಲೂ ದೊರೆತಿರುವುದನ್ನು ಗಮನಿಸಬಹು ದಾಗಿದೆ.

---

13 *Studies in S I. Coins*, Vol. 4, *(ed)* Prof. A. V. Narasimha Murthy, p. 51

14 K. V. Raman and P. Shanmugam, *Studies in S.I. Coins*, Vol. I, pp. 24–29.

15 *Coins*, P. L. Gupta, p. 43.

16 *Ancient Indian SPMC of the Magadha-Mauryan Karshapana Series*, P. L. Gupta & Hardaker, p. 1.

## ಆಕರ ಗ್ರಂಥಗಳು


1 ಕರ್ನಾಟಕ ನಾಣ್ಯ ಸಂಪತ್ತು, ಎ. ವಿ. ನರಸಿಂಹಮೂರ್ತಿ, ಬೆಂಗಳೂರು, ೧೯೭೪

2 ಕಾಯಿನ್ಸ್ ಆಫ್ ಕರ್ನಾಟಕ, ಎ. ವಿ. ನರಸಿಂಹಮೂರ್ತಿ, ಬೆಂಗಳೂರು, ೧೯೭೫

3 ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್, ೧೯೩೬ ಮತ್ತು ೧೯೩೮, ಎಮ್. ಎಚ್. ಕೃಷ್ಣ, ಮೈಸೂರು

4 ಏನ್ಷಿಯಂಟ್ ಇಂಡಿಯನ್ ಸಿಲ್ವರ್ ಪಂಚ್ ಮಾರ್ಕ್ಡ್ ಕಾಯಿನ್ಸ್ ಆಫ್ ದಿ ಮಗದ-ಮೌರ್ಯ ಕರ್ಷಪಣ ಸೀರೀಸ್, ಪಿ. ಎಲ್. ಗುಪ್ತ ಮತ್ತು ಟಿ. ಆರ್. ಹರ್ದಕರ್, ಅಂಜನೇರಿ, ನಾಸಿಕ್, ೧೯೮೫

5 ಪಂಚ್‌ಮಾರ್ಕ್ಡ್ ಕಾಯಿನ್ಸ್ ಇನ್ ದಿ ಆಂಧ್ರಪ್ರದೇಶ್ ಗೌರ್ನಮೆಂಟ್ ಮ್ಯೂಸಿಯಂ, ಪಿ. ಎಲ್. ಗುಪ್ತ, ಹೈದರಾಬಾದ್, ೧೯೬೧

6 ದಿ ಅಮರಾವತಿ ಹೋರ್ಡ್ ಆಫ್ ಸಿಲ್ವರ್ ಪಂಚ್ ಮಾರ್ಕ್ಡ್ ಕಾಯಿನ್ಸ್. ಪಿ. ಎಲ್. ಗುಪ್ತ, ಹೈದರಾಬಾದ್, ೧೯೬೩

7 ಸ್ಟಡೀಸ್ ಇನ್ ಸೌತ್ ಇಂಡಿಯನ್ ಕಾಯಿನ್ಸ್, ಸಂಪುಟ ೭, ಸಂಪಾದಕರು : ಡಾ. ಎ. ವಿ. ನರಸಿಂಹಮೂರ್ತಿ, ಮದ್ರಾಸ್, ೧೯೯೪

8 ನ್ಯೂಮಿಸ್‌ಮ್ಯಾಟಿಕ್ಸ್ ಅಂಡ್ ಆರ್ಕಿಯಾಲಜಿ (2nd International Colloquium), (ಸಂ) ಡಾ. ಪಿ. ಎಲ್. ಗುಪ್ತ ಮತ್ತು ಎ. ಕೆ. ಜಾ. ಅಂಜನೇರಿ, ನಾಸಿಕ್, ೧೯೮೭

9 ಶ್ರೀಕಂಠಿಕಾ : ಪ್ರೊ. ಎಸ್. ಶ್ರೀಕಂಠಶಾಸ್ತ್ರಿ ಫೆಲಿಸಿಟೇಷನ್ ವಾಲ್ಯೂಮ್, ಮೈಸೂರು, ೧೯೭೪

ಡಾ|| ಕೆ. ಜಿ. ಭಟ್‌ಸೂರಿ*

# ಮುರುಕನಹಳ್ಳಿ ಶ್ರೀಕಂಠೇಶ್ವರ ದೇವಾಲಯ-ಒಂದು ಟಿಪ್ಪಣಿ

ಮುರುಕನಹಳ್ಳಿ ಮಂಡ್ಯ ಜಿಲ್ಲೆ, ಕೆ. ಆರ್. ಪೇಟೆ ತಾಲ್ಲೂಕಿನಿಂದ ದಕ್ಷಿಣ ಪೂರ್ವಾಭಿಮುಖವಾಗಿ ೭ ಕಿ.ಮೀ. ಅಂತರದಲ್ಲಿದೆ. ಊರಿನ ಪೂರ್ವ ಪಶ್ಚಿಮಾಭಿಮುಖವಾಗಿ ೧ ಕಿ. ಮೀ. ಅಂತರದಲ್ಲಿ ಶ್ರೀಕಂಠೇಶ್ವರ ದೇವಾಲಯವಿದೆ. ಮೊದಲು ಈ ದೇವಾಲಯ ಪೂರ್ತಿಯಾಗಿ ಮಣ್ಣಿನಿಂದ ಮುಚ್ಚಲ್ಪಟ್ಟಿದ್ದು, ಆಕಸ್ಮಿಕವಾಗಿ ಗ್ರಾಮಸ್ಥರೊಬ್ಬರ ಗಮನಕ್ಕೆ ಬಂದು ಮಣ್ಣನ್ನು ತೆಗೆದಾಗ ಹೊಯ್ಸಳರ ಕಾಲಕ್ಕೆ ಸೇರಿದ ದೇವಾಲಯಕ್ಕೆ ಸಂಬಂಧಿಸಿದ ಸ್ತಂಭ, ಶಿಖರಭಾಗ, ಹಾಸುಗಲ್ಲುಗಳು, ಶಿಲಾಶಾಸನಗಳು ದೊರೆತವು

ಅಳಿದುಳಿದ ಶ್ರೀಕಂಠೇಶ್ವರ ದೇವಾಲಯದ ಈಗಿನ ಸ್ಥಿತಿ ಶ್ರೀಕಂಠೇಶ್ವರ ದೇವಾಲಯ ಪೂರ್ವಾಭಿಮುಖವಾಗಿದ್ದು, ಹಿಂದಿನ ಅರ್ಧಭಾಗ ಈಗಲೂ ಮಣ್ಣಿನಿಂದ ಆವೃತವಾಗಿದೆ. ಈ ದೇವಾಲಯದ ಉದ್ದಗಲ ೮ ಮೀ., ೬.೭೫ ಮೀ. ಮತ್ತು ಎತ್ತರ ಎರಡೂವರೆ ಮೀ. ಇದೆ. ಗರ್ಭಗೃಹದಲ್ಲಿನ ಶಿವಲಿಂಗ ಸ್ವಲ್ಪ ಸವೆದಿದ್ದು, ಮೇಲ್ಭಾಗ ಸಪಾಟಾಗಿದ್ದು, ಚೌಕಾಕಾರದ ಪೀಠದಲ್ಲಿದೆ. ಪೀಠಭಾಗ ಸ್ವಲ್ಪ ಮುರಿದಿದೆ. ಇದರ ಕಾಲ ಕ್ರಿ. ಶ. ಸುಮಾರು ೧೨ನೇ ಶತಮಾನ. ಗರ್ಭಗೃಹ ಚೌಕಾಕಾರವಾಗಿದ್ದು, ಮೇಲ್ಭಾಗ ಅಥವಾ ಮೇಲ್ಛಾವಣಿ ಇಲ್ಲದೇ ಸಪಾಟಾಗಿ ಹಾಸುಗಲ್ಲಿನಿಂದ ಹಾಸಲ್ಪಟ್ಟಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಅಥವಾ ದ್ವಾರಪಟ್ಟಿಯ ಮೇಲೆ ಯಾವುದೇ ಕೇಂದ್ರೀಯ ಲಲಾಟ ಬಿಂಬವಿರದೇ ಕೇವಲ ಕಲ್ಲಿನ ತೊಲೆಯಿದ್ದು ಅದು ಮೂಲ ರೂಪದಲ್ಲಿರುವುದು ಇದರ ವಿಶೇಷತೆ.

ನವರಂಗ ಅಥವಾ ಸಭಾಮಂಟಪದ ಮೇಲ್ಛಾವಣಿ ಅರ್ಧ ಮುಚ್ಚಲ್ಪಟ್ಟಿದೆ. ಇನ್ನುಳಿದ ಅರ್ಧ ಭಾಗದ ಹಾಸುಗಲ್ಲುಗಳೆಲ್ಲವೂ ದೇವಾಲಯದ ಎಡಭಾಗದ ಮಣ್ಣಿನಲ್ಲಿ ಹೂತಿದೆ. ಉತ್ತರ ಭಾಗದ ಭಿತ್ತಿ ತೆರೆದಿದ್ದು, ಈಗ ಅಲ್ಲಿ ಅಡ್ಡವಾಗಿ ಹಾಸುಗಲ್ಲು ಇಡಲಾಗಿದೆ. ಸಭಾಮಂಟಪದ ಮಧ್ಯದಲ್ಲಿನ ನಾಲ್ಕು ಸ್ತಂಭಗಳು ಒಂದೇ ತೆರನಾಗಿದ್ದು, ಬುಡಭಾಗ ಚೌಕಾಕಾರ, ವರ್ತುಲಾಕೃತಿಯ ಆಮಲಕಗಳನ್ನೊಳಗೊಂಡಿದೆ. ನಾಲ್ಕು ಸ್ತಂಭಗಳು ಹೊತ್ತ ಮೇಲ್ಛಾವಣಿಯು ಭುವನೇಶ್ವರಿಯಠಾಗಿದ್ದು, ಆಳದಲ್ಲಿ ಪದ್ಮವನ್ನೊಳಗೊಂಡಿರುವುದು ಇದರ ಇನ್ನೊಂದು ವೈಶಿಷ್ಟ್ಯ.

ದಕ್ಷಿಣ ಭಾಗದ ಭಿತ್ತಿಯಲ್ಲಿನ ಗೂಡಿನಲ್ಲಿ ಮಧುಸೂಧನಮೂರ್ತಿ ಸಮಭಂಗಿಯಲ್ಲಿದ್ದು, ಮೂರ್ತಿಶಿಲ್ಪದ ದೃಷ್ಟಿಯಿಂದ ವೈಶಿಷ್ಟ್ಯ ಪೂರ್ಣವಾಗಿದೆ. ಮಧುಸೂಧನ ಕರಂಡ ಮಕುಟ, ವರ್ತುಲಾಕಾರದ ಕಿವಿಯೋಲೆ, ಆಗಲವಾದ ಕಂಠಾಭರಣ, ವೆಲಿಖಿಲಾ ಕೆಳವಸ್ತ್ರದ ಮೇಲೆ ಹರಡಿದೆ. ಯಜ್ಞೋಪವೀತ, ವೈಜಯಂತಿ ಹಾರ, ಕೈಬಳೆ ಮತ್ತು ಕಾಲ್ಗಡಗ ಧರಿಸಿದ್ದಾನೆ. ಬಲಗೈ ಶಂಖ, ಪದ್ಮ (ಮುರಿದಿದೆ), ಎಡಗೈ ಚಕ್ರ ಗಧಾ (ಮುರಿದಿದೆ) ಹಿಡಿದಿದೆ. ಪ್ರಭಾವಳಿ

* ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಕರ್ನಾಟಕ ಸರ್ಕಾರ, ಮೈಸೂರು.

ನಾಗತೋರಣಾಲಂಕೃತವಾಗಿದ್ದು, ಕಲೆಯ ದೃಷ್ಟಿಯಿಂದ ಇದರಲ್ಲಿ ಪ್ರತಿಬಿಂಬಿತವಾಗಿದೆ. ಈ ಮೂರ್ತಿಯ ಕಾಲ ಸುಮಾರು ಕ್ರಿ. ಶ. ೧೧–೧೨ನೇ ಶತಮಾನ.

ಹೊರ ಬದಿಯಲ್ಲಿರುವ ಕನ್ನಡ ಶಿಲಾಶಾಸನ ಶಿವ ಸ್ತುತಿಯಿಂದ ಪ್ರಾರಂಭವಾಗಿದೆ. ಇದು ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದುದು. ಮುರುಕನಹಳ್ಳಿ ಗ್ರಾಮ ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲಾ ದೇವಿಗೆ ಸೇರಿದ ದತ್ತಿ ಗ್ರಾಮವಾಗಿದ್ದು. ಮುರುಕನಹಳ್ಳಿ 'ಮೊದರನಾಡ ೭೦'ರಲ್ಲಿ ಒಳಗೊಂಡಿದ್ದು, ಅಪ್ಪುತರಾಶಿ ಪಂಡಿತರಿಂದ ಪ್ರತಿಷ್ಠಾಪಿಸಲ್ಪಟ್ಟ ದೇವರಿಗೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದನ್ನು ಈ ದಾನವನ್ನು ರಾಚಶೆಟ್ಟಿಯ ಮಗ ಮುದ್ದಮ್ಮನ ಮಗ ಬಾಣಗೊಂಡನು ಮಾಡಿದನೆಂಬುದನ್ನು ತಿಳಿಸುತ್ತದೆ. ಈ ಶಾಸನವನ್ನು ಬರೆದವನ ಹೆಸರು 'ಸಿರಿಯಾಚಾರಿ' ಎಂದಿದೆ.

ಹೀಗೆ ಅಂದು ಮಣ್ಣಲ್ಲಿ ಮುಚ್ಚಲ್ಪಟ್ಟಿದ್ದ ಇಂದು ಬೆಳಕು ಕಂಡ ಶ್ರೀಕಂಠೇಶ್ವರ ದೇವಾಲಯವು ಕಲೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ತನ್ನದೇ ಆದ ಮಹತ್ವದ ಸ್ಥಾನವನ್ನು ಗಳಿಸಿದೆ. ಈ ದೇವಾಲಯ ಹೊಯ್ಸಳರ ಕಾಲಕ್ಕೆ ಸೇರಿದ್ದೆಂದು ಹೇಳಲಾದರೂ ಭಿತ್ತಿಯ ಕೆತ್ತನೆ ಮತ್ತು ಸ್ಥಂಬದ ಮಾದರಿ ಚೋಳರ ಕಾಲದಲ್ಲಿನ ದ್ರಾವಿಡ ವಾಸ್ತುಕಲೆಯನ್ನು ಹೋಲುತ್ತದೆ. ದೇವಾಲಯದ ಹೊರಗಿನ ಅಪ್ರಕಟಿತ ಶಾಸನ 'ಮುರುಕನಹಳ್ಳಿ' ಗ್ರಾಮ ರಾಣಿ ಶಾಂತಲಾದೇವಿಗೆ ಸೇರಿದ ಗ್ರಾಮವಾಗಿತ್ತೆಂಬ ವಿಷಯದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ.

ಕಲ್ಲನಗೌಡ ತಿ. ಪಾಟೀಲ*

# ಪರಸಗಡದ ಪರಿಚಯ

ಪರಸಗಡವು ಬೆಳಗಾಂವಿ ಜಿಲ್ಲೆಯ ಸವದತ್ತಿ ತಾಲ್ಲುಕ್ಯಪೈಕಿ ಹಾಳಾದ ಕೋಟೆ. ಇದು ಸವದತ್ತಿಯಿಂದ ಪೂರ್ವಕ್ಕೆ ಏಳುಕೊಳದ ಎಲ್ಲಮ್ಮಾ ದೇವಸ್ಥಾನದ ಪಕ್ಕಕ್ಕೆ ಇರುವ ಗುಡ್ಡದಲ್ಲಿ ಇದೆ. ಈ ಕೋಟೆಯಲ್ಲಿ ಜನ ವಾಸವಿಲ್ಲ. ವೇದಕಾಲದಲ್ಲಿ ಋಷಿಮುನಿಗಳು ವಾಸವಾದ ಪವಿತ್ರಸ್ಥಾನ, ತಪಸ್ಸುಗೈದ ಸುಕ್ಷೇತ್ರವೆಂದು ನಂಬಿಕೆ. ಇಲ್ಲಿ ಜಮದಗ್ನಿಯ ಬಿಡಾರವಿತ್ತು ; ಆ ಸಮಯದಲ್ಲಿ ತಂದೆಯವರ ವಚನ ಪಾಲಿಸಿದ ಭಾರ್ಗವರಾಮನು ಜಮದಗ್ನಿ ರೇಣುಕೆಯರ ಪುತ್ರನಾಗಿ ಜನಿಸಿ ಇದೇ ಪರಸಗಡದಲ್ಲಿ ಘೋರ ತಪಸ್ಸನ್ನಾಚರಿಸಿ ಪರಮಾತ್ಮನಿಂದ ಪರಶು (ಕೊಡಲಿ)ವನ್ನು ವರವನ್ನಾಗಿ ಸ್ವೀಕರಿಸಿದ ಪವಾಡ ಕ್ಷೇತ್ರವೆಂದು ಹೇಳುತ್ತಾರೆ. ಕಾರ್ತಿವೀರ್ಯನು ಜಮದಗ್ನಿ ಮುನಿಯನ್ನು ಕೊಂದನೆಂದು ತಿಳಿದು ಭಾರ್ಗವರಾಮನು ಕಾರ್ತಿವೀರ್ಯ ರಾಜನ ಕುಲವನ್ನೇ ಸಂಹಾರ ಮಾಡಿ ಪರಶುರಾಮನೆನೆಸಿಕೊಂಡ ಗಂಡುಮೆಟ್ಟಿನ ಸ್ಥಳ ಪರಸಗಡ.[1] ಈ ಪವಿತ್ರ ಜಾಗದಲ್ಲಿ[2] ರಟ್ಟರಾಜ ವಂಶಿಕರು ೯ನೇ ಶತಮಾನದಲ್ಲಿ ಚಿಕ್ಕ ಕೋಟೆಯನ್ನು ಕಟ್ಟಿಸಿದರು. ರಾಜದರಬಾರವನ್ನು ನಡೆಸಿದರು.[3] ಮುಂದೆ ಕೊಲ್ಹಾಪುರ ಕೇಶಿರಾಜನು ೧೭೩೦ರಲ್ಲಿ ಇದನ್ನು ತನ್ನ ವಶ ಮಾಡಿಕೊಂಡು ತನ್ನ ಆಳ್ವಿಕೆಯನ್ನು ನಡೆಸಿ, ನಂತರ ವಿಜಯನಗರ ಅರಸರ ವಶವಾಯಿತು. ರಾಜ ಮಹರಾಜರು ಆಳಿದ ಪರಸಗಡ ಮುಂದೆ ಆದಿಲ್‌ಶಾಹಿಗಳ ವಶವಾಗಿರಲು ಮರಾಠ ಛತ್ರಪತಿ ಶಿವಾಜಿ ಗೆದ್ದುಕೊಂಡು ಸ್ವಾಧೀನದಲ್ಲಿ ಇಟ್ಟುಕೊಂಡ. ಅವನ ಕಾಲದಲ್ಲಿ ಕೋಟೆ ಇನ್ನೂ ದೃಢವಾಯಿತು.

ಹೈದರ್ ಅಲಿ ಕೂಡ ಪರಸಗಡ ಗೆದ್ದುಕೊಂಡು, ತನ್ನ ವಶ ಮಾಡಿಕೊಂಡು ಸವಣೂರಿನ ನವಾಬರಿಗೆ ಬಿಟ್ಟುಕೊಟ್ಟನು. ನಂತರ ನವಲಗುಂದದ ದೇಸಾಯಿ ಜಯಗೊಂಡನು ಈ ಪರಸಗಡದ ಮೇಲೆ ದಂಡೆತ್ತಿ ಬಂದು ಈ ಕೋಟೆಯನ್ನು ಸ್ವಾಧೀನಪಡಿಸಿಕೊಂಡ. ಕ್ರಿ. ಶ. ೧೬೩೪ರಲ್ಲಿ ಮತ್ತೊಂದು ಹಂತದಲ್ಲಿ ಕೋಟೆಯನ್ನು, ಗೋಡೆಯನ್ನು ಭದ್ರಪಡಿಸಿದನೆಂದ ತಿಳಿದುಬರುತ್ತದೆ.[4] ಮುಂದೆ ಪೇಶ್ವೆಯರ ಆಳ್ವಿಕೆಗೆ ಒಳಪಟ್ಟು ಪೇಶ್ವೆ ರಘುನಾಥನ ದತ್ತುಪುತ್ರನು ೧೮೦೨ರಲ್ಲಿ ಸ್ವಾಧೀನ ಪಡೆದುಕೊಂಡು ಸಣ್ಣ ಕೇಂದ್ರವನ್ನಾಗಿ ಮಾಡಿದನು. ನಂತರ ಬ್ರಿಟಿಷರ ವಶವಾಗಿ ಈ ಪರಸಗಡವನ್ನು ಒಂದು ತಾಲ್ಲೂಕಾಗಿ ೧೮೮೧ರಲ್ಲಿ ಮಾಡಿದರು.

**ಕೋಟೆಯ ವಿವರ :** ಕೋಟೆಯ ಒಳಕ್ಷೇತ್ರವು ಒಂದೇ ಸಮನಾಗಿ ಇಲ್ಲವಾದರೂ ಅಂಕು ಡೊಂಕಾಗಿ ಅಷ್ಟಕೋನ ಆಕಾರವಾಗಿ ಇದೆ. ಇದರ ವಿಸ್ತೀರ್ಣ

---

* ಬೆಳಧಡಿ ಅಂಚೆ, ಗದಗ ತಾಲ್ಲೂಕು, ಧಾರವಾಡ ಜಿಲ್ಲೆ.
1 ರೇಣುಕಾ ಮಹಾತ್ಮೆಯಲ್ಲಿ ಬರತಕ್ಕ ಸನ್ನಿವೇಶಗಳು.
2 ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩ರಲ್ಲಿ ೬೪೯ನೇ ಪುಟ ನೋಡಿರಿ.
3 ಅದೇ ಪುಟ
4 ಅದೇ ಪುಟ

ಅಜಮಾಸು ೪೦ ಎಕರೆ ಆಗಬಹುದು. ಒಂದು ಅಂಚಿನಲ್ಲಿ ನೂರಾರು ಜನ ಅಡಗಿ ಕುಳಿತುಕೊಳ್ಳಬಹುದಾದ ಭಾರಿ ಆಳದ ಕೊರಕಲು ಇದೆ. ಮೂರು ಹಂತವಾಗಿ ಕೋಟೆಯು ಕಟ್ಟಲ್ಪಟ್ಟಿದೆ. ಪ್ರಥಮ ಹಂತದಲ್ಲಿ ಒರಟು ಕಲ್ಲಿನಿಂದ ಗೋಡೆಯನ್ನು ಕಟ್ಟಿದರೆ ಎರಡನೆಯ ಹಂತವನ್ನು ಚೌಕಾಕಾರವಾಗಿ ಕಟ್ಟಿದೆ. ಮೂರನೆಯ ಹಂತವು ಭದ್ರವಾಗಿ ದ್ವಾರ, ಗುಪ್ತ ದಾರಿಗಳಿಂದ ಸುತ್ತುವರಿದಿದೆ. ದೊಡ್ಡ ದೊಡ್ಡ ಬಂಡೆಕಲ್ಲುಗಳಿಂದ ಕಟ್ಟಿದ್ದಾರೆ. ಪ್ರಥಮ ದ್ವಾರವಂತೂ ಎಡ-ಬಲಕ್ಕೆ ಚಿಕ್ಕ ಚಿಕ್ಕ ಬುರುಜಗಳಿಂದ ಕೂಡಿ ಇಕ್ಕಟ್ಟಾದ ದಾರಿ ಇದೆ. ಇದಕ್ಕೆ ಎದುರುಗೋಡೆ ಇದ್ದು ಅದು ಆಯತಾಕಾರದ ಕಿಂಡಿಗಳಿಂದ ಕೂಡಿದೆ. ಎರಡನೆಯ ಹಂತದ ಗೋಡೆಗಳ ಒಳಭಾಗದಲ್ಲಿ ಗುಪ್ತ ದಾರಿ ಉಂಟು. ಸೈನಿಕರ ಗೂಡುಗಳು ಇವೆ. ಕೋಟೆ ಮೇಲ್ಭಾಗಕ್ಕೆ ಹತ್ತಲು ಪಾವಟಿಗೆಗಳು ಇದ್ದು ೧೦ ರಿಂದ ೧೫ ಅಡಿಗಳಷ್ಟು ಅಗಲದ ನೇರವಾಗಿ ಓಡಾಡಲು ದಾರಿ ಇದೆ. ಕುದುರೆಗಳು ಸಹ ಹತ್ತಲೂ ಅನುಕೂಲವಿದ್ದು ಸೈನಿಕರಿಗೂ ಯಾವುದೇ ಅಪಾಯುವಾಗಬಾರದಂತೆ ಅಲ್ಲಿ ಗೂಟಕಲ್ಲುಗಳನ್ನು ನೆಟ್ಟಿದ್ದಾರೆ. ಕೋಟೆಗಳ ಮಧ್ಯಭಾಗದಲ್ಲಿ ಕಮಾನು ಆಕಾರವುಳ್ಳ ಚಿಕ್ಕ ಗೂಡುಗಳು ಇದ್ದು ವೈರಿಗಳಿಗೆ ಕಾಣಿಸದ ಹಾಗೆ ಗುಪ್ತ ಗುಹೆಗಳು ಇರುತ್ತವೆ. ಎರಡನೆಯ ಹಂತದ ಗೋಡೆಯ ಮುಖ್ಯ ದ್ವಾರವಂತೂ ಚೌಕಾಕಾರವಿದ್ದು ಭದ್ರವಾದ ಕಲ್ಲಿನಿಂದ ಅಷ್ಟಕೋನ ಆಕಾರವಾಗಿ ಇದ್ದು ಒಳಗಡೆ ಕದವನ್ನು ಮುಚ್ಚಿದ ಮೇಲೆ ಭದ್ರವಾದ ಅಗಳಿ ಬೂದುಗಳು ಇದ್ದು ಭದ್ರವಾದ ಕಲ್ಲಿನ ಬೆಣೆಯನ್ನು ಕಟ್ಟಲಾಗಿದೆ. ಮೂರನೆಯ ಹಂತದ ಕೋಟೆಯಂತೂ ಭಾರಿ ದೊಡ್ಡ ಪ್ರಮಾಣದ ಹುಡೇವು. ಇದರ ಮಧ್ಯದಲ್ಲಿ ಎತ್ತರವಾದ ಬುರುಜ ಇದೆ. ಇದರ ಒಳ ಭಾಗಕ್ಕೆ ಮೇಲೆ ಹತ್ತಲೂ ಇಳಿಯಲು ಪಾವಟಿಗೆಗಳುಂಟು. ೧೦ ಕಿ. ಮೀ. ವರೆಗೆ ಸುತ್ತಲ ಎಲ್ಲ ದಾರಿಗಳು ಕಾಣಿಸುವ ಹಾಗೆ ವ್ಯವಸ್ಥೆ ಇದೆ. ಹಾಗೂ ನೀರಿಗಾಗಿ ಹೊಂಡಗಳು, ಆನೆ-ಕುದುರೆಗಳಿಗೆ ಪ್ರತ್ಯೇಕ ನೀರಿನ ಕೆರೆಗಳು ಇದ್ದು ಮದ್ದಿನ, ಶಸ್ತ್ರದ ಕೋಣೆಗಳು ಈಗ ಬಿದ್ದು ಅವಶೇಷಗಳು ಮಾತ್ರ ಉಳಿದಿವೆ. ಸೈನಿಕರ ಬಿಡಾರಗಳು, ಅಂತಃಪುರ, ಧಾನ್ಯ ತುಂಬುವ ಗೋದಾಮುಗಳೂ ಇನ್ನೂ ಎಷ್ಟೋ ಕಟ್ಟಡಗಳ ಅಡಿಪಾಯಗಳು ಇದ್ದು ಗುಡಿಗಳೂ ಇರುತ್ತವೆ. ಮಾರುತಿ ದೇವಾಲಯವಿದ್ದು ಈಗ ಹಾಳು ಸ್ಥಿತಿಯಲ್ಲಿ ಇದೆ. ಬೆಳಗಾವಿ ಜಿಲ್ಲೆಯ ಅನೇಕ ಕೋಟೆಗಳಲಿ ಇದರ ರಚನೆ ಮಾತ್ರ ವಿಶಿಷ್ಟವಾಗಿದೆ.

ಈ ಕೋಟೆಯ ಹತ್ತಿರವೇ ಸುಕ್ಷೇತ್ರವಾದ ರೇಣುಕಾ ಎಲ್ಲಮ್ಮನ ದೇವಾಲಯವಿದ್ದು ಕರ್ನಾಟಕ ಮಹಾರಾಷ್ಟ್ರದಿಂದ ಭಕ್ತರು ಭಕ್ತಿಯಿಂದ ಬಂದು ಜಾತ್ರೆಯಲ್ಲಿ ಪಾಲುಗೊಳ್ಳುವರು. ಹತ್ತಿರದ ಮಲಪ್ರಭಾ ಅಣೆಕಟ್ಟು ಬಹಳ ಪ್ರಸಿದ್ಧಿ ಪಡೆದಿದೆ. ಫಲವತ್ತಾದ ಭೂಮಿ ಇದ್ದು ನೀರಾವರಿಗೆ ಬಹಳ ಅನುಕೂಲವಾಗಿದೆ.

ಸವದತ್ತಿ ಪಟ್ಟಣ ಈ ಕೋಟೆಗೆ ಸಮೀಪ ಇದೆ. ಈ ಊರಿನಲ್ಲಿ ಕೂಡಾ ಹಳೆಯದಾದ ಕೋಟೆಯಲ್ಲಿ ಕಾಡ ಸಿದ್ದೇಶ್ವರ ದೇವಸ್ಥಾನವಿದ್ದು ಇದು ಒಳ್ಳೆಯ ಭದ್ರವಾದ ಕೋಟೆ. ಸಮೀಪದಲ್ಲಿ ಹೂಲಿಯೆಂಬ ಗ್ರಾಮದಲ್ಲಿ ಶಿವಾಜಿ ಮಹಾರಾಜರು ಕ್ರಿ. ಶ. ೧೬೭೪ರಲ್ಲಿ ಕಟ್ಟಿಸಿದ ಕೋಟೆ ಇದೆ. ಸುತ್ತಲೂ ಇರತಕ್ಕಂತಹ ರಾಮದುರ್ಗ, ನರಗುಂದಗಳಲ್ಲೂ ಶಿವಾಜಿ ಕಟ್ಟಿದ ಕೋಟೆಗಳು ಇದ್ದು ಪರಸಗಡವೂ ಶಿವಾಜಿ ಕಾಲದಲ್ಲಿ ಮುಖ್ಯ ಕೋಟೆಯಾಗಿತ್ತೆಂದು ಹೇಳುತ್ತಾರೆ.

[ಈ ಲೇಖನ ಕಾರ್ಯದಲ್ಲಿ ನನಗೆ ಸಹಾಯ ಮಾಡಿದ ಶಂಕ್ರಪ್ಪ ಹಾದಣ್ಣವರ ಇವರಿಗೆ ನಾನು ಋಣಿಯಾಗಿದ್ದೇನೆ.]

ಮುತ್ತುರಾಜು*

# ಸೂಳೆಕಲ್‌ಮಠದ ಗುಹಾಚಿತ್ರಗಳು

ಸೂಳೆಕಲ್‌ಮಠವು ಕನಕಪುರ ತಾಲೂಕು ಹಲಸೂರಿನಿಂದ ದಕ್ಷಿಣಕ್ಕೆ ಸುಮಾರು ೮ ಕಿ.ಮೀ. ದೂರದಲ್ಲಿದೆ. ಇದು ಅಕ್ಕರಗಲ್ಲು, ಜೇನುಕಲ್ಲು, ಆಬಲಸೊಣೆ, ಕುಂಡರಗಲ್ಲು, ತುಡುಬೇಒಡ್ಡಿನವಣು, ಮುತ್ತ್ರಾಸನಕೆರೆ ಹಗ್ಗು, ಕೆಂಬರೆ, ಭದ್ರಕಾಳಮ್ಮನ ಒಡ್ಡು ಇವುಗಳಿಂದ ಸುತ್ತುವರೆಯಲ್ಪಟ್ಟಿದೆ. ಸೂಳೆಕಲ್ಲು ಎಂಬುದಕ್ಕೆ ಜನಪದ ಕಥೆಯೊಂದಿದ್ದು, ಆದರೇ ವಾಸ್ತವವಾಗಿ ಪರಿಶೀಲಿಸಿದಾಗ ಸೀಳುಕಲ್ಲು ಸೂಳೇಕಲ್ಲು ಆಗಿ ಬಳಕೆಗೊಂಡಿದೆ. ದೊಡ್ಡದಾದ ಬಂಡೆಯಿಂದ ಬೇರ್ಪಟ್ಟು ಬಿದ್ದಿರುವ ಕಲ್ಲಿನ ಮೇಲೆಯೇ ಕುಳಿತು ಕಲ್ಲುಮನೆಯ ಒಳಚಾವಣಿಯಲ್ಲಿ ಚಿತ್ರಗಳನ್ನು ಬರೆದಿರುವುದನ್ನು ಗಮನಿಸಬಹುದು.

ಈ ಕಲ್ಲುಮನೆಯ (rock shelter) ಒಳಭಾಗ ರೂಟ್‌ಸ್ಕ್ವೇರ್ ಆಕಾರದಲ್ಲಿದೆ. ಒಳಭಾಗದಲ್ಲಿ ಅಗಲ ೫೬ ಅಡಿಗಳು ಉದ್ದ ೨೪ ಅಡಿಗಳು ಅದೇ ಕಲ್ಲುಮನೆಯ ಬಲಗಡೆಯ ಮತ್ತೊಂದು ಭಾಗದ ಅಗಲ ೨೦ ಅಡಿಗಳು ಉದ್ದ ೧೨ ಅಡಿಗಳು.

ಈ ಅರ್ಧಭಾಗದ ಮೇಲೆ ಒಂಬತ್ತು ಲಂಬ ರೇಖೆಗಳಿಗೆ ಮೇಲೊಂದು ಅಡ್ಡರೇಖೆಯಿಂದ ತೋರಣದ ರೀತಿಯಲ್ಲಿ ಬಿಳಿಬಣ್ಣದ ಚಿತ್ರ ಮೂಡಿಸಿದ್ದಾರೆ. ಇದು ಬಹುಶಃ ಧಾರ್ಮಿಕಾಚರಣೆಯ ನಂಬಿಕೆಯ ಸಂಕೇತವೊ ಅಥವಾ ಕುಟುಂಬವರ್ಗದ ಎಣಿಕೆಯೋ ಆಗಿರಬಹುದು, ಇದರ ಕೆಳಗಡೆಯೇ ರಂಗೋಲಿ ರೀತಿಯ ಮಂಡಲವಿದ್ದು, ಬಿಳಿಯ ಬಣ್ಣದಿಂದ ರಚಿತವಾದ ಈ ಮಂಡಲವು ದಪ ರೇಖೆಗಳಿಂದ ರಚಿತವಾದುದಾಗಿದೆ.

ಬಳಿಯಲ್ಲೆ ಬಿಳಿ ಬಣ್ಣದಲ್ಲಿ ಬರೆದ ಇಬ್ಬರ ಮನುಷ್ಯರ ರೇಖಾಚಿತ್ರವಿದ್ದು ದಪ್ಪ ರೇಖೆಗಳಿಂದ ಮೂಡಿಸಿದ ಈ ಮಾನವರ ಕೈಗಳಲ್ಲಿ ಆಯುಧಗಳನ್ನು ಗಮನಿಸಬಹುದಾಗಿದೆ.

ಐದು ಲಂಬ ರೇಖೆಗಳಿಗೆ ಒಂದು ಅಡ್ಡರೇಖೆಯನ್ನೆಳೆದಿರುವ ಮತ್ತೊಂದು ಚಿತ್ರವಿದೆ.

ಪ್ರಾಣಿಯೊಂದರ ಮೇಲೆ ಕುಳಿತ ಮನುಷ್ಯನೊಬ್ಬನ ಚಿತ್ರವಿದ್ದು ಪ್ರಾಣಿಯು ತಲೆಯನ್ನು ನೆಲದ ಕಡೆಗೆ ಬಾಗಿಸಿದ್ದು ಕುದುರೆ ಎಂಬಂತೆ ಕಂಡುಬರುತ್ತದೆ.

ತುಸು ಸಣ್ಣನೆಯ ರೇಖಾಚಿತ್ರವೊಂದರಲ್ಲಿ ಮನುಷ್ಯ ತನ್ನ ಬಲಗೈಯಿಂದ ಕತ್ತಿ ಇಲ್ಲವೇ ಕೋಲನ್ನು ತನ್ನ ಶಿರೋಭಾಗದ ಮೇಲ್ಗಡೆಗೆ ಬರುವಂತೆ ಎತ್ತಿ ಹಿಡಿದಿದ್ದು ಎಡಗೈಯನ್ನು ಮುಂದೆ ಚಾಚಿದಂತಿದೆ, ಕಾಲುಗಳು ಎರಡೂ ಬದಿಗಳಿಗೂ ಚಾಚಿದಂತಿದೆ.

ಸ್ವಲ್ಪ ಮೇಲ್ಗಡೆಗೆ ಸಸ್ಯ ಒಂದರ ಚಿತ್ರವೊಂದಿದ್ದು ಲಂಬ ರೇಖೆಯೊಂದಕ್ಕೆ ಎರಡೂ ಬದಿಗಳಲ್ಲೂ ಸಣ್ಣ, ಸಣ್ಣ ಅಡ್ಡರೇಖೆಗಳನ್ನೆಳೆದು ಈ ಚಿತ್ರವನ್ನೂ ಸಹ ಬಿಳಿ ಬಣ್ಣದಿಂದಲೇ ಮೂಡಿಸಿದ್ದಾರೆ. ಕಾಂಡದ ಭಾಗ ತುಸು ದಪ್ಪಗಿದ್ದು, ಬೇರುಗಳನ್ನು ಗಮನಿಸಬಹುದು. ಇನ್ನೂ

* ನಂ. ೩೩೩, ೪೦ ಅಡಿ ಮುಖ್ಯರಸ್ತೆ, ಕುಮಾರಸ್ವಾಮಿ ಲೇಔಟ್ ೨ನೇ ಘಟ್ಟ, ಬೆಂಗಳೂರು-೫೬೦೦೭೮

ಸ್ವಲ್ಪ ಮೇಲ್ಗಡೆಗೆ ಪ್ರಾಣಿಯೊಂದರ ಮೇಲೆ ಕುಳಿತು ಸವಾರಿ ಮಾಡುತ್ತಿರುವ ಮಾನವನ ಚಿತ್ರವಿದೆ.

ಸಸ್ಯ ಚಿತ್ರದ ಮೇಲ್ಭಾಗದಲ್ಲಿ ಸಣ್ಣ ಸಣ್ಣ ಚುಕ್ಕಿಗಳಿಂದ ಮೂಡಿಸಿದ ಚಿತ್ರವಿದ್ದು ಅಸ್ಪಷ್ಟವಾಗಿದೆ.

ಮತ್ತೊಂದು ಮನುಷ್ಯನ ರೇಖಾ ಚಿತ್ರದಲ್ಲಿ ಉದ್ದನೆಯ ದೇಹ, ದೇಹದ ಎರಡೂ ಬದಿಗಳಿಗೂ ಅಗಲವಾಗಿ ಚಾಚಿದ ಕೈಗಳು ಇವೆ. ಕೈಯಲ್ಲಿ ಬೆರಳುಗಳನ್ನು ಸ್ಪಷ್ಟವಾಗಿ ಮೂಡಿಸಿರುವುದು ಗಮನಾರ್ಹ.

ಎಕ್ಸ್ ಆಕಾರದ ಮನುಷ್ಯನೊಬ್ಬನು ಒಂದು ಕೈಯಲ್ಲಿ ಗುರಾಣಿಯನ್ನು ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಿರುವಂತಿದೆ.

ಮುಂದೆ ಸ್ಪಷ್ಟವಿಲ್ಲದ ಕೆಲವು ರೇಖಾ ಚಿತ್ರಗಳಿದ್ದು ಅದರ ಮುಂದೆಯೇ ಮನುಷ್ಯರು ಕೈ ಕೈ ಹಿಡಿದು ನರ್ತನ ಮಾಡುವ ರೇಖಾ ಚಿತ್ರಗಳಿವೆ.

ಎರಡು ಮನೆಗಳ ಚಿತ್ರಗಳಿವೆ. ಐದು ಲಂಬರೇಖೆಗೆ ಕೆಳಭಾಗಕ್ಕೊಂದು ಅಡ್ಡರೇಖೆಯನ್ನೆಳೆದು ಮೇಲ್ಗಡೆಯ ಅಡ್ಡರೇಖೆಗೆ ಬದಲಾಗಿ ಸಣ್ಣ ಸಣ್ಣ ಚುಕ್ಕೆಗಳಿಂದ ಆರು ಸಾಲುಗಳನ್ನು ಮೂಡಿಸಿ, ಮೇಲೊಂದು ಕಮಾನಾಕೃತಿಯ ರೇಖೆಯನ್ನೆಳೆದು ಮನೆಯ ಚಿತ್ರವನ್ನು ಚಿತ್ರಿಸಿದ್ದಾರೆ. ಮೇಲ್ಗಡೆ ಬೆಂಕಿಯ ಜ್ವಾಲೆ ಬುಗಿಲೆದ್ದ ರೀತಿಯಲ್ಲಿ ಚುಕ್ಕೆ, ಚುಕ್ಕೆಗಳಿಂದ ಬರೆದಿದ್ದಾರೆ. ಮನೆಯ ಬಾಗಿಲು ಇದು ಎಂದು ಸೂಚಿಸುವ ಸಲುವಾಗಿಯೇ ಎಂಬಂತೆ ಎರಡನೇ ಲಂಬರೇಖೆಗೆ ತಾಗುವಂತೆ ಒಂದು ಗೆರೆಯನ್ನು ಎಳೆಯಲಾಗಿದೆ.

ಮತ್ತೊಂದು ಮನೆಯ ರೇಖಾಚಿತ್ರ ಸಣ್ಣದಾಗಿದ್ದು ವಿಶೇಷವೇನೂ ಇಲ್ಲ.

ಮತ್ತೆ ಅಸ್ಪಷ್ಟವಾದ ಮನುಷ್ಯರ ಚಿತ್ರಗಳಿದ್ದು ಒಂದು ರೇಖಾಚಿತ್ರದಲ್ಲಿ ದೇಹದ ಕೆಳಭಾಗದ ಕಾಲಿನ ಭಾಗದಲ್ಲಿ ಬಲತೊಡೆಯ ಭಾಗದಿಂದ ಕಾಲು ಬಾಗಿದಂತಿದ್ದು ಎಡಭಾಗ ನೀಳವಾಗಿದೆ. ಪಾದಗಳು ಸ್ಪಷ್ಟವಾಗಿ ಮೂಡಿಬಂದಿವೆ. ಎರಡೂ ತೊಡೆಗಳ ಮಧ್ಯಭಾಗದಲ್ಲಿ ಶಿಶ್ನಸೂಚಕ ರೇಖೆ ಇದೆ. ಚಿಕ್ಕದಾದ ಉದರ, ಸಣ್ಣ ಕೈಗಳು ಬಾಗಿ ಶಿರೋಭಾಗ ಸಣ್ಣಗಿದೆ.

ಅತೀ ಕೆಳಗಡೆ ಭೂಮಿಗೆ ತಾಗಿರುವ ಬಂಡೆಯ ಭಾಗದಲ್ಲಿ ಮೂರು ರೇಖಾಚಿತ್ರಗಳು ಸ್ಪಷ್ಟವಿದ್ದು ಎರಡು ರೇಖಾ ಚಿತ್ರಗಳು ಮಾನವರದಾಗಿದ್ದರೆ, ಒಂದು ಪ್ರಾಣಿಯ ಚಿತ್ರವಾಗಿದೆ. ಮಾನವನೊಬ್ಬನು ತನ್ನೆರಡೂ ಕೈಗಳನ್ನು ಸೊಂಟದ ಮೇಲೆ ಇಟ್ಟು ನಿಂತಿರುವ ಚಿತ್ರ ಒಂದಾದರೆ, ಮತ್ತೊಬ್ಬ ಮಾನವ ತನ್ನೆರಡೂ ಕೈಗಳನ್ನು ಸೊಂಟದ ಮೇಲಿಟ್ಟು ಬಲಗಾಲಿನಿಂದ ಜಿಗಿಯುತ್ತಿರುವ ಚಿತ್ರವಿದೆ.

ಎಡಭಾಗಕ್ಕೆ ಮುಖ ಮಾಡಿದ ಜಿಂಕೆಯೊಂದರ ಚಿತ್ರವಿದ್ದು, ತೆಳ್ಳನೆಯ, ಉದ್ದವಾದ ಉದರ, ಚೂಪಾದ ಮುಖ, ಕೊಂಬುಗಳು, ಕಾಲುಗಳು ಮತ್ತು ಬಾಲಗಳನ್ನು ಗುರುತಿಸಬಹುದು.

ಇದರ ಬದಿಯಲ್ಲೆ ಬ್ರಾಹ್ಮೀ ಅಕ್ಷರಗಳನ್ನು ಅಂದರೆ ಘ, ಕೊ, ಅ ಗಳನ್ನು ಹೋಲುವ ಬರಹಗಳಿವೆ.

ಸ್ವಲ್ಪ ಅಂತರದಲ್ಲಿ ಮತ್ತೊಂದು ಪ್ರಾಣಿಯ ಚಿತ್ರವಿದ್ದು ಕಾಡುಹಂದಿಯ ಚಿತ್ರದಂತಿದೆ.

ಮೇಲ್ಭಾಗದಲ್ಲಿರುವ ಒಂದು ರೇಖಾ ಚಿತ್ರದಲ್ಲಿ ಮನುಷ್ಯ ಪ್ರಾಣಿಯೊಂದರ ಮೇಲೆ ಕುಳಿತು ಸಾಗುತ್ತಿರುವ ಚಿತ್ರವಿದ್ದು ಪ್ರಾಣಿಯ ತಲೆ ಮತ್ತು ಬಾಲಗಳನ್ನು ಸೂಚಿಸುವ ಗೆರೆಗಳು ಸ್ಪಷ್ಟವಾಗಿವೆ.

ಈ ಮೇಲಿನ ಬಿಳಿ ಬಣ್ಣದಿಂದ ಬರೆದ ರೇಖಾಚಿತ್ರಗಳ ನಡುವೆ ಸಣ್ಣದಾಗಿ ಬರೆದ ಕಿತ್ತಳೆ ಬಣ್ಣದ ಮನುಷ್ಯರನ್ನು ಸೂಚಿಸುವ ರೇಖಾ ಚಿತ್ರಗಳಿವೆ.

ದಪ್ಪನೆಯ ರೇಖೆಗಳಿಂದ ಸುಮಾರು ಕ್ರಿಸ್ತಶಕ ೬ನೇ ಶತಮಾನಕ್ಕೆ ಸೇರುವ ಶಂಖಲಿಪಿಯ ಶಾಸನವೊಂದಿದೆ. ಸೂರ್ಯ, ಚಂದ್ರರ ಚಿತ್ರಗಳಿದ್ದು ನಾಲ್ಕು ಸಾಲುಗಳನ್ನು ಹೊಂದಿದೆ. ಉದ್ದನೆಯ ದಪ್ಪ ಅಕ್ಷರಗಳಿಂದ ಕೆಂಪು ಬಣ್ಣದಿಂದ ಬರೆದ ಈ ಶಂಖಲಿಪಿಯ ಶಾಸನವು ದಕ್ಷಿಣ ಕರ್ನಾಟಕದಲ್ಲಿ ಕ್ವಚಿತ್ತಾಗಿ ದೊರಕುವ ಅಪರೂಪದ ಶಂಖಲಿಪಿಯ ಶಾಸನಗಳಲ್ಲಿ ಒಂದಾಗಿದೆ.

ಚಿತ್ರದುರ್ಗದ ಬಳಿಯಲ್ಲಿ ಈ ರೀತಿಯ ಶಂಖಲಿಪಿಯ ಶಾಸನವು ದೋಣಿಯೋಂದರ ಮೇಲೆ ಬರೆದಿರುವಂತೆ ಕಂಡುಬಂದರೆ, ಮಾಗಡಿ ತಾಲೂಕಿನ ದೊಡ್ಡಿಪಾಳ್ಯದ ಸಣ್ಣ ಗುಹೆಯೊಂದರಲ್ಲಿ ಬೃಹದಾಕಾರವಾಗಿ ಕೆಂಪು ಬಣ್ಣದಿಂದಲೇ ಬರೆದ ಶಂಖಲಿಪಿಯ ಶಾಸನವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಕೇಸರಿ ಬಣ್ಣ ಮತ್ತು ಕೆಂಪು ಬಣ್ಣಗಳನ್ನು ಬಳಕೆಗಾಗಿ ಪ್ರಾಣಿಗಳ ರಕ್ತ ಮತ್ತು ಸಸ್ಯದ ರಸಗಳಿಗೆ ಕಬ್ಬಿಣದ ಆಕ್ಸೈಡ್ ಬೆರಸಿ ತಯಾರಿಸುತಿದ್ದರು ಎಂಬುದಾಗಿ ಈಗಾಗಲೇ ತಿಳಿದು ಬಂದಿರುವುದರಿಂದ ಈ ಬಣ್ಣಗಳನ್ನು ಅದೇ ರೀತಿ ತಯಾರಿಸಿರಬಹುದು.

ಕಲ್ಲುಮನೆಯ ಮೇಲ್ಛಾವಣಿಯ ಮೇಲಿನ ಒಳಭಾಗದಲ್ಲೂ ಬಿಳಿ ಸಿಂಧೂರ ಮತ್ತು ಕೆಂಪು ಬಣ್ಣಗಳಿಂದ ಬರೆದ ಚಿತ್ರಗಳಿದ್ದು ಅಸ್ಪಷ್ಟವಾಗಿವೆ. ಇವುಗಳನ್ನು ಮನುಷ್ಯ ಸೀಳಾಗಿ ಬಿದ್ದಿರುವ ಬಂಡೆಯ ಮೇಲೆ ಕುಳಿತು ಇಲ್ಲವೇ ನಿಂತು ಮೂಡಿಸಿದ್ದಾನೆ.

ಮೊದಲಿಗೆ ಈ ಕಲ್ಲು ಮನೆಯಲ್ಲಿ ಬಿಳಿ ಚಿತ್ರಗಳನ್ನು ಬರೆದಿದ್ದು ಅವುಗಳ ಮೇಲೆ ನಂತರ ಸಿಂಧೂರ ಬಣ್ಣದಿಂದ ಮತ್ತು ಕೆಂಪು ಬಣ್ಣದಿಂದ ಚಿತ್ರಗಳನ್ನು ಬರೆದಿರುವುದು ಗಮನಾರ್ಹ.

ಈ ಕಲ್ಲು ಮನೆಯಲ್ಲಿ ಭೂಮಿಯ ಮೇಲ್ಮೈಯಲ್ಲಿ ವಿವಿಧ ಬಗೆಯ ಮಡಕೆಯ ಚೂರುಗಳು ದೊರೆತಿರುವುದಲ್ಲದೇ, ಭೂಮಿಯಲ್ಲಿ ಸ್ವಲ್ಪ ಒಳಗೆ ಹೂತುಹೋಗಿದ್ದ ಮಣ್ಣಿನ ತಟ್ಟೆಯ ಭಾಗವೂ ದೊರೆತಿದೆ. ಮಡಕೆಯ ಚೂರುಗಳು ಕೆಂಪು ಬಣ್ಣದಿಂದಲೂ, ಕಪ್ಪು–ಕೆಂಪು ಬಣ್ಣದಿಂದಲೂ ಕೂಡಿದ್ದು ತುಸು ಹೊಳಪುಳ್ಳವಾಗಿವೆ. ವಿವಿಧ ರೀತಿಗಳಲ್ಲಿ ಬಾಗಿರುವ ಕಂಠಗಳ ಮಡಕೆಗಳಿಂದ ಕುಂಬಾರನ ತಿದಿಯಿಂದ ಹೊರಬಂದ ರೇಖೆಗಳು ವಿವಿಧ ರೀತಿಯಲ್ಲಿವೆ. ಕೆಲವು ತೆಳುವಾಗಿ ಹಗುರವಾದ ಮಡಕೆಯ ಚೂರುಗಳಾಗಿದ್ದರೆ ಮತ್ತೆ ಕೆಲವು ದಪ್ಪನೆಯ ಗಟ್ಟಿಯಾದ ಮಡಕೆಗಳ ಚೂರುಗಳಾಗಿವೆ.

ಈ ಕಲ್ಲುಮನೆಯಿಂದ ಸುಮಾರು ಎರಡು ಕಿ.ಮೀ. ಹಿಂದೆಯೇ ಕೆಂಬರೆ ಎಂಬಲ್ಲಿ ಎರಡು ವೃತ್ತಾಕಾರದ ಶವಗುಣಿಗಳು (Pit burials) ಕಂಡುಬಂದಿವೆ. ಒಂದು ಶವಕುಣಿಯ ಮೇಲ್ಮೈ ವೃತ್ತಾಕಾರದ ಭಾಗವು ಭಾಗಶಃ ಹಾಳಾಗಿದ್ದರೆ ಮತ್ತೊಂದು ಸುಸ್ಥಿತಿಯಲ್ಲಿದೆ. ಇವು ಬೃಹತ್ ಶಿಲಾಯುಗಕ್ಕೆ ಸೇರಿದವುಗಳಾಗಿದ್ದು ಈ ಸ್ಥಳದಲ್ಲಿ ಈಗ ಜನವಸತಿಯೊಂದು ನಿರ್ಮಾಣವಾಗುತ್ತಲಿದ್ದು ಹೆಚ್ಚಿನ ಶೋಧನೆಗೆ ಅಡಚಣೆಯಾಗಿದೆ.

ಗುಹಾಚಿತ್ರಗಳು ನೂತನ ಶಿಲಾಯುಗದಲ್ಲಿ ಪ್ರಾರಂಭವಾಗಿ ಬೃಹತ್ ಶಿಲಾಯುಗದಲ್ಲಿ ವಿಕಸಿತವಾಗಿರುವುದರಿಂದ, ದಕ್ಷಿಣ ಕರ್ನಾಟಕದಲ್ಲಿನ ಬೃಹತ್ ಶಿಲಾಯುಗದ ಕಾಲವನ್ನು ಈಗಾಗಲೇ ಕ್ರಿಸ್ತಪೂರ್ವ ಸುಮಾರು ೮೦೦ ವರ್ಷಗಳಿಂದ ಪ್ರಾರಂಭವಾಗಿರುವುದೆಂದು ನಿರ್ಧಾರವಾಗಿರುವುದರಿಂದಲೂ ಸೂಳೇಕಲ್ಲು ಮಠದ ಗುಹಾಚಿತ್ರಗಳು ಬೃಹತ್ ಶಿಲಾಯುಗಕ್ಕೆ ಸೇರಿದವುಗಳೆಂದು ಹೇಳಬಹುದು. ಬಳಿಯಲ್ಲೇ ದೊರೆತ ಶವಗುಣಿಗಳು ಸಹ ಇದನ್ನು ಪುಷ್ಟೀಕರಿಸುತ್ತವೆ.*

---

* ಈ ಲೇಖನವನ್ನು ಬರೆಯಲು ಸಹಾಯ ಮಾಡಿದ ನನ್ನ ಗುರುಗಳಾದ ಡಾ॥ ದೇವರಕೊಂಡಾರೆಡ್ಡಿ, ಲಕ್ಷ್ಮಣ್ ತೆಲಗಾವಿ, ಶ್ರೀ ಬಿ. ರಾಜಶೇಖರಪ್ಪ, ಅಮೂಲ್ಯ ಸಲಹೆಗಳನ್ನು ನೀಡಿದ ಡಾ॥ ಕೆ. ವಿ. ರಮೇಶ್, ಡಾ॥ ಅ. ಸುಂದರ ಹಾಗೂ ಎಸ್. ವಿ. ಗಂಭೀರ್, ಮಿತ್ರರಾದ ಎಸ್. ರಾಜೇಂದ್ರಪ್ಪ ಮತ್ತು ಡಾ॥ ಬಿ. ನಂಜುಂಡಸ್ವಾಮಿಯವರಿಗೆ ನನ್ನ ವಿನಯಪೂರ್ವಕ ಕೃತಜ್ಞತೆಗಳು.

ಎಂ. ಜಿ. ನಾರಿ*

# ಸೋದೆ ಅರಸರ ಕಾಲದ ವನದುರ್ಗ, ಜಲದುರ್ಗ ಮತ್ತು ಗಿರಿದುರ್ಗ -ಒಂದು ಟಿಪ್ಪಣಿ

ಈ ಸೋದೆ ಅರಸರು ೧೬, ೧೭ ಮತ್ತು ೧೮ನೆಯ ಶತಮಾನದಲ್ಲಿ ಈಗಿನ ಉತ್ತರ ಕನ್ನಡದ ಬಹುಭಾಗ ಮತ್ತು ಗೋವೆಯ ದಕ್ಷಿಣ ಭಾಗ ಇವನ್ನು ಆಳುತ್ತಿದ್ದ ಒಂದು ಚಿಕ್ಕ ಪಾಳೆಯಗಾರರಾಗಿದ್ದರು. ಈ ಸೋದೆಯನ್ನೇ ರಾಜಧಾನಿಯಾಗಿ ಮಾಡಿಕೊಂಡು ಸಮಗ್ರವಾಗಿ ಎರಡು ಶತಮಾನಗಳವರೆಗೆ ಒಟ್ಟು ಎಂಟು ಅರಸರು[1] ಆಳ್ವಿಕೆ ನಡೆಸಿದುದು ಕಂಡುಬರುತ್ತದೆ. ಕ್ರಿ.ಶ. ೧೬೮೦ಕ್ಕೂ ಪೂರ್ವದಲ್ಲಿ ಇವರ ರಾಜ್ಯ ಘಟ್ಟದ ಮೇಲ್ಭಾಗಕ್ಕೆ ಅಂದರೆ ಶಿರಸಿ, ಸೂಪಾ, ಯಲ್ಲಾಪುರ, ಹಳಿಯಾಳಗಳನ್ನುಳ್ಳ (ಸಾಗರ ಮತ್ತು ಸೊರಬ ತಾಲ್ಲೂಕಿನ ಕೆಲವು ಭಾಗಗಳೂ ಸೇರಿ) ಈ ಪ್ರದೇಶಕ್ಕೆ ಸೀಮಿತಗೊಂಡಿತ್ತು. ಕ್ರಿ. ಶ. ೧೬೮೦ರ ನಂತರ ಇಮ್ಮಡಿ ಸದಾಶಿವರಾಯನು (ಕ್ರಿ. ಶ. ೧೬೮೦ ರಿಂದ ೧೭೧೮) ಘಟ್ಟದ ಕೆಳಕ್ಕೂ ತನ್ನ ರಾಜ್ಯವನ್ನು ವಿಸ್ತರಿಸಿದನು. ಹಾಗೆಯೇ ಈತನು ಐರೋಪ್ಯ ವ್ಯಾಪಾರಿಗಳೊಂದಿಗೆ ವ್ಯಾಪಾರ ವಹಿವಾಟಿನ ಸ್ಪರ್ಧಾತ್ಮಕ ಕಣದಲ್ಲಿ ನೇರವಾಗಿ ಇಳಿಯುವ ಮೂಲಕ ಕೈಕೈಮಿಲಾಯಿಸಿದನು ಎನ್ನಬಹುದು.[2]

ಹೀಗೆ ಈ ಸೋದೆ ಅರಸರ ಇರುವಿಕೆಯು ಕಾಲ ಮತ್ತು ಪ್ರದೇಶ ವಿಶಿಷ್ಟವಾದುದಾಗಿದೆ. ಅಂದರೆ ಕ್ರಿ. ಶ. ೧೫೫೫ ರಿಂದ ೧೬೬೦ರವರೆಗೆ ಇವರ ರಾಜ್ಯ ಘಟ್ಟದ ಮೇಲೆಯೇ ಸೀಮಿತಗೊಂಡಿತ್ತು. ಆಗ ಬಹುವಾಗಿ ವಿಜಾಪುರದ ಆದಿಲ್‌ಶಾಹಿಗಳಿಗೆ ಈ ಅರಸರು ಬಾಗಿಕೊಂಡಿದ್ದರು. ವಾರ್ಷಿಕ ಕಪ್ಪಕಾಣಿಕೆಗಳನ್ನು ಸಲ್ಲಿಸುವುದು, ತದನಂತರ ಬಹುಮಟ್ಟಿಗೆ ಕಲ್ಲಾಬಿಲ್ಲಿಗೊಳ್ಳದ ರಾಜಕೀಯ ಜೀವನ ಅವರದಾಗಿತ್ತು. ಅಲ್ಲಿಯವರೆಗೆ ಈ ರಾಜ್ಯದ ರಾಜಕೀಯ ಮತ್ತು ಸಾಮಾಜಿಕ ಜೀವನ ಸಾಂಪ್ರದಾಯಿಕ ಸಮುದಾಯ ಜೀವನದೊಂದಿಗೆ ಸೇರಿ ಹೋಗಿತ್ತು. ಆದರೆ ೧೬೭೦ರ ನಂತರ ವಿಜಾಪುರದ ಪತನವಾಗಲಾರಂಭಿಸಿತು. ಕ್ರಿ. ಶ. ೧೬೮೬ರಲ್ಲಿಯ ಔರಂಗಜೇಬನ ದಾಳಿಯು ವಿಜಾಪುರದ ಆದಿಲ್‌ಶಾಹಿಗಳನ್ನು ಸಂಪೂರ್ಣ ಮಣ್ಣುಗೊಡಿಸಿದರೆ ಮರಾಠರನ್ನು ಬಹುಪಾಲು ನಿಸ್ಸತ್ವಗೊಳಿಸಿತು. ಇಂಥ ಅವಸ್ಥೆಯಲ್ಲಿ ಈ ಸೋದೆ ಅರಸರು ಇಂಗ್ಲೀಷರೊಂದಿಗೆ ಅತ್ಯಂತ ಗಾಢ ವೈರತ್ವದಿಂದ ನೇರ ಗುದ್ದಾಟದ ರಂಗಕ್ಕಿಳಿದಿದ್ದರು.

---

* ಬಾಣದಾರ ಓಣಿ, ಬಾದಾಮಿ–೫೮೭ ೨೦೧

1 ಈ ಮನೆತನದಲ್ಲಿ ಸೋದೆಯನ್ನೇ ರಾಜಧಾನಿಯಾಗಿ ಮಾಡಿಕೊಂಡು ಆಳಿದ ಅರಸರ ಪಟ್ಟಿ ಈ ರೀತಿ ಬರುತ್ತದೆ. ೧. ಇಮ್ಮಡಿ ಅರಸಪ್ಪನಾಯಕ ೨. ರಾಮಚಂದ್ರನಾಯಕ ೩. ರಘುನಾಥನಾಯಕ ೪. ಮಧುಲಿಂಗನಾಯಕ ೫. ಇಮ್ಮಡಿ ರಾಮಚಂದ್ರ ನಾಯಕ ೬. ಇಮ್ಮಡಿ ಸದಾಶಿವರಾಯ ೭. ಬಸವಲಿಂಗರಾಯ ೮. ಮುಮ್ಮಡಿ ಸದಾಶಿವರಾಯ.

2 ಈ ಬಗ್ಗೆ ಎಂ. ಎ. ದೇಸಾಯಿ ಅವರ *Carwar-Chittakula A History*-ಪುಸ್ತಕದ 'Downfall of the English, Chap-8, Siege of Carwar, Chap-9, ಮತ್ತು Fall of Sonda' Chap-10, ಈ ಅಧ್ಯಾಯಗಳನ್ನು ನೋಡಬಹುದು.

ಇದೊಂದು ಆ ಕಾಲದ ಸೋದೆ ಅರಸರ ರಾಜಕೀಯ ಪರಿಸರದ ಸ್ಥೂಲ ಚಿತ್ರವಾಗಿದೆ. ಹೀಗಿರುವಾಗ ಇಂಥ ಪರಿವರ್ತಿತ ಅವಸ್ಥೆಯಲ್ಲಿ ಕಾಲಿಟ್ಟ ಈ ಸೋದೆ ಅರಸರ ಕಾಲದ ಕೋಟೆಗಳ ಒಂದು ಅವಲೋಕನದಿಂದ ಆ ರಾಜರ ಏಳುಬೀಳಿನ ಜೊತೆಗೆ ಕ್ರಮಿಸಿ ಬಂದ ಚಿತ್ರಗಳು ಕಣ್ಮುಂದೆ ನಿಲ್ಲಿಸಿದಂತಾಗುತ್ತದೆ.

ಸೋದೆ ಅರಸರ ಆಡಳಿತ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕೋಟೆಗಳ ರಚನಾ ಕಾಲವನ್ನವಲಂಬಿಸಿ ಎರಡು ರೀತಿ ವಿಭಾಗಿಸಬಹುದೆಂದು ತೋರುತ್ತದೆ.

೧. ಈ ಸೋದೆ ಅರಸರಿಗಿಂತ ಪೂರ್ವದಲ್ಲೇ ಅಂದರೆ ಬೇರೆ ಅರಸರ ಅವಧಿಯಲ್ಲಿ ಅಥವಾ ಬೇರೆ ಅರಸು ಮನೆತನದ ದಂಡಾಧಿಕಾರಿಯಿಂದ ರಚಿತವಾಗಿರುವ ಕೋಟೆಗಳು. i) ಉದಾಹರಣೆಯಾಗಿ ಇಲ್ಲಿ ಕರೂರು ಮತ್ತು ಇಸಳೂರು ಕೋಟೆಗಳನ್ನು ಹೆಸರಿಸಬಹುದು. ಇವು ವಿಜಯನಗರ ಮತ್ತು ವಿಜಯನಗರ ಪೂರ್ವದಲ್ಲಿ ರಚಿತವಾಗಿರುವ ಕೋಟೆಗಳಾಗಿವೆ. ii) ವಿಜಾಪುರದ ಆದಿಲ್‌ಶಾಹಿಗಳ ಕಾಲಾವಧಿಯಲ್ಲಿ ಅಂದರೆ ಕಾರವಾರ ಅಂಕೋಲಾ ಭಾಗಗಳಲ್ಲಿ ಅವರ ದಂಡಾಧಿಕಾರಿಯಾದ ಶರೀಫ–ಉಲ್–ಮುಲ್ಕ್‌ರಿಂದ ರಚಿತವಾಗಿರುವ ಕೋಟೆ ಕೊತ್ತಳಗಳು[3], ಅಂಕೋಲಾ ಕೋಟೆ ಮತ್ತು ನಂದ್ವಾಲ್ ಕೋಟೆಗಳ ರಚನೆಗೆ ಈತನೇ ನೇರವಾಗಿ ಕಾರಣನಾದರೆ ಕದ್ರಾ, ಮತ್ತು ಮತ್ತು ಕಾರವಾರದ ವೇರಗುಡ್ಡದ ಮೇಲಿರುವ ಕೋಟೆಗಳು ಈತನ ಕಾಲಾವಧಿಯಲ್ಲಿ ರಚಿತವಾದವೆಂದು ಹೇಳಬಹುದಾಗಿದೆ.

ಇಲ್ಲಿಯ ಕರೂರು, ಇಸಳೂರು ಮತ್ತು ಅಂಕೋಲಾದ ಕೋಟೆಗಳು ಸೋದೆ ಅರಸರ ಕಾಲದಲ್ಲಿ ನವೀಕರಣಗೊಂಡಂತೆ ತೋರುವುದು.

೨. ಸೋದೆ ಅರಸರ ಆಳ್ವಿಕೆಯ ಕಾಲಾವಧಿಯಲ್ಲಿ ರಚನೆಗೊಂಡಿರುವ ಕೋಟೆಗಳು. ಉದಾಹರಣೆಗೆ ಸೋದೆಯ ಮೂರು ಸುತ್ತಿನ ಕೋಟೆಗಳು, ಶಿರಸಿಯ ಚನ್ನಪಟ್ಟಣದ ಕೋಟೆ, ಸಾಂಬ್ರಾಣಿ ಕೋಟೆ, ಕೊಂಕಿ ಕೋಟೆ, ಕಾರವಾರದ ಸುತ್ತಮುತ್ತಲಿರುವ ಅಂಗಡಿ[4], ಶಿವೇಶ್ವರದ ಕೋಟೆಗಳು, (ವೀರಗುಡ್ಡದ ಎದುರಿಗಿರುವ ಗುಡ್ಡದ ಮೇಲಿರುವ) ಸದಾಶಿವಗಡದ ಕೋಟೆ, ಕೂರ್ಮಗಡ ಕೋಟೆ, ಕಾಣಕೋಣ ಕೋಟೆ ಇತ್ಯಾದಿಗಳು.

ಹಾಗಲ್ಲದೆ ಈ ಎಲ್ಲ ಕೋಟೆಗಳ ರಚನಾ ವಿನ್ಯಾಸ ಅಥವಾ ಅವುಗಳ ಸುತ್ತಲಿನ ಭೂ ಪರಿಸರದ ವಿನ್ಯಾಸ ಇವನ್ನವಲಂಬಿಸಿ ನಮ್ಮ ಪ್ರಾಚೀನರು ಹಲವು ರೀತಿ ವಿಭಾಗಿಸಿರುವುದುಂಟು. ಆದರೆ ಅದರಲ್ಲಿ ಎಲ್ಲರೂ ಒಪ್ಪಿರುವ ಅಥವಾ ಒಪ್ಪಿ ಅನುಕೂಲಕರವಾಗಿ ವಿಭಾಗಿಸಿ ಅವಲೋಕಿಸಲು ಸಾಧ್ಯವಾಗಿರುವ ಮೂರು ವಿಧಾನಗಳೆಂದರೆ–ವನದುರ್ಗ, ಜಲದುರ್ಗ ಮತ್ತು ಗಿರಿದುರ್ಗಗಳೆನ್ನುವ ವಿಭಾಗಗಳ ಕ್ರಮವಾಗಿದೆ. ಈ ನಿಟ್ಟಿನಿಂದ ಈ ಸೋದೆ ಅರಸರ ಕಾಲಾವಧಿಯ ಕೋಟೆಗಳನ್ನು ವೀಕ್ಷಿಸಲು ತುಂಬ ಕುತೂಹಲವನ್ನು ತುಂಬುತ್ತದೆ ಎನ್ನಬಹುದು.

i) **ಜಲದುರ್ಗ** : ಸೋದೆಯ ಮೂರನೇ ಸುತ್ತಿನ ಕೋಟೆ, ಕಾರವಾರದ ಅಂಗಡಿಕೋಟೆ, ಸದಾಶಿವಗಡ ಕೋಟೆ, ಕೂರ್ಮಗಡಕೋಟೆ, ಕಾಣಕೋಣಕೋಟೆ, ii) **ವನದುರ್ಗ** : ಸೋದೆಯ ಮೊದಲ ಸುತ್ತಿನ ಕೋಟೆ, ಶಿರಸಿಯ ಕೋಟೆ, ಕರೂರು ಕೋಟೆ, ಇಸಳೂರು ಕೋಟೆ, ಸಾಂಬ್ರಾಣಿ ಕೋಟೆ, iii) **ಗಿರಿದುರ್ಗ** : ಕೊಂಕಿಕೋಟೆ.[5]

ಇಷ್ಟಾದರೂ ಈ ಕೋಟೆಗಳನ್ನು ಇದೆ ವರ್ಗಕ್ಕೆ ಸೇರುತ್ತದೆ ಎಂದು ಗೆರೆಕೊರೆದು ವಿಭಾಗಿಸಲಾಗದು ಎನ್ನಬೇಕು. ಏಕೆಂದರೆ ಸೋದೆಯ ಕೋಟೆ, ಸದಾಶಿವಗಡ ಕೋಟೆ ಮತ್ತು ಕೂರ್ಮಗಡಕೋಟೆ–ಇವುಗಳ ಸುತ್ತಲಿನ

3 ನಂದ್ವಾಲ್ ಕೋಟೆಯನ್ನು ಕ್ರಿ. ಶ. ೧೬೧೦ರಲ್ಲಿ ಈತನೇ ಕಟ್ಟಿಸಿದನು. ನೋಡಿ-ಎಂ. ಎ. ದೇಸಾಯಿ ಅವರ ಪೂರ್ವೋಕ್ತ ಗ್ರಂಥದ ೮ನೆಯ ಅಧ್ಯಾಯ.

4 'ಅಂಗಡಿ' ಹೆಸರೇ ಸೂಚಿಸುವಂತೆ ಒಂದು ವ್ಯಾಪಾರದ ಕೇಂದ್ರವಾಗಿತ್ತು. ಘಟ್ಟದ ಮೇಲಿನ ವ್ಯಾಪಾರದ ಸರಕುಗಳನ್ನು ಸಮುದ್ರ ಮುಖೇನವಾಗಿ ಸಾಗಿಸುವಾಗ ಮಧ್ಯದ ಜಾಗವಾಗಿ ಸಮುದ್ರದ ದಡದಲ್ಲೇ ರಚಿತವಾದ ಒಂದು ವ್ಯಾಪಾರಿ ನೆಲೆಯಾದ ಕೋಟೆಯಾಗಿತ್ತು.

5 ಈ ಬಗ್ಗೆ ಹೆಚ್ಚಿನ ವಿವರಗಳಿಗೆ ನೋಡಿ : ನಾ. ವೆಂ. ಭಟ್ಟ. 'ಜನಸೇವಕ' (೪-೧೦) ಮಾರ್ಚ್-೨೬, ೧೯೫೮.

ಭೂ ಆವರಣ ವಿಶಿಷ್ಟವೆನಿಸಿದೆ. ಸೋದೆಯ ಒಳ ಕೋಟೆ ಅಂದರೆ ಮೊದಲ ಸುತ್ತಿನ ಕೋಟೆಯು ಈಗಿನ ವಾದಿರಾಜ ಮಠದ ಹತ್ತಿರ ಇದೆ. ಸುಮಾರು ೩–೪ ಎಕರೆಯಷ್ಟು ವಿಸ್ತೀರ್ಣವನ್ನು ಹೊಂದಿದೆ. ಸುತ್ತಲೂ ಕಂದಕಗಳಿಂದ ಆವೃತಗೊಂಡಿದೆ. ಈ ಕಂದಕ ಮುಳ್ಳು ಕಂಟಿಗಳಿಂದ ಇಡಿಕಿರಿದಿದೆ. ಮಳೆಗಾಲದಲ್ಲಿ ನೀರಿನಿಂದ ಆವೃತವಾದ ಅಗಳ್ತವಾಗಿ ತೋರುತ್ತದೆ. ಅಂದರೆ ವನ ದುರ್ಗವೆನಿಸಿದರೂ ಕೆಲಕಾಲ ನೀರಿನಿಂದಲೂ ಈ ಕಂದಕ ತುಳುಕಾಡುತ್ತಿತ್ತೆಂದು ಕಂಡುಬರುವುದು. ಇನ್ನು ಹೊರ ಆವರಣದ ಸೋದೆ ಕೋಟೆಯು ಶಾಲ್ಮಲಾ ನದಿಯ ದಂಡೆಗುಂಟ ನಿರ್ಮಾಣಗೊಂಡುದೂ ಆಗಿದೆ. ಕೆಲಭಾಗ ನದಿದಡದಲ್ಲಿ ಬಂದರೆ, ಉಳಿದ ಭಾಗ ಆಳವಾದ ಕಂದಕ ಗಳಿಂದ ಕೂಡಿದಂತೆ ತಿಳಿದುಬರುತ್ತದೆ. ಅಂದಮೇಲೆ ಇದನ್ನು ಅರ್ಧ ಜಲದುರ್ಗ, ಅರ್ಧ ವನದುರ್ಗ ಎನ್ನಬೇಕಾಗ ಬಹುದೇನೊ !?[6] ಹಾಗೆಯೇ ಸದಾಶಿವಗಡ ಮತ್ತು ಕಾಣಕೋಣ ಕೋಟೆಗಳ ಪಶ್ಚಿಮ ಭಾಗದಲ್ಲಿ ಕಡಿದಾದ ಭಾಗವನ್ನುಳ್ಳ ಸಮುದ್ರವನ್ನೇ ಕೊನೆಯ ಅಂಚನ್ನಾಗಿ ಮಾಡಿಕೊಳ್ಳಲಾಗಿದೆ. ಇನ್ನುಳಿದ ಮೂರು ಬದಿಗಳಲ್ಲೂ ಸಹಜ ಕಂದಕಗಳನ್ನೇ ಕೋಟೆಯ ಅಂಚುಗಳಾಗಿ ಬಳಸಿ ಕೊಳ್ಳಲಾಗಿದೆ. ಕೂರ್ಮಗಡ ಕೋಟೆಯು ಮಾತ್ರ ಸದಾಶಿವಗಡ ಕೋಟೆಯಿಂದ ಸುಮಾರು ೩ ಕಿ. ಮೀ. ದೂರದಲ್ಲಿರುವ ಮನೋಹರವಾದ ಸಮುದ್ರದ ನಡುವಿನ ಒಂದು ಚಿಕ್ಕ ನಡುಗಡ್ಡೆಯಲ್ಲಿರುವ ಕೋಟೆ. ಇಲ್ಲೊಂದು ಎಚ್ಚರಿಕೆ ಸೂಚನೆಯ ಲೈಟಿಂಗ್ ವ್ಯವಸ್ಥೆ ಇದ್ದಿತು. ಆ ವಾಚ್ ಟವರಿನಿಂದ ಸದಾಶಿವಗಡದ ವಾಚ್ ಟವರಿಗೂ ಸಂಜ್ಞೆಯನ್ನು ರವಾನಿಸಬಹುದಿತ್ತು.

ಇನ್ನು ಗಿರಿದುರ್ಗಕ್ಕೆ ಅತ್ಯುತ್ತಮವಾದ ಉದಾ ಹರಣೆಯೆಂದರೆ ಕೊಂಕಿ ಕೋಟೆಯಾಗಿದೆ. ಇದು ಶಿರಸಿಯ ಪಶ್ಚಿಮ ಭಾಗಕ್ಕಿರುವ ಮೆಣಸಿನ ಫಿರ್ಕಾದ ಉತ್ತರ ವಲಯದಲ್ಲಿಯ ದಟ್ಟ ಕಾಡಿನ ನಡುವೆ ಕಂಡು ಬರುತ್ತದೆ. ಬಹುಶಃ ಇಂಥ ಒಂದು ಜಾಗದಲ್ಲಿಯ ಕೋಟೆಯ ನಿರ್ಮಾಣ ಕರ್ನಾಟಕದಲ್ಲೇ ಅಪರೂಪವೆನ್ನ ಬಹುದು. ಅಂಥ ಆಯಕಟ್ಟಿನ ಸ್ವಲ್ಪ ಆಯ ತಪ್ಪಿದರೆ ಅಪಾಯವನ್ನೇ ಅಪ್ಪಿಕೊಳ್ಳುವ ಅತ್ಯಂತ ಕಡಿದಾದ ಮಾರ್ಗವಿರುವ ಕೋಟೆಯೇ ಇದಾಗಿದೆ. ಇದರ ನಾಮವೇ ಅದರ ಸ್ವರೂಪವನ್ನು ಬಣ್ಣಿಸುವಂತಿದೆ. ಕೊಂಕು ಅಥವಾ ಕೊಂಕಿ ಎಂದರೆ ವಕ್ರ, ಡೊಂಕಾದ, ಮುರಿಗೆ ಹೊಡೆದ ಎಂಬರ್ಥದೊಂದಿಗೆ ಮೋಹಕ ಎಂಬ ಕಾವ್ಯಾರ್ಥದ ಲೇಪನವೂ ಅದಕ್ಕಿದೆ. ಯಾವುದು ಮುರಿಗೆಯಾಕಾರದ ಹೆಣಿಗೆಯಂತೆ ಇರಬಲ್ಲುದೋ ಅದು ಆಕರ್ಷಕವಾಗಿಯೂ ಕಾಣಿಸಬಲ್ಲುದು. ಹಾಗೆ ಈ ಕೊಂಕಿ ಕೋಟೆಯನ್ನುಳ್ಳ ಬೆಟ್ಟ ಮುರಿಗೆಯಾಕಾರದಲ್ಲಿ ಇಲ್ಲ ನಿಜ. ಆದರೆ ಆ ಬೆಟ್ಟದ ರಚನೆ ಅದಕ್ಕೆ ಹೊದಿಕೆಯಾಗಿರುವ ಹಸಿರಿನ ಮುಡಿ, ಒಟ್ಟು ಆ ಸುಂದರ ಶಾಸನದ ಪರಿಸರದಲ್ಲಿ ಇದರ ನೆಲೆ ಮತ್ತು ಅದರ ಸ್ವರೂಪದ ಅವಲೋಕನದಿಂದ ಅದರ ನಾಮಧೇಯವು ಅನ್ವರ್ಥವಾಗಿ ಅನ್ವಯಗೊಳ್ಳು ವಂತೆ ತೋರುವುದು. ಇದನ್ನು ಹತ್ತುವುದಂತೂ ಎಷ್ಟು ಆನಂದದಾಯಕವೊ ಅಷ್ಟೇ ಪ್ರಯಾಸಕರ ಮತ್ತು ಅಪಾಯಕರವೂ ಹೌದು. ಅಂತೂ ಕಾವ್ಯದಲ್ಲಿ ಚಿತ್ರಿತ ವಾಗಿರುವ ಭವ್ಯಾನುಭವ ಇಲ್ಲಿ ನಮಗೆ ಲಭ್ಯ.

ಬೆಟ್ಟದ ನೆತ್ತಿಯಲ್ಲಿ ಕೋಟೆಯು ರೂಪುಗೊಂಡಿದೆ. ಇದರ ನಿರ್ಮಾಣದ ಉದ್ದೇಶ ಹಲವು ರೀತಿಯಾಗಿತ್ತೆಂದು ಜನ ಈಗಲೂ ಭಾವಿಸುತ್ತಾರೆ. i) ಅಪರಾಧಿಗಳನ್ನು ದಂಡಿಸಲು ಇಲ್ಲಿಗೆ ಎಳೆದು ತರಲಾಗುತ್ತಿತ್ತು. ii) ಇದು ಕೆಲವು ಸಂದರ್ಭದಲ್ಲಿ ಗುಪ್ತವಾಗಿ ನಡೆಸಲಾಗುವ ಸಮಾಲೋಚನೆಯ ನೆಲೆಯಾಗಿತ್ತು. iii) ಕ್ರಮೇಣ ಸೋದೆ ರಾಜರು ತಮ್ಮ ರಾಜಧಾನಿಯ ನೆಲೆಯನ್ನು ಇಲ್ಲಿಗೆ ಸ್ಥಳಾಂತರಿಸುವ ಮುನ್ನಾಲೋಚನೆ ಇದ್ದಿತು. ಆದರೆ ಈ ಕೋಟೆಯಲ್ಲಿ ಕೆಲವು ಮನೆಗಳಿರುವ ಕುರುಹು ಗಳಿವೆ. ಒಂದು ಸ್ಮಾರಕ ಶಿಲಾಶಾಸನವಿದೆ. ನಂದಿಯ ವಿಗ್ರಹವೊಂದಿದೆ. ಇದರಿಂದ ಇಲ್ಲಿ ಮೂರನೇಯ ಅಂಶ ಪರಿಶೀಲನಾರ್ಹವೆಂದು ನನಗೆ ತೋರುತ್ತದೆ. ಒಟ್ಟಾರೆ ಈ ಕೋಟೆಯು ಸೋದೆ ಅರಸರ ದೂರಾಲೋಚನೆಯ ಒಂದು ರಹಸ್ಯಮಯ ತಾಣವಾಗಿ ಕಂಡುಬರುತ್ತದೆ.

ಹೀಗೆ ಇಲ್ಲಿಯ ಕೆಲವು ಕೋಟೆಗಳು ವೈರಿಗಳಿಂದ ರಕ್ಷಣೆ ಪಡೆಯುವ ಹಾಗೆ ಸುಸಜ್ಜಿತವಾದ ರೀತಿ ರಚನೆ ಗೊಂಡವಲ್ಲ. ಅಂದರೆ ಎತ್ತರವಾದ ಕೋಟೆಯ ಗೋಡೆ,

6 ಇಂಥ ಇನ್ನು ಹಲವು ಕೋಟೆಗಳ ಹೊರ ಆವರಣವನ್ನು ಗಮನಿಸಿದರೆ ಇವನ್ನು 'ಸಂಕೀರ್ಣ ಕೋಟೆಗಳು' ಎಂದು ಗುರ್ತಿಸಬಹುದು.

ಕಾವಲು ಬುರುಜುಗಳು, ಆಳವಾದ ಕಂದಕಗಳು ಇಲ್ಲಿ ಬಹುಮಟ್ಟಿಗೆ ಕಂಡುಬರದು. ಉದಾಹರಣೆಗೆ ಕಾರವಾರದ ಅಂಗಡಿಕೋಟೆ ಮತ್ತು ಯಲ್ಲಾಪುರ ಹತ್ತಿರದ ಸಾಂಬ್ರಾಣಿಯ ಕೋಟೆಗಳನ್ನು ಗಮನಿಸಬಹುದು. ಇಲ್ಲಿ ವೈರಿಯ ದಾಳಿಯಿಂದ ರಕ್ಷಣೆ ಪಡೆಯುವುದಕ್ಕಿಂತಲೂ ಹೆಚ್ಚಾಗಿ ಸಣ್ಣ ಪುಟ್ಟ ಕಳ್ಳಕಾಕರ ಮತ್ತು ಕ್ರೂರಮೃಗಗಳಿಂದ ರಕ್ಷಣೆ ಪಡೆಯುವುದೇ ಇಂಥ ಸಾಮಾನ್ಯ ಮಟ್ಟದ ಕೋಟೆಗಳ ರಚನೆಗೆ ಕಾರಣವಾಗಿರಬೇಕು. ಇಂದು ಇವೆರಡೂ ಕೋಟೆಗಳೆನ್ನುವ ಸ್ಥಿತಿಯಲ್ಲಿ ಕಾಣಿಸುವುದಿಲ್ಲ.

ಹೀಗೆ ಇಲ್ಲಿ ನಮ್ಮ ಕುತೂಹಲವನ್ನು ಸ್ವಲ್ಪ ಮೀಟುವ ಒಂದೆರಡು ಕೋಟೆಗಳ ಹೊರ ಆವರಣದ ಒಂದು ಚಿತ್ರವನ್ನು ಕಾವ್ಯಾತ್ಮಕ ಶೈಲಿಯ ನಿರೂಪಣೆಯೊಂದಿಗೆ ನಿಮ್ಮ ಮುಂದಿಟ್ಟಿರುವೆನು.

ಡಾ|| ಎಚ್. ಎಸ್. ಉಷಾರಾಣಿ*

# ಹಾಸನ ಜಿಲ್ಲೆಯ ಶಾಸನೋಕ್ತ ಲಿಪಿಕಾರರು ಮತ್ತು ರೂವಾರಿಗಳು- ಒಂದು ಅಧ್ಯಯನ

ಹಾಸನ ಜಿಲ್ಲೆ ಭೌಗೋಳಿಕವಾಗಿ ಮಲೆನಾಡಿನ ವ್ಯಾಪ್ತಿಗೊಳಪಟ್ಟಿದೆ. ಅನಾದಿ ಕಾಲದಿಂದಲೂ ಈ ನಾಡು ಸಂಪತ್ತು ಸಮೃದ್ಧಿಯಿಂದ ಕೂಡಿತ್ತೆಂದು ಹೇಳುವ ನೂರಾರು ಶಾಸನಗಳು ಲಭ್ಯವಿದೆ. ಹೊಯ್ಸಳರ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಪ್ರಧಾನ ಕೇಂದ್ರಗಳಾಗಿದ್ದ ಶ್ರವಣಬೆಳಗೊಳ, ಹಳೇಬೀಡು, ಬೇಲೂರು ಮತ್ತು ಅರಸೀಕೆರೆ ಇಂದಿಗೂ ಪ್ರವಾಸಿಗರನ್ನು ಆಕರ್ಷಿಸುವ ತಾಣಗಳಾಗಿವೆ. ತಮ್ಮ ನಾಡಿನ ವೈಭವವನ್ನು ದಾಖಲಿಸುವಲ್ಲಿ ಲಿಪಿಕಾರರ ಮತ್ತು ರೂವಾರಿಗಳ ಪಾತ್ರ ಮಹತ್ತರವಾದುದು.

ಬಹುತೇಕ ಶಾಸನಗಳಲ್ಲಿ ಲಿಪಿಕಾರರನ್ನಾಗಲೀ ರೂವಾರಿಗಳನ್ನಾಗಲೀ ಹೆಸರಿಸಿಲ್ಲ. ಆದಾಗ್ಯೂ ಲಭ್ಯವಿರುವ ಶಾಸನಗಳಲ್ಲಿ ಹೆಸರಿಸಿರುವ ಶಾಸನ ಕವಿಗಳನ್ನು[1] ಗುರುತಿಸಲಾಗಿದೆ. ಈ ದಿಸೆಯಲ್ಲಿ ಸೇನಬೋವರನ್ನು ಗಣಿಸಿಲ್ಲ. ಲಿಪಿಕಾರರಾಗಿ ಗಣನೀಯ ಸೇವೆ ಸಲ್ಲಿಸಿದ ಸೇನಬೋವರು ಅಜ್ಞಾತರಾಗಿಯೇ ಉಳಿದಿರುವುದು ಗೋಚರಿಸುತ್ತದೆ. ಈ ಜಿಲ್ಲೆಯಲ್ಲೂ ಹೆಚ್ಚಾಗಿ ಸೇನಬೋವರು ಉಲ್ಲೇಖಿಸಲ್ಪಟ್ಟಿಲ್ಲ. ಆದಾಗ್ಯೂ ಉಕ್ತವಾಗಿರುವ ಸೇನಬೋವರು ಕಣತೂರು ಗ್ರಾಮದ ವೋರಯ್ಯ[2] ಬ್ಯಾಡರಹಳ್ಳಿಯ ಮಾದಯನವರ ಮಕ್ಕಳು ನೀಲಕಂಠ[3], ಗಿರಿಸಿದ್ದಾಪುರದ ಸೋಮಣ[4], ಬೆಳವಾಡಿ ಮಜರೆಯ ವರದಪ್ಪ[5], ಕಣಿಕಟ್ಟೆಗ್ರಾಮದ ಮಾದಯ್ಯ[6], ದಾಸಣ್ಣ ಮತ್ತು ಗೋಪಯ್ಯ[7], ಮೊಸಳೆಗ್ರಾಮದ ನಾಗಣದೇವ[8], ಕೆಲ್ಲಂಗೆರೆ ಗ್ರಾಮದ ಸಿಂಪಣ್ಣ[9], ಗಂಡಸಿಗ್ರಾಮದ ಸಂಕಣ[10], ಶಂಭುನಾಥಪುರದ ಲಿಂಗಣ್ಣ[11] ಮತ್ತು

---

* ಅಧ್ಯಾಪಕ, ಸರಕಾರೀ ಕಿರಿಯ ಕಾಲೇಜು, ಟಿ. ನರಸೀಪುರ

1 ಮೇವುಂಡಿ ಮಲ್ಲಾರಿ, ಕನ್ನಡ ನಾಡಿನ ಕೆಲವು ಶಾಸನ ಕವಿಗಳು

2 ಎ.ಕ., ಸಂಪುಟ ೫, ಹಾಸನ ೪೫, ಕ್ರಿ.ಶ. ೧೦೨೫

3 ಅದೇ, ಹಾಸನ ೧೬೪, ಕ್ರಿ.ಶ. ೧೩೧೪

4 ಅದೇ, ಬೇಲೂರು ೨೪೪, ಕ್ರಿ.ಶ. ೧೨೮೫

5 ಅದೇ, ಬೇಲೂರು ೧೬೩, ಕ್ರಿ.ಶ. ೧೪೯೫

6 ಅದೇ, ಅರಸೀಕೆರೆ ೪೦, ಕ್ರಿ.ಶ. ೧೨೦೯

7 ಅದೇ, ಅರಸೀಕೆರೆ ೪೯, ಕ್ರಿ.ಶ. ೧೨೧೫

8 ಅದೇ, ಅರಸೀಕೆರೆ ೧೩. ಕ್ರಿ.ಶ. ೧೨೮೬

9 ಅದೇ, ಅರಸೀಕೆರೆ ೧೧೩, ಕ್ರಿ.ಶ. ೧೩೧೮

10 ಅದೇ, ಅರಸೀಕೆರೆ ೧೫೮, ಕ್ರಿ.ಶ. ೧೩೨೪

11 ಅದೇ, ಅರಕಲಗೂಡು ೬, ಕ್ರಿ.ಶ. ೧೨೨೯

ಹೊನ್ನಗೊಂಡನಹಳ್ಳಿಯ ಫಣಿಯಪ[12], ಮಾದುಡಿ ಗ್ರಾಮದ ಶಾಸನವನ್ನು ಬರೆದ ಮಾದಯ್ಯ[13]. ಕಣಿಕಟ್ಟೆ ಗ್ರಾಮದ ಮಾದಯ್ಯನೇ ಆಗಿರಬಹುದು.

ಶಾಸನಗಳಲ್ಲಿ ದಾಖಲಿಸಿರುವಂತೆ ದಬ್ಬೆ ಅಗ್ರಹಾರದ ರೇಚಣ್ಣ[14] ಮತ್ತು ತಳಲೂರು ಗ್ರಾಮದ ಶ್ರೀರಂಗ ದೇವ[15] ಶೀಘ್ರಲಿಪಿಕಾರರಾಗಿದ್ದರೆಂದು ಗೊತ್ತಾಗುತ್ತದೆ.

ಈ ಜಿಲ್ಲೆಯಲ್ಲಿ ಲಭ್ಯವಿರುವ ವಿಜಯನಗರದ ಶಾಸನಗಳನ್ನು ರಚಿಸಿದಾತ ಸಭಾಪತಿ. ಈತ ಕೃಷ್ಣದೇವ ರಾಯನ ಕಾಲದಿಂದ ಅಚ್ಯುತದೇವರಾಯನವರೆಗೆ ಆಸ್ಥಾನವನ್ನಲಂಕರಿಸಿದ ಶಾಸನಕವಿ ಎಂದು ಮನದಟ್ಟಾಗುತ್ತದೆ. ಈತನ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗಿಲ್ಲ. ಈ ಜಿಲ್ಲೆಯಲ್ಲಿ ಕ್ರಿ.ಶ. ೧೫೧೫ ರಿಂದ ೧೫೬೧ರ ವರೆಗಿನ ಐದು ಶಾಸನಗಳು[16] ದೊರೆತಿರುವುದರಿಂದ ಈತ ಸುಮಾರು ೪೬ ವರ್ಷಗಳ ಕಾಲ ರಾಜಾಶ್ರಯ ಪಡೆದಿದ್ದನೆಂದು ಖಚಿತವಾಗಿ ಹೇಳಬಹುದು.

ಇನ್ನು ಈ ಜಿಲ್ಲೆಯ ಶಾಸನಗಳನ್ನು ಕೆತ್ತಿದ ರೂವಾರಿಗಳಲ್ಲಿ ವರ್ಧಮಾನಾಚಾರಿ ಗಮನಾರ್ಹ. ಶ್ರವಣಬೆಳಗೊಳದ ಏಳು ಶಾಸನಗಳನ್ನು[17] ಕಂಡರಿಸಿದ ಹಿರಿಮೆ ಈತನದ್ದಾಗಿದೆ. ಸುಮಾರು ೮೫ಕ್ಕೂ ಹೆಚ್ಚು ರೂವಾರಿಗಳನ್ನು ಶಾಸನಗಳಲ್ಲಿ ಗಮನಿಸಬಹುದಾದರೂ, ಎಲ್ಲಿಯೂ ವಾದವಿವಾದಕ್ಕೆ ಒಳಪಟ್ಟಿರುವ ಜಕಣಾಚಾರಿಯ ಪ್ರಸ್ತಾಪವಿಲ್ಲ.

ಹೊಯ್ಸಳರ ಶಾಸನಗಳಲ್ಲಿ ರೂವಾರಿಗಳಿಗೆ ಪ್ರಾಶಸ್ತ್ಯ ನೀಡಿರುವಂತೆ ಇನ್ಯಾರ ಶಾಸನಗಳಲ್ಲೂ ನೀಡಿಲ್ಲ. ಅಧಿಕ ಪ್ರಮಾಣದಲ್ಲಿ ದೇವಾಲಯಗಳು, ಕೆರೆ ಕಟ್ಟೆಗಳು ನಿರ್ಮಾಣಗೊಂಡದ್ದರಿಂದ ರೂವಾರಿಗಳ ಅಗತ್ಯ ಕಂಡು ಬಂದಿರಬೇಕು. ಆದರೆ ನಂತರದ ಕಾಲದಲ್ಲೂ ನಿರ್ಮಾಣ ಕಾರ್ಯ ಬಿರುಸಿನಿಂದಲೇ ಕೂಡಿತ್ತು. ಹೀಗಿದ್ದಾಗ್ಯೂ ಹೊಯ್ಸಳರ ಶಾಸನಗಳಲ್ಲೇ ಅಧಿಕ ಸಂಖ್ಯೆಯಲ್ಲಿ ರೂವಾರಿಗಳನ್ನು ಗುರುತಿಸಲಾಗಿದೆ. ಸಾಮಾಜಿಕವಾಗಿ ಆರ್ಥಿಕವಾಗಿ ರೂವಾರಿಗಳು ಗಳಿಸಿದ ಸ್ಥಾನಮಾನವೇ ಕಾರಣವಿರಬಹುದೇ ? ಈ ದಿಸೆಯಲ್ಲಿ ಗಂಭೀರವಾಗಿ ಚಿಂತಿಸುವ ಅಗತ್ಯವಿದೆ.

---

12 ಅದೇ, ಅರಕಲಗೂಡು ೧೦೪, ೧೫ನೇ ಶತಮಾನ

13 ಅದೇ, ಅರಸೀಕೆರೆ ೧೫೦, ಕ್ರಿ.ಶ. ೧೧೯೫

14 ಅದೇ, ಬೇಲೂರು ೨೦೦, ಕ್ರಿ.ಶ. ೧೦೭೩

15 ಅದೇ, ಅರಸೀಕೆರೆ ೧೩೦, ಕ್ರಿ.ಶ. ೧೨೦೦

16 ಅದೇ, ಹಾಸನ ೬, ಕ್ರಿ.ಶ. ೧೫೧೫ ; ೯೪, ೧೫೨೪ ; ೭, ಕ್ರಿ.ಶ. ೧೫೬೧ ; ಅದೇ, ಬೇಲೂರು ೧೯೭, ಕ್ರಿ.ಶ. ೧೫೩೯ : ಅದೇ, ಅರಸೀಕೆರೆ ೧೨೬, ಕ್ರಿ.ಶ. ೧೫೩೫

17 ಅದೇ, ಸಂಪುಟ, ಶಾಸನ ಸಂಖ್ಯೆ ೭೭, ೮೨, ೧೩೬, ೧೩೫, ೧೫೬, ೧೪೯, ೫೪೭

ಡಾ॥ ಎಚ್. ಎಸ್. ಗೋಪಾಲರಾವ್*

# ಜಲಗಾರದಿಬ್ಬದ ಶಾಸನ : ಒಂದು ಪುನರಧ್ಯಯನ

೧೯–೨–೧೯೭೮ರ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ 'ಪ್ರಜಾವಾಣಿ' ಪತ್ರಿಕೆ ಪ್ರಕಟಿಸಿದ ನನ್ನ ಲೇಖನ 'ಹಲ್ಮಿಡಿಗಿಂತ ಹಿಂದಿನ ಜಲಗಾರದಿಬ್ಬದ ಶಾಸನ ?'ವು ವಿದ್ವಾಂಸರ ಗಮನ ಸೆಳೆಯಿತು. ಹಲವು ಶಾಸನತಜ್ಞರು ಮತ್ತು ವಿದ್ವಾಂಸರು ಜಲಗಾರದಿಬ್ಬದ ಶಾಸನದ ಬಗೆಗೆ ಆಸಕ್ತಿ ವಹಿಸಿದರು. ಫಲವಾಗಿ 'ಪ್ರಜಾವಾಣಿ' ಪತ್ರಿಕೆಯ ಮೂಲಕವೇ ೧೯–೩–೧೯೭೮ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ ಡಾ॥ ಬಾ.ರಾ. ಗೋಪಾಲ್ ಮತ್ತು ಎಂ. ಹನುಮಂತರಾವ್ ಅವರ 'ಜಲಗಾರದಿಬ್ಬ ಶಾಸನ–ಹೊಸ ಬೆಳಕು' ಲೇಖನ ಪ್ರಕಟವಾಯಿತು. ಜಲಗಾರದಿಬ್ಬ ಶಾಸನವು ಗಂಗವಂಶದ ಮೂರನೆಯ ಮಾಧವನ ಕಾಲಕ್ಕೆ ಸೇರಿದ್ದೆಂದೂ, ಅದರ ಕ್ರಿ. ಶ. ಸುಮಾರು ೩೯೦ಕ್ಕೆ ಸರಿಹೊಂದುತ್ತದೆಂದೂ ಅಭಿಪ್ರಾಯ ವ್ಯಕ್ತಪಡಿಸಿದ್ದ ನಾನು, ಆ ವರೆಗೆ ಕನ್ನಡದ ಮೊದಲ ಶಾಸನವೆಂದು ಪರಿಗಣಿತವಾಗಿದ್ದ ಹಲ್ಮಿಡಿಯ ಶಾಸನದ ಕಾಲ ಕ್ರಿ. ಶ. ಸು. ೪೫೦ ಎಂದು ಬಹುತೇಕ ವಿದ್ವಾಂಸರ ಅಭಿಪ್ರಾಯವಾಗಿದ್ದುದರಿಂದ, ಜಲಗಾರದಿಬ್ಬದ ಶಾಸನವು ಕನ್ನಡದ ಮೊದಲ ಶಾಸನವೆಂದು ಸ್ವೀಕರಿಸಬಹುದೆಂಬ ಅನುಮಾನವನ್ನು ಪ್ರಕಟಿಸಿದ್ದೆ.ನಾನು ಓದಿದ್ದ ಶಾಸನದ ಪಾಠವನ್ನು ಬಹುತೇಕ ಒಪ್ಪಿಕೊಂಡಿದ್ದ ಡಾ॥ ಬಾ. ರಾ. ಗೋಪಾಲ್ ಮತ್ತು ಎಂ. ಹನುಮಂತರಾಯರು, ಶಾಸನವು ಗಂಗ ವಂಶದ ಶ್ರೀವಿಕ್ರಮನ ಕಾಲಕ್ಕೆ ಸೇರಿದ್ದೆಂದೂ ಅದರ ಕಾಲವು ಕ್ರಿ. ಶ. ೭ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರುವುದೆಂದೂ ನಿರ್ಧರಿಸಿದ್ದರು. ೧೯೭೮ರ ಮಾರ್ಚ್ ತಿಂಗಳ 'ಪುಸ್ತಕ ಪುರವಣಿ' (ಸಂಪುಟ ೨, ಸಂಚಿಕೆ ೩) ಯಲ್ಲಿ ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ ಅವರು 'ವಿವಾದಗ್ರಸ್ತ ಜಲಗಾರದಿಬ್ಬದ ಶಾಸನ' ಎಂಬ ಶೀರ್ಷಿಕೆಯಡಿಯಲ್ಲಿ ಲೇಖನ ಬರೆದು ಶಾಸನದ ಭಾಷೆಯ ಬಗೆಗೆ ವಿಶ್ಲೇಷಿಸಿ, ಅದು ಕ್ರಿ. ಶ. ೯ನೆಯ ಶತಮಾನಕ್ಕೆ ಹಿಂದಿನ ಭಾಷೆ ಎಂದು ಸೂಚಿಸಿದರು. ಅನಂತರ ಜಲಗಾರದಿಬ್ಬದ ಶಾಸನದ ಬಗೆಗೆ ಯಾವುದೇ ಲೇಖನಗಳು ಪ್ರಕಟವಾಗಲಿಲ್ಲ. ಆದರೆ ಆ ಬಗೆಗಿನ ಕುತೂಹಲ ಮತ್ತು ಆಸಕ್ತಿ ಉಳಿದೇ ಇದ್ದವು.

ಶಾಸನದ ಪಾಠ ಮತ್ತು ಲಿಪಿಸ್ವರೂಪದ ಬಗೆಗೆ ಉಳಿದಿದ್ದ ಅನುಮಾನಗಳನ್ನು ಬಗೆಹರಿಸಿ, ಶಾಸನದ ಕಾಲವನ್ನು ನಿರ್ಧರಿಸುವುದರ ಸಲುವಾಗಿ ನಾನು ನನ್ನ ಗುರುಗಳಾದ ಡಾ॥ ಬಾ. ರಾ. ಗೋಪಾಲ್ ಅವರನ್ನೇ ಆಶ್ರಯಿಸಿದೆ. ಶಾಸನದ ಪಾಠದ ಕೆಲವು ಭಾಗಗಳು ಮತ್ತು ಅವುಗಳ ಅರ್ಥೈಸುವಿಕೆಯನ್ನು ಕುರಿತಾಗಿ ನನಗೆ ಅನುಮಾನಗಳಿದ್ದವು. ಈ ಹಿನ್ನೆಲೆಯಲ್ಲಿ ೧೯೯೪ರಲ್ಲಿ ಡಾ॥ ಬಾ. ರಾ. ಗೋಪಾಲ್ ಮತ್ತು ನಾನು ಮತ್ತೊಮ್ಮೆ ಜಲಗಾರದಿಬ್ಬದ ಶಾಸನವನ್ನು ರಕ್ಷಿಸಿಟ್ಟಿದ್ದ ಮುಳುಕುಂಟೆಗೆ ಹೋಗಿ, ಶಾಸನದ ಪಡಿಯಚ್ಚುಗಳನ್ನು ಪಡೆದೆವು. ಆ ನಂತರದ ಅಭಿಪ್ರಾಯಗಳನ್ನು ಈಗ ದಾಖಲಿಸಲಾಗುತ್ತಿದೆ.

---

* ಸ್ವಸ್ತಿಶ್ರೀ ಸ್ಕಂದ, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨೧೨೩

### ಶಾಸನದ ಪರಿಷ್ಕೃತ ಪಾಠ

೧. ಸ್ವಸ್ತಿಶ್ರೀ ವಿಕ್ರಮರಾ(ಳೆ)[1]
೨. ಪೃಥುವೀಯಾನಾ ಮಾಧವ
೩. ಗೆಲ್ಲೆ[2] ಕಮುಋಗ[3] ಈರಿ
೪. ದಾನೋಂ[4] ಪಲ್ಮಡಿಯರ[5] [ ]
೫. (ಎ)[6]ಮ್ಮೆಯರು ಪಡೆದದು ಪೊನ್ನಿ
೬. ಡುಕ್ಕೆಪಟಿ ಎಟ್ಟಪತ್ತರ್ಕ್ಕಂ
೭. ಮರಿಯಾದಿಪಸ[7]ಲ್ಕೊಳ್ಳದ
೮. ದುಂ ಅಂಮೆಸುಂಕಾ[8]

### ಶಾಸನದ ಆಶಯ

ಶ್ರೀವಿಕ್ರಮನು ರಾಜ್ಯಭಾರ ಮಾಡುತ್ತಿದ್ದಾಗ ಮಾಧವ ಗೆದ್ದ. ಹೋರಾಟದಲ್ಲಿ ಕಮುಋಗ ಎನ್ನುವವನು ಇರಿದ. ಪಲ್ಮಡಿಯರ ಎಮ್ಮೆಯರು ಪೊನ್ನಿಡುಕ್ಕೆ ೭೦ಕ್ಕೆ ಮರ್ಯಾದೆಯನ್ನು ಪಡೆದರು. ಅದರಲ್ಲಿ ಅಂಮೆಸುಂಕವನ್ನು ಹೊರತುಪಡಿಸಲಾಗಿದೆ.

### ಪುನರಧ್ಯಯನ

ಶಾಸನದ ಮೊದಲ ಸಾಲಿನ ಶ್ರೀವಿಕ್ರಮ ರಾ(ಳೆ) ಎಂಬಲ್ಲಿ 'ಳೆ'ಯು ಅಸ್ಪಷ್ಟವಾಗಿದೆ. ಅದು ಒತ್ತಕ್ಷರ 'ಯ' ಕೂಡಾ ಆಗಿರುವ ಸಾಧ್ಯತೆ ಇದೆ. ಕಲ್ಲಿನಲ್ಲಿ ಆ ಅಕ್ಷರವಿರುವ ಭಾಗ ಒಡೆದು ಹೋಗಿದೆ. ಇತ್ತೀಚೆಗೆ ಪಾಠವನ್ನು ಪರಿಷ್ಕರಿಸಿದಾಗ ಶ್ರೀ ವಿಕ್ರಮರಾ(ಳೆ) ಎಂದೇ ಸ್ವೀಕರಿಸಿರುವುದರಿಂದ ಶಾಸನವು ಗಂಗ ಶ್ರೀವಿಕ್ರಮನ ಕಾಲದ್ದೆಂದು ನಿರ್ಧರಿಸಲು ಸಾಧ್ಯವಾಗಿದೆ. ಮಾಧವ ಗೆಲ್ಲೆ ಎಂದು ಈಗಲೂ ಸ್ವೀಕರಿಸಿರುವ ಪಾಠವನ್ನು ಡಾ|| ಬಾ. ರಾ. ಗೋಪಾಲ್ ಮತ್ತು ಎಂ. ಹನುಮಂತ ರಾಯರು 'ಮಾಧವಗಲ್ಲ' ಎಂದು ಓದಿ, ಅದು ಒಂದು ಊರಿನ ಹೆಸರು ಎಂದು ನಿರ್ಧರಿಸಿದ್ದರು. ಆದರೆ 'ಗೆಲ್ಲೆ' ಎಂದು ಬರಹ ಸ್ಪಷ್ಟವಾಗಿರುವುದರಿಂದ, ಅದನ್ನು ಕ್ರಿಯಾ ರೂಪದಲ್ಲೇ ಸ್ವೀಕರಿಸುವುದು ಸೂಕ್ತ. ಮಾಧವ ಎಂಬುವವನು ಗೆದ್ದಾಗ, ಎಂಬಲ್ಲಿ ಹಿಂದೆ ಮಾಧವನನ್ನು ಮೂರನೆಯ ಮಾಧವನೆಂದು ಭಾವಿಸಲಾಗಿತ್ತು. ಆದರೆ ಈಗ ಮತ್ತಾರೋ ಒಬ್ಬ ವೀರ ಅಥವಾ ಮುಖ್ಯಸ್ಥನನ್ನು ಸೂಚಿಸುತ್ತದೆ ಎಂದು ತಿಳಿಯಲಾಗಿದೆ.

ಮಾಧವ ಗೆದ್ದ ಯುದ್ಧದಲ್ಲಿ ಬಹುತೇಕ ಹೋರಾಡಿದವರಲ್ಲಿ ಮುಖ್ಯನಾದವನು ಕಮುಋಗ ಎಂಬ ವ್ಯಕ್ತಿ ; ಅವನು ಪೊನ್ನಿಡುಕಿಗೆ ಸೇರಿದವನಾಗಿರಬೇಕು. ಕಮುಋಗ ಹೋರಾಡಿದ ನೆನಪಿಗೆ ಪೊನ್ನಿಡುಕಿಯ ಎಮ್ಮೆಯರು ಪಡೆದ ಮರಿಯಾದೆ ಅಂಮೆಸುಂಕದ ವಿನಹ ಉಳಿದ ಸುಂಕಗಳ ವಿನಾಯಿತಿ.

ಅಂಮೆಸುಂಕವನ್ನು ಈ ಹಿಂದೆ ಅಮೆಯಸುಂಕ ಅಥವಾ ಬೇಯಿಸದ ಆಹಾರ ಪದಾರ್ಥಗಳ ಅಂದರೆ ದವಸ–ಧಾನ್ಯಗಳ ಮೇಲಿನ ಸುಂಕ ಎಂದು ಭಾವಿಸಲಾಗಿತ್ತು. ಡಾ|| ಬಾ. ರಾ. ಗೋಪಾಲ್ ಅವರು ಅಮಸುಕಾ ಎಂಬುದು ಅರಸನಿಗೆ ಸಲ್ಲಬೇಕಾದ ಸುಂಕವೆಂಬ ಅಭಿಪ್ರಾಯದಿಂದ ಅಂತಹ ಸುಂಕವನ್ನು ಎತ್ತುವ ಅಧಿಕಾರಿ ಅಮಸುಕಾರ ಎಂದಿದ್ದರು. ಆದರೆ ಇಬ್ಬರೂ ಖಚಿತ ಅರ್ಥವನ್ನು ನೀಡಿರಲಿಲ್ಲ. ಬ್ರಾಹ್ಮಣರು ಮಾಡುವ ಶ್ರಾದ್ಧ ಕರ್ಮಗಳಲ್ಲಿ ಆಮಶ್ರಾದ್ಧ ಎಂಬುದೊಂದು ಇದೆ. ಅಲ್ಲಿ ಯಾವ ವಸ್ತುವನ್ನೂ ಬೇಯಿಸುವುದಿಲ್ಲ. ಅಕ್ಕಿ, ತರಕಾರಿ ಎಲ್ಲವನ್ನೂ ಹಸಿಯಾಗಿಯೇ ಬಡಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ 'ಅಂಮೆ'ಯು ತರಕಾರಿಗಳನ್ನು ಸೂಚಿಸಬಹುದೆಂದೂ, ಆದ್ದರಿಂದ ಅಂಮೆಸುಂಕವು ತರಕಾರಿಗಳ ಮೇಲಿನ ಸುಂಕವೆಂದೂ ನಿರ್ಧರಿಸಬಹುದಾಗಿದೆ.

---

1 ಮೊದಲು ನಾನು (ಜ್ಯ) ಎಂದು ಓದಿದ್ದೆ ; ಡಾ|| ಬಾ. ರಾ. ಗೋಪಾಲ್ ಅವರು ('ಳೆ') ಎಂದೇ ಓದಿದ್ದರು.
2 ಡಾ|| ಬಾ. ರಾ. ಗೋಪಾಲ ಅವರು 'ಗಲ್ಲ' ಎಂದು ಓದಿದ್ದರು.
3 'ಣು' ಎಂದು ನಾನೂ 'ಋ' ಎಂದೂ ಡಾ|| ಬಾ. ರಾ. ಗೋಪಾಲ ಅವರೂ ಓದಿದ್ದೆವು.
4 ನನ್ನ ಪಾಠ ದಾ [.] ; ಡಾ|| ಬಾ. ರಾ. ಗೋ ಅವರ ಪಾಠ ದೊಡೆ
5 ನನ್ನ ಪಾಠ [-] ; ಡಾ|| ಬಾ. ರಾ. ಗೋ ಅವರ ಪಾಠ [ದ]
6 ನನ್ನ ಪಾಠ 'ಜೆ' ; ಡಾ|| ಬಾ. ರಾ. ಗೋ ಅವರ ಪಾಠ ಎ
7 ಸಾಲಿನ ಕೆಳಗೆ ಒತ್ತಕ್ಷರದ ಭಾಗವಲ್ಲಿದೆ. ಹಿಂದೆ ಇಬ್ಬರೂ ಗಮನಿಸಿರಲಿಲ್ಲ.
8 ಡಾ|| ಬಾ. ರಾ. ಗೋ ಅವರು ಅಮೆಸುಕಾ ಎಂದು ಓದಿದ್ದರು.

ಮೆಳೇಕೋಟೆ ತಾಮ್ರಶಾಸನದ ಲಿಪಿ ಸ್ವರೂಪ ದೊಡನೆ ಹೋಲಿಸಿ, ಈ ಶಾಸನದ ಕಾಲವನ್ನು ಕ್ರಿ. ಶ. ಸು. ೪ನೆಯ ಶತಮಾನಕ್ಕೆ ಕೊನೆಯ ಭಾಗ (ಕ್ರಿ. ಶ. ಸು. ೩೯೦) ಎಂದು ನಾನು ಸೂಚಿಸಿನ್ದೆ. ಡಾ॥ ಬಾ. ರಾ. ಗೋಪಾಲ್ ಅವರು ಲಿಪಿಸ್ವರೂಪದ ಆಧಾರದ ಮೇಲೆಯೇ ಶಾಸನವು ಕ್ರಿ. ಶ. ೭ನೆಯ ಶತಮಾನದೆಂದು ಸೂಚಿಸಿದ್ದರು ಹಾಗೂ ಇದುವರೆಗೆ ದೊರೆತಿರುವ ಶ್ರೀವಿಕ್ರಮನ ಶಾಸನವೂ ಇದೊಂದೇ ಎಂದು ತಿಳಿಸಿದ್ದರು. ಶ್ರೀ ವಿಕ್ರಮನ ಮತ್ತೊಂದು ಶಿಲಾಶಾಸನವು ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ಕಲ್ಲೂರಿನಲ್ಲಿ ದೊರೆತಿದೆ.[9] ಅದೂ ಎಂಟು ಸಾಲಿನ ಶಾಸನ. ಶಾಸನದಸ್ವರೂಪವೂ ಜಲಗಾರದಿಬ್ಬದ ಶಾಸನದ ಸ್ವರೂಪ ದಂತೆಯೇ ಇದೆ. ಆದರೆ ಬರಹದ ರೂಪ ಒರಟಾಗಿದೆ. ಜಲಗಾರದಿಬ್ಬದ ಶಾಸನದ ನಾಜೂಕು ಕಲ್ಲೂರು ಶಾಸನದಲ್ಲಿಲ್ಲ. ಲಿಪಿಸ್ವರೂಪದಲ್ಲಿ ಅಗಾಧ ವ್ಯತ್ಯಾಸವೇನೂ ಕಾಣುವುದಿಲ್ಲವಾದರೂ ಮೊದಲ ನೋಟಕ್ಕೆ ಇವೆರಡೂ ಸಮಕಾಲೀನವಲ್ಲ ಎನಿಸಿದರೆ ಆಶ್ಚರ್ಯಪಡಬೇಕಾಗಿಲ್ಲ. ಶ್ರೀವಿಕ್ರಮನ ಒಂದು ತಾಮ್ರ ಶಾಸನವು ೧೯೭೮ರಲ್ಲೇ ಮಣ್ಣೆಯಲ್ಲಿ ದೊರೆತಿದೆ. ಈವರೆಗೆ ಶ್ರೀವಿಕ್ರಮನ ಎರಡು ಶಿಲಾಶಾಸನಗಳು ಮತ್ತು ಒಂದು ತಾಮ್ರಶಾಸನ ದೊರೆತಂತಾಗಿದೆ. ಎರಡು ಶಿಲಾಶಾಸನಗಳೂ ವೀರರಿಗೆ ನೀಡಿದ ಗೌರವಗಳ ದಾಖಲೆಗಳೇ ಆಗಿವೆ.

ಜಲಗಾರದಿಬ್ಬ ಶಾಸನದ ಲಿಪಿಸ್ವರೂಪವು ಉತ್ತಮ ಮಾದರಿಯದಾಗಿದೆ. ಎಲ್ಲ ಅಕ್ಷರಗಳ ಬರಹವೂ ಸ್ಫುಟವಾಗಿದೆ. ಆದರೆ ಶಾಸನದ ಬರಹಕ್ಕೆ ಬಳಸಿರುವ ಕಲ್ಲು ಮೆದು ಬೆಣಚುಕಲ್ಲಾದ್ದರಿಂದ ಕೆಲವೆಡೆ ಚಕ್ಕೆ ಎದ್ದು ಅಥವಾ ಅಂಚುಗಳು ಒಡೆದು ಅಕ್ಷರಗಳು ಅಸ್ಫುಟವಾಗಿವೆ. ಶಾಸನವನ್ನು ದಾಖಲಿಸಲೆಂದೇ ಕಲ್ಲನ್ನು ಸಿದ್ಧಗೊಳಿಸಿರುವಂತಿದೆ. (ಕಲ್ಲಿನ ಕೆಳಭಾಗದಲ್ಲಿ ಮೂರು ಉಬ್ಬು ಪಟ್ಟಿಗಳಿವೆ.) ಆದರೆ ಉತ್ತಮ ಗುಣಮಟ್ಟದ ಗಟ್ಟಿ ಕಲ್ಲನ್ನೇಕೆ ಆಯ್ಕೆ ಮಾಡಲಿಲ್ಲವೋ ತಿಳಿಯುವುದಿಲ್ಲ.

ಹಲ್ಮಿಡಿ ಶಾಸನದ ಕಾಲವೂ ಈಗ ಕ್ರಿ. ಶ. ಸು. ೪೫೦ ಎಂದು ಎಲ್ಲ ವಿದ್ವಾಂಸರಿಂದಲೂ ಸ್ವೀಕಾರವಾಗಿಲ್ಲ. ಅದರ ಕಾಲ ಕ್ರಿ. ಶ. ಸು. ೬ನೆಯ ಶತಮಾನವೆಂದು ಡಾ॥ ಜಿ. ಎಸ್. ಗಾಯಿ ಅವರೇ ಇತ್ತೀಚೆಗೆ ತಿಳಿಸಿದ್ದರು.

ಜಲಗಾರದಿಬ್ಬ ಮತ್ತು ಕಲ್ಲೂರು ಶಾಸನಗಳ ಲಿಪಿ ಸ್ವರೂಪದ ತೌಲನಿಕ ಅಧ್ಯಯನ ಮಾಡಿದಾಗ, ಬರಹದ ಸ್ವರೂಪವು ಒಂದೇ ಕಾಲದಲ್ಲಿ ಲಿಪಿಕಾರ ಮತ್ತು ಬಳಸುವ ಬರಹದ ವಸ್ತುವನ್ನಾಧರಿಸಿ ಬೇರೆ ಬೇರೆ ಆಗುತ್ತಿದ್ದವು ಎಂದು ಗೋಚರವಾಗುತ್ತದೆ.

'ಸ್ವಸ್ತಿಶ್ರೀ ವಿಕ್ರಮರಾ(ಳೆ)' ಎಂಬ ಓದಿನಿಂದಾಗಿ, ಜಲಗಾರದಿಬ್ಬದ ಶಾಸನದ ಕಾಲವನ್ನು ಗಂಗ ವಂಶದ ಶ್ರೀವಿಕ್ರಮನ ಕಾಲಕ್ಕೆ ಅಂದರೆ ಕ್ರಿ. ಶ. ೬೪೪–೬೬೯ರ ಅವಧಿಗೆ ಸೇರಿಸಬೇಕಾಗುತ್ತದೆ.

ಕಳೆದ ೧೮ ವರ್ಷಗಳ ಅಂತರದಲ್ಲಿ ಶಾಸನದ ಕಲ್ಲು ಮತ್ತಷ್ಟು ಸವೆದು, ಅಕ್ಷರಗಳು ಮತ್ತಷ್ಟು ಅಸ್ಪಷ್ಟವಾಗುತ್ತಿವೆ. ಶಾಸನದ ಪಡಿಯಚ್ಚುಗಳಲ್ಲೇ ಆ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ.

9 ಎಂ. ಎ. ಆರ್. ೧೯೧೬-೧೭, ಪು. ೩೧.

ಹರಿಹರ ಶ್ರೀನಿವಾಸರಾವ್*

# ವಿಠ್ಠಲಾಪುರದ ಅಪ್ರಕಟಿತ ಕಂಚಿನ ಶಾಸನ

ವಿಠ್ಠಲಾಪುರವು ಧಾರವಾಡ ಜಿಲ್ಲೆಯ ಮುಂಡರಗಿ ತಾಲ್ಲೂಕಿಗೆ ಸೇರಿದ ಒಂದು ಸಣ್ಣ ಗ್ರಾಮ. ಜಿಲ್ಲೆಯ ಪೂರ್ವ ತುದಿಯಲ್ಲಿರುವ ತುಂಗಭದ್ರಾನದೀ ತೀರದಲ್ಲಿದ್ದು ನದಿಯ ಆಚೆ ದಡದಲ್ಲಿ ಬಳ್ಳಾರಿ ಜಿಲ್ಲೆಯ ಮಾಗಳ, ರಂಗಾಪುರ ಗ್ರಾಮಗಳಿಗೆ ಅತಿ ಸಮೀಪವಾಗಿದೆ. ಸಾರಿಗೆ ಸೌಕರ್ಯವನ್ನು ಅಷ್ಟಾಗಿ ಪಡೆಯದ ಈ ಗ್ರಾಮಕ್ಕೆ ಹೊಸಪೇಟೆ–ಬಳ್ಳಾರಿ ಕಡೆಯವರು ಮಾಗಳಕ್ಕೆ ಬಂದು ಯಾಂತ್ರಿಕ ದೋಣಿಯ ಮೂಲಕ ಹೊಳೆದಾಟಿ ಇಲ್ಲಿಗೆ ತಲುಪಬಹುದು. ಗದಗ–ಮುಂಡರಗಿ–ಬಾಗೇವಾಡಿ ಮಾರ್ಗವಾಗಿಯೂ ಒಂದೆರಡು ಬಸ್ಸುಗಳಿವೆ.

ಶಾಸನದ ಬಗ್ಗೆ : ಶಾಸನ ಪೀಠದ ಉದ್ದ, ಅಗಲವು ೩೦ × ೩೦ ಸೆಂ.ಮೀ. ಇದ್ದು ಅದರಲ್ಲಿ ೧೫.೫ × ೬.೫ ಸೆಂ.ಮೀ. ನಷ್ಟು ಜಾಗವನ್ನು ಬಳಸಿ ಕಂಡರಿಸಲಾಗಿದೆ. ಈ ಪೀಠವನ್ನು ಸಿಂಹಾಸನದಿಂದ ಬೇರ್ಪಡಿಸಲು ಬರುವಂತೆ ಅಲ್ಲಲ್ಲಿ ರಂಧ್ರಗಳನ್ನು ಕೊರೆಯಲಾಗಿದೆ. ಇದೇ ಪೀಠದ ಮೇಲೆ ಸುಮಾರು ೨೦ ಕೆ.ಜಿ.ಗಳಷ್ಟು ಭಾರವಿರುವ ಪಂಚಲೋಹದಿಂದ ಮಾಡಿದ ಚರಲಿಂಗವೊಂದಿದ್ದು ಅದರಲ್ಲಿ ಪಾದರಸವನ್ನು ಬಂಧಿಸಲಾಗಿದೆ. ಇಷ್ಟು ಭಾರವಾದ ರಸಲಿಂಗವು ಭಾರತದಲ್ಲೇ ಅತಿ ವಿರಳ ಎಂಬ ಅಭಿಪ್ರಾಯವೂ ಇದೆ. ಈಶ್ವರ ಲಿಂಗವನ್ನು 'ಮಹಾಲಿಂಗೇಶ್ವರ' ಎಂದು ಕರೆಯುತ್ತಿದ್ದು ನಿತ್ಯವೂ ಪೂಜಾದಿ ಅಭಿಷೇಕಗಳು ನಡೆಯುತ್ತಿವೆ. ಶಿವಲಿಂಗವನ್ನು ಇಲ್ಲಿದ್ದ ಭಿಷ್ಟಪ್ಪಯ್ಯ ಮಹಾಪುರುಷ ಎಂಬುವರು ಮಾಡಿಸಿದುದಾಗಿ ತಿಳಿದು ಬರುತ್ತದೆ. ಈ ಶಾಸನದಲ್ಲಿ ಆರು ಸಾಲುಗಳಿದ್ದು ಸರಾಸರಿ ೨೦ ಅಕ್ಷರಗಳನ್ನು ಪ್ರತಿ ಸಾಲಿನಲ್ಲಿ ಕೆತ್ತಲಾಗಿದೆ. ವಿಜಯನಗರದ ಪತನಾನಂತರದ ಕಾಲವನ್ನು ಈ ಶಾಸನದಲ್ಲಿ ನಮೂದಿಸಲಾಗಿದ್ದು, ಇದು ಅಂದಿನವರ ರಸಶಾಸ್ತ್ರಜ್ಞಾನದ ಅರಿವಿನ ಅಧ್ಯಯನ ಮಾಡಲು ಸಹಾಯಕವೆನಿಸುತ್ತದೆ.

ಶಾಸನ ಪಾಠ

೧ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೫೫೭

೨ ನೆಯ ಯುವ ಸಂವ[ತ್ಸ]ರದ ಆಶ್ವೀಜ ಶುದ್ಧ ೧೦ ರವಿ ವಾ

೩ ರದಲ್ಲೂ । ಶ್ರೀಕಾಶಿ ವಿಶ್ವನಾಥ ಅಂನಪೂರ್ನೆ ಬ್ರತಿಯಾಗಿ

೪ ಕೋಟೆ ಕಲ್ಲಘಟ್ಟಿಗೆ ಬೊಂಮಿಗಟ್ಟೆಯ ಸೀಮೆಯದೇ

೫ ಶಾಹಿ ದೇಶ ಕುಲ ಕರಣಿ ತಿಂಮಪನ ಮಗ ಕೋನಪ್ಪ

೬ ನೂ ಮಾಡಿಸಿದ ಸಿಂಹಾಸನ ಮಂಟಪಕೆ ಶುಭಮಸ್ತು ।

ಈ ಶಾಸನದಲ್ಲಿ ಸ್ಪಷ್ಟವಾಗಿ ನಮೂದಿಸಲ್ಪಟ್ಟಿರುವ ಶಕವರುಷ ೧೫೫೭ ನೆಯ ಸಂವತ್ಸರದ ಆಶ್ವೀಜ ಶುದ್ಧ ದಶಮಿ ೧೦ ರವಿವಾರವು ಸ್ವಾಮಿ ಕಣ್ಣು

* ೭೫/೧೫, ಸಮರ್ಥ, ..ರಡನೆಯ ಅಡ್ಡರಸ್ತೆ, ೫ನೇ ಬ್ಲಾಕ್, ೩ನೇ ಘಟ್ಟ, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫

ಪಿಳ್ಳೈಯವರ ಪಂಚಾಂಗದ ಪ್ರಕಾರ ತಾರೀಖು ೧೦ ಅಕ್ಟೋಬರ್ ಭಾನುವಾರ ಕ್ರಿ.ಶ. ೧೬೩೫ಕ್ಕೆ ಸರಿ ಹೊಂದುತ್ತದೆ. ಶ್ರೀ ಕಾಶಿ ವಿಶ್ವನಾಥ ಅನ್ನಪೂರ್ಣೆಯವ ರನ್ನೇ ಇಷ್ಟದೈವವೆಂದು ವ್ರತವನ್ನು ಆಚರಿಸುವುದರ ಮೂಲಕ ಈ ರಸಲಿಂಗವನ್ನು ಪೂಜಿಸಿದ್ದು ದೇಸಾಯಿ ದೇಶ ಕುಲಕರಣಿ ತಿಂಮಪ್ಪನ ಮಗ ಕೋನಪ್ಪನು ತನ್ನ ಇಷ್ಟಾರ್ಥ ನೆರವೇರಿದ್ದಕ್ಕೋಸ್ಕರವಾಗಿ ಶ್ರೀ ಮಹಾ ಲಿಂಗೇಶ್ವರನಿಗೆ ಸಿಂಹಾಸನ ಮಂಟಪವನ್ನು ಮಾಡಿಸಿ ಕೊಡುಗೆಯಾಗಿ ಕೊಟ್ಟಿರುವ ಉಲ್ಲೇಖವನ್ನು ಹೊಂದಿರು ವುದರಿಂದ ಈ ಶಾಸನವು ಶಿವಲಿಂಗದ ಮಹತ್ವವನ್ನು ಸೂಚಿಸುತ್ತದೆ.

### ಐತಿಹಾಸಿಕ ಹಿನ್ನೆಲೆ

ಈ ಶಾಸನದಲ್ಲಿ ಹೇಳಲಾಗಿರುವ ಕಲ್ಘಟ್ಟಿಗೆ, ಬೊಂಮಿಗಟ್ಟೆಯ ಸೀಮೆಗಳು ಇಂದಿನ ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕು ಆಗಿದ್ದು ಧಾರವಾಡ ದಿಂದ ೪೦ ಕಿ.ಮೀ. ದೂರದಲ್ಲಿದೆ. ಇದೇ ತಾಲ್ಲೂಕಿನ ಅರೆಬಸಪ್ಪನಕೊಪ್ಪ ಗ್ರಾಮವನ್ನು ವಿಠ್ಠಲಾಪುರದ ಮಹಾಲಿಂಗೇಶ್ವರ ಎಂದು ಕರೆದು ದೇವಸ್ಥಾನಕ್ಕೆ ನೂರು ಎಕರೆಗಳಿಗೂ ಹೆಚ್ಚಾಗಿ ಭೂಮಿಯನ್ನು ದೇವರಿಗೆ ದತ್ತಿ ಬಿಟ್ಟ ದಾಖಲೆಗಳನ್ನು ಅವರ ಮನೆತನದವರಲ್ಲಿ ನೋಡ ಬಹುದು. ಮಹಾಲಿಂಗೇಶ್ವರ ರಸಲಿಂಗವನ್ನು ಶ್ರೀ ಭಿಷ್ಟಪ್ಪಯ್ಯ ಎಂಬುವರು ಮಾಡಿಸಿದ್ದು ಇವರಿಗೆ ಮಹಾ ಪುರುಷ ಎಂಬ ಅಭಿದಾನವೂ ಇತ್ತೆಂದು ತಿಳಿದುಬರುತ್ತದೆ. ಇವರು ಹಂಪೆಯ ವಿರೂಪಾಕ್ಷೇಶ್ವರನ ಅನುಗ್ರಹದಿಂದ ಜನಿಸಿದವರಾಗಿದ್ದು ಅಲ್ಲಿಯ ಪ್ರವೇಶ ದ್ವಾರದ ಮಹಾ ಗೋಪುರವನ್ನು ನಿರ್ಮಿಸುವಾಗ ತಮ್ಮ ಹೆಂಡತಿ 'ಲಕ್ಷ್ಮಾಂಬೆ'ಯನ್ನೇ ಬಲಿ ಕೊಟ್ಟುದಾಗಿ 'ಇತಿಹಾಸ' ವಿರುತ್ತದೆ. ಇಂದಿಗೂ ಆ ಗೋಪುರವನ್ನು ಭಿಷ್ಟಪ್ಪಯ್ಯ ನವರ ಗೋಪುರವೆಂದೇ ಕರೆಯುತ್ತಾರೆ. ಭಿಷ್ಟಪ್ಪಯ್ಯ ನವರ ಚರಿತ್ರೆಯನ್ನು ಪ್ರಕಟಿಸಲು ಸಹಾಯ ಮಾಡಿದ ಕನ್ನಡದ ಕುಲಪುರೋಹಿತ ಶ್ರೀ ಆಲೂರು ವೆಂಕಟ ರಾಯರು ಬರೆದಿರುವ ಮುನ್ನುಡಿಯ ಕೆಲಭಾಗಗಳನ್ನು 'ಇತಿಹಾಸ' ಎನ್ನುವುದಕ್ಕೆ ಆಧಾರವಾಗಿ ಇಲ್ಲಿ ಕೊಡ ಲಾಗಿದೆ.

"ಈ ಗ್ರಂಥವು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಹೊರಟಿದೆ. ನಾನು ವಕೀಲಿ ಮಾಡುತ್ತಿರುವಾಗ ಸುಮಾರು ೫೦ ವರ್ಷಗಳ ಹಿಂದೆ ನನ್ನ ತುಸು ದೂರದ ಆಪ್ತರಾದ ಮಹಾಪುರುಷ ಬಂಧುಗಳು ತಮ್ಮದೊಂದು ಖಟ್ಲೆಯಲ್ಲಿ ನನಗೆ ವಕೀಲಿ ಕೊಟ್ಟಿದ್ದರು. ಆಗ, ಅವರ ಮನೆತನದ ಇತಿಹಾಸವನ್ನು ಕೇಳುವ ಪ್ರಸಂಗ ಬಂದಿತು. ಈ ಮನೆತನ ದವರಿಗೆ ಮಹಾಪುರುಷರೆಂದು ಅಡ್ಡಹೆಸರು ಮತ್ತು ಮನೆ ತನದಲ್ಲಿ ಮೂರೇ ಹೆಸರುಗಳು. ೧) ಭಿಷ್ಟಪ್ಪಯ್ಯ ೨) ಶಿವಪ್ಪಯ್ಯ ೩) ಮಹದೇವಪ್ಪಯ್ಯ, ೧ನೇ ಭಿಷ್ಟಪ್ಪಯ್ಯ, ೨ನೇ ಭಿಷ್ಟಪ್ಪಯ್ಯ ಮುಂತಾಗಿ ಅವರ ಮನೆತನದವರು ಹಿಂದಕ್ಕೆ ಹಂಪೆಯ ಮಹಾಗೋಪುರ ವನ್ನು ಕಟ್ಟಿಸಿದರೆಂದು ಕೇಳಿದ್ದೆ. ಆ ಸಂಬಂಧವಾಗಿ ಮನೆತನದಲ್ಲಿ ಏನಾದರೂ ಕಾಗದ ಪತ್ರಗಳು ಅವೆಯೇನೋ ಕೇಳಿದೆ. ಅವರು ಅಂಥ ಕಾಗದ ಪತ್ರಗಳೇನೂ ತಮ್ಮಲ್ಲಿ ಇಲ್ಲವೆಂದೂ, ಆದರೆ ಮನೆತನದಲ್ಲಿ ಪರಂಪರಾಗತ ಒಂದು ಸಂಪ್ರದಾಯವಿದೆಯೆಂದೂ ಹೇಳಿದರು. ಅದಾವುದೆಂದರೆ ಪ್ರತಿ ಹುಣ್ಣಿಮೆಯ ದಿನ ೭೦–೮೦ ಮೈಲುಗಳ ದೂರ ದಲ್ಲಿರುವ ಹಂಪೆಯ ಗೋಪುರಕ್ಕೆ ಬಲಿದಾನ ಮಾಡಿದ ಳೆಂದು ಹೇಳಲಾಗುವ 'ಲಕ್ಷ್ಮಾಂಬೆ'ಯ ಹೆಸರಿನಲ್ಲಿ ನೈವೇದ್ಯ ಕೊಡುವ ಸಂಪ್ರದಾಯವು ಮಾತ್ರ ಇನ್ನೂರು, ಮುನ್ನೂರು ವರ್ಷಗಳಿಂದ ಅವ್ಯಾಹತವಾಗಿ ನಡೆದಿದೆ ಎಂದು ಮಾತ್ರ ಹೇಳಿದರು." [ಈ ಪದ್ಧತಿ ಈಗಲೂ ಜಾರಿಯಲ್ಲಿದೆ]....

ಈ ಭಿಷ್ಟಪ್ಪಯ್ಯನವರ ಚರಿತ್ರೆಯಲ್ಲಿ ಬಂದಿರುವ ಅನೇಕ ಪವಾಡಗಳನ್ನು ನಂಬಿರಿ, ಬಿಡಿರಿ. ಆದರೆ ಲಕ್ಷ್ಮಾಂಬೆಯವರ ಬಲಿದಾನ ಮಾತ್ರ ಪವಾಡವಲ್ಲ. ೪೦–೫೦ ವರ್ಷಗಳ ಹಿಂದೆಯೇ ನಾನು ಹಂಪೆಯನ್ನು ನೋಡಲಿಕ್ಕೆ ಹೋದಾಗ, ಇದು ಭಿಷ್ಟಪ್ಪಯ್ಯನವರ ಗೋಪುರವೆಂಬುದನ್ನು ಕೇಳಿದೆ. ಅಲ್ಲಿಯ ೨ನೇಯ ಅಂತಸ್ತಿನಲ್ಲಿರುವ ಲಕ್ಷ್ಮಾಂಬೆಯ ಶಿಲಾಮೂರ್ತಿಯನ್ನು ನೋಡಿದ್ದೆ. (ಆ ಶಿಲಾಮೂರ್ತಿಗೆ ಅನೇಕ ವರ್ಷಗಳಿಂದ ಸುಣ್ಣ ಬಳಿಯುತ್ತಾ ಬಂದಿದ್ದಾರೆ). ಅಲ್ಲದೆ ಭಿಷ್ಟಪ್ಪಯ್ಯ ನವರ ಶಿಲಾಮೂರ್ತಿ ಅವರಿಗೆ ದೊರೆತ ರಸಲಿಂಗದ ಮೂರ್ತಿ ಇವೆಲ್ಲವು ಭಿಷ್ಟಪ್ಪಯ್ಯನವರ ಚರಿತ್ರೆ ನಿಜ ವೆಂದೇ ಹೇಳುತ್ತದೆ. (ಭಿಷ್ಟಪ್ಪಯ್ಯನವರ ಚರಿತ್ರೆ ಪು. ೪). ಭಿಷ್ಟಪ್ಪಯ್ಯನವರ ಕಾಲವು ಸು. ೧೬೦೦ ಇರಬಹುದು.

ಭಿಷ್ಟಪ್ಪಯ್ಯನವರ ಮನೆತನದವರಲ್ಲಿ ದೊರೆಯುವ ನೋಕಳಿಕೆ ಪತ್ರ (೧೯೧೬ನೇ ಇಸ್ವಿಯದು) ದ ಪ್ರಕಾರ ಮಹಾಲಿಂಗೇಶ್ವರನಿಗೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹರಪನಹಳ್ಳಿ, ಸಿರಗುಪ್ಪ ತಾಲ್ಲೂಕು, ಧಾರವಾಡ ಜಿಲ್ಲೆಯ ಶಿಗ್ಗಾಂವಿ ಮೊದಲಾದ ಸುಮಾರು ೩೪ಕ್ಕೂ ಹೆಚ್ಚಿನ ಗ್ರಾಮಗಳಲ್ಲಿಯ ಭೂಮಿಯ ಉಂಬಳಿಯಿತ್ತೆಂದು ತಿಳಿದು ಬರುತ್ತದೆ. ಭಿಷ್ಟಪ್ಪಯ್ಯನವರು ಮಾಧ್ವಮತದ ಉತ್ತರಾದಿ ಮಠದ ಸತ್ಯಬೋಧ ಸ್ವಾಮಿಗಳ ಸಮಕಾಲೀನರು ಮತ್ತು ಅವರು ರಂಗಾಪುರ ನೃಸಿಂಹ ಸ್ವಾಮಿ ದೇವಸ್ಥಾನದಲ್ಲಿ ಇದ್ದಾಗ್ಯೆ ಅವರನ್ನು ಭೇಟಿ ಮಾಡಿದ್ದಾಗಿಯೂ ಅವರು ಮಾಡಿದ ಪವಾಡಗಳನ್ನೂ ಅಲ್ಲದೇ ರಂಗಾಪುರ, ಬಿದಿರಹಳ್ಳಿ, ವಿಠ್ಠಲಾಪುರ ಮುಂತಾದೆಡೆಗಳಲ್ಲಿ ಅವರು ನಡೆಸಿದ್ದ ದೇವಸ್ಥಾನಗಳ ಜೀರ್ಣೋದ್ಧಾರ ಕಾರ್ಯಗಳನ್ನೂ, ಸಮಾಜಸೇವೆ ಮತ್ತು ಅವರ ವಿದ್ವತ್ತನ್ನೂ ಗಮನಿಸಿ ತಮ್ಮ ಮಠಕ್ಕೆ ಸೇರಿದ ಜಮೀನಿನ ಕೆಲ ಭಾಗಗಳನ್ನು ಅವರಿಗೆ ದತ್ತಿ ಬಿಟ್ಟುದು ದಾಗಿ ತಿಳಿದು ಬರುತ್ತದೆ. ರಸಲಿಂಗದಿಂದ ಹವಾಮಾನದ ಉಷ್ಣತೆಯಲ್ಲಿ ಹೆಚ್ಚಳ ಉಂಟಾದಾಗ ಪಾದರಸವು ಹೊರ ದೂಡಲ್ಪಡುತ್ತಿದ್ದು ಅದನ್ನು ಅವರ ಮನೆತನದವರು ಸಂಗ್ರಹಿಸಿಟ್ಟಿರುವುದನ್ನು ನೋಡಬಹುದು. ರಸಾರ್ಣವ, ರಸಾರ್ಣವ ಸುಧಾಕರ, ವೀರಮಾಹೇಶ್ವರಾಗಮ ಮುಂತಾದ ರಸ ಗ್ರಂಥಗಳಲ್ಲಿ ರಸಲಿಂಗದ ಬಗ್ಗೆ ವಿವರ ಗಳಿವೆ ಎಂದು ತಿಳಿದು ಬಂದಿದೆಯಾದರೂ ಈ ಗ್ರಂಥಗಳು ಇದುವರೆಗೆ ನನ್ನ ಪರಿಶೀಲನೆಗೆ ಸಿಕ್ಕಿರುವುದಿಲ್ಲ.

ಶಾಸನ ಮತ್ತು ಅದರ ಇತಿಹಾಸಗಳನ್ನು ಸಮೀಕ್ಷಿಸಿ ದಾಗ ತಿಳಿದು ಬರುವ ಸಂಗತಿಗಳ ಟಿಪ್ಪಣಿ :

೧. ಶ್ರೀಯುತ ಆಲೂರು ವೆಂಕಟರಾಯರು ಭಿಷ್ಟಪ್ಪಯ್ಯನವರ ಕಾಲವನ್ನು ಕ್ರಿ.ಶ. ೧೬೦೦ ಸುಮಾರು ಎಂದು ಊಹಿಸಿರುವುದನ್ನು ಈ ಶಾಸನದ ಕಾಲ ಹೆಚ್ಚು ಖಚಿತಪಡಿಸುತ್ತಾ ಕ್ರಿ.ಶ. ೧೬೩೫ರಲ್ಲಿ ಅವರು ಜೀವಿಸಿದ್ದರೆಂದು ನಿರ್ಧರಿಸಲು ಸಹಾಯ ವಾಗುತ್ತದೆ. ಹಂಪೆಯ ಗೋಪುರಕ್ಕೆ ಅವರ ಹೆಂಡತಿ ಲಕ್ಷ್ಮಮ್ಮಂಬೆಯನ್ನೇ ಬಲಿ ಕೊಟ್ಟದ್ದು ಮತ್ತು ಇನ್ನಿತರ ಅವರ ಚರಿತ್ರೆಯಲ್ಲಿ ಬರುವ ಐತಿಹ್ಯಗಳು ಇದನ್ನು ಪುಷ್ಟೀಕರಿಸುತ್ತವೆ.

೨. ಶಾಸನದಲ್ಲಿ ಶಿವಲಿಂಗವನ್ನು ಮಹಾಲಿಂಗೇಶ್ವರ ಎಂದು ಕರೆದಿಲ್ಲವಾದರೂ ೨೦ ಕೆಜಿಗಳಷ್ಟು ಭಾರ ವಿರುವ ಈ ಲಿಂಗವನ್ನು ಮಹಾಲಿಂಗೇಶ್ವರ ಎಂದು ರೂಢಿಯಲ್ಲಿ ಕರೆದಿರಬಹುದೆಂಬುದರಲ್ಲಿ ಸಂಶಯ ವಿಲ್ಲ. ಇನ್ನು ಈ ಶಾಸನದ ಮೇಲೆಯೇ ರಸಲಿಂಗ ವಿರುವುದು ಇನ್ನೊಂದು ವಿಶೇಷ. ಈ ಕ್ಷೇತ್ರವನ್ನು ದಕ್ಷಿಣಕಾಶಿ ಎಂದೂ ಮತ್ತು ಈಶ್ವರನನ್ನು ಕಾಶಿ ವಿಶ್ವನಾಥನೆಂದೂ ಪಾರ್ವತಿದೇವಿಯನ್ನು ಅನ್ನ ಪೂರ್ಣೆ, ತುಂಗಭದ್ರೆಯನ್ನು ಗಂಗೆ ಎಂದು ಕರೆಯುವ ಪದ್ಧತಿ ರೂಢಿಯಲ್ಲಿ ಇದ್ದಿತೆಂದು ಬಿದಿರಹಳ್ಳಿ (ಈ ಗ್ರಾಮವು ವಿಠ್ಠಲಾಪುರದಿಂದ ೩ ಕಿ.ಮಿ. ದೂರದಲ್ಲಿದೆ) ಕ್ಷೇತ್ರ ಮಹಾತ್ಮೆ (ಪುಟ –೪೦) ಸಂಸ್ಕೃತ ಗ್ರಂಥದ ಅನುವಾದ, ಶ್ರೀಯುತ ಚಿಕ್ಕೇರೂರು ಗೋವಿಂದಾಚಾರ್ಯ, ಹರಪನಹಳ್ಳಿ, ಇದರಿಂದ ತಿಳಿದು ಬರುತ್ತದೆ.

೩. ರಸಲಿಂಗದ ಬಗ್ಗೆ ಇನ್ನೂ ಹೆಚ್ಚಿನ ಖಚಿತ ಮಾಹಿತಿ ದೊರೆತಲ್ಲಿ ಅಂದಿನವರ ರಸಶಾಸ್ತ್ರದ ಮೇಲೆ ಬೆಳಕನ್ನು ಚೆಲ್ಲಬಹುದಾಗಿದೆ.

೪. ವಿದ್ವಾಂಸರ ಪ್ರಕಾರ ಈ ಶಾಸನದಲ್ಲಿ ಬಂದಿರುವ 'ಸಿಂಹಾಸನ ಮಂಟಪ' ಎಂಬ ಪದಗುಚ್ಛವು ಶಾಸನ ಶಾಸ್ತ್ರದ ಶಬ್ದ ಭಂಡಾರಕ್ಕೆ ಒಂದು ಹೊಸ ಕೊಡುಗೆಯಾಗಿದೆ.

೫. ರಂಗಾಪುರದ ನರಸಿಂಹಸ್ವಾಮಿ ದೇವಸ್ಥಾನ, ರಾಮೇಶ್ವರ ದೇವಸ್ಥಾನ, ಬಿದರಹಳ್ಳಿಯ ಅಶ್ವತ್ಥ ನಾರಾಯಣ ಮತ್ತು ಅಲ್ಲಿಯೇ ಇರುವ ಸ್ನಾನ ಘಟ್ಟ, ಸೋಮೇಶ್ವರ ದೇವಸ್ಥಾನಗಳನ್ನೂ ಮತ್ತು ಹಂಪೆಯಲ್ಲೂ ಕೆಲವು ದೇವಸ್ಥಾನಗಳನ್ನು ಜೀರ್ಣೋದ್ಧಾರ ಮಾಡಿದರೆಂದು ಅವರ ಚರಿತ್ರೆ ಯಿಂದ (ಅಪ್ಪೆ ಮಾಸ್ತರರು ಸಂಗ್ರಹಿಸಿದ್ದು ಪು. ೧೧೯) ತಿಳಿದು ಬರುತ್ತದೆ. ಅವರ ಮನೆತನದವ ರಲ್ಲಿ ಇರುವ ಮೋಕಳಿಕೆ ಪತ್ರದಲ್ಲಿ ನಮೂದಿಸಲ್ಪ ಟ್ಟಿರುವ ಧಾರವಾಡ, ಬಳ್ಳಾರಿ ಜಿಲ್ಲೆಯಲ್ಲಿಯ ೩೪ಕ್ಕೂ ಹೆಚ್ಚು ಊರುಗಳಲ್ಲಿ ಮಹಾಲಿಂಗೇಶ್ವ ರನ ಹೆಸರಿನಲ್ಲಿ ಶ್ರೀ ಭಿಷ್ಟಪ್ಪಯ್ಯನವರ ಮನೆ

ತನದವರಿಗೆ ನೀಡಲಾಗಿರುವ ದತ್ತಿಯ ಪಟ್ಟಿಯೇ ಇರುವುದರಿಂದ ಅವರು ಆ ಕಾಲದ ಪ್ರಭಾವೀ ವ್ಯಕ್ತಿಯಾಗಿದ್ದು ಅವರಿಗೆ ರಸವಿದ್ಯೆ, ವಾಸ್ತುಶಿಲ್ಪ, ಸಂಸ್ಕೃತ ಪಾಂಡಿತ್ಯವಿದ್ದುದನ್ನೂ ಮತ್ತು ಇಂಥ ಜ್ಞಾನಭಂಡಾರವನ್ನು ಸಾಮಾಜಿಕ ಏಳ್ಗೆಗೋಸ್ಕರ ವಿಜಯನಗರದಂಥ ವೈಭವಯುತ ಸಾಮ್ರಾಜ್ಯದ ಅಳಿವಿನಿಂದ ಆ ಭಾಗದ ಅಂದಿನ ಜನರಲ್ಲಿ ಉಂಟಾದ ಮಾನಸಿಕ ಕ್ಷೋಭೆಯನ್ನು ತೊಡೆಯಲು ಶ್ರಮಿಸಿದ್ದಕ್ಕೆ ಸಾಕ್ಷಿಯಾಗಿ ಇಂದಿಗೂ ಅವರ ಆರಾಧನೆಯನ್ನು ಕೆಲವು ಮನೆತನಗಳವರು ಆಚರಿಸುತ್ತಿದ್ದಾರೆ. ಇವೆಲ್ಲವುಗಳ ಹಿನ್ನೆಲೆಯಿಂದ ಭಿಷ್ಟಪ್ಪಯ್ಯನವರು ಹಂಪೆಯ ಮುಖ್ಯದ್ವಾರದ ಮಹಾಗೋಪುರದ ನಿರ್ಮಾತೃವಾಗಿದ್ದಿರಬೇಕು ಎನ್ನುವ ಸಂಗತಿಗೆ ಹೆಚ್ಚಿನ ಒತ್ತು ಸಿಕ್ಕುತ್ತದೆ. ಈ ವಿಚಾರದಲ್ಲಿ ಇನ್ನೂ ಹೆಚ್ಚಿನ ಮಾಹಿತಿಯ ಸಂಗ್ರಹ ನಡೆದಿದೆ.

ಕೃತಜ್ಞತೆಗಳು : ೧. ಶಾಸನ, ದಾಖಲೆಗಳನ್ನು ಕೊಟ್ಟು ಸಹಕರಿಸಿದ ಮಹನೀಯರು ಶ್ರೀ ಎಸ್. ಡಿ. ಮಹಾಪುರುಷ ಮತ್ತು ಅವರ ಶ್ರೀಮತಿಯವರು. ಇವರು ಈ ಮನೆತನದ ೧೨ನೇ ತಲೆಮಾರಿನವರು. ೨. ಡಾ|| ಸೂರ್ಯನಾಥ ಕಾಮತ್ ಅವರು, ಕರ್ನಾಟಕ ರಾಜ್ಯದ ಗೆಜಿಟಿಯರ್, ೩. ಕರ್ನಾಟಕ ರಾಜ್ಯದ ಪತ್ರಾಗಾರ, ವಿಧಾನಸೌಧ, ೪. 'ಸ್ಮರಣಿಕಾ' ಬಿದರಹಳ್ಳಿ, ಪತ್ರಿಕೆ

ಸ್ಮಿತಾರೆಡ್ಡಿ,*
ಎಂ. ಜಿ. ಮಂಜುನಾಥ**

# ಕೊಪ್ಪಳದಲ್ಲಿ ಹೊಸದಾಗಿ ಪತ್ತೆಯಾದ ನಿಷಧಿ ಶಾಸನಗಳು

ರಾಯಚೂರು ಜಿಲ್ಲೆಯ ಕೊಪ್ಪಳ ಕರ್ನಾಟಕದ ಪ್ರಾಚೀನ ಜೈನಕೇಂದ್ರಗಳಲ್ಲೊಂದು. ಇಲ್ಲಿಯ ಕೋಟೆ ಗೋಡೆಯ ಒಂದು ಭಾಗವು ಕುಸಿದು ಬಿದ್ದಾಗ, ಕೋಟೆಯನ್ನು ಕಟ್ಟಲು ಬಳಸಿದ ಕಲ್ಲಿನ ತುಂಡುಗಳಲ್ಲಿ ಹಲವಾರು ಶಾಸನಗಳಿದ್ದುದು ಕಂಡುಬಂದಿತು. ಈ ಅಪ್ರಕಟಿತ ಶಾಸನಗಳನ್ನು ಹಲವಾರು ಮಂದಿ ಗಮನಿಸಿದ್ದರೂ ಸಹ ಯಾರೂ ಪ್ರಕಟಿಸಿಲ್ಲದಿರುವುದನ್ನು ಗಮನಿಸಿ ನಾವು ಪ್ರಕಟಿಸಲು ನಡೆಸಿದ ಪ್ರಯತ್ನದ ಫಲವಾಗಿ ಈ ಲೇಖನವು ರೂಪುಗೊಂಡಿದೆ.

ಕೊಪ್ಪಳದ ಕೋಟೆಯು ಕುಸಿದಾಗ ಸುಮಾರು ೬೦ಕ್ಕಿಂತಲೂ ಹೆಚ್ಚು ಶಾಸನಗಳು ಪತ್ತೆಯಾದವು. ಇವುಗಳಲ್ಲಿ ಬಹುತೇಕ ಎಲ್ಲ ಶಾಸನಗಳೂ ನಿಷಧಿ ಶಾಸನಗಳೇ ಆಗಿವೆ. ಇವುಗಳಲ್ಲಿ ೬ ಶಾಸನಗಳನ್ನು ಮಾತ್ರ ನಾವು ಅಧ್ಯಯನ ಮಾಡಿದ್ದೇವೆ. ಈ ಎಲ್ಲ ಶಾಸನಗಳೂ ಒಳಪದ ಕಲ್ಲಿನ ಮೇಲೆ ಶಾಸನವನ್ನು ಕೊರೆಯಲೆಂದೇ ಸಿದ್ಧಪಡಿಸಿದ ಸುಮಾರು ಒಂದೂವರೆ ಅಡಿ ಅಗಲ ಹಾಗೂ ಎರಡೂವರೆ ಅಡಿ ಎತ್ತರದ ಸ್ತಂಭಗಳ ಮೇಲೆ ಕೊರೆಯಲಾಗಿದೆ. ಇವುಗಳಲ್ಲಿನ ಲಿಪಿಯು ತುಂಬಾ ಸುಂದರವಾಗಿದ್ದು ಪಡಿಯಚ್ಚುಗಳ ಸಹಾಯವೇ ಇಲ್ಲದೆ ಓದಬಹುದಾಗಿದೆ. ಇವುಗಳಲ್ಲಿ ಕೆಲವು ಶಾಸನಗಳು ಕನ್ನಡಲಿಪಿ ಹಾಗೂ ಕನ್ನಡ ಭಾಷೆಯಲ್ಲಿದ್ದರೆ ಮತ್ತೆ ಕೆಲವು ಕನ್ನಡಲಿಪಿ ಹಾಗೂ ಸಂಸ್ಕೃತ ಭಾಷೆಯಲ್ಲಿವೆ. ಈ ಶಾಸನಗಳಿರುವ ಸ್ತಂಭಗಳನ್ನು ಒಡೆದು ಕೋಟೆಯನ್ನು ಕಟ್ಟಲು ಬಳಸಿರುವುದರಿಂದ ಕೆಲವು ಶಾಸನಗಳ ಭಾಗಗಳು ತುಂಡಾಗಿ ಅಸಮಗ್ರವಾಗಿವೆ. ಕೆಲವು ಮಾತ್ರ ಸಂಪೂರ್ಣವಾಗಿವೆ. ಈ ಎಲ್ಲಾ ಶಾಸನಗಳು ಕಲ್ಯಾಣ ಚಾಲುಕ್ಯರ ಕಾಲದವುಗಳಾಗಿವೆ.

ಜೈನರಿಗೆ ಅತ್ಯಂತ ಪವಿತ್ರ ತೀರ್ಥಸ್ಥಳವಾಗಿ ಪರಿಗಣಿಸಲ್ಪಟ್ಟ ಕೊಪ್ಪಳವು 'ಕೊಪಣಾಚಲ' ಎಂದು ಸ್ತುತಿಸಲ್ಪಡುತ್ತಿತ್ತು. ಹಲವಾರು ಮಂದಿ ಜೈನ ಶ್ರೇಷ್ಠರನ್ನು ಕೊಪಣಾಚಲಕ್ಕೆ ಹೋಲಿಸುತ್ತಿದ್ದರು. 'ನೆಗಟ್ದ ಕೊಪಣಾಚಲದಂತೆ ಪವಿತ್ರಮತ್ತಿಮಬ್ಬೆಯ ಚರಿತಂ' ಎಂದು ಅತ್ತಿಮಬ್ಬೆಯನ್ನು ಸ್ತುತಿಸಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಕೊಪ್ಪಳದಲ್ಲಿ ಅಶೋಕನ ಎರಡು ಲಘು ಪ್ರಸ್ತರಗಳು ಗವಿಮಠ ಮತ್ತು ಪಾಲ್ಕಿಗುಂಡು ಎಂಬಲ್ಲಿ ದೊರೆತಿರುವುದರಿಂದ ಕೊಪ್ಪಳವು ಕ್ರಿ. ಪೂ. ೩ನೆಯ ಶತಮಾನದಿಂದಲೂ ಜನವಸತಿಯನ್ನು ಹೊಂದಿತ್ತೆಂದು ಊಹಿಸಬಹುದು. ಕೊಪಣಪುರವರಾಧೀಶ್ವರರೆಂದು ಶಿಲಾಹಾರರ ಒಂದು ಶಾಖೆಯ ಅರಸರು ತಮ್ಮನ್ನು ಕರೆದುಕೊಂಡಿದ್ದಾರೆ. ಕೊಪ್ಪಳವನ್ನು ಶಾಸನಗಳಲ್ಲಿ ಹಾಗೂ ಸಾಹಿತ್ಯ

* ದ್ವಾರಾ : ಡಾ॥ ದೇವರಕೊಂಡಾರೆಡ್ಡಿ ೭೨, ೧ನೇ ಅಡ್ಡರಸ್ತೆ, ಲಕ್ಕಸಂದ್ರ, ಬೆಂಗಳೂರು-೩೦
** ೭೧೫, ೪ನೇ ಮುಖ್ಯರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು-೬೦

ಕೃತಿಗಳಲ್ಲಿ ಕೊಪಣ, ಕುಪಣ,ಕುಪಿನ, ಆದಿತೀರ್ಥ, ವಿದಿತ ಮಹಾಕೊಪಣ ನಗರ ಮುಂತಾಗಿ ಬಣ್ಣಿಸಲಾಗಿದೆ. ಇಲ್ಲಿ ಒಂದಾನೊಂದು ಕಾಲದಲ್ಲಿ ೭೨೨ ಬಸದಿಗಳು, ೨೪ ಜೈನ ಸಂಘಗಳೂ ಇದ್ದವೆಂದು ತಿಳಿದುಬರುತ್ತದೆ. ಕೊಪ್ಪಳವು ಯಾಪನೀಯ ಪಂಥದ ಒಂದು ಪ್ರಮುಖ ಕೇಂದ್ರ ವಾಗಿದ್ದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು.

### ಶಾಸನಗಳ ಪಾಠಗಳು

೧. ೧) ಶ್ರೀ ಮತ್ಪದ್ಮನನ್ದಿ ಸಿದ್ಧಾನ್ತ ದೇವರ
೨) ನಿಸಿದ್ದಿಗೆಯು ಮಾಚಬ್ಬೆಕನ್ತಿ
೩) ಯರ್ ನಿಱಿಸಿದರ್ ॥ ಲ
೪) ಬ್ಬಣ್ಣೋಜನ ಲಿಖಿತಂ ಮಂಗಳಂ ॥

ಈ ಶಾಸನದಲ್ಲಿ ನಾಲ್ಕು ಸಾಲುಗಳಿವೆ. ಕಾಲದ ಉಲ್ಲೇಖವಿಲ್ಲ. ಲಿಪಿಯ ದೃಷ್ಟಿಯಿಂದ ಈ ಶಾಸನವನ್ನು ಹತ್ತನೇಯ ಶತಮಾನದ ಕೊನೆಯ ಭಾಗ ಹಾಗೂ ಹನ್ನೊಂದನೇಯ ಶತಮಾನದ ಪ್ರಾರಂಭದ ಕಾಲದ್ದೆಂದು ನಿರ್ಣಯಿಸಬಹುದು. ಇದು ಪದ್ಮನನ್ದಿ ಸಿದ್ಧಾನ್ತ ದೇವರ ನಿಷಧಿ ಶಾಸನ. ಇದನ್ನು 'ಮಾಚಬ್ಬೆ ಕನ್ತಿ' ಎಂಬುವವರು ನಿರ್ಮಿಸಿದರು ಹಾಗೂ ಶಾಸನದ ಲಿಪಿಕಾರ ಅಂದರೆ ಕಂಡರಣೆಗಾರ 'ಲಬ್ಬಣ್ಣೋಜ' ಎಂಬುದಾಗಿ ಉಲ್ಲೇಖವಿದೆ.

೨) ೧. ಕರಕಮಳ ಯುಗಳಮುಕುಳೀಕರ
೨. ಣಮನಾತಂ ಶರೀರದಿಂ ಪೋಪಾಗಳ್
೩. ಪರಿಹರಿಸಿದರಿಲ್ಲಿಂತುಟು ಪರಿಣಾ
೪. ಮಂ ಸಕಳ ಚಂದ್ರಭಟ್ಟಾರಕರುಂ

ಈ ಶಾಸನದಲ್ಲಿಯೂ ಸಹ ಕೇವಲ ನಾಲ್ಕು ಸಾಲುಗಳಿವೆ. ಕಾಲದ ಉಲ್ಲೇಖವಿಲ್ಲ. ಲಿಪಿಯ ದೃಷ್ಟಿಯಿಂದ ಹತ್ತನೇಯ ಶತಮಾನದ ಕೊನೆಯ ಭಾಗ ಹಾಗೂ ಹನ್ನೊಂದನೇಯ ಶತಮಾನದ ಪ್ರಾರಂಭದ ಕಾಲದ್ದೆಂದು ನಿರ್ಣಯಿಸಬಹುದು. ಶಾಸನ ಸ್ತಂಭವು ೩೦ ಅಂಗುಲ ಉದ್ದ ಹಾಗೂ ೧೯ ಅಂಗುಲ ಅಗಲವಾಗಿದೆ. ಇದು ಸಕಲ ಚಂದ್ರ ಭಟ್ಟಾರಕರ ನಿಷಧಿ ಶಾಸನ. ಶಾಸನದ ಮೇಲ್ಭಾಗದಲ್ಲಿ ಖಡ್ಗಾಸನದಲ್ಲಿರುವ ತೀರ್ಥಂಕರನ ಶಿಲ್ಪ ವಿದೆ. ಸುಂದರವಾದ ಕಂದ ಪದ್ಯದಲ್ಲಿ ಸಕಳ ಚಂದ್ರ ಭಟ್ಟಾರಕರು ಸಲ್ಲೇಖನ ವ್ರತದಿಂದ ಮುಡಿಪಿದುದನ್ನು ಈ ಶಾಸನವು ಚಿತ್ರಿಸುತ್ತದೆ. ಕಂಡರಣೆಕಾರನು ತನ್ನ ಅನುಕೂಲಕ್ಕೆ ತಕ್ಕಂತೆ ಸಾಲುಗಳನ್ನು ರೂಪಿಸಿಕೊಂಡು ಕೊರೆದಿದ್ದಾನೆ. ಅದನ್ನು ಛಂದೋಬದ್ಧವಾಗಿ ಪುನರ್ರಚನೆ ಮಾಡಿದರೆ ಈ ಕೆಳಗಿನಂತಾಗುತ್ತದೆ.

ಕರಕಮಳಯುಗಳ ಮುಕುಳೀ
ಕರಣಮನಾತಂ ಶರೀರದಿಂ ಪೋಪಾಗಳ್
ಪರಿಹರಿಸಿದರಿಲ್ಲಿಂತುಟು
ಪರಿಣಾಮಂ ಸಕಳ ಚಂದ್ರ ಭಟ್ಟಾರಕರುಂ

೩. ೧) ಸ್ವಸ್ತಿ ಶಕವರ್ಷ ೯೧೯
೨) ನೆಯ ಹೇಮಳಂಬಿ
೩) ಸಂವತ್ಸರದ ಕಾರ್ತ್ತಿಕ
೪) ಸುದ್ಧ ಪಂಚಮಿ ಬೃಹ
೫) ಸ್ಪತಿವಾರದಂದು ಶ್ರೀ
೬) ಮಳಧಾರಿದೇವರ ಶಿ....
೭) ............................
(ಮುಂದಿನ ಭಾಗ ತುಂಡಾಗಿರುವುದರಿಂದ ತ್ರುಟಿತವಾಗಿದೆ)

ಈ ಶಾಸನದಲ್ಲಿ ೬ ಸಾಲುಗಳಿದ್ದು ಶಾಸನಸ್ತಂಭ ಅಲ್ಲಿಗೆ ಮುರಿದುಹೋಗಿರುವುದರಿಂದ ಮುಂದಿನ ಭಾಗ ಉಪಲಬ್ಧವಿಲ್ಲ. ಈ ಶಾಸನವು ಮಳಧಾರಿ ದೇವರ ಶಿಷ್ಯನೊಬ್ಬನ ಮರಣವನ್ನು ಉಲ್ಲೇಖಿಸುವ ನಿಷಧಿ ಶಾಸನವಾಗಿದೆ. ಆದರೆ ಆ ಶಿಷ್ಯನ ಹೆಸರು ಉಪಲಬ್ಧ ವಾಗಿಲ್ಲ. ಶಾಸನದ ಕಾಲ ಶಕವರ್ಷ ೯೧೯, ಹೇಮಳಂಬಿ ಸಂವತ್ಸರದ ಕಾರ್ತಿಕ ಶುದ್ಧ ಪಂಚಮಿ ಬೃಹಸ್ಪತಿ ವಾರ. ಇದು ಕ್ರಿ. ಶ. ೯೯೭, ಅಕ್ಟೋಬರ್ ಇಪ್ಪತ್ತು, ಗುರು ವಾರಕ್ಕೆ ಸರಿಹೊಂದುತ್ತದೆ.

೪. ೧) ಕೊಣ್ಡಕುನ್ದಾನ್ವಯೋತ್ಪನ್ನೇ
೨) ಗಣೇ ದೇಶಿಕ ಸಜ್ಞಕೆ
೩) ತತ್ರ ಪುಸ್ತಕ ಗಚ್ಚ ಭೂತೇ
೪) ಶ್ರೀ ದೇವೇನ್ದ್ರ ಮುನೀಶ್ವರಃ
೫) ಸೋಚಿನ್ತ್ಯ ಚಾರು ಚಾರಿತ್ರ
೬) .......... ನ್ತ ತತ್ವವಿ
೭) ...................................

ಈ ಶಾಸನದಲ್ಲಿ ಆರು ಸಾಲುಗಳಿವೆ. ಉಳಿದ ಭಾಗ ತುಂಡಾಗಿರುವುದರಿಂದ ಉಪಲಬ್ಧವಿಲ್ಲ. ೬ನೇ ಸಾಲಿನಲ್ಲಿ ಮೊದಲ ನಾಲ್ಕು ಅಕ್ಷರಗಳು ನಷ್ಟವಾಗಿವೆ. ಶಾಸನದ ಲಿಪಿ ಕನ್ನಡ, ಭಾಷೆ ಸಂಸ್ಕೃತ. ಇದರಲ್ಲಿ ಕಾಲದ ಉಲ್ಲೇಖವಿಲ್ಲ. ಲಿಪಿಯ ದೃಷ್ಟಿಯಿಂದ ೧೧ನೆಯ ಶತಮಾನದ್ದೆಂದು ನಿರ್ಧರಿಸಬಹುದು. ಇದು ಕೊಂಡ ಕುನ್ದಾನ್ವಯದ ದೇಶಿ ಸಂಘ, ಪುಸ್ತಕ ಗಚ್ಛಕ್ಕೆ ಸೇರಿದ ದೇವೇಂದ್ರ ಮುನಿಗಳ ನಿಷಧಿ ಶಾಸನ. ಈ ಶಾಸನದ ಉಪಲಬ್ಧ ಪಠ್ಯದಲ್ಲಿ ಅದು ನಿಷಧಿ ಶಾಸನವೆಂದು ಹೇಳಲು ಯಾವ ಆಧಾರಗಳೂ ಇಲ್ಲ. ಆದರೆ ಶಾಸನದ ಶಿಲ್ಪ ಮತ್ತು ಶಾಸನ ಸ್ತಂಭದ ಆಕಾರಗಳ ಆಧಾರದಿಂದ ಇದು ನಿಷಧಿ ಶಾಸನವಿರಬಹುದೆಂದು ಊಹಿಸಬಹುದು.

೫. ೧) ದಿವಸ್ಯ ಯುಕ್ತಿಸ್ಯಕ್ತಿ ಪಯೋನಿಧೇಃ
೨) * * ವಾದೀಭಸಿಂಹಸ್ಯ ಸಿಂ
೩) * ಶ್ಚಕ್ರಿ ನಿರವದ್ಯವಲ್ಲಭಕ್ತಭೃತ್ಯಾಳ
೪) ಯ ನೂತನಯಶ್ಚಿನ್ತಾಮಣಿರತ್ಥೀ ವಾಂಸಮ
೫) ಜನಿಸ್ವಚ್ಛನ್ದಮ.....................

ಈ ಶಾಸನದಲ್ಲಿ ೫ ಸಾಲುಗಳಿವೆ. ಎರಡನೇ ಸಾಲಿನಲ್ಲಿ ಮೊದಲ ಎರಡಕ್ಷರ ಹಾಗೂ ಮೂರನೇ ಸಾಲಿನಲ್ಲಿ ಮೊದಲ ಅಕ್ಷರ ಹಾಗೂ ಐದನೇ ಸಾಲಿನಲ್ಲಿ ಆರನೇ ಅಕ್ಷರದ ನಂತರದ ಭಾಗ ನಷ್ಟವಾಗಿದೆ. ಶಾಸನ ಸ್ತಂಭವು ಒಂದೂವರೆ ಅಡಿ ಅಗಲ ಹಾಗೂ ಎರಡೂವರೆ ಅಡಿ ಎತ್ತರವಾಗಿದೆ. ಈ ಶಾಸನವು ವಾದೀಭಸಿಂಹ ಎಂಬ ಮುನಿಯನ್ನು ಉಲ್ಲೇಖಿಸುತ್ತದೆ. ಬಹುಶಃ ಆತನ ನಿಷಧಿ ಶಾಸನವಿರಬಹುದು. ಲಿಪಿಯ ದೃಷ್ಟಿಯಿಂದ ಈ ಶಾಸನವು ಸುಮಾರು ಹನ್ನೊಂದನೆಯ ಶತಮಾನದ್ದಾಗಿರಬಹುದೆಂದು ಊಹಿಸಬಹುದು.

೬. ೧) ........................................
೨) ಯಣಂ ನೀತಿಪಾರಾಯಣತ
೩) ದೀಯಕಮಲ್ಲಂ ಕೀರ್ತಿಗೆ ನಲ್ಲಂ
೪) ಗಣ್ಡ ಪ್ರಚಣ್ಡಂ ಪರಚ್ಛೇದಿಗಣ್ಡಂ
೫) ಜಿನ ಪದಾಂಭೋಜ ಭೃಂಗ ಶ್ರೀಮ
೬) ದ್ದಣ್ಡನಾಯಕ ಗುಣದೀಪಾದೀಶಂ
೭) ಶಕವರ್ಷ ೯೫೩ನೆಯ ಪ್ರಜೋತ್ಪತ್ತಿ
೮) ಸಂವತ್ಸರದ ಮಾಘಶುದ್ಧಂತದೀ
೯) ಯ ಮಂಗಳವಾರದನ್ದು ವೀರಸ
೧೦) ನ್ನ್ಯಸನ ವಿಧಾನದಿಂ ರತ್ನತ್ರಯಂ
೧೧) ಗಳ ನಾರಾಧಿಸಿದಂ ||[1]

ಈ ಶಾಸನದಲ್ಲಿ ಹನ್ನೊಂದು ಸಾಲುಗಳಿವೆ. ಮೊದಲ ಸಾಲು ಸಂಪೂರ್ಣವಾಗಿ ನಷ್ಟವಾಗಿದೆ. ಇದು ಗುಣದೀಪಾದೀಶನೆಂಬ ದಂಡನಾಯಕನೊಬ್ಬನ ನಿಷಧಿ ಶಾಸನ.

ಶಕವರ್ಷ ೯೫೩ನೆಯ ಪ್ರಜೋತ್ಪತ್ತಿ ಸಂವತ್ಸರದ ಮಾಘ ಶುದ್ಧ ಮಂಗಳವಾರದಂದು ನೀತಿಪಾರಾಯಣ, ಕೀರ್ತಿಗೆನಲ್ಲ, ಗಂಡಪ್ರಚಂಡ, ಪರಚ್ಛೇದಿಗಂಡ, ಜಿನ ಪಾದಾಂಭೋಜಭೃಂಗ ಎಂಬ ಬಿರುದಾಂಕಿತನಾದ ದಂಡ ನಾಯಕ ಗುಣದೀಪಾದೀಶನು ವೀರಸನ್ನ್ಯಸನ ವ್ರತದಿಂದ ರತ್ನತ್ರಯಂಗಳನ್ನು ಆರಾಧಿಸಿದನು ಎಂದು ಶಾಸನ ಉಲ್ಲೇಖಿಸುತ್ತದೆ. ಅಂದರೆ ಆತ ಸಲ್ಲೇಖನ ವ್ರತದಿಂದ ಮುಡಿಪಿದನು ಎಂದರ್ಥ. ಈ ಶಾಸನದಲ್ಲಿ ಉಲ್ಲೇಖಿತ ವಾದ ದಿನವು ಕ್ರಿ. ಶ. ೧೦೩೧ನೆಯ ನವೆಂಬರ್ ೩೦ ಮಂಗಳವಾರಕ್ಕೆ ಸರಿಹೊಂದುತ್ತದೆ. ಈ ಶಾಸನೋಲ್ಲೇಖಿತನಾದ ಗುಣದೀಪಾದೀಶ ದಂಡನಾಯಕನ ಬಗ್ಗೆ ಆ ಕಾಲದ ಮತ್ತಾವುದೇ ಶಾಸನಗಳಲ್ಲಿ ವಿವರಗಳು ದೊರೆತಿಲ್ಲದಿರುವುದರಿಂದ ಆತನ ಬಗ್ಗೆ ಮತ್ತಾವುದೇ ಐತಿಹಾಸಿಕ ವಿಷಯಗಳನ್ನು ತಿಳಿಯುವುದು ಅಸಾಧ್ಯವಾಗಿದೆ.

ಜೈನಧರ್ಮೀಯರು ಅವರು ಶ್ರಾವಕರಾಗಲೀ ಅಥವಾ ಮುನಿ, ಕಂತಿಯರಾಗಲೀ ಅವರೆಲ್ಲರೂ ತಮ್ಮ ಕರ್ಮಗಳನ್ನು ಕ್ಷಯಗೊಳಿಸಲು ಪೂರ್ವಾಚಾರ್ಯರು ವಿವರಿಸಿರುವ ರೀತಿಯಲ್ಲಿ ಜಪ–ತಪಗಳನ್ನು ಆಚರಿಸುತ್ತಾರೆ. ಕ್ರಮೇಣ ಶರೀರದ ಮೇಲಿನ ಮಮಕಾರವನ್ನು ತೊರೆಯುತ್ತಾರೆ ಹಾಗೂ ಮರಣವು ಸಮೀಪಿಸಿದಾಗ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಪರಿಶುದ್ಧ ಭಾವನೆಯಿಂದ

1 ಈ ಶಾಸನದ ಪಡಿಯಚ್ಚನ್ನು ತೆಗೆದುಕೊಟ್ಟ ಸಹೋದರಿ ಎಸ್. ವೈ. ನಿರ್ಮಲ ಅವರ ಸಹಾಯ ಸ್ಮರಣೀಯ.

ತಮ್ಮ ಶರೀರವನ್ನು ತ್ಯಾಗ ಮಾಡುವುದು ಶ್ರೇಷ್ಠವಾದ ಮರಣವೆಂದು ಭಾವಿಸುತ್ತಾರೆ.

ಈ ಸಲ್ಲೇಖನ ವ್ರತವನ್ನು ಈ ಕೆಳಗಿನ ಸಂದರ್ಭಗಳಲ್ಲಿ ಸ್ವೀಕರಿಸಬಹುದೆಂಬುದಾಗಿ ಪೂರ್ವಾಚಾರ್ಯರು ತಿಳಿಸಿದ್ದಾರೆ.

'ಉಪಸರ್ಗೇ ದುರ್ಭಿಕ್ಷೇ ಜರಸಿರುಜಾಯಾಂ ಚ
ನಿಃಪ್ರತಿಕಾರೇ ।
ಧರ್ಮಾಯ ತನು ವಿಮೋಚನಮಾಹುಃ
ಸಲ್ಲೇಖನಾಮಾರ್ಯಃ ॥[2]

ಅಂದರೆ ಉಪಸರ್ಗ, ಕ್ಷಾಮ, ಮುಪ್ಪು ಹಾಗೂ ವಾಸಿ ಮಾಡಲಾಗದಂತಹ ರೋಗಗಳು ಬಂದಾಗ ಧರ್ಮರಕ್ಷಣೆಗೋಸ್ಕರ ಶರೀರವನ್ನು ತ್ಯಾಗ ಮಾಡುವುದಕ್ಕೆ ಸಲ್ಲೇಖನ ವ್ರತದಲ್ಲಿ ಅವಕಾಶವಿದೆ.

ಈ ರೀತಿ ಸಲ್ಲೇಖನ ವ್ರತದಿಂದ ಮುಡಿಪಿದವರ, ಅಂದರೆ ಮರಣ ಹೊಂದಿದವರ ಸ್ಮಾರಕಗಳಿಗೆ ನಿಷಧಿಗಳೆಂದು ಹೆಸರು.

"ಶಾಸನಗಳಲ್ಲಿ ನಿಶೀಧಿಕಾ, ನಿಶಿಧಿ, ನಿಶಿದಿ, ನಿಶಿದಿಗೆ, ನಿಶೀಧಿಗೆ, ಶಿಷದ್ಯಿಕಾ, ನಿಷಧಿ, ನಿಷಿಧಿ, ನಿಶಿದ್ಯಾಲಯ, ನಿಷಿದ್ಧಿ, ನಿಷಿಧಿಗೆ, ನಿಷ್ಯದಾಂ, ನಿಸಿದಿ, ನಿಸ್ಸಿಗೆ, ನಿಸಿದ್ದಿಗೆ ಇತ್ಯಾದಿ ಹಲವಾರು ರೂಪಗಳಲ್ಲಿ ಈ ಪದವು ಕಂಡು ಬರುತ್ತದೆ. ಕೊಪ್ಪಳದಲ್ಲಿ 'ಚಂದ್ರಸೇನದೇವರ ಗುಡ್ಡ ಚಂದ್ರಪ್ಪನ ನಿಸಿದಿ'[3] 'ಸರ್ವ್ವನನ್ದಿ ಭಟಾರ'[4] ಶ್ರೀಮದ್ದೇವೇಂದ್ರ ಕೀರ್ತಿ ಭಟ್ಟಾರಕರು[5] ಜಟಾಸಿಂಗನಂದಿ ಆಚಾರ್ಯ[6] ಮುಂತಾದ ಹಲವಾರು ನಿಷಧಿ ಶಾಸನಗಳು ಪತ್ತೆಯಾಗಿದ್ದವು. ಪ್ರಾಚೀನ ಕರ್ನಾಟಕದ ಅತ್ಯಂತ ಪ್ರಮುಖ ಜೈನ ಕ್ಷೇತ್ರಗಳಲ್ಲಿ ಒಂದಾಗಿದ್ದ ಕೊಪ್ಪಳದಲ್ಲಿ ಇಷ್ಟು ಕಡಿಮೆ ಸಂಖ್ಯೆಯ ಜೈನ ಶಾಸನಗಳು ದೊರೆತಿರುವುದು ಆಶ್ಚರ್ಯಕ್ಕೆ ಕಾರಣವಾಗಿತ್ತು. ಆದರೆ ಈಗ ಕೋಟೆ ಗೋಡೆಯ ಕುಸಿದು ಹೆಚ್ಚಿನ ಸಂಖ್ಯೆಯಲ್ಲಿ ಜೈನ ಶಾಸನಗಳು ತುಂಡು ತುಂಡಾಗಿ ದೊರೆತಿರುವುದರಿಂದ ಬೇರೆ ಮತದವರ ಪ್ರಾಬಲ್ಯದ ಸಮಯದಲ್ಲಿ ಇಲ್ಲಿಯ ಜೈನ ಬಸದಿಗಳು ಹಾಗೂ ಶಾಸನಗಳು ಹಾಳಾಗಿರಬಹುದೆಂದು ಊಹಿಸಬಹುದು. ಪ್ರಸ್ತುತ ಲೇಖನದಲ್ಲಿ ಇಲ್ಲಿಯ ಆರು ಅಪ್ರಕಟಿತ ನಿಷಧಿ ಶಾಸನಗಳ ಬಗ್ಗೆ ಮಾತ್ರ ನಾವು ಅಧ್ಯಯನ ನಡೆಸಿದ್ದೇವೆ. ಉಳಿದ ಅಪ್ರಕಟಿತ ಶಾಸನಗಳ ಬಗ್ಗೆಯೂ ಅಧ್ಯಯನ ನಡೆಸಿ ಅವುಗಳನ್ನು ಪ್ರಕಟಿಸಿದರೆ ಮತ್ತಷ್ಟು ಹೊಸ ವಿಷಯಗಳು ಹೊರಬರಬಹುದು.[7]

---

2 ಸಮಂತಭದ್ರಆಚಾರ್ಯ : ರತ್ನಕರಂಡಕ ಶ್ರಾವಕಾಚಾರ, ಶ್ಲೋಕ ೧೨೨

3 ಶಾಸನ ಪರಿಚಯ : (ಸಂ. ಪಿ. ಬಿ. ದೇಸಾಯಿ ; ಧಾರವಾಡ, ೧೯೫೭) ಕೊಪ್ಪಳ ೧೧ (ಕ್ರಿ. ಶ. ೧೦ನೆಯ ಶತಮಾನ)

4 ಅದೇ ಕೊಪ್ಪಳ ೧೨ (ಕ್ರಿ. ಶ. ೮೮೧)

5 ಅದೇ ೧೩ (ಕ್ರಿ. ಶ. ೧೧ನೆಯ ಶತಮಾನ)

6 ಅದೇ ೧೪ (ಕ್ರಿ. ಶ. ಸು. ೧೦ನೆಯ ಶತಮಾನ)

7 ಈ ಲೇಖನಕ್ಕಾಗಿ ಕೊಪ್ಪಳದಲ್ಲಿ ಪಡಿಯಚ್ಚುಗಳನ್ನು ತೆಗೆಯುವ ಕಾರ್ಯದಲ್ಲಿ ನೆರವಾದ ಸರ್ವಶ್ರೀ ಬಿ. ಆರ್. ತುಬಾಕಿ, ಅಲ್ಲಮಪ್ರಭು ಬೆಟ್ಟದೂರ, ಗುರುಗಳಾದ ಪಿ.ವಿ. ಕೃಷ್ಣಮೂರ್ತಿ ಹಾಗೂ ಸಹೋದರಿ ನಿರ್ಮಲಾ ಅವರ ಸಹಾಯ ಸ್ಮರಣೀಯ.

ಜೆ. ಟಿ. ಜಯರಾಮಯ್ಯ*
ಕೆ. ಎಂ. ಕೃಷ್ಣಕುಮಾರ್ ಯಾದವ್**

# "ಅಮೃತೂರಿನ ಅಪ್ರಕಟಿತ ಶಾಸನ"

ತುಮಕೂರು ಜಿಲ್ಲೆ ಕುಣಿಗಲ್ ತಾ॥ ಅಮೃತೂರಿನಲ್ಲಿ ಈ ಶಾಸನವನ್ನು ಇತ್ತೀಚಿಗೆ ಬೆಳಕಿಗೆ ತರಲಾಗಿದೆ. ಅಮೃತೂರು ಹೋಬಳಿ ಕೇಂದ್ರವಾಗಿದೆ. ಬಿ.ಎಲ್. ರೈಸ್‌ರವರ ಕಾಲದಲ್ಲಿ ಇಲ್ಲಿಯ ಎರಡು ಶಾಸನಗಳು ಎ.ಕ. ೧೨ನೇ ಸಂಪುಟದಲ್ಲಿ ಪ್ರಕಟವಾಗಿವೆ.

ಪ್ರಸ್ತುತ ಈ ಶಾಸನವು ಅಮೃತೂರಿನ ದೊಡ್ಡಕೆರೆಯ ಬಯಲಿನಲ್ಲಿರುವ ಕುಂಟಪ್ಪನ ಗೂಳಯ್ಯನ ಗದ್ದೆಯ ಬದುವಿನಲ್ಲಿ ನೆಡಲಾಗಿದೆ.

ವಿಜಯನಗರ ಕಾಲದ ಈ ಶಾಸನವನ್ನು ಬರೆದಿರುವುದು ಒಂದು ವೀರಗಲ್ಲಿನ ಹಿಂಬದಿಯಲ್ಲಿ. ತುರುಗಾಳಗವನ್ನು ಸುಂದರವಾಗಿ ಕೆತ್ತಿರುವ ಈ ಹಳೆಯ ವೀರಗಲ್ಲಿನ ಮುಂಭಾಗದಲ್ಲಿ ಶಾಸನವಿಲ್ಲ. ಬಹುಶಃ ಈ ಶಾಸನ ಲಿಪಿಕಾರನು ತಕ್ಷಣಕ್ಕೆ ದೊರೆತ ಈ ವೀರಗಲ್ಲಿನ ಹಿಂಬದಿಯಲ್ಲಿ ಈ ದಾನಶಾಸವನ್ನು ಬರೆದಿದ್ದಾನೆ.

ವಿಜಯನಗರ ಕಾಲದ ಶೈಲಿಯಲ್ಲಿರುವ ಈ ಶಾಸನದಲ್ಲಿ ೧೩ ಸಾಲುಗಳಿವೆ. ಈ ಕಲ್ಲಿನ ಉದ್ದ ೪೮ ಇಂಚುಗಳು ಮತ್ತು ಅಗಲ ೩೬ ಇಂಚುಗಳು,ಅಕ್ಷರಗಳು ೨ಇಂಚುಗಳಷ್ಟು ಗಾತ್ರವುಳ್ಳದ್ದಾಗಿವೆ. ಶಾಸನದ ಕೊನೆಯಲ್ಲಿ ವರಹ ಚಿತ್ರವನ್ನು ಸುಂದರವಾಗಿ ಮತ್ತು ಸ್ಪಷ್ಟವಾಗಿ ಬಿಡಿಸಲಾಗಿದೆ.

### ಶಾಸನ ಪಾಠ

೧ ಸುಬಮಸ್ತು ಸ್ವಸ್ತಿಶ್ರೀ ಜಯಠಾಭ್ಯುದಯ ಶಾಲಿವಾಹನ ಶಕ...........
೨ ಸಾವಿರದ ೧೪೦೬ನೆಯ ಸೋಬಕ್ರತು ಸಂವತ್ಸರದ ಕಾರ್ತಿಕ ಸು ೧೦ಲು
೩ ಬನುಗುಂಡಿಯಾ ಚಾವಡಿಗೆ ಸಲುವ ಅಕ್ತಕೂರ ಅಗ್ರಹಾರದ ನಾರಸಿಹ್ಮ
೪ ಸಮುದ್ರ........ನಾಥ ಸಮುದ್ರದ ಎರಡು ಕೆರೆಯ ಜೀರ್ನೋದಾರಣವ
೫ ಮಾಡುವುದಕೆ ನಾರಸಿಹ್ಮ ಒಡೆಯರ ಪ್ರಧಾನ ವಿರೂಪಾಕ್ಷ ಒಡೆಯರು
೬ ನಾರಸಿಹ್ಮನಾಥ ಸಮುದ್ರದ ಕೆರೆಯ ಕೆಳಗೆ ಕೂಡುದಾರಿಯ ಸ್ಥಳದಲ್ಲಿ........
೭ ಯ ಬಿಟ್ಟ........ಗದೆ........ಬಂಡಿಗಳು ... ಅಯಗಂಡುಗ ಗದೆಯನು........
೮ ಕುಳ .. ಡಿ........ಗ್ರಹಣ ಕಾಲದಲ್ಲೂ ಎರಡು ಕೆರೆಯ ಜಿರ್ನೋದಾರಣ
೯ ಮಾಡುವುದಕೆ ಬಂಡಿಗಳು ಐಯದು............ಇಂತಾಗಿ ಅರೊಬ್ಬರು ತಪ್ಪಿದರು
೧೦ ಅರಸುಗಳು ತಪ್ಪಿದರು ತಂಮ ಮಾತಾ ಪಿತೃಗಳನ್ನು ಕವಿ

* ಇತಿಹಾಸ ಅಧ್ಯಾಪಕರು, ವಿವೇಕಾನಂದ ಕಾಲೇಜು ರಾಜಾಜಿನಗರ, ಬೆಂಗಳೂರು-೫೬೦೦೩೨
** ನಂ. ೨೫, ಕಾವಲ್ ಭೈರಸಂದ್ರ, ಆರ್. ಟಿ. ನಗರ ಅಂಚೆ, ಬೆಂಗಳೂರು-೫೬೦೦೩೨

೧೧ ಲೆಯನು ವಾರಣಾಸಿಯ ಕಡಿಸಿದ ಪಾಪಕೆ ಹೋಹರು ಯಿಂತಪುದಕೆ ವಿರೂಪಾ
೧೨ ಕ್ಷ ಒಡೆಯರ ಸುಂಕದ ಅಧಿಕಾರಿ ಜಂನಯ್ಯಾರಸರ ಬರಹ ಮಹಾಜನಂಗಳ ವೊಪ್ಪ
೧೩ ............ರಸಿದವರು.

ಶಾಲಿವಾಹನ ಶಕವರುಷ ೧೪೦೬ನೆಯ ಸೋಬಕೃತ ಸಂವತ್ಸರವು ಕ್ರಿ.ಶ. ೧೪೮೪ರ ಅಕ್ಟೋಬರ ತಿಂಗಳ ೧ನೇ ತಾರೀಖು ಬುದವಾರ(ಪೌರ್ಣಿಮೆ)ಕ್ಕೆ ಸರಿಹೊಂದುತ್ತದೆ. (೧. ಸ್ವಾಮಿ ಕಣ್ಣು ಪಿಳ್ಳೈರವರು 'ಇಂಡಿಯನ್ ಎಫಿಮರೀಸ್' ಸಂಪುಟ V, ಪುಟ ೧೭೧)

[ಕ್ರಿ.ಶ. ೧೪೮೪ರ ಕಾಲಕ್ಕೆ ವಿಜಯನಗರದ ಸಂಗಮ ವಂಶದ ಕೊನೆಯ ರಾಜ ೩ನೇ ವಿರೂಪಾಕ್ಷನ (೧೪೬೫–೧೪೮೫) ಕಾಲಕ್ಕೆ ಸರಿಹೊಂದುತ್ತದೆ.]

ಈ ಶಾಸನದಲ್ಲಿ ಇಂದಿನ ಈ ಅಮ್ಮತೂರನ್ನು ಅತಕೂರು ಮತ್ತು ನಾರಸಿಂಹಸಮುದ್ರ ಎಂದು ಕರೆಯಲಾಗಿದೆ. ಅಮ್ಮತೂರಿನಲ್ಲಿ ದೊರೆತಿರುವ ಮತ್ತೊಂದು ಶಾಸನದಲ್ಲಿಯೂ ಸಹ ಅತಕೂರು ಎಂಬ ಉಲ್ಲೇಖವಿದೆ. (ಎ.ಕ. ೧೨, ಪುಟ ೧೦೭ ಶಾಸನ ಸಂಖ್ಯೆ ೪೦ ಮತ್ತು ೪೨)

ಕೆರೆ ಕಟ್ಟುವುದು ಸಾಮಾನ್ಯ. ಆದರೆ ಅವುಗಳ ರಕ್ಷಣೆಗಾಗಿ ಮತ್ತು ನಿರ್ವಹಣೆಗಾಗಿ ದಾನದತ್ತಿಯನ್ನು ನೀಡಿರುವುದು ಗಮನಿಸಬೇಕಾದ ಅಂಶವಾಗಿದೆ.

ಅಮ್ಮತೂರಿನಲ್ಲಿ ಎರಡು ಕೆರೆಗಳಿವೆ (ದೊಡ್ಡಕೆರೆ ಮತ್ತು ಚಿಕ್ಕೆರೆ) ಈ ಎರಡು ಕೆರೆಗಳ ದುರಸ್ತಿಗಾಗಿ ಬೇಕಾಗುವ ಬಂಡಿಗಳು ಮತ್ತು ಬಂಡಿಗಳು ನಿರ್ವಹಣೆಗಾಗಿ ಕ್ರಮವಾಗಿ ಐಗಂಡುಗ ಬತ್ತದ ಗದ್ದೆಯನ್ನು ದಾನವಾಗಿ ಬಿಡಲಾಗಿದೆ.

ವಿಜಯನಗರದ ರಾಜ ನಾರಸಿಂಹ ಒಡೆಯರ ಪ್ರಧಾನರಾಗಿದ್ದ ವಿರೂಪಾಕ್ಷ ಒಡೆಯರು ಈ ಊರಿನ ಕೆರೆಯ ಕೆಳಗೆ ಕೊಡುದಾರಿಯ ಸ್ಥಳದಲ್ಲಿ ಐಗಂಡುಗ ಗದ್ದೆಯನ್ನು ದಾನವಾಗಿ ಬಿಟ್ಟಿದ್ದಾರೆ. ಆದರೆ ದಾನ ಪಡೆದವನ ಉಲ್ಲೇಖವಿಲ್ಲ.

ಶಾಸನದ ಕೊನೆಯಲ್ಲಿ ಶಾಪಾಶಯದ ನಂತರ ವಿರೂಪಾಕ್ಷ ಒಡೆಯರ ಸುಂಕದ ಅಧಿಕಾರಿ ಜಂನಯ್ಯಾರಸರ ಬರಹ ಮತ್ತು ಇದಕ್ಕೆ ಮಹಾಜನಂಗಳ ವೊಪ್ಪ. ಈ ಶಾಸನದ ಕಾಲಕ್ಕೆ ಅಮ್ಮತೂರು ಒಂದು ಅಗ್ರಹಾರವಾಗಿತ್ತು. ಆದರೆ 'ಬನುಸಂದಿಯ ಚಾವಡಿ'ಯ ಬಗ್ಗೆ ಈ ತಾಲ್ಲೋಕಿನ ಯಾವುದೇ ಶಾಸನದಲ್ಲಿ ಉಲ್ಲೇಖವಿರುವುದು ಕಂಡುಬರುವುದಿಲ್ಲ.

[ಈ ಶಾಸನದ ಪ್ರತಿ ತೆಗೆಯಲು ಸಹಾಯ ಮಾಡಿದ ಗೆಳೆಯ ಹನುಮನಾಯಕ ಮತ್ತು ಶಾಸನ ಪರಿಷ್ಕರಿಸುವಲ್ಲಿ ನೆರವು ನೀಡಿದ ಗುರುಳಾದ ಡಾ॥ ದೇವರಕೊಂಡಾರೆಡ್ಡಿಯವರಿಗೆ ನಮ್ಮ ಕೃತಜ್ಞತೆಗಳು]

ಹನುಮನಾಯಕ*

# ಅರಸೀಕೆರೆ ತಾಲ್ಲೋಕಿನ ಎರಡು ಅಪ್ರಕಟಿತ ಶಾಸನವುಳ್ಳ ವೀರಗಲ್ಲುಗಳು

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೋಕು ಭಾಣಾವರ ಹೋಬಳಿಯ ಎರಡು ಗ್ರಾಮಗಳಾದ ಬೇಡರಹಳ್ಳಿ ಮತ್ತು ಬಸವರಾಜಪುರಗಳಲ್ಲಿ ಎರಡು ಅಪ್ರಕಟಿತ ಶಾಸನವುಳ್ಳ ವೀರಗಲ್ಲುಗಳಿವೆ. ಈ ಎರಡು ಗ್ರಾಮಗಳು ಬೆಂಡೆಕೆರೆ ಮತ್ತು ಗರುಡನಗಿರಿ ರಸ್ತೆಯ ಆಸುಪಾಸಿನಲ್ಲಿವೆ.

ಮೊದಲನೆಯ ಶಾಸನವುಳ್ಳ ವೀರಗಲ್ಲು ಬಸವರಾಜಪುರದ ಪೂರ್ವದಲ್ಲಿ ಸುಮಾರು ಒಂದು ಕಿ. ಮೀ. ದೂರದಲ್ಲಿರುವ ಮಹದೇಶ್ವರ ದೇವಾಲಯದ ಬಲಭಾಗದಲ್ಲಿದೆ. ಇದರಲ್ಲಿ ಒಟ್ಟು ಒಂಭತ್ತು ಸಾಲುಗಳಿವೆ. ಆದರೆ ಇದರಲ್ಲಿ ಯಾವುದೇ ಯುದ್ಧದ ಶಿಲ್ಪಗಳಿಲ್ಲ. ಮೇಲ್ಭಾಗದಲ್ಲಿ ಮಠಾತ್ರ ಕಾಳಾಮುಖಿ ಪಂಥದ ಮುನಿಯ ಶಿಲ್ಪವಿದೆ. ಇದರ ಬಲಭಾಗವು ಐದನೇ ಸಾಲಿನ ನಂತರ ಸೀಳಿಹೋಗಿರುವುದರಿಂದ ಇದರ ಪೂರ್ಣ ಪಾಠ ಕೊಡುವುದು ಕಠಿಣವಾಗಿದೆ.

ಇದು ಸುಮಾರು ಎರಡೂವರೆ ಅಡಿ ಎತ್ತರ, ಒಂದೂವರೆ ಅಡಿ ಅಗಲ ಮತ್ತು ೫ ಅಂಗುಲ ದಪ್ಪವಿದೆ. ಇದರ ಪಕ್ಕದಲ್ಲಿಯೇ ಇನ್ನೊಂದು ಶಾಸನೋಕ್ತ ವೀರಗಲ್ಲು ಇದೆ. ಆದರೆ ಇದರ ಅಕ್ಷರಗಳು ಬಹುತೇಕ ಸವೆದು ಹೋಗಿವೆ.

## ಶಾಸನದ ಪಾಠ

೧. ಸ್ವಸ್ತಿಶ್ರೀ ಮನ್ಮಹಾಮಂಡಳೇಶ್ವರ ತಳಕಾಡುಗೊಂ
೨. ಡ ಗಂಡ ಪ್ರತಾಪ ಹೊಯಿಸಣ ವೀರಬಲ್ಲಾಳ ದೇ
೩. ವ ಸುಖದಿಂ ರಾಜ್ಯಂಗೆಯ್ಗೆ ! ಸಖ ವರುಷ ಸಾಸಿರ
೪. ದ ನೂಱಮೂವತ್ತೇಳನೆಯ ವಿಭವ ಸಂವತ್ಸರದ ಚೈ
೫. ತ್ರ ಸುದ್ಧ ತದಿಗೆ ಬೆಸಿತವಾರದಂದು [ಸ] ದಂಡು
೬. ಮಹದೇವ ಸೆಟ್ಟಿಯ ಮಗ ಸಂ........... [ಡ ಅಥವಾ ಳ] ಸ
೭. ಕಾದಿ ಸತ್ತ ಕಚಗಾಱತೆ .. ಗ....ಯು
೮. ದೊರೆ ಭಟ್ಟ (ವು)ದಕೆ ಸಲ್ಲಿಸಿಹ ವೀರ(ಗಲ್ಲು)
೯. ರ್ವತಿ........ಚಮುವತಃ....ವರ

* ಇತಿಹಾಸ ಅಧ್ಯಾಪಕ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ-೫೭೪ ೧೯೯

## ಸಾರಾಂಶ

ಹೊಯ್ಸಳ ದೊರೆ ವೀರಬಲ್ಲಾಳನು ರಾಜ್ಯಭಾರ ಮಾಡುತ್ತಿದ್ದಾಗ ಮಹೇದೆವಸೆಟ್ಟಿಯ ಮಗ ಕಾಳಗವೊಂದರಲ್ಲಿ ಹೋರಾಡಿ ಸತ್ತನು. ಮಹದೇವಸೆಟ್ಟಿಯು ಸತ್ತಂತ ತನ್ನ ಮಗನ ಸ್ಮರಣಾರ್ಥವಾಗಿ ವೀರಗಲ್ಲನ್ನು ನಿಲ್ಲಿಸಿದನು.

ಈ ಶಾಸನದಲ್ಲಿ ಎರಡು ಪ್ರಮುಖ ಸಮಸ್ಯೆಗಳು ಕಂಡುಬರುತ್ತವೆ. ಮೊದಲನೆಯದಾಗಿ ಈ ಶಾಸನದಲ್ಲಿ ಉಕ್ತವಾಗಿರುವ ಸಾಸಿರದ ನೂರಮುವತ್ತೇಳನೆಯ ವಿಭವ ಸಂವತ್ಸರವು ಸ್ವಾಮಿಕಣ್ಣುಪಿಳ್ಳೆಯವರ ಎಫಿಮರೀಸ್‌ಗೆ ಸರಿಹೊಂದುವುದಿಲ್ಲ. ಶಕವರ್ಷ ೧೧೩೭ನ್ನು ಗಣನೆಗೆ ತೆಗೆದುಕೊಂಡರೆ ಯುವ ಸಂವತ್ಸರ ಬರುತ್ತದೆ. ಇದು ಕ್ರಿ. ಶ. ೧೨೧೫ ಮಾರ್ಚ್ ೭ ಗುರುವಾರಕ್ಕೆ ಸಮನಾಗುತ್ತದೆ. ವಿಭವ ಸಂವತ್ಸರವನ್ನು ಗಣನೆಗೆ ತೆಗೆದುಕೋಂಡರೆ ಶಕವರ್ಷ ೧೧೩೦ ಬರುತ್ತದೆ. ಇದು ಸಹ ಸರಿ ಹೊಂದುವುದಿಲ್ಲ. ಆದ್ದರಿಂದ ಈ ಶಾಸನದ ಕಾಲವು ಶಕವರ್ಷ ೧೧೩೬ ಭಾವ ಸಂವತ್ಸರವಾಗಿದ್ದು, ಇದು ಸ್ವಾಮಿ ಕಣ್ಣುಪಿಳ್ಳೆಯವರ ಪಂಚಾಂಗದ ಪ್ರಕಾರ ಕ್ರಿ.ಶ. ೧೨೧೫ ಮಾರ್ಚ್ ೩ ಗುರುವಾರಕ್ಕೆ ಸರಿಹೊಂದುತ್ತದೆ.[1] ಇಲ್ಲಿ ಶಾಸನದ ಲಿಪಿಕಾರ ಮತ್ತು ಖಂಡನಕಾರನು ಭಾವ ಸಂವತ್ಸರವನ್ನು ವಿಭವ ಎಂದು ತಪ್ಪಾಗಿ ಖಂಡರಿಸಿರುವುದು ತಿಳಿದುಬರುತ್ತದೆ.

ಎರಡನೆಯದಾಗಿ ಶಾಸನದಲ್ಲಿ ಉಕ್ತವಾಗಿರುವ ಶ್ರೀ ಮನ್ಮಹಾಮಂಡಳೇಶ್ವರ ಪದವು ಎರಡು ಅರ್ಥವನ್ನು ನೀಡುತ್ತದೆ. ಮೊದಲನೆಯದು ಮಹಾಮಂಡಳದ ಅಧಿಪತಿಯೆಂದು, ಎರಡನೆಯದಾಗಿ ಪ್ರಬಲ ಮಾಂಡಳೀಕ ದೊರೆಯೆಂದು ತಿಳಿದುಬರುತ್ತದೆ. ಈ ಶಾಸನದ ಕಾಲಕ್ಕಾಗಲೇ ವೀರ ಬಲ್ಲಾಳನು ಕಲ್ಯಾಣಿ ಚಾಲುಕ್ಯರನ್ನು ಸದೆಬಡಿದು ಸೇವುಣ ದೊರೆ ಬಿಲ್ಲಮನನ್ನು ಕ್ರಿ. ಶ. ೧೧೯೦ರಲ್ಲಿ ಸೊರಟೂರು ಯುದ್ಧದಲ್ಲಿ ಸೋಲಿಸಿ ಬೆಳ್ವೊಲ, ಬನವಾಸಿ ಪ್ರಾಂತ್ಯಗಳನ್ನು ವಶಪಡಿಸಿಕೊಂಡು ಹೊಯ್ಸಳ ರಾಜ್ಯವನ್ನು ಸಂಪೂರ್ಣವಾಗಿ ಕಲ್ಯಾಣಿ ಚಾಲುಕ್ಯರ ಹಿಡಿತದಿಂದ ವಿಮೋಚನೆಗೊಳಿಸಿ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದ್ದನು.[2] ಆದ್ದರಿಂದ ಇಲ್ಲಿ ಶ್ರೀ ಮನ್ಮಹಾಮಂಡಳೇಶ್ವರ ಎಂಬ ಪದವು ಮೊದಲನೆಯ ಅರ್ಥವನ್ನು ಕೊಡುತ್ತದೆ.

ಎರಡನೆಯ ಶಾಸನವು ಬೇಡರಹಳ್ಳಿಯಿಂದ ಪೂರ್ವದಲ್ಲಿ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಎತ್ತರವಾದ ಭೂಮಿಯನ್ನು ಸಮಮಟ್ಟ ಮಾಡುವಾಗ ಕಂಡುಬಂದಿದೆ. ಇದು ಸುಮಾರು ಐದು ಅಡಿ ಎತ್ತರ, ಎರಡೂವರೆ ಅಡಿ ಅಗಲ ಮತ್ತು ಮುಕ್ಕಾಲು ಅಡಿ ದಪ್ಪವಿದ್ದು ತುರುಗಾಳಗದ ಶಿಲ್ಪಗಳನ್ನೊಳಗೊಂಡಿದೆ. ಶಿಲ್ಪಗಳು ಮೂರು ಹಂತಗಳಲ್ಲಿವೆ. ಮೊದಲನೆಯ ಹಂತದಲ್ಲಿ ಇಬ್ಬರು ವೀರರು ತಮ್ಮ ತುರುಗಳನ್ನು ರಕ್ಷಿಸುವುದಕ್ಕೋಸ್ಕರ ವೀರಾವೇಶದಿಂದ ಹೋರಾಡುತ್ತಿರುವ ದೃಶ್ಯದ ಶಿಲ್ಪಗಳಿವೆ. ಇಲ್ಲಿ ವೀರರು ಬಿಲ್ಲನ್ನು ಹಿಡಿದು ಶತ್ರುಗಳನ್ನು ಎದುರಿಸುತ್ತಿದ್ದಾರೆ. ಶತ್ರುಗಳು ಬಿಟ್ಟಂತಹ ಬಾಣಗಳು ವೀರರ ಎದೆಯಲ್ಲಿ ನಾಟಿಕೊಂಡಿವೆ. ಆದರೂ ಸಹ ಅವರು ಶತ್ರುಗಳನ್ನು ತಮ್ಮ ಕಾಲಿನಿಂದ ತುಳಿದು ಮುನ್ನುಗ್ಗಿ ತಮ್ಮ ತುರುಗಳನ್ನು ವಾಪಸ್ಸು ಪಡೆದಿದ್ದಾರೆ. ಎರಡನೆಯ ಹಂತದಲ್ಲಿ ವೀರರನ್ನು ಪಲ್ಲಕ್ಕಿಯಲ್ಲಿ ಕರೆದೊಯ್ಯುತ್ತಿರುವುದು ಹಾಗೂ ಮೂರನೆಯ ಹಂತದಲ್ಲಿ ವೀರರು ಸ್ವರ್ಗಸ್ಥರಾಗಿರುವುದು ಮತ್ತು ಅವನ ಅಕ್ಕಪಕ್ಕದಲ್ಲಿ ಕಾಳಾಮುಖ ಪಂಥದ ಮುನಿ, ಚಾಮರ ಧಾರಿಗಳು ಮತ್ತು ಹಸುವಿನ ಶಿಲ್ಪಗಳು ಚೆನ್ನಾಗಿ ಮೂಡಿಬಂದಿವೆ.

ಈ ಶಾಸನದ ಒಂದು ಮತ್ತು ಮೂರನೇ ಹಂತದ ಎರಡು ಪಟ್ಟಿಕೆಗಳಲ್ಲಿ ಒಟ್ಟು ಹನ್ನೊಂದು ಸಾಲುಗಳ ಶಾಸನವಿದೆ. ಶಾಸನದ ಕಲ್ಲು ಭೂಮಿಯಲ್ಲಿ ಹುದುಗಿ ಹೋಗಿದ್ದರಿಂದ ಅದನ್ನು ತೆಗೆಯುವಾಗ ಹಾರೆಯ ಏಟುಗಳಿಂದಾಗಿ ಅಲ್ಲಲ್ಲಿ ಕುಳಿ ಬಿದ್ದಿವೆ ; ಜೊತೆಗೆ ಶಾಸನದ

1 L. D. Swamy Kannupillai : An Indian Ephemeries. A. D. 700 to 1799. Vol. IV p. 32.

2 Dr. P. B. Desai . History of Karnataka. Kannada Research Institute, Karnataka University, Dharwar:1970. P. 264.

ಅಕ್ಷರಗಳು ಅಲ್ಲಲ್ಲಿ ಸವೆದು ಹೋಗಿರುವುದರಿಂದ ಇದರ ಪೂರ್ಣ ಪಾಠ ಕೊಡುವುದು ಸಾಧ್ಯವಾಗಿಲ್ಲ. ಆದರೂ ಸಹ ಕಣ್ಣು ನಕಲಿನ ಸಹಾಯದಿಂದ ಸಾಧ್ಯವಾದಷ್ಟು ಪಾಠ ಕೊಡಲು ಪ್ರಯತ್ನಿಸಲಾಗಿದೆ.

### ಶಾಸನದ ಪಾಠ

೧. ಸ್ವಸ್ತಿ ಸ್ರೀ ಮಸುಮಹಾಮಂಡಳೇಶ್ವರ ಸ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪ

೨. ರಮೇಸ್ವರ ಪರಮಭಟ್ಟಾರಕ ಭುಜಬಳ ಚಕ್ರವರ್ತಿ

೩. ........ಅಸಹಾಯ ಸೂರ ಕೊಂಗಿನರಸ........ ಸನಿ

೪. ವಾರ ಸಿದ್ಧಿ ಗಿರಿದುರ್ಗ್ಗಮಲ್ಲ ಚಲದಂಕ ರಾಮ ಸತಿಪ್ಪಬಾರಿ

೫. ........ಶ್ರೀ ವೀರ ಸೋಮೇಶ್ವರ ದೇವ....ದ....ಸುಖಸಂಕಥಾ ವಿನೋದದಿಂ............ಣನೆ ಸುರಿಗೆ

೬. ಮವಿಲೆಣ್ಣಪ್ಪ ಸುಕ ಸಂಕಥಾ ವಿನೋದದಿಂದ ಪೃಥ್ವಿ ರಾಜ್ಯಂಗೆಯುತ್ತಮಿರೆ ಸಾರ್ಬರಿ ಸಂವತ್ಸರದ

೭. ಮಾರ್ಗ್ಗಸಿರ ಬ೧೦ . ಶ್ರೀಮದನಗ್ರಹಾರ ಕುಱುವಂಕದ ಕಾನ್ತಪ್ಪ.........ಲಾಕಸಹಳ್ಳಿ ಮದನಗ್ರಹಾರ

೮. ದ....ಸಮಗ........ಹರಳದ ... .. ೦ಗಳು....ಗಂಮಯ .......ದಗನಂನ್ನನು ಕು

೯. ವಂಕದ ತುರುಹರಿಯಲು ತಳಿತಿ........ವ.........ದಿ....ಆ ಗಾವುಂಡನು

೧೦. ವ....ವರು....ಕಟಿಕಟ್ಟೆಗೆ ಬಂದಲ್ಲಿ ಬಲ್ಲವನವ ಕಟಿಕಟ್ಟೆಯಲ್ಲಿ ಹೋದಾಗಲಿ ಬತ್ತಲೆಸಗಲತು

೧೧. ಚಂಮೋಜ

### ಸಾರಾಂಶ

ಈ ಶಾಸನದಲ್ಲಿ ಕಾಲವನ್ನು ನಿಖರವಾಗಿ ತಿಳಿಸದೇ ಸಂವತ್ಸರವನ್ನು ಉಲ್ಲೇಖಿಸಿದೆ. ಶಾಸನದಲ್ಲಿ ಉಕ್ತವಾಗಿರುವ ಸಾರ್ಬರಿ ಸಂವತ್ಸರದ ಮಾರ್ಗಸಿರ ಬ ೧೦ ಸ್ವಾಮಿ ಕಣ್ಣುಪಿಳ್ಳೆಯವರ ಪಂಚಾಂಗದ ಪ್ರಕಾರ ಶಕ ವರ್ಷ ೧೧೬೨ ಎಂದು, ಇದು ಕ್ರಿ.ಶ. ೧೨೪೦ ಡಿಸೆಂಬರ್ ೧೦ ಸೋಮವಾರಕ್ಕೆ ಸರಿಹೊಂದುತ್ತದೆ.[3]

ಕ್ರಿ. ಶ. ೧೨೪೦ರಲ್ಲಿ ಹೊಯ್ಸಳ ದೊರೆಯಾದ ಶ್ರೀ ವೀರ ಸೋಮೇಶ್ವರ ಸಾಮಾಂತಾಧಿಕಾರಿ ಮವಿಲೆಣ್ಣಪ್ಪನ ಅಧಿಕಾರಾವಧಿಯಲ್ಲಿ ಕುರುವಂಕ ಅಗ್ರಹಾರದ ಕಾನ್ತಪ್ಪನಿಗೂ ಮತ್ತು ಲಾಕಸಹಳ್ಳಿ ಅಗ್ರಹಾರದವರಿಗೆ ಕಲಹವುಂಟಾಗಿ ಈ ಕಾಳಗದಲ್ಲಿ ಲಾಕಸಹಳ್ಳಿಯವರು ಕುರುವಂಕದ ತುರುಗಳನ್ನು ಹೊಡೆದುಕೊಂಡು ಹೋದಾಗ ಅಲ್ಲಿಯ ಗಾವುಂಡರು ಶತ್ರುಗಳನ್ನು ಎದುರಿಸಿ ತುರುಗಳನ್ನು ವಾಪಸ್ಸು ಪಡೆದು ನಂತರ ಕಾಳಗದಲ್ಲಿ ಸತ್ತಿದ್ದಾರೆ.

ಶಾಸನವು ಹೆಚ್ಚು ತ್ರುಟಿತವಾಗಿರುವುದರಿಂದ ವೀರರು ತರುಗಾಳದಲ್ಲಿ ಸತ್ತಿರುವ ವಿಷಯ ತಿಳಿದುಬರುವುದಿಲ್ಲ. ಆದರೆ ಇಲ್ಲಿಯ ಶಿಲ್ಪಗಳ ಆಧಾರದಿಂದ ವೀರರು ಸತ್ತಿರುವುದು ಸ್ಪಷ್ಟವಾಗುತ್ತದೆ. ಈ ವೀರಗಲ್ಲನ್ನು ರಚಿಸಿದವನು ಚಂಮೋಜ.

ಈ ಶಾಸನದಲ್ಲಿ ಕಳಿಕಟ್ಟೆಯ ಪ್ರಸ್ತಾಪ ಬಂದಿದೆ. ಕಳಿಕಟ್ಟೆಯೆಂಬುದು ಬಾಣಾವರ ಹೋಬಳಿಯ ಈಗಿನ ಕಣಕಟ್ಟೆ. ಕಣಕಟ್ಟೆಯನ್ನು ಪ್ರಥಮ ಬಾರಿಗೆ ಕ್ರಿ. ಶ. ೮೯೦ರ ಅರಕೆರೆ ಶಾಸನವು ಕಳಿಕಟ್ಟೆಯೆಂದು ಕರೆದಿದೆ.[4] ಕ್ರಿ. ಶ. ೧೧, ೧೨, ೧೩ ಮತ್ತು ೧೪ನೆಯ ಶತಮಾನದ ಶಾಸನಗಳ ಪ್ರಕಾರ ಕಳಿಕಟ್ಟೆಯು ಮಗರೆ ಮುನ್ನೂರರ

---

3 L. D. Swamy Kannupillai : An Indian Ephemeries. A. D. 700 to 1799. Vol. VI. p. 83.

4 Epigraphia Carnatica, Vol. 15. Hassan Dist, Supplementary, M. H. Krishna.

ಮೊದಲ ಬಾಡವಾಗಿತ್ತು.[5] ಮಗರೆಯು ಸಿಂಧುಗೆರೆ ಮುನ್ನೂರರ ಅವಿಭಾಜ್ಯ ಅಂಗವಾಗಿತ್ತು. ಇದು ಈಗಿನ ಚಿಕ್ಕಮಗಳೂರು ಜಿಲ್ಲೆಯಲ್ಲಿದೆ. ಮಗರೆಯು ಈಗಿನ ಚಿಕ್ಕನಾಯಕನಹಳ್ಳಿ ಮತ್ತು ತಿಪಟೂರು ತಾಲ್ಲೋಕುಗಳನ್ನೊಳಗೊಂಡಿತ್ತು.

(ಈ ಲೇಖನದ ಶಾಸನಗಳ ಪಡಿಯಚ್ಚು ತೆಗೆಯುವ ಕಾರ್ಯದಲ್ಲಿ ಸಹಾಯ ನೀಡಿದ ಗೆಳೆಯ ಜೆ. ಟಿ. ಜಯರಾಮಯ್ಯ ಮತ್ತು ಪಾಠ ಸಿದ್ಧಪಡಿಸುವಲ್ಲಿ ನೆರವು ನೀಡಿದ ಗುರುಗಳಾದ ಡಾ॥ ದೇವರಕೊಂಡಾ ರೆಡ್ಡಿಯವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.)

5. Epigraphia Carnatica, Vol. 5. Arasikere, Inscription No. 48.

ಡಾ|| ಎಂ. ಬಿ. ನೇಗಿನಹಾಳ*

# ಸೇನವಾರರು ಮತ್ತು ಅವರ ಶಾಸನಗಳು

ಸೇನವಾರರು ಪ್ರಾಚೀನ ಕರ್ನಾಟಕದ ರಾಜ ಮನೆತನಗಳಲ್ಲಿ ಪ್ರಮುಖರಾದವರು. ಆದರೆ ಇವರನ್ನು ಕುರಿತು ಈವರೆಗೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಕ್ರಿ.ಶ. ಸು. ೭ನೆಯ ಶತಮಾನದಿಂದ ಕಂಡುಬರುವ ಇವರು, ಚಿಕ್ಕಮಗಳೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಧಾರವಾಡ ಜಿಲ್ಲೆಯ ಹಲವು ಪ್ರದೇಶಗಳಲ್ಲಿ ದೊರೆತಿರುವ ಕೆಲವು ಶಾಸನಗಳಲ್ಲಿ ಇವರನ್ನು ಕುರಿತ ಉಲ್ಲೇಖಗಳಿವೆ.

ಸೇನವ, ಸೇನವಾರ, ಸೇಣವಾರ, ಸೇನಾವರ, ಸೇನವಲ್ಲ ಮುಂತಾದ ರೂಪಗಳಲ್ಲಿ ಕಾಣುವ ಇವರ ಮನೆತನ ಹೆಚ್ಚಾಗಿ ಸಾಮಂತರ ಅಂತಸ್ತಿನದಾಗಿದ್ದುದು ಈವರೆಗೆ ಪ್ರಕಟಿತ ಶಾಸನಗಳಿಂದ ವ್ಯಕ್ತವಾಗುತ್ತದೆ. ಆದರೆ ಕ್ರಿ.ಶ. ೮ನೆಯ ಶತಮಾನದಲ್ಲಿ ಮಾತ್ರ ಇವರು ಮಹಾಮಂಡಲೇಶ್ವರರಾಗಿ ಪ್ರಕಟಗೊಳ್ಳುತ್ತಾರೆ. ಪಶ್ಚಿಮಘಟ್ಟ ಮತ್ತು ಪೂರ್ವದ ಕೆಲವು ಪ್ರದೇಶಗಳಲ್ಲಿ ಕಂಡುಬರುವ ಇವರು ಸೇಂದ್ರಕ–ಸಾಂತರರಂತೆ-ಆಳುಪರು ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಹಾಗೂ ಕಲ್ಯಾಣಿ ಚಾಳುಕ್ಯರ ಅಧೀನರಾಗಿ ಆಳುತ್ತಿದ್ದುದು ಶಾಸನ ಗಳಲ್ಲಿ ನಿರ್ದಿಷ್ಟವಾಗಿದೆ.

ಬಿ.ಎಲ್. ರೈಸರು ಇವರನ್ನು ಉಲ್ಲೇಖಿಸುವ ಕೆಲವು ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಕೆಲವು ಸಂಗತಿಗಳನ್ನು ಕಲೆ ಹಾಕಿದ್ದಾರೆ.[1] ಉದಾಹರಣೆಗೆ ಮುಂದಿನ ಉಲ್ಲೇಖಗಳನ್ನು ಇಲ್ಲಿ ಗಮನಿಸಬಹುದು.

೧. ಕೊಪ್ಪ–೩೭ನೆಯ ಶಾಸನ ಸು. ಕ್ರಿ.ಶ. ೬೯೦ ಇದರಲ್ಲಿ ಇವರ ಮನೆತನದ ಉಲ್ಲೇಖ ಮಾತ್ರ ವಿದ್ದು ಆಳುಪರು ಇವರ ಅಧಿರಾಜರಾಗಿದ್ದಾರೆ. ಆಳುಪ ಚಿತ್ರವಾಹನನ ಹೆಸರು ಇದರಲ್ಲಿದೆ.

೨. ಶಿಕಾರಿಪುರ–೨೭೮. ಕ್ರಿ.ಶ. ಸು. ೭೦೦ ಇದರಲ್ಲಿಯೂ ಇವರ ವಂಶನಾಮ ನಿರ್ದೇಶನ ವಿದ್ದು ಸೇನಾವಾರ ದೊರೆ ಭೂವರಕ್ಕೆ ಅರ್ಕೇಸರಿ ಎಂಬವನು ಮುಗುಂದ ನಾಡನ್ನಾಳುತ್ತಿದ್ದನು. ಬಾ.ಚಾ. ಚಕ್ರವರ್ತಿ ವಿನಯಾದಿತ್ಯನು ಇವನ ಅಧಿರಾಜನಾಗಿದ್ದ.

೩. ಸೊರಬ–೩೮೧. ಕ್ರಿ.ಶ. ಸು. ೧೦೧೦ರಲ್ಲಿ ಅಯ್ದನೆಯ ವಿಕ್ರಮಾದಿತ್ಯನ ಅಧೀನನಾಗಿ ಸೇನವಾರ ದೊರೆಯೊಬ್ಬ ಬನವಾಸಿಯಲ್ಲಿದ್ದ.

೪. ಚಿ.ಮ. ೬೧, ೬೨, ೯೪ ಮತ್ತು ೯೫ರಲ್ಲಿ ಇವರ ಉಲ್ಲೇಖಗಳಿವೆ. ಜೀವಿತವಾರ, ಜೀಮೂತವಾಹನ ಮಾರ ಅಥವಾ ಮಾರಸಿಂಹ ಎಂಬ ಇವರ ಹೆಸರು ಗಳು ಕಂಡುಬರುತ್ತವೆ.

೫. ದಾವಣಗೆರೆ–೮೪ ಮತ್ತು ೯೦ರಲ್ಲಿ ಇವರ ಕೆಲವು

---

* ಕನ್ನಡ ಪ್ರಾಧ್ಯಾಪಕರು, ಕ.ವಿ.ವಿ. ಸ್ನಾತಕೋತ್ತರ ಕೇಂದ್ರ, ಬೆಳಗಾವಿ

1 Mysore and Coorg from Inscriptions, pp. 148–149

ಹೆಸರುಗಳು ಕಂಡುಬರುತ್ತವೆ. ಆದಿತ್ಯ, ಸೂರ್ಯ ಎಂಬವರು ೬ನೆಯ ವಿಕ್ರಮಾದಿತ್ಯನ ಅಧಿಕಾರಿಗಳಾಗಿದ್ದುದು ಕಂಡುಬರುತ್ತದೆ.

೬. ಈ ಮೇಲಿನ ಉಲ್ಲೇಖಗಳಲ್ಲದೆ ರೈಸರ ಕಣ್ಣು ತಪ್ಪಿ ಉಳಿದು ಹೋಗಿರುವ ಶಿಕಾರಿಪುರ-೧೫೫ನೆಯ ಶಾಸನವನ್ನೂ ಇಲ್ಲಿ ನಮೂದಿಸಬೇಕು. ಇದರ ಕಾಲ ಕೂಡ ಕ್ರಿ.ಶ. ಸು. ೮ನೆಯ ಶತಮಾನವಾಗಿದ್ದು "... ಹನ" ಎಂದು ಹೆಸರು ತ್ರುಟಿತವಾದ ರಾಜನೊಬ್ಬ ಜೆದುಗೂರ ಎಪ್ಪತ್ತು ನಾಡನ್ನು ಆಳುತ್ತಿದ್ದಾಗ ಆವನ ಅಧೀನದಲ್ಲಿ ? ಒಬ್ಬ "ಸೇನಾವೆರಸ"ರ್ ಅಧಿಕಾರಿಯಾಗಿದ್ದನೆಂದು ಇದು ತಿಳಿಸುತ್ತದೆ. ಪ್ರಸ್ತುತ ಶಾಸನ ತುಂಬ ತ್ರುಟಿತವಾಗಿದೆ....ಹನ ಎಂಬ ತ್ರುಟಿತ ಹೆಸರು ಬಹುಶಃ ಚಿತ್ರವಾಹನ I (ಅಥವಾ ಕ್ಷೇತ್ರವಾಹನ) ನದಾಗಿರಬಹುದು.

ಇದೀಗ ಇವರನ್ನು ಉಲ್ಲೇಖಿಸುವ ಹಲವಾರು ಹೊಸ ಗೋಸಾಸ ಶಾಸನಗಳು ನಾಗರಖಂಡ ಪ್ರದೇಶ (ಈಗಿನ ಸೊರಬ, ಹಿರೇಕೆರೂರ, ಶಿಕಾರಿಪುರ, ಹಾನಗಲ್ ಮತ್ತು ಬ್ಯಾಡಗಿ ತಾಲೂಕುಗಳ ಕೆಲವು ಊರುಗಳು) ದಲ್ಲಿ ಕಂಡುಬಂದಿವೆ.

ಇಲ್ಲಿ ಗೋಸಾಸಗಳ ಬಗ್ಗೆ ಒಂದು ಮಾತು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಇದುವರೆಗೆ ಸಿಕ್ಕ ಗೋಸಾಸಗಳನ್ನು ಡಾ॥ ಎಂ.ಎಂ. ಕಲಬುರ್ಗಿಯವರು ತಮ್ಮದೊಂದು ಲೇಖನದಲ್ಲಿ ಪಟ್ಟಿ ಮಾಡಿದ್ದಾರೆ. (ಮಾರ್ಗ ಸಂಪುಟ ೨). ಆದರೆ ಈ ಸೇನವಾರರ ಅವಧಿಯಲ್ಲಿ ಅವು ಅತ್ಯಧಿಕ ಸಂಖ್ಯೆಯಲ್ಲಿ ದೊರೆತಿರುವುದು ಗಮನಿಸ ತಕ್ಕ ಸಂಗತಿಯಾಗಿದೆ. ನಾಗರಖಂಡ ಪ್ರದೇಶದಲ್ಲಿಯೇ ಒಟ್ಟು ಸು. ೯೦ ಗೋಸಾಸಗಳಿದ್ದು ಅವುಗಳಲ್ಲಿ ಸು. ೧೭ ಗೋಸಾಸಗಳು ಲಿಪಿಸಹಿತವಾಗಿವೆ. ಈ ಪಟ್ಟಿ ಮುಂದಿನಂತಿದೆ :

| | ಅಲಿಖಿತ | ಲಿಖಿತ | ಒಟ್ಟು |
|---|---|---|---|
| ೧. ಮತ್ತೀಹಳ್ಳಿ | — | ೧ | ೧ |
| ೨. ಬೆಟ್ಟಗೆರೂರು | — | ೧ | ೧ |
| ೩. ಕಿರವಾಡಿ | — | ೧ | ೧ |
| ೪. ತಿಳವಳ್ಳಿ | — | ೨ | ೨ |
| ೫. ಸಾತೇನಹಳ್ಳಿ | ೩ | — | ೩ |
| ೬. ಚಿಕ್ಕೊಣತಿ | ೩ | — | ೩ |
| ೭. ಅಗ್ರಹಾರ ಮುತ್ತಳ್ಳಿ | ೨೩ | ೭ | ೩೦ |
| ೮. ಕರ್ನೆಲ್ಲಿ | ೧೯ | — | ೧೯ |
| ೯. ಮಲ್ಲೇನಹಳ್ಳಿ | ೭ | ೫ | ೧೨ |
| ೧೦. ಬಾರಂಗಿ | ೧೪ | ೧? | ೧೫ |
| ೧೧. ಅಬ್ಬಲೂರು | — | ೧ | ೧ |
| ೧೨. ಬಂದಳಿಕೆ | ೧ | ೧ | ೨ |
| | | ಒಟ್ಟು | ೯೦ |

ಉತ್ತರ ಕನ್ನಡ ಜಿಲ್ಲೆಯ ಎಸಳಿ ಮತ್ತು ಹುಸ್ರಿಗಳಲ್ಲಿ ೧೫ರಂತೆ ಗೋಸಾಸಗಳ ಸಮೂಹ ಕಂಡುಬಂದುದು ಅತೀ ಹೆಚ್ಚಿನ ಸಂಖ್ಯೆಯ ಗೋಸಾಸಗಲ್ಲುಗಳ ಸಮುದಾಯವೆನಿಸಿತ್ತು. ಆದರೆ ಅಗ್ರಹಾರ ಮುತ್ತಳ್ಳಿ ಮತ್ತು ಕರ್ನೆಲ್ಲಿಗಳ ಸಮುದಾಯ ಅವನ್ನು ಮೀರಿರುವುದು ಈಗ ಸ್ಪಷ್ಟ.[2] ಎಂದರೆ ಸೇನವಾರರ ಆಡಳಿತದಲ್ಲಿ

2 ಡಾ॥ ಭೋಜರಾಜ ಪಾಟೀಲರು ಇವುಗಳ ಕೆಲ ವಿವರಗಳನ್ನು ತಮ್ಮ ಅಪ್ರಕಟಿತ ಪ್ರಬಂಧದಲ್ಲಿ ಇತ್ತಿದ್ದಾರೆ

ಗೋಸಾಸಗಳನ್ನು ನಿಲ್ಲಿಸುವುದು ಸಾಂಸ್ಕೃತಿಕವಾದ ಒಂದು ವಿಶೇಷ ಸಂಪ್ರದಾಯವಾಗಿ ರೂಢಿಗೊಂಡಂತೆ ತೋರಿ ಬರುತ್ತದೆ.

ಈಗಾಗಲೇ ನೋಡಿರುವಂತೆ ಇವರ ಬಗ್ಗೆ ಕಂಡು ಬರುವ ಮೊದಲ ಉಲ್ಲೇಖ ಕೊಪ್ಪ–೩೭ರ ಕ್ರಿ.ಶ. ಸು. ೬೯೦ರ ಶಾಸನದಲ್ಲಿ. ಇಲ್ಲಿ ಇವರ ವಂಶನಾಮ ಮಾತ್ರ ವಿದ್ದು ಅಧಿರಾಜನಾಗಿ ಆಳುವ ಚಿತ್ರವಾಹನನ ಹೆಸರು ಗೋಚರಿಸಿದೆ. ತರುವಾಯದ ಹಾರೋಮುಚಡಿ (ಶಿಕಾರಿ ಪುರ ತಾ॥ ಶಾಸನದಲ್ಲಿ ಈ ಮನೆತನದ ಭೂವರಕ್ಕೆ ಅರ್ಕೇಸರಿ (< ಅರಿಕೇಸರಿ ?) ಎಂಬವನು ಮುಗುಂದ ನಾಡನ್ನಾಳುತ್ತಿದ್ದುದಾಗಿ ಹೇಳಿದೆ.

ಚಿಕ್ಕನಂದೀಹಳ್ಳಿ (ಬ್ಯಾಡಗಿ ತಾ॥) ಯಲ್ಲಿ ದೊರೆತಿರುವ ಒಂದು ಶಾಸನದಲ್ಲಿ ಬಾದಾಮಿ ಚಾಲುಕ್ಯ ದೊರೆ ಕೊಕ್ಕುಲಿ ಎಂಬ ಅಧಿರಾಜನ ಕೈಕೆಳಗೆ ಸೇನವಾರ ಮನೆತನದ ದೋಸಿಯರ ಎಂಬ ಅರಸನು ಮುಗುಂದ ನಾಡನ್ನಾಳುತ್ತಿದ್ದನೆಂದು ತಿಳಿದುಬರುತ್ತದೆ.[3] ಎಂದರೆ ದೋಸಿ ಅಥವಾ ದೋಸಿಯರ ಎಂಬ ದೊರೆ ಸೇನವಾರ ಮನೆತನದವನೆಂಬ ಅಂಶ ಈ ಶಾಸನದಲ್ಲಿ ನಿರ್ದಿಷ್ಟ ವಾಗಿದೆ. ಇದಲ್ಲದೆ ಹಾವೇರಿ ತಾಲ್ಲೂಕಿನ ದಿಡಗೂರ ಗ್ರಾಮದ ಒಂದು ಶಾಸನದಲ್ಲಿ[4], ಕತ್ತಿಯರನು ಪೃಥ್ವಿಯನ್ನಾಳುತ್ತಿದ್ದಾಗ ಬನವಾಸಿ–೧೨೦೦೦ ಪ್ರಾಂತ ವನ್ನು ಮಂಡಲೇಶ್ವರನಾಗಿ ಆಳುತ್ತಿದ್ದಾಗ ದೋಸಿ ಎಂಬವನು ಮುಗುಂದದ ಮಹಾಜನರಿಗೆ ದತ್ತಿಗಳನ್ನು ಬಿಟ್ಟ ವಿಷಯ ಉಲ್ಲೇಖಗೊಂಡಿದೆ. ಇಲ್ಲಿನ ಕತ್ತಿಯರ ನೆಂದರೆ ಬಾ.ಚಾ.ಇಮ್ಮಡಿ ಕೀರ್ತಿವರ್ಮನೆಂದೂ ಇಲ್ಲಿಯ ದೋಸಿ, ದೋಸಿಯರನೆಂದರೆ ಆತನ ಕೈಕೆಳಗೆ ಮಂಡಲೇಶ್ವರನಾಗಿದ್ದ ಸೇನವಾರ ದೊರೆಯೆಂದೂ ನಿಶ್ಚಿತ ವಾಗಿ ಹೇಳಬಹುದು. ಅದೇ ರೀತಿ ಚಿಕ್ಕನಂದಿಹಳ್ಳಿ ಶಾಸನದ ಕೊಕ್ಕುಲಿ ಎಂದರೆ ಬಾದಾಮಿ ಚಾಲುಕ್ಯ ಚಕ್ರವರ್ತಿ ಇಮ್ಮಡಿ ವಿಕ್ರಮಾದಿತ್ಯನೆಂದು ತಿಳಿಯ ಬಹುದು. ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ಈ ದೋಸಿಯರ ಮುಗುಂದ ನಾಡಿನ ನಾಡಾಧಿಕಾರಿಯಾಗಿದ್ದು ಅವನ ಮಗ ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಬನವಾಸಿ-೧೨೦೦೦ ಪ್ರಾಂತದ ಮಹಾಮಂಡಲೇಶ್ವರ ನಾಗಿ ಉನ್ನತಿ ಹೊಂದಿದ. ಆದರೆ ದುರ್ದೈವವಶಾತ್ ಈತ ಚಾಲುಕ್ಯರಿಗೂ ರಾಷ್ಟ್ರಕೂಟರಿಗೂ ನಡೆದ ಘೋರ ಯುದ್ಧದಲ್ಲಿ ಪ್ರಾಣ ಕಳೆದುಕೊಂಡ. ಪ್ರಸ್ತುತ ವಿಷಯ ವನ್ನು ಬ್ಯಾಡಗಿ ತಾಲೂಕು, ಸಿಡೇನೂರ ಶಾಸನ ಸ್ಪಷ್ಟ ವಾಗಿ ಹೇಳಿದೆ.[5] ಪ್ರಸ್ತುತ ಶಾಸನದಲ್ಲಿ ದೋಸಿ ಮತ್ತು ಪೊಗಿಲ್ಲಿ ಎಂಬ ಇಬ್ಬರ ಹೆಸರುಗಳು ಬಂದಿರುವುದರಿಂದ ಇಲ್ಲಿನ ಪೊಗಿಲ್ಲಿ ಎಂದರೆ ಸೇಂದ್ರಕ ದೊರೆ ಶ್ರೀ ಪೊಗಿಲ್ಲಿಯೇ ಆಗಿರಬಹುದು. ಅದೇ ರೀತಿ ಭೂವರಕ್ಕೆ ಮತ್ತು ದೋಸಿ ಯವರು ಮೂಲತಃ ಮುಗುಂದ ನಾಡಿನ ಅಧಿಕಾರಿ ಗಳಾಗಿದ್ದು ಇಬ್ಬರ ನಡುವಿನ ಕಾಲಾವಧಿ ತೀರ ಕಡಿಮೆ ಇರುವುದರಿಂದ ಇವರೀರ್ವರೂ ತಂದೆ ಮಕ್ಕಳಾಗಿರುವ ಸಾಧ್ಯತೆ ತುಂಬ ಹೆಚ್ಚಾಗಿದೆ.

ದಿಡಗೂರ ಶಾಸನ ದೋಸಿಯರನು ಕೀರ್ತಿವರ್ಮನ ಅಧೀನನಾಗಿ ಬನವಾಸಿ ನಾಡನ್ನು ಆಳುತ್ತಿದ್ದ ವಿಷಯ ತಿಳಿಸುವಂತೆ ವಕ್ಕಲೇರಿ ತಾಮ್ರಪಟ ಕೂಡ ಈತನನ್ನು ಬನವಾಸಿ ಮಂಡಲೇಶ್ವರನೆಂದು ಗುರುತಿಸುತ್ತದೆ. ಪ್ರಸ್ತುತ ಶಾಸನದ ಕಾಲ ಕ್ರಿ.ಶ. ೭೫೮. ಇದರಲ್ಲಿ ದೋಸಿ ಯರನು ಚಕ್ರವರ್ತಿಯ ಅನುಜ್ಞೆ ಪಡೆದು ಸುಳ್ಳಿಯೂರು (ತಾಮರಮುಗೆ ; ಪಾನುಂಗಲ್ ಮತ್ತು ಕಿಱುವಳ್ಳಿಗಳ ಮಧ್ಯದಲ್ಲಿದ್ದ) ನೆಂಗಿಯೂರು ಹಾಗೂ ನಂದಿವಳ್ಳಿ ಗ್ರಾಮಗಳನ್ನು ಕೆಲವು ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟನೆಂದಿದೆ.[6] ಇದೀಗ ದೊರೆತ ಮಲ್ಲೇನಹಳ್ಳಿಯ ಶಿವಾಲಿಹಕ್ಕಲಿನಲ್ಲಿ ದೊರೆತ ಒಂದು ಶಾಸನದಲ್ಲಿಯೂ ಈತನ ಹೆಸರು ಬಂದಿದೆ.[7] ಕೀರ್ತಿವರ್ಮನು ಪೃಥ್ವೀರಾಜ್ಯ ಗೆಯ್ಯುವಲ್ಲಿ ದೋಸಿಯರನು ಬನವಾಸಿ ಪನ್ನಿಚ್ಚಾಸಿರ ವನ್ನು ಆಳುತ್ತಿದ್ದುದಾಗಿ ಈ ಶಾಸನ ಸ್ಪಷ್ಟಪಡಿಸುತ್ತದೆ.

---

3 ಧಾರವಾಡ ಜಿಲ್ಲೆಯ ಶಾಸನ ಸೂಚಿ, ಪುಟ ೫೦, ನಂ. ೪೦

4 E.I. Vol. VI p. 251 ; SII. XVIII. No. 317

5 SII. XVIII. No. 278

6 The Dynasties of Canarese Districts, p. 377

7 ಸತ್ಯಶುದ್ಧ ಕಾಯಕ, ಸಂ. ೩, ಸಂಚಿಕೆ ೩-೪, ಪುಟ. ೧೧೯

ಇವನ ತರುವಾಯ ಬಾದಾಮಿ ಚಾಳುಕ್ಯರಿಗೆ ವಿರೋಧಿಯಾಗಿ ರಾಷ್ಟ್ರಕೂಟ ಪರ, ಅವರ ಅಧೀನನಾಗಿ ಬನವಾಸಿ ಪ್ರಾಂತವನ್ನು ಆಳುತ್ತಿದ್ದ ಮಾರಕ್ಕೆ ಅರಸನೆಂಬುವನ ಹೆಸರು ಈಗ ದೊರೆತಿರುವ ಹೊಸ ಶಾಸನಗಳಲ್ಲಿ ಉಕ್ತವಾಗಿದೆ : ಶಿವಾಲಿಹಕ್ಕಲಿನ ಒಂದು ಶಾಸನ ಮುಂದಿನಂತಿದೆ :

ಸ್ವಸ್ತ್ಯಕಾಲ ವರ್ಷ ಶ್ರೀ ಪೃಥುವೀ ವಲ್ಲಭ ಮಹಾರಾಜಾಧಿ ರಾಜ ಪ
ರಮೇಶ್ವರ ಭಟರರಾ ಪೃಥುವಿಯಾನ್ನೇಕಚ್ಛತ್ರ ಚಾಯೆಯಿನರಿಪಿಪಾ
ಲಿಸೆ ಅಕಾಲ ವರ್ಷ ಶ್ರೀ ಪೃಥುವೀ ವಲ್ಲಭ ಸೇನಾವರ ಮಾರಕ್ಕೆ ಅರಸರ್ಬನ
ವಾಸಿ ಪನ್ನಿಚ್ಛಾಸಿರ ಮಾನಾಳೆ ಆದಿತ್ಯ ಸೇನ ಪಣ್ಡಿತರ್ ಧರ್ಮ್ಮರಾಜ್ಯ[ಂ] ಆಳೆ
........ಲಿಗರಾ ಬಿಟ್ಟಿಯಂ ಪೂನ್ದನ್ದುದಾ ಕೊಟ್ಟು
........ದ....ಣ್ಡೆ ...ಪೃಥವೀ ........................

ಇದರಿಂದ ಮಾರಕ್ಕೆ ಅರಸ ಸೇನವಾರ ಮನೆತನದವನೆಂಬ ಅಂಶವನ್ನು ಇದು ಸಮರ್ಥಿಸುತ್ತದೆಯಲ್ಲದೆ ಈತ ಒಂದನೆಯ ಕೃಷ್ಣನ ಒಬ್ಬ ಪ್ರಸಿದ್ಧ ಹಾಗೂ ಪ್ರಬಲ ಮಂಡಲೇಶ್ವರನಾಗಿದ್ದನೆಂಬುದು ಬೆಳಕಿಗೆ ಬರುತ್ತದೆ. ಒಂದನೆಯ ಕೃಷ್ಣನಿಗೆ ಅಕಾಲವರ್ಷ ಪೃಥುವೀ ವಲ್ಲಭ ಎಂದಿರುವಂತೆಯೇ ಮಾರಕ್ಕೆ ಅರಸನನ್ನು ಅಕಾಲ ವರ್ಷ ಪೃಥುವೀವಲ್ಲಭ ಎಂದಿರುವುದು ತುಂಬ ಗಮನಾರ್ಹ ಅಂಶ. ಬಾದಾಮಿ ಚಾಲುಕ್ಯರ ಅಧಿಕಾರವನ್ನು ಕಿತ್ತೊಗೆಯುವಲ್ಲಿ ರಾಷ್ಟ್ರಕೂಟ ಒಂದನೆಯ ಕೃಷ್ಣನಿಗೆ ಮಾರಕ್ಕೆಯರಸ ಅಪಾರ ಸಹಾಯ ಸಲ್ಲಿಸಿರುವುದು ಇದರಿಂದ ಸಿದ್ಧವಾಗುತ್ತದೆ. ಸೇನವಾರ ಮನೆತನದವನೇ ಆದ ದೋಸಿಯರ ಮತ್ತು ಸೇಂದ್ರಕ ಪೊಗಿಲ್ಲಿಗಳನ್ನು ಬಗ್ಗು ಬಡಿದು ಈ ಭಾಗದಲ್ಲಿ ರಾಷ್ಟ್ರಕೂಟರು ತಮ್ಮ ಆಧಿಪತ್ಯ ಸ್ಥಾಪಿಸುವಲ್ಲಿ ಈತನ ಪಾತ್ರ ತುಂಬ ಮಹತ್ವದ್ದಾಗಿರಬೇಕು.

ಈಗ ಮಾರಕ್ಕೆ ಅರಸನ ವಂಶ ನಿರ್ದಿಷ್ಟಗೊಂಡದ್ದರಿಂದ ಸೇನವಾರ ಮನೆತನಕ್ಕೆ ಸಂಬಂಧ ಪಡುವ ಶಾಸನಗಳ ಸಂಖ್ಯೆ ಹೆಚ್ಚುತ್ತಲಿದೆ. ನೇರವಾಗಿ ಇವನ ಹೆಸರನ್ನು ಹೇಳುವ ಶಾಸನಗಳು ಮುಂದಿನಂತಿವೆ :

| | | | |
|---|---|---|---|
| ೧. | ಮುತ್ತಳ್ಳಿ | (ಸತ್ಯಶುದ್ಧ ಕಾಯಕ, ೩–೩, ೪, ನಂ. ೧೦) | ಅಧಿರಾಜ ರಾ. ಕೂ. ೧ನೆಯ ಕೃಷ್ಣ |
| ೨. | ಮಲ್ಲೇನಹಳ್ಳಿ | (ಅದೇ., ನಂ. ೨) | — |
| ೩. | " | ( " ನಂ. ೩) | — |
| ೪. | ಮುತ್ತಳ್ಳಿ | ( " ನಂ. ೬) | — |
| ೫. | " | ( " ನಂ. ೭) | — |
| ೬. | " | ( " ನಂ. ೮) | ರಾ. ಕೂ. ಧ್ರುವ |
| ೭. | " | ( " ನಂ. ೯) | ರಾ. ಕೂ. ಧ್ರುವ |
| ೮. | ಬೆಟ್ಟಗೆರೂರ | (ಅದೇ., ನಂ. ೧೧) | — |
| ೯. | ನೂಲಗೇರಿ | (KRI, Pro. Report, 1953-57 ನಂ. ೫) | ರಾ. ಕೂ. ೨ನೆಯ ಗೋವಿಂದ |
| ೧೦. | " | (ಅದೇ., ನಂ. ೧೧) | ರಾ. ಕೂ. ೧ನೆಯ ಕೃಷ್ಣ |
| ೧೧. | ಸಿಡೇನೂರ | (SII, XX, No. 10) | " ಧ್ರುವ |
| ೧೨. | ನರೇಗಲ್ | (EI, VI, p. 162) | " ಧ್ರುವ |
| ೧೩. | ಹೊಂಬಳಿ | (EI, XXXIII, p. 257) | (ಕೇವಲ ಮಾರಕ್ಕೆಯರಸನ ಉಲ್ಲೇಖ ಮಾತ್ರವಿದೆ) |

ಇವಲ್ಲದೆ "ಶ್ರೀ ಮಾರ್ಕ್ಕೆ ಅ.... .. ನಾಡಾಳೆ" ಎಂದು ಹೇಳುವ ರಾಣಿಬೆನ್ನೂರ ತಾ. ಹೂಲಿಹಳ್ಳಿ ಶಾಸನೋಕ್ತ ಅಧಿಕಾರಿ ಮಾರಕ್ಕೆ ಅರಸನೇ ಆಗಿರುವ ಸಾಧ್ಯತೆಯಿದೆ.[8]

ಹೀಗೆ ವಕ್ಕಲೇರಿ ತಾಮ್ರಶಾಸನ, ದಿಡಗೂರು, ಚಿಕ್ಕನಂದೀಹಳ್ಳಿ, ಮಲ್ಲೇನಹಳ್ಳಿ ಮತ್ತು ಸಿಡೇನೂರು ಗಳ ಶಿಲಾಶಾಸನಗಳು ಸೇನವಾರ ದೋಸಿಯರನ ಹೆಸರನ್ನು ನೇರವಾಗಿ ಹೇಳುವ ೫ ದಾಖಲೆಗಳು ದೊರೆತಂತಾಗು ತ್ತದೆ. ಅದೇ ರೀತಿ ಮಾರಕ್ಕೆ ಅರಸನ ನೇರ ಹೆಸರು ಹೇಳುವ ಶಾಸನಗಳ ಸಂಖ್ಯೆ ೧೩-೧೪ ಆಗುತ್ತದೆ. ಇವಲ್ಲದೆ ಹೆಸರು ಅಸ್ಪಷ್ಟವಾಗಿರುವ ಆದರೆ ೭-೮ ನೆಯ ಶತಮಾನದ ಕಾಲಾವಧಿಗೆ ಸೇರುವ ಸೇನವಾರ ಮನೆತನದ ಶಾಸನಗಳ ಸಂಖ್ಯೆ ಮೇಲಿನ ತಿಳಿದಿದ್ದುದಕ್ಕಿಂತ ಸು. ೨೫ರಷ್ಟಾದರೂ ಹೆಚ್ಚಾಗುತ್ತಲಿದೆ.

ದೋಸಿಯರ ಮತ್ತು ಮಾರಕ್ಕೆ ಅರಸರು ಒಂದೇ ವಂಶದವರಾಗಿದ್ದು ಒಂದೇ ಪ್ರದೇಶಕ್ಕೆ ಸೇರಿದ್ದರೂ ಪರಸ್ಪರ ವಿರೋಧೀ ರಾಜಕೀಯ ಶಕ್ತಿಗಳ ಅಧೀನ ರಾಗಿದ್ದು ಒಬ್ಬರ ವಿನಾಶಕ್ಕೆ ಮತ್ತೊಬ್ಬರು ಕಾರಣ ರಾದುದು ಚರಿತ್ರೆಯ ವಿಪರ್ಯಾಸವಷ್ಟೆ. ಅಷ್ಟೇ ಅಲ್ಲದೆ ಸ್ವತಃ ಮಾರಕ್ಕೆಯರಸ ರಾ.ಕೂ. ಒಂದನೆಯ ಕೃಷ್ಣ, ಅವನ ಮಗ ಇಮ್ಮಡಿ ಗೋವಿಂದ ಮತ್ತು ಗೋವಿಂದನ ತಮ್ಮ ಧ್ರುವ–ಈ ಮೂವರ ಅಧೀನನಾಗಿ ಬನವಾಸಿ ಮಂಡಲದ ಅಧಿಕಾರ ಹೊಂದಿದ್ದರೂ ನಡುವೆ ಕೆಲ ಕಾಲ ಇಮ್ಮಡಿ ಗೋವಿಂದನ ಅವಧಿಯಲ್ಲಿನ ಮುತ್ತಳ್ಳಿಯ ಎರಡು ಶಾಸನಗಳಲ್ಲಿ[9] ಇವನ ಹೆಸರಿಲ್ಲ. ಬದಲು ಎಜಿಯ ರಸ ಎಂಬವನ ಹೆಸರು ಕಂಡುಬರುತ್ತದೆ. ಮುಂದೆ ಪುನಃ ಮುತ್ತಳ್ಳಿಯ ನಂ. ೮ ಮತ್ತು ೯ನೆಯ ಧ್ರುವನ ಶಾಸನ ಗಳಲ್ಲಿ[10] ಇವನ ಹೆಸರು ಕಾಣಿಸಿಕೊಂಡಿದೆ. ಇಮ್ಮಡಿ ಗೋವಿಂದನನ್ನು ಅವನ ತಮ್ಮ ಧ್ರುವ ಪದಚ್ಯುತ ಗೊಳಿಸಿದ್ದು ಒಂದು ಪ್ರಮುಖ ಘಟನೆ. ಬಹುಶಃ ಈ ತಾಕಲಾಟದಲ್ಲಿ ಮಾರಕ್ಕೆಯರಸ ಧ್ರುವನ ಪರವಾಗಿ ನಿಂತುದು ಗೋವಿಂದನ ಅವಕೃಪೆಗೆ ಕಾರಣವೆಂದು ಊಹಿಸಬಹುದು. ಮಾರಕ್ಕೆಯರಸ ಬನವಾಸಿಯ ಮಂಡಲೇಶ್ವರ ಪದವಿಯನ್ನು ಪುನಃ ಧ್ರುವನ ಕಾಲದಲ್ಲಿ ಸಂಪಾದಿಸಿರುವ ಬಗ್ಗೆ ಮೇಲಿನ ಶಾಸನಗಳು ಖಚಿತ ಆಧಾರ ನೀಡುತ್ತವೆ.

ಎರೆಯಮ್ಮ ಮತ್ತು ಮಾರಕ್ಕೆ ಅರಸರ ತರುವಾಯ ಬನವಾಸಿಯ ಮಂಡಲೇಶ್ವರರಾಗಿ, ಚಾಳುಕ್ಯ ರಾಜಾದಿತ್ಯ, ಮದನಾಗ, ಮುವೆಲೂರ ಮಾರ, ದನ್ತಿಗ ಮೊದಲಾದವರ ಹೆಸರುಗಳು ಕಂಡುಬರುತ್ತವೆ. ಇದರಿಂದ ಧ್ರುವನ ಆಳ್ವಿಕೆಯ ಉತ್ತರಾವಧಿಯಲ್ಲಿ ಮಾರಕ್ಕೆ ಅರಸ ತೀರಿಕೊಂಡಂತೆ ಕಾಣುತ್ತದೆ. ಸೇನವಾರ ದೋಸಿಯರ ಕ್ರಿ.ಶ. ಸು. ೭೬೦ರಲ್ಲಿ ಅಸುನೀಗಿದ್ದು ಅದೇ ಕಾಲದಲ್ಲಿ ಮಾರಕ್ಕೆ ಅರಸ ಅಧಿಕಾರಕ್ಕೆ ಬಂದಿದ್ದಾನೆ. ಮತ್ತು ಧ್ರುವನ ಕೊನೆಯ ವರ್ಷಗಳಲ್ಲಿ ಎಂದರೆ ಸು. ೭೮೦ರ ಆಸುಪಾಸಿನಲ್ಲಿ ಈತ ತೀರಿಕೊಂಡಿದ್ದಾನೆಂದು ಊಹಿಸ ಬಹುದು.

ಮೇಲೆ ಹೇಳಿದ ಬನವಾಸಿಯ ಮಂಡಲೇಶ್ವರರಲ್ಲಿ ರಾಜಾದಿತ್ಯನ ವಂಶ ಖಚಿತವಾಗಿದೆ. ಇನ್ನುಳಿದವರ ವಂಶ ಗಳು ಸ್ಪಷ್ಟವಾಗುವುದಿಲ್ಲ. ಇವರಲ್ಲಿ ಇನ್ನೂ ಒಬ್ಬಿಬ್ಬರು ಸೇನವಾರ ಮನೆತನದವರಾಗಿರುವ ಸಾಧ್ಯತೆಯನ್ನು ನಾವು ಇಟ್ಟುಕೊಳ್ಳಬಹುದು.

ಹಾವೇರಿ ತಾ. ದೇವಗಿರಿಯ ಒಂದು ಶಾಸನ (SII, XVIII, ನಂ. ೩೦೮)ದಲ್ಲಿ ಕಾಲ ನಿರ್ದೇಶನವಿಲ್ಲ. ಶಾಸನ ಸಂಪಾದಕರು ಇದರ ಲಿಪಿ ಎಂಟನೆಯ ಶತಮಾನ ವೆಂದು ತಿಳಿಸುತ್ತಾರೆ. ಇದರಲ್ಲಿ ಸೇನಮಲ್ಲರ ಮಾಚಣಗಾ ಮುಣ್ಡ ಬಾಸವೂರ ನೂರನಲ್ವತ್ತನ್ನು ಆಳುತ್ತಿದ್ದುದಾಗಿ ಹೇಳಿದೆ. ಇದರಲ್ಲಿ ಹೆಚ್ಚಿನ ವಿವರಗಳಿಲ್ಲ. ಇಲ್ಲಿನ ಸೇನಮಲ್ಲರೆಂದರೆ ಸೇನವಲ್ಲ ಅಥವಾ ಸೇನವರ/ಸೇನವಾರ ರೆಂದೇ ಗ್ರಹಿಸಬಹುದು. ಏಕೆಂದರೆ ಪ್ರಸ್ತುತ ಬಾಸವೂರು ಪ್ರದೇಶ ೮ನೆಯ ಶತಮಾನದ ಅವಧಿಯಲ್ಲಿ ಸೇನವಾರರ ಅಧೀನವಾಗಿತ್ತು. ಆದರೆ ಈ ಮಾಚಗಾಮುಂಡನ ಹಿಂದು–ಮುಂದುಗಳು ಗೊತ್ತಾಗುತ್ತಿಲ್ಲ.

---

8 SII, XVIII, No. 311

9 ಅ.ಚಿ. ೭ರಲ್ಲಿದ್ದುದು ಮತ್ತು 'ಸಾಧನೆ' ಸಂ. ೨೨, ಸಂ. ೩-೪

10 ಇವನ ಬದಲು ಕಂಡುಬರುವ ಎಜಿಯರಸ ಎಂಬುದು ಎಜಿಯಮ್ಮರಸ ಎಂದಾಗಿರುವುದು ಹೆಚ್ಚು ಸಮಂಜಸ

ಮುಂದೆ ಸು. ೧೫೦–೨೦೦ ವರ್ಷಗಳವರೆಗೆ ದಾಖಲೆಗಳಲ್ಲಿ ಸೇನವಾರರ ಉಲ್ಲೇಖಗಳು ಕಂಡು ಬರುವುದಿಲ್ಲ. ಕ್ರಿ.ಶ. ಸು. ೧೦೧೦ನೆಯ ಶಾಸನವೊಂದ ರಿಂದ ಚಾಲುಕ್ಯ ದೊರೆ ೫ನೆಯ ವಿಕ್ರಮಾದಿತ್ಯನ ಅಧೀನ ನಾಗಿ ಒಬ್ಬ ಸೇನವಾರ ದೊರೆ ಬನವಾಸಿ ಪ್ರಾಂತವನ್ನಾಳು ತ್ತಿದ್ದನೆಂದು ತಿಳಿದುಬರುತ್ತದೆ.[11] ಅದೇ ರೀತಿ ಹಾವೇರಿ ತಾಲೂಕಿನ ಕಬ್ಬೂರು ಮತ್ತು ಬಿದರಗಡ್ಡಿ ಶಾಸನಗಳಲ್ಲಿ (SII, XVIII ನಂ. ೪೫ ಮತ್ತು ೫೨) ಕಣ್ಣಮ್ಮ ಅಥವಾ ಕಣ್ವನೃಪನೆಂಬವನು ಸೇನವಲ್ಲರ ಮನೆತನದವ ನೆಂದು ಹೇಳಿದೆ. ಈತ ಬಹುಶಃ ಸೇನವಾರ ವಂಶದವನೇ ಆಗಿದ್ದು ಬಾಸವೂರ ೧೪೦ (ಹಿರೇಕೆರೂರ ಮತ್ತು ಬ್ಯಾಡಗಿ ತಾಲೂಕುಗಳ ಪ್ರದೇಶ)ನ್ನು ಆಳುತ್ತಿದ್ದ. ಈತನ ಕಾಲ ೧೧ನೆಯ ಶತಮಾನದ ಪೂರ್ವಾರ್ಧ. ೧೧ ನೆಯ ಶತಮಾನದ ಉತ್ತರಾರ್ಧ ಮತ್ತು ೧೨ನೆಯ ಶತಮಾನದ ಆದಿಭಾಗದಲ್ಲಿ ಈ ಮನೆತನದ ಜೀವಿತವಾರ, ಜೀವನವಾರ, ಮಾರ ಅಥವಾ ಮಾರಸಿಂಹ ಎಂಬವರು ಕ್ರಮವಾಗಿ ಕಂಡುಬರುತ್ತಾರೆ. ಸೂರ್ಯ ಮತ್ತು ಆದಿತ್ಯ ರೆಂಬವರು ಆರನೆಯ ವಿಕ್ರಮಾದಿತ್ಯನ ಅಧಿಕಾರಿಗಳಾಗಿದ್ದ ಸಂಗತಿಯನ್ನು ಬಿ.ಎಲ್. ರೈಸರು ಗುರುತಿಸಿದ್ದಾರೆ.[12]

ಹೀಗೆ ಇವರು ೭ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೂ ಮಧ್ಯ ಕರ್ನಾಟಕದಲ್ಲಿ ಕಂಡು ಬರುತ್ತಾರೆ. ಇವರಲ್ಲಿ ಅತ್ಯಂತ ಪ್ರಮುಖರೆಂದರೆ ದೋಸಿಯರ ಮತ್ತು ಮರಕ್ಕೆಯರಸರು ಇಬ್ಬರೂ ಬನವಾಸಿ–೧೨೦೦೦ ಪ್ರಾಂತದ ಮಹಾಮಂಡಲೇಶ್ವರ ರಾಗಿದ್ದವರು. ಈವರೆಗೆ ಈ ಮನೆತನ ಇಂಥ ಮಹತ್ವದ ವ್ಯಕ್ತಿಗಳೇ ಇತಿಹಾಸಕಾರರ ಗಮನಕ್ಕೆ ಬಾರದೆ ಮರೆಯಲ್ಲಿ ಉಳಿದಿದ್ದರು.

ಇವರು ಜೈನಧರ್ಮೀಯರೆಂದು ಬಿ.ಎಲ್. ರೈಸ್ ಗುರುತಿಸಿದ್ದಾರೆ. ಕನತಿ ಮೊದಲಾದ ಶಾಸನಗಳಲ್ಲಿ ಇವರನ್ನು ಕೂಡಲೂರಪುರ ಪರಮೇಶ್ವರರು,ಮೃಗೇಂದ್ರ (ಸಿಂಹ) ಲಾಂಛನರು ಫಣಿಧ್ವಜ ವಿರಾಜಮಾನರು, ಖಚರ ತ್ರಿಣೇತ್ರರು ಎಂದು ಪರಿಚಯಿಸುತ್ತವೆ. ಕನತಿಯ ಶಾಸನ ಶಿಲೆಯ ಮೇಲ್ಭಾಗದಲ್ಲಿ ಮೂರು ಹುತ್ತಗಳಿಂದ ಹೊರ ಬಂದು ಹೆಡೆ ಎತ್ತಿರುವ ೩ ಸರ್ಪಗಳು ಮತ್ತು ಅವುಗಳ ಎಡ ಪಕ್ಕದಲ್ಲಿ ನಿಂತಿರುವ ಸಿಂಹವೊಂದನ್ನು ಬಿಡಿಸಲಾಗಿದೆ. ಖಚರ ವಂಶದವರೆಂಬುದು ಬರಿಯ ಕಪೋಲ ಕಲ್ಪನೆ ಎಂದು ಬೇರೆ ಹೇಳಬೇಕಿಲ್ಲ. ಇವರ ಮೂಲ ನೆಲೆ ಕೂಡಲೂರು ಎಂದಿರುವುದು ಕೂಡ ಇವರು ಮೂಲತಃ ಕನ್ನಡ[13] ನೆಲದಿಂದ ಮೇಲೆ ಬಂದವರೆಂಬುದನ್ನು ಸಾಬೀತು ಪಡಿಸುತ್ತದೆ. ಇಂದಿನ ಹರಿಹರ ಪಟ್ಟಣ ಪ್ರಾಚೀನ ಕಾಲದಲ್ಲಿ ಕೂಡಲೂರೆಂದು ಹೆಸರಾಗಿತ್ತು. ಇಂಥ ಕೂಡಲೂರುಗಳು ಹಲವಾರಿವೆ. ಇವರ ಮೂಲ ನೆಲೆ ಮಧ್ಯ ಕರ್ನಾಟಕದಲ್ಲಿನ ಇಂಥ ಯಾವುದೋ ಒಂದು ಊರಾಗಿರಬಹುದು.

ತರುವಾಯದ ಶಾಸನಗಳಲ್ಲಿ ಇವರು ಜೈನಧರ್ಮ ಪರರಾಗಿದ್ದ ಸಂಗತಿ ಬಿ.ಎಲ್. ರೈಸರ ಗಮನಕ್ಕೆ ಬಂದಿದೆ. ಮಲ್ಲೇನಹಳ್ಳಿ ಮತ್ತು ಮುತ್ತುಳ್ಳಿಯ ಶಾಸನಗಳು ಜೈನ ಪರವಾಗಿವೆ. ಆದರೆ ಇವುಗಳಲ್ಲಿ ಸೇನವಾರರು ಜೈನಧರ್ಮ ಪರವಾದ ನಿಲುವು ತಾಳಿದ್ದರೆಂಬುದರ ನೇರ ಪುರಾವೆಗಳು ಲಭ್ಯವಾಗಿಲ್ಲ.

ಗೋಸಾಸ ದಾನದ ಪ್ರತೀಗ್ರಹಿಗಳು ಬ್ರಾಹ್ಮಣ ರಲ್ಲದೆ ಜೈನಧರ್ಮೀಯರೂ ಆಗಿರಬಹುದೆಂಬುದಕ್ಕೆ ಇವರ ಶಾಸನಗಳಲ್ಲಿ ಪುರಾವೆಗಳಿವೆ. ಆದಿತ್ಯಸೇನಪಂಡಿತ, ದೇವೇಂದ್ರಸೇನಪಂಡಿತ ಎಂಬ ಜೈನ ಪ್ರತೀಗ್ರಹಿಗಳ ಹೆಸರುಗಳು ಮುತ್ತಳ್ಳಿಯ ಶಾಸನಗಳಲ್ಲಿ ಗೋಚರಿಸಿವೆ.

ಕೊನೆಯದಾಗಿ ಈ ಶಾಸನಗಳಿಂದ ತಿಳಿದುಬರುವ ಇನ್ನು ಕೆಲವು ಮುಖ್ಯ ಅಂಶಗಳತ್ತ ನಮ್ಮ ಗಮನ ಹರಿಸ ಬಹುದು. ಈಗ ಸಿಕ್ಕಿರುವ ಶಾಸನಗಳಿಂದ ರಾಷ್ಟ್ರಕೂಟ ಒಂದನೆಯ ಕೃಷ್ಣನ ಕಾಲದ ಕನ್ನಡ ಶಾಸನಗಳ ಸಂಖ್ಯೆ ಹೆಚ್ಚುತ್ತಲಿದೆ. ಮುತ್ತಳ್ಳಿಯ ಎರಡು ಗೋಸಾಸಗಳು, ನೂಲಗೇರಿ (KRI, Pro. Report, 1953-57. ನಂ. ೧೧) ಸೂಡಂಬಿ (ಅದೇ ನಂ. ೧೫) ಮೇದೂರ (ಅದೇ

11 ಅ.ಚಿ. ೧ ನೋಡಿ

12 ಅದೇ.,

13 ಬಂಗಾಲದ ಪ್ರಸಿದ್ಧ ಮನೆತನ ಸೇನರು ಇವರ ಸಂಬಂಧಿಗಳಾಗಿರಬಹುದೆಂಬುದು ಡಾ॥ ಜಿ.ಎಸ್. ದೀಕ್ಷಿತ ಅವರ ಒಂದು ಸೂಚನೆ

ನಂ. ೭) ಹೀಗೆ ೫ ಅಥವಾ ೬ ಶಾಸನಗಳು ಅವನ ಆಳ್ವಿಕೆಗೆ ನೇರ ಸಂಬಂಧಪಡುತ್ತವೆ. ಇದೇ ರೀತಿ ಮುತ್ತಳ್ಳಿಯ ಎರಡು ಗೋಸಾಸಗಳು ರಾಷ್ಟ್ರಕೂಟ ಇಮ್ಮಡಿ ಗೋವಿಂದನ ಕಾಲದಲ್ಲಿ ಹುಟ್ಟಿವೆ. ಈ ದಾಖಲೆಗಳ ಬಲದಿಂದ ಸಿರಗುಂಬಿ (KRI, Pro. Report-53-57. ನಂ. ೬) ಮತ್ತು ಮೇದೂರ (ಅದೇ ನಂ. ೭) ಶಾಸನಗಳನ್ನೂ ಇಮ್ಮಡಿ ಗೋವಿಂದನ ಕಾಲಾವಧಿಗೆ ಸೇರಿಸಬಹುದು. ಸಿರಗುಂಬಿ ಶಾಸನದಲ್ಲಿ ಎರೆಯಮ್ಮ ನೆಂಬ ಮಂಡಲೇಶ್ವರನ ಹೆಸರಿದ್ದು ಈ ಬಗ್ಗೆ ಮುಂಚೆ ಚರ್ಚಿಸಿದೆ. ಅದೇ ರೀತಿ ಮೇದೂರ ಶಾಸನವು ಜಗತ್ತುಂಗ (ಇಮ್ಮಡಿ ಗೋವಿಂದ)ನನ್ನು ಅಕಾಲವರ್ಷನ ಪೌತ್ರನೆಂದು ಸ್ಪಷ್ಟವಾಗಿ ಗುರುತಿಸಿದೆ. ನೂಲಗೇರಿ ಶಾಸನದಲ್ಲಿ (ಅದೇ ನಂ. ೫) ಮಾರಕ್ಕ ಅರಸನ ಹೆಸರೂ ಖಂಡೆಬಾಗೂರ (ಅದೇ ನಂ. ೮) ಶಾಸನದಲ್ಲಿ ಎರೆಯಮ್ಮನ ಹೆಸರೂ ಉಲ್ಲೇಖಗೊಂಡಿರುವುದರಿಂದ ಇವೆರಡು ಕನ್ನಡ ಶಾಸನಗಳೂ ಇಮ್ಮಡಿ ಗೋವಿಂದನ ಕಾಲಾವಧಿಗೆ ಸೇರಬೇಕು. ಎಂದರೆ ಇಮ್ಮಡಿ ಗೋವಿಂದನ ಕಾಲದ ಕನ್ನಡ ಶಾಸನಗಳ ಸಂಖ್ಯೆ ಕನಿಷ್ಟ ಆರು ಎಂದಾಗುತ್ತದೆ. ಈ ಕಾರಣ SII ಸಂ. XVIII ಮತ್ತು KRI-Progress Report 1953-57 ರಲ್ಲಿನ ರಾಷ್ಟ್ರಕೂಟ ಶಾಸನಗಳ ಅನುಪೂರ್ವಿಯನ್ನು ಬದಲಿಸಬೇಕಾದ ಅನಿವಾರ್ಯತೆ ಈಗ ಒದಗಿ ಬಂದಿದೆ.

ಡಾ॥ ಚನ್ನಬಸವ ಹಿರೇಮಠ*

# ನಂದವಾಡಿಗೆ ಶಾಸನದ ಭಾವನಗಂಧವಾರಣ-ಒಂದು ಸ್ಪಷ್ಟನೆ

ಇಂದಿನ ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನ ನಂದವಾಡಿಗೆಯು ಪ್ರಾಚೀನ ಕರಡಿಕಲ್ಲು–೪೦೦ ವಿಭಾಗದ ಒಂದು ಅಗ್ರಹಾರವಾಗಿತ್ತು.[1] ಕಾಲನಿರ್ದೇಶನವಿಲ್ಲದ ಚಾಲುಕ್ಯ ತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರ (ಕ್ರಿ.ಶ. ೧೦೪೩–೧೦೬೮)ನ ಆಳ್ವಿಕೆಯಲ್ಲಿ ರಚನೆಯಾದ ಅಲ್ಲಿಯ ಒಂದು ಶಾಸನ ತುಂಬ ಪ್ರಾಮುಖ್ಯತೆಯನ್ನು ಪಡೆದಿದೆ.[2] ನಾಗಲಿಂಗ ದೇವಾಲಯದ ಎದುರಿನ ಕಂಬದ ಮೂರು ಮುಖಗಳಲ್ಲಿ ಕೊರೆಯಲ್ಪಟ್ಟ ಅದರ ಮೊದಲನೆಯ ಭಾಗ ಚಕ್ರವರ್ತಿ ಮತ್ತು ಅಸ್ಪಷ್ಟ ಮಹಾಮಂಡಳೇಶ್ವರರ ಆಳ್ವಿಕೆಯನ್ನು, ಎರಡನೆಯ ಭಾಗ 'ಭಾವನಗಂಧವಾರಣ'ನ ದಾನದ ವಿವರಗಳನ್ನು ಮತ್ತು ಮೂರನೆಯ ಭಾಗವು ಫಲಶ್ರುತಿಯನ್ನು ಒಳಗೊಂಡಿದೆ. ಚಕ್ರವರ್ತಿ ಸೋಮೇಶ್ವರ ಮತ್ತು ಆತನ ಕಾಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಅಲ್ಲಿಯ ಮಹಾಮಂಡಳೇಶ್ವರ ಮತ್ತು ಭಾವನಗಂಧವಾರಣರು ಒಬ್ಬನೆ ? ಅಥವಾ ಬೇರೆ ಬೇರೆ ವ್ಯಕ್ತಿಗಳೆ ? ಎಂಬ ಬಗ್ಗೆ ಚರ್ಚೆ ನಡೆದಿದೆ.

ಶಾಸನ ಸಂಪಾದಕರು ಇದರ ಕಾಲ ಕ್ರಿ.ಶ. ೧೦೭೦ ಎಂದು ನಿರ್ಣಯಿಸುತ್ತ ಇಲ್ಲಿಯ ಮಹಾಮಂಡಳೇಶ್ವರನ ಹೆಸರಿರುವ ಭಾಗ ತ್ರುಟಿತವಾಗಿದ್ದು, ಭಾವನಗಂಧವಾರಣನೂ ಯಾರೆಂಬುದು ಸ್ಪಷ್ಟವಾಗುವುದಿಲ್ಲ ಎಂದಿದ್ದಾರೆ.[3] ಡಾ॥ ಪಿ.ಬಿ. ದೇಸಾಯಿ ಅವರು ಒಂದು ಹೆಜ್ಜೆ ಮುಂದೆ ಹೋಗಿ ಈ ಮಹಾಮಂಡಳೇಶ್ವರನು 'ಭಾವನಗಂಧವಾರಣ' ಬಿರುದನ್ನು ಧರಿಸಿದ್ದು, ದುರ್ದೈವದಿಂದ ಆತನ ಹೆಸರಿರುವ ಶಾಸನದ ಭಾಗ ತ್ರುಟಿತಗೊಂಡಿದೆ ಎಂದಿದ್ದಾರೆ.[4] ಈಚೆಗೆ ಡಾ॥ ಹಂಪನಾ ಅವರು ಇಲ್ಲಿಯ ಮಹಾಮಂಡಳೇಶ್ವರ ಚಕ್ರವರ್ತಿ ಒಂದನೆಯ ಸೋಮೇಶ್ವರನ ಮಗ ಎರಡನೆಯ ಸೋಮೇಶ್ವರನೆಂದು ಸರಿಯಾಗಿಯೇ ಗುರುತಿಸಿದ್ದಾರೆ. ಆದರೆ ಇವರೂ ಕೂಡ ಡಾ॥ ಪಿ. ಬಿ. ದೇಸಾಯಿ ಅವರ ಮಾರ್ಗವನ್ನು ಅನುಸರಿಸಿ ಅವನಿಗೆ 'ಭಾವನಗಂಧವಾರಣ' ಬಿರುದಿತ್ತು ಎಂಬ ನಿರ್ಣಯಕ್ಕೆ ಬಂದಿದ್ದಾರೆ.[5]

ಚಕ್ರವರ್ತಿ, ರಾಣಿ, ಮಹಾಮಂಡಳೇಶ್ವರ ಮೊದಲಾದವರಿಗೆ ಪ್ರಿಯರಾಗಿದ್ದವರು ಅವರವರ ಅಂಕಕಾರನೆಂದೂ, ಗಂಧವಾರಣನೆಂದೂ ಕರೆದುಕೊಳ್ಳುತ್ತಿದ್ದುದನ್ನು ಶಾಸನಗಳಲ್ಲಿ ಕಾಣುತ್ತೇವೆ.

ಉದಾ : 'ಮೈಳಲದೇವಿಯಂಕಕಾರ', 'ತ್ರಿಭುವನಮಲ್ಲನಂಕಕಾರ', 'ಚಂದಲದೇವಿಯ ಗಂಧವಾರಣ' ಇತ್ಯಾದಿ.

---

* ಕನ್ನಡ ಅಧ್ಯಾಪಕ, ಎಲ್. ವಿ. ಡಿ. ಕಾಲೇಜ್, ರಾಯಚೂರು.

1 ಸೌ. ಇ. ಇ. VI, ೫೫೮, ಹೊಯ್ಸಳ ವೀರಬಲ್ಲಾಳದೇವ. ಹೇಮಾವತಿ, ಮಡಕಶಿರ (ತಾ), ಅನಂತಪುರ (ಜಿ).

2 ಅದೇ. XI(i) ೧೦೩, ಕ್ರಿ. ಶ. ೧೦೭೦, ನಂದವಾಡಿಗೆ, ಹುನಗುಂದ (ತಾ), ಬಿಜಾಪುರ (ಜಿ).

3 ಅದೇ. ಪು. ೯೯–೧೦೦.

4 P. B. Desai., *Jainism in South India and some Jaina Epigraphas*, 1957, p. 106-7.

5 ಹಂಪನಾ., ನಂದವಾಡಿಗೆ ಮಹಾಮಂಡಳೇಶ್ವರ, ಸಾಧನೆ, ಸಂ. ೨೧-೨೨, ಸಂ. ೧–೪, ೧-೨ (ಸಂಯುಕ್ತ), ಪು. ೫೦-೭೪.

ಇನ್ನು ಅವರೊಂದಿಗಿನ ತಮ್ಮ ಸಂಬಂಧವನ್ನು ಸೂಚಿಸಲು 'ಮಾವನಂಕಕಾರ', 'ಅಮ್ಮನಗಂಧವಾರಣ', 'ಭಾವನ ಗಂಧವಾರಣ'ರೆಂದು ಕರೆದುಕೊಂಡಿದ್ದಾರೆ.

ಎರಡನೆಯ ಸೋಮೇಶ್ವರನ ಅನೇಕ ಬಿರುದು ಗಳಲ್ಲಿ 'ಅಮ್ಮನಗಂಧವಾರಣ'ವೂ ಒಂದು.[6] ಆದರೆ ನಂದವಾಡಿಗೆ ಶಾಸನದಲ್ಲಿ ಬಳಕೆಗೊಂಡಿರುವುದು ಅಮ್ಮನ ಗಂಧವಾರಣವಲ್ಲ ; ಭಾವನಗಂಧವಾರಣ. 'ಅಮ್ಮ' ಎಂದರೆ ತಂದೆ ಎಂದರ್ಥ. ಇನ್ನು 'ಭಾವ' ಪದಕ್ಕೆ ಅಕ್ಕನಗಂಡ ಎಂಬರ್ಥವಿದೆ. ಆದ್ದರಿಂದ ಅಮ್ಮನಗಂಧ ವಾರಣನು ತಂದೆಯ ಅಂಗರಕ್ಷಕನಾಗಿದ್ದರೆ, ಭಾವನಗಂಧ ವಾರಣನು ಅಕ್ಕನಗಂಡನಿಗೆ ಅಂಗರಕ್ಷಕನಾಗಿದ್ದನೆಂದು ಹೇಳಬೇಕಾಗುತ್ತದೆ. ಪಂಪ–ರನ್ನರ ಕಾವ್ಯಗಳಲ್ಲಿ ಅಮ್ಮನ ಗಂಧವಾರಣವು ಇದೇ ಅರ್ಥದಲ್ಲಿಯೇ ಬಳಕೆಗೊಂಡಿದೆ.[7] ಆದ್ದರಿಂದ ನಂದವಾಡಿಗೆ ಶಾಸನದ ಮಹಾಮಂಡಳೇಶ್ವರ ಮತ್ತು ಭಾವನಗಂಧವಾರಣನು ಎರಡನೆಯ ಸೋಮೇ ಶ್ವರನೆಂಬ ಹಂಪನಾ ಅವರ ಅಭಿಪ್ರಾಯ ಸರಿಯಲ್ಲ. ಅಂದರೆ ತಂದೆಯು ಮಗನಿಗೆ ಭಾವನಾಗಿರಲು ಸಾಧ್ಯವೇ ಇಲ್ಲ. ಹೀಗಾಗಿ ಇಲ್ಲಿಯ ಭಾವನಗಂಧವಾರಣನು ಬೇರೊಬ್ಬ ವ್ಯಕ್ತಿ ಎಂಬುದು ಸ್ಪಷ್ಟ.

ಬೆಳ್ವೊಲ–೩೦೦, ಪುಲಿಗೆರೆ-೩೦೦, ವಿಭಾಗಗಳನ್ನು ಕ್ರಿ. ಶ. ೧೦೬೨ರಲ್ಲಿ ಮಹಾಮಂಡಳೇಶ್ವರ ಪೆರ್ಮಾಳ ಮಾದರಸನು ಆಳುತ್ತಿದ್ದನೆಂದು ಮುಳುಗುಂದ ಶಾಸನ ಹೇಳಿದೆ.[8] ಅವನು 'ಸುಬಟಮದನ ಮಹೇಶ್ವರ', 'ತ್ರಿಪುರಹರ ಲಬ್ಧವರಪ್ರಸಾದ', 'ತ್ಯಾಗವಿನೋದ', 'ಮುಱುಡಿಯ ಮಂಡಳಿಕ', 'ಬಿರುದಬಂಗಾರ', 'ಮೈಳಲ ದೇವಿಯಂಕಕಾರ', 'ತ್ರೈಳೋಕ್ಯ ಮಕರಧ್ವಜ', 'ತ್ರೈಳೋಕ್ಯ ಮಲ್ಲದೇವರಚಟ್ಟ', 'ಚಾಳುಕ್ಯ ಸಂತಾರಣ', 'ಭಾವನಗಂಧವಾರಣ', 'ಚೋಳಕುಳಕಾಳದಂಡ', 'ಚೋಳಘರಟ್ಟ', 'ರಾಜಾಧಿರಾಜ ಚೋಳಂಗೊನ್ದ' ಮೊದಲಾದ ಬಿರುದುಗಳನ್ನು ಧರಿಸಿದ್ದನು. ಯರಗುಪ್ಪಿ[9] ಗದಗ[10], ನವಲಿ[11] ಶಾಸನಗಳೂ ಅವನನ್ನು 'ಭಾವನ ಗಂಧವಾರಣ', 'ರಾಜಾಧಿರಾಜ ಶಿರಚ್ಛೇದನ' ಇತ್ಯಾದಿ ಯಾಗಿ ಕರೆದಿವೆ. ನಂದವಾಡಿಗೆ ಶಾಸನವೂ ಭಾವನಗಂಧ ವಾರಣನಿಗೆ 'ಚೋಳಂಗೊಂಡ' ಎಂಬ ಬಿರುದಿದ್ದುದನ್ನು ದಾನದ ಸಂದರ್ಭದಲ್ಲಿ ಹೇಳಿದೆ.[12] ಆದ್ದರಿಂದ ಈ ಶಾಸನದ ಭಾವನಗಂಧವಾರಣನು ಪೆರ್ಮಾಳಮಾದರಸ ನೆಂಬುದು ಸ್ಪಷ್ಟ.

ಪೆರ್ಮಾಳ ಮಾದರಸನ ಆಳ್ವಿಕೆಯನ್ನು ಹೇಳುವ ಕೆಲವು ಶಾಸನಗಳು ಚಕ್ರವರ್ತಿ ಸೋಮೇಶ್ವರನ ಪಿರಿಯರಸಿ ಮೈಳಲದೇವಿಯನ್ನು ಉಲ್ಲೇಖಿಸಿವೆ.[13] ಸೋಮೇಶ್ವರನ ರಾಣಿಯರಲ್ಲಿ ಕೆಲವರು ಗಂಗ, ಹೊಯ್ಸಳರಂಥ ಸಾಮಂತರ ಕುಮಾರಿಯರೆಂಬುದು ತಿಳಿದುಬರುತ್ತದೆ.[14] ಅದರಂತೆ ಮೈಳಲದೇವಿಯೂ ಬಹುಶಃ ಪೆರ್ಮಾಳ ಮಾದರಸನ ಹಿರಿಯ ಸಹೋದರಿ

---

6 ಇದಲ್ಲದೆ ಸಮರ ಪ್ರಚಂಡ, ಪರಕರಿಮದನಿವಾರಣ, ದಾನಕಾನೀನ, ರೂಪ ಮನೋಜ-ಮೊದಲಾದ ಬಿರುದುಗಳನ್ನು ಧರಿಸಿದ್ದನು. ಅವನಿಗೆ ಭಾವನಗಂಧವಾರಣ ಬಿರುದಿದ್ದುದನ್ನು ಯಾವ ಶಾಸನಗಳೂ ಉಲ್ಲೇಖಿಸಿಲ್ಲ. ನೋಡಿ : ಸೌ ಇ ಇ XI (i) ೮೪, ೧೦೪೯, ಹೊಂಬಳ, ಗದಗ (ತಾ) ; ಎ ಇ XVI, ೧೦೫೩, ಮುಳುಗುಂದ, ಗದಗ (ತಾ).

7 ವಿಕ್ರಮಾರ್ಜುನ ವಿಜಯ ೧–೧೪೮ ವಚನ ; ಸಾಹಸಭೀಮವಿಜಯ ೧-೧೦.

8 ಸೌ ಇ ಇ XI (i) ೯೭, ೧೦೬೨ ಡಿಸೆಂಬರ್ ೨೩, ಮುಳುಗುಂದ, ಗದಗ (ತಾ).

9 ಬಿ. ನಂ. ೩೬/೧೯೩೩-೩೪, ಉಲ್ಲೇಖ : Gopal, B. R., *The Chalukyas of Kalyani and the Kalachuris*, 1981, Dharwad, p. 202.

10 ಬಿ. ನಂ. ೧೮೯/೩೨-೩೩, ೧೦೬೪, ಗದಗ, ಗದಗ (ತಾ).

11 ಬಿ. ನಂ. ೭೧೪/೫೮-೫೯, ೧೦೬೬, ನವಲಿ, ಲಿಂಗಸ್ಗೂರು (ತಾ), ರಾಯಚೂರು (ಜ).

12 "ರಾಜಧಾನಿ ಕಲ್ಯಾಣದೊಳ್ ತುಂಬೇಶ್ವರಮುಂ ಮಟಮುಂ ದೀಪ ಮಾಲೆಯುಂ ಕೆಱೆಯುಮಂ ರಾಜಧಾನಿಯಣ್ಣಿಗೆಱೆಯೊಳ್ ಚೋಳಂಗೊಂಡ ಶ್ರೀ ಮತ್ರೈಪುರುಷದೇವರ ಸಾಲೆಯುಂ..........."

13 ಸೌ ಇ ಇ XI (i) ೧೦೩, ೧೦೭೦, ನಂದವಾಡಿಗೆ, ಹುನುಗುಂದ (ತಾ) : ಅದೇ. ೯೭, ೧೦೬೨ ಡಿಸೆಂಬರ್ ೨೩, ಮುಳುಗುಂದ, ಗದಗ (ತಾ).

14 ನೋಡಿ. Gopal B. R., *The Chalukyas of Kalyani.* p. 197–98.

ಯಾಗಿರಬೇಕು. ಆದ್ದರಿಂದ ಅವನು ಮೈಳಲದೇವಿಯ ಅಂಕಕಾರ, ತ್ರೈಲೋಕ್ಯಮಲ್ಲದೇವರ ಚಟ್ಟನೆನಿಸಿದ್ದನಲ್ಲದೆ ಚಕ್ರವರ್ತಿಯ ಭಾವನಗಂಧವಾರಣನೂ ಆಗಿದ್ದಾನೆ. ಮೈಳಲದೇವಿಯು ಮಾದರಸನ ಸಹೋದರಿ ಎಂದು ಸಮರ್ಥಿಸಲು ಆಧಾರಗಳ ಕೊರತೆ ಎದ್ದುಕಾಣುತ್ತದೆ ಯಾದರೂ ಹಾಗೆ ಊಹಿಸಲವಕಾಶವಿದೆ. ಬಹುಶಃ ಈ ಕೌಟುಂಬಿಕ ಸಂಬಂಧ ಕಾರಣವಾಗಿಯೇ ಅವನು ಚೋಳರ ವಿರುದ್ಧ ಸಮರ ಸಾರಿರಬೇಕು.

ದಕ್ಷಿಣದಲ್ಲಿ ಬಲಾಢ್ಯ ಅರಸರೆಂದರೆ ಚೋಳರು. ಇವರಿಗೂ ಚಾಲುಕ್ಯರಿಗೂ ವಂಶಪಾರಂಪರ್ಯದಿಂದ ಜಗಳ ನಡೆದುಕೊಂಡು ಬಂದಿದೆ. ಒಮ್ಮೆ ಚಾಲುಕ್ಯ ಚಕ್ರವರ್ತಿ ಗೆದ್ದರೆ ಮತ್ತೊಮ್ಮೆ ಚೋಳರು ಗೆಲ್ಲು ತ್ತಿದ್ದರು. ಹೀಗೆ ನಡೆದ ಅನೇಕ ಯುದ್ಧಗಳಲ್ಲಿ 'ಕೊಪ್ಪಂ' ಯುದ್ಧವೂ ಒಂದು. ಈ ಸ್ಥಳವು ಇಂದಿನ ರಾಯಚೂರು ಜಿಲ್ಲೆಯ 'ಕೊಪ್ಪಳ'ವೆಂದು ವಿದ್ವಾಂಸರು ಗುರುತಿಸಿದ್ದಾರೆ.[15] ಈ ಕದನದಲ್ಲಿ ೧ನೇ ರಾಜಾಧಿ ರಾಜನು ಯುದ್ಧಭೂಮಿಯಲ್ಲಿಯೇ ಸಾಯುತ್ತಾನೆ. ಪೆರ್ಮಾಳ ಮಾದರಸನನ್ನು ಶಾಸನಗಳು 'ರಾಜಾಧಿರಾಜ ಚೋಳಂಗೊನ್ದ', 'ರಾಜಾಧಿರಾಜ ಚೋಳ ಶಿರಚ್ಛೇದನ' ಎಂದು ಸ್ಪಷ್ಟವಾಗಿ ಕರೆದಿರುವುದರಿಂದ ಕೊಪ್ಪಳ ಯುದ್ಧ ದಲ್ಲಿ ಅವನು ಭಾಗವಹಿಸಿ ಚಾಲುಕ್ಯರ ಆಜನ್ಮ ವೈರಿ ಗಳಾದ ಚೋಳರನ್ನು ಹಿಮ್ಮೆಟ್ಟಿಸಿ, ರಾಜಾಧಿರಾಜ ಚೋಳನನ್ನು ಕೊಂದಿರಬೇಕು. ಅವನ ಈ ಹೋರಾಟದ ಸನ್ನಿವೇಶ ಮತ್ತು ಅಪ್ರತಿಮ ಸಾಹಸಗಳನ್ನೇ ನಂದವಾಡಿಗೆ ಶಾಸನ ಹೀಗೆ ಬಣ್ಣಿಸಿದೆ.[16]

ಚಂ ॥ ಪದಹತಿಯಿಂನೆಲಂನ್ನಡುಗೆ ಕರ್ಣಚಳಾಚಳದಿಂದ ಮಬ್ಬಿಗ
ದ್ದಗದಗೆ ಕರಾಭಿಘಾತದ ಗುರ್ವ್ವಣೆಯಿಂ ಭಗಣಂ ಧರಾತಳ
ಕ್ಕುದಿರೆ ನಿಶಾತದನ್ತಘನ ಘಟ್ಟಣೆಗಳ್ಕಿದಿಶಾಗ ಜವ್ರಜಂ
ಬೆದಱೆ ವಿರೋಧಿಯಂ ತುಳಿದು ಕೊಲ್ವುದು ಭಾವನಗಂಧವಾರಣಂ

ಚಂ ॥ ಪರನರಪಾಳ ಸೈನ್ಯ ನಪರಕ್ತ ಸರೋವರಮಂ ಕಲಂಕಿ ಭೀ
ಕರ ಸುಭಟಾಂತ್ರ ಜಾಳವ್ಮಿದು ಪಂಕಜನಾಳ ಮನುಜ್ಜಿ ಮಸ್ತಕಾಂ
ಬುರುಹಮನೊಂದು ಗುಂದದೆ [ಕಿ]ಮುಟ್ಟಿ ಜಿತ ಸ್ರಮದಿಂತಗುಳ್ದು ಸಂ
ಗರ ಜಳಕೇಳಿಯಂ ಮೆಱೆಯುತಿರ್ಪುದು ಭಾವನ ಗಂಧವಾರಣಂ

ಪ್ರಭುವರ್ಗದವರು ದಾನ-ಧರ್ಮಗಳನ್ನು ಸಾಮಾನ್ಯವಾಗಿ ಪುತ್ರೋತ್ಸವ, ಪಟ್ಟಾಭಿಷೇಕ, ಯುದ್ಧ ವಿಜಯ-ಮೊದಲಾದ ಸಂದರ್ಭಗಳಲ್ಲಿ ಮಾಡುತ್ತಿದ್ದರು. ಆದ್ದರಿಂದ ಪೆರ್ಮಾಳ ಮಾದರಸನು ರಾಜಾಧಿರಾಜ ಚೋಳನನ್ನು ಯುದ್ಧದಲ್ಲಿ ಸೋಲಿಸಿ ಕೊಂದು, ವಿಜಯಿ ಯಾದ ಸ್ಮರಣಾರ್ಥವಾಗಿ ನಾಡಿನ ಅನೇಕ ಭಾಗಗಳಲ್ಲಿ ಶಿವ-ಜಿನ ದೇವಾಲಯ, ಕೆರೆ-ಕಟ್ಟೆಗಳನ್ನು ಕಟ್ಟಿಸಿರ ಬೇಕು. ಈ ವಿಜಯ ಸಾಧನೆಯಿಂದ ಸಂತೃಪ್ತಿಗೊಂಡ ಚಕ್ರವರ್ತಿ ಇದುವರೆಗೆ ತನ್ನ ಮಗ ಎರಡನೆಯ ಸೋಮೇಶ್ವರನ ಆಳ್ವಿಕೆಯಲ್ಲಿದ್ದ ಬೆಳ್ವೊಲ-೩೦೦, ಪುಲಿಗೆರೆ-೩೦೦ ವಿಭಾಗಗಳ ಒಡೆತನವನ್ನು ಭಾವನಗಂಧ ವಾರಣನಿಗೆ ವಹಿಸಿಕೊಟ್ಟನು.[17] ಈ ಒಡೆತನದ ಜೊತೆಗೆ

15 Gopal B. R., *The Chalukyas of Kalyani*. ಪು. ೧೬೯.
16 ಸೌ ಇ ಇ XI (i) ೧೦೩, ೧೦೭೦, ನಂದವಾಡಿಗೆ
17 ಎರಡನೆಯ ಸೋಮೇಶ್ವರನು ಕ್ರಿ. ಶ. ೧೦೪೯-೧೦೫೪ರ ವರೆಗೆ ಮಾತ್ರ ಈ ವಿಭಾಗಗಳನ್ನು ಆಳುತ್ತಿದ್ದ. ಮುಂದೆ ಕ್ರಿ. ಶ. ೧೦೫೪-೧೦೬೦ರ ವರೆಗೆ ರಾಷ್ಟ್ರಕೂಟರ ಮನ್ನೆಯ ಮಹಾಸಾಮಂತ ಇಂದ್ರಕೇಸಿಯರಸನು ಆಳತೊಡಗಿದನೆಂದು ಕುಮಿಬಾಳ ಮತ್ತು ಇತರ ಶಾಸನಗಳು ಹೇಳಿವೆ. (ನೋಡಿ. ಪೂರ್ವೋಕ್ತ. ಗೋಪಾಲ್, ಬಿ. ಆರ್., ಪು. ೨೦೨). ಆದರೆ ಕ್ರಿ. ಶ. ೧೦೬೨ ರಿಂದ ಈ ಇಂದ್ರಕೇಸಿಯ ಜೊತೆಗೆ ಮಹಾಮಂಡಲೇಶ್ವರ ಪೆರ್ಮಾಳ ಮಾದರಸನೂ ಈ ವಿಭಾಗಗಳ ಒಡೆಯನಾಗಿದ್ದ ನೆಂದು ಶಾಸನಗಳು ಸ್ಪಷ್ಟವಾಗಿ ಉಲ್ಲೇಖಿಸಿವೆ. ಪೆರ್ಮಾಳ ಮಾದರಸನು ಚಕ್ರವರ್ತಿಯಿಂದ ನೇರವಾಗಿ ನೇಮಕಗೊಂಡಿದ್ದು, ಅವನ ಆಳ್ವಿಕೆಯು ಕೇವಲ ಒಂದು ತಲೆಮಾರಿಗೆ ಸೀಮಿತಗೊಂಡಿದ್ದರಿಂದ ವಂಶಪರಂಪರೆಯಾಗಿ ಆಳುತ್ತಿದ್ದ ಇಂದ್ರಕೇಸಿಯೂ ಬಹುಶಃ ಹಾಗೆಯೇ ಮುಂದುವರೆದಿರಬೇಕು.

ಅವನು ಮಹಾಮಂಡಳೇಶ್ವರನಾಗಿ ಪದೋನ್ನತಿಯನ್ನೂ ಪಡೆದನು.

ಇನ್ನು ರಾಜಾಧಿರಾಜ ಚೋಳನ ೩೬ನೇಯ ವರ್ಷದ ಉಲ್ಲೇಖದ ಮೇಲಿಂದ ಕೊಪ್ಪಳ ಯುದ್ಧವು ಕ್ರಿ. ಶ. ೧೦೫೪ರ ಆರಂಭದ ತಿಂಗಳಿನಲ್ಲಿ ನಡೆದಿರಬೇಕೆಂದು ವಿದ್ವಾಂಸರು ಗುರುತಿಸಿದ್ದಾರೆ.[18] ಅಂದರೆ ಕ್ರಿ. ಶ. ೧೦೫೪ರಲ್ಲಿ ರಾಜಾಧಿರಾಜನು ಈ ಯುದ್ಧದಲ್ಲಿ ಮಡಿದಿದ್ದಾನೆ ಆದ್ದರಿಂದ ಪೆರ್ಮಾಳ ಮಾದರಸನು ಈ ವಿಜಯದ ಒಂದು ವರ್ಷದ ಅವಧಿಯಲ್ಲಿಯೇ ದೇವಾಲಯಗಳನ್ನು ನಿರ್ಮಿಸಿ ನಂದವಾಡಿಗೆ ಶಾಸನವನ್ನು ಬರೆಸಿರಬೇಕು. ಹೀಗಾಗಿ ಕ್ರಿ ಶ. ೧೦೭೦ ನಂದವಾಡಿಗೆ ಶಾಸನದ ಕಾಲವಾಗಿರದೆ ಅದು ಕ್ರಿ. ಶ. ೧೦೫೫ ರಿಂದ ೧೦೬೦ರ ಮಧ್ಯದಲ್ಲಿಯೇ ರಚನೆಗೊಂಡಿರಬೇಕು. ಏಕೆಂದರೆ ನಂದವಾಡಿಗೆ ಶಾಸನ ರಚನೆಗೊಂಡಾಗ ಅವನಿನ್ನೂ ಮಹಾಮಂಡಳೇಶ್ವರನಾಗಿ ಪದೋನ್ನತಿ ಪಡೆದಿರಲಿಲ್ಲ. ಆದರೆ ಕ್ರಿ.ಶ. ೧೦೬೨ರ ವೇಳೆಗೆ ಮಹಾಮಂಡಳೇಶ್ವರನಾಗಿ ಪದೋನ್ನತಿ ಪಡೆದಿದ್ದನೆಂದು ಯರಗುಪ್ಪಿ ಶಾಸನ ಹೇಳಿದೆ.[19]

ಒಟ್ಟಿನಲ್ಲಿ ಇದುವರೆಗೆ ವಿದ್ವಾಂಸರ ಚರ್ಚೆಗೆ ಗ್ರಾಸವಾಗಿದ್ದ ನಂದವಾಡಿಗೆ ಶಾಸನದ ಭಾವನಗಂಧ ವಾರಣನು ಚಾಲುಕ್ಯರ ನಿಷ್ಠಾವಂತ ಸಾಮಂತನಾದ ಪೆರ್ಮಾಳ ಮಾದರಸನಾಗಿದ್ದಾನೆ. ತನ್ನ ಅಕ್ಕ ಮೈಳಲ ದೇವಿಯನ್ನು ಚಕ್ರವರ್ತಿ ಒಂದನೆಯ ಸೋಮೇಶ್ವರನಿಗೆ ಕೊಡುವುದರ ಮೂಲಕ ಚಾಲುಕ್ಯ ಸಂಬಂಧಿಯಾದನು. ಚಾಲುಕ್ಯ ಸಾಮ್ರಾಜ್ಯಕ್ಕೆ ಕಂಟಕಪ್ರಾಯನಾಗಿದ್ದ ರಾಜಾಧಿರಾಜನನ್ನು ಸೋಲಿಸಿ ಚೋಳಕುಳಕಾಳದನ್ನ, ರಾಜಾಧಿರಾಜಚೋಳಂಗೊನ್ದ ಮೊದಲಾದ ಬಿರುದುಗಳನ್ನು ಧರಿಸಿದ್ದಾನೆ. ಇದರಿಂದ ಚಕ್ರವರ್ತಿಯ ಕೃಪೆಗೆ ಪಾತ್ರನಾಗಿ ಮಹಾಮಂಡಳೇಶ್ವರನಾಗಿ ಪದೋನ್ನತಿಯನ್ನು ಪಡೆದನಲ್ಲದೆ ಬೆಳ್ವೊಲ, ಪುಲಿಗೆರೆ ವಿಭಾಗಗಳ ಒಡೆತನವನ್ನೂ ಪಡೆದುಕೊಂಡನು. ಆದರೆ ಪೂರ್ವದ ಅವನ ಸ್ಥಾನಮಾನ ಮತ್ತು ಆಳ್ವಿಕೆಯ ವಿವರಗಳು ತಿಳಿಯುವುದಿಲ್ಲ. ಇನ್ನು ಮುಂದೆ ಅವುಗಳನ್ನು ಶೋಧಿಸಬೇಕಾಗಿದೆ.

18 ರಾಜಾಧಿರಾಜನ ನಂತರ ಆತನ ತಮ್ಮ ಎರಡನೆಯ ರಾಜೇಂದ್ರ ಚೋಳನು ಕ್ರಿ. ಶ. ೧೦೫೫, ಆಗಸ್ಟ್ ೧೭ರಲ್ಲಿ ಆಳ್ವಿಕೆ ನಡೆಸುತ್ತಿದ್ದನೆಂದು ಮಣಿಮಂಗಲ ಶಾಸನ ಹೇಳಿದೆ. ಆದ್ದರಿಂದ ಕೊಪ್ಪಳ ಯುದ್ಧವು ಇದಕ್ಕಿಂತ ಪೂರ್ವದಲ್ಲಿಯೇ ನಡೆದಿರಬೇಕು. ರಾಜಾಧಿರಾಜನ ೩೬ನೇ ವರ್ಷದ ಆಳ್ವಿಕೆಯ ಉಲ್ಲೇಖ ಒಂದು ಶಾಸನದಲ್ಲಿದೆ. ಅದು ಕ್ರಿ. ಶ. ೧೦೫೪ಕ್ಕೆ ಸರಿಹೊಂದುತ್ತದೆ. ಅಲ್ಲದೆ ಅವನು ಶಕ ೯೭೬ನೆಯ ಜಯಸಂವತ್ಸರದ ವೈಶಾಖದಲ್ಲಿ ರಣರಂಗದಲ್ಲಿ ಮಡಿದುದನ್ನು ಶಾಸನಗಳು ಹೇಳಿವೆ. ಇದು ಕ್ರಿ. ಶ. ೧೦೫೪ರ ಮೇ ತಿಂಗಳಿಗೆ ಸರಿಹೊಂದುತ್ತದೆ. ಆದ್ದರಿಂದ ಕ್ರಿ. ಶ. ೧೦೫೪ರ ಆರಂಭದ ತಿಂಗಳಿನಲ್ಲಿ ಕೊಪ್ಪಳ ಯುದ್ಧವು ನಡೆದಿರಬೇಕು. ವಿವರಗಳಿಗೆ ನೋಡಿ. ಪೂರ್ವೋಕ್ತ. ಗೋಪಾಲ್ ಬಿ. ಆರ್., ಪು. ೧೬೯-೭೦.

19 ಬಿ. ನಂ. ೩೬/೩೩-೩೪, ಯರಗುಪ್ಪಿ.

ಎಸ್. ಸೋಮನಾಥರಾವ್*

# ಶಾಸನೋಕ್ತ ಷೋಡಶ ಮಹಾದಾನಗಳು

ಶಾಸನಗಳ ಅಭ್ಯಾಸ ಮಾಡುವವರಿಗೆ ಸ್ಪಷ್ಟವಾಗಿ ಗೋಚರವಾಗುವ ವಿಚಾರವೆಂದರೆ, ಶಾಸನ (Inscriptions) ಹಾಗೂ ದಾನಗಳ ನಂಟು. ಅನೇಕ ವೇಳೆ ಶಾಸನವೆಂದರೆ ದಾನ, ದಾನವೆಂದರೆ ಶಾಸನ ಎನ್ನುವಷ್ಟರ ಮಟ್ಟಿಗೆ ಅಭಿಪ್ರಾಯ ಮೂಡುತ್ತದೆ. ಶಾಸನಗಳಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಯಾವುದೇ ವಿಷಯ ವಿದ್ದರೂ ಸಹ ದಾನ ಅಥವಾ ಕೊಡುಗೆಯ ವಿಚಾರವಿದ್ದೇ ಇರುತ್ತದೆ. ಶಾಸನಗಳಲ್ಲಿ ಅನೇಕ ಬಗೆಯ ದಾನಗಳ ಉಲ್ಲೇಖ ಸಿಗುತ್ತದೆ. ಅಂತಹ ದಾನಗಳಲ್ಲಿ ನಮಗೆ ಆಗ್ಗಿಂದಾಗ್ಗೆ ಷೋಡಶ ಮಹಾದಾನಗಳ ಉಲ್ಲೇಖ ಬರುತ್ತದೆ.

ಶಾಸನಗಳ ಹಿನ್ನೆಲೆಯಲ್ಲಿ ಷೋಡಶ ಮಹಾ ದಾನಗಳ ಐತಿಹಾಸಿಕ, ಧಾರ್ಮಿಕ ಹಾಗೂ ಸಾಮಾಜಿಕ ಪ್ರಭಾವವನ್ನು ವಿವೇಚಿಸಲು ಪ್ರಯತ್ನಿಸಿದ್ದೇನೆ. ಈ ದಿಸೆಯಲ್ಲಿ ಡಾ॥ ಎಂ. ಚಿದಾನಂದಮೂರ್ತಿಯವರು ತಮ್ಮ ಸಂಶೋಧನ ತರಂಗ ಸಂಪುಟ–೨ರಲ್ಲಿ ವಿವೇಚಿಸಿ ದ್ದಾರೆ.

ಶಾಸನೋಕ್ತ ಷೋಡಶ ಮಹಾದಾನಗಳ ಅಭ್ಯಾಸ ಮಾಡುವ ಮೊದಲು ಇದರ ಧಾರ್ಮಿಕ ಹಿನ್ನೆಲೆಯನ್ನು ಪರಿಶೀಲಿಸೋಣ.

ವೇದಗಳ ಕಾಲವಲ್ಲಿ ಯಾಗ ಯಜ್ಞಗಳಿಗೆ ಹೆಚ್ಚು ಪ್ರಾಶಸ್ತ್ಯವಿತ್ತು. ಬೌದ್ಧ ಹಾಗೂ ಜೈನ ಧರ್ಮಗಳ ಪ್ರಭಾವ ಸಮಾಜದ ಮೇಲೆ ಹೆಚ್ಚಾದಂತೆ ಯಾಗ ಯಜ್ಞಗಳು ತಮ್ಮ ಹಿರಿಮೆಯನ್ನು ಕಳೆದುಕೊಂಡವು.

ಮನುಸ್ಮೃತಿಯಲ್ಲಿ ದಾನಗಳ ವಿಚಾರ ಹೀಗೆ ಹೇಳಿದೆ :

ತಪಃ ಪರಂ–ಕೃತಯುಗೆ ತ್ರೇತಾಯಾಂ ಜ್ಞಾನ ಮುಚ್ಯತೆ ।
ದ್ವಾಪರೇ ಯಜ್ಞಮೇವಾಹುಃ ದಾನ ಮೇಕಂ
ಕಲೌಯುಗೇ ॥

ಮಾನಸಿಕವಾಗಿ ಮಾನವನು ತಾನು ಮಾಡುವ ಎಲ್ಲಾ ಕಾರ್ಯಗಳಲ್ಲೂ ಲೌಕಿಕ ಯಶಸ್ಸನ್ನೇ ಗುರಿ ಯಾಗಿಟ್ಟುಕೊಂಡಿರುತ್ತಾನೆ. ಹಾಗೆ ಯಶಸ್ಸಿಗಾಗಿ ತಪಸ್ಸನ್ನಾಗಲಿ, ಜ್ಞಾನಾರ್ಜನೆಯಾಗಲಿ ಮಾಡಲು ತಾಳ್ಮೆ ಯಿಲ್ಲದ ಸಮಾಜದಲ್ಲಿ ದಾನಗಳು ತಾನೇ ತಾನಾಗಿ ಪ್ರಾಮುಖ್ಯತೆ ಪಡೆಯಿತು.

ಮೊದಲಿಗೆ ನಮಗೆ ಷೋಡಶ ಮಹಾದಾನಗಳ ಉಲ್ಲೇಖ ಪುರಾಣಗಳಲ್ಲಿ ದೊರೆಯುತ್ತವೆ. ವಾಯು ಪುರಾಣ, ಮತ್ಸ್ಯಪುರಾಣ, ಅಗ್ನಿಪುರಾಣ, ಲಿಂಗ ಪುರಾಣ, ಲಿಂಗ ಮಹಾಪುರಾಣಗಳಲ್ಲಿ ಷೋಡಶ ಮಹಾ ದಾನಗಳು ಹಾಗೂ ಅವುಗಳ ಚಮತ್ಕಾರಿಕ ಶ್ರೇಯಸ್ಸು, ಫಲಗಳ ವಿಚಾರವಾಗಿ ಅಧ್ಯಾಯಗಳಿವೆ. ಹೀಗೆ ಪುರಾಣ ಕಾಲದಿಂದೀಚೆಗೆ ದಾನಗಳನ್ನು ಮಾಡುವುದರಿಂದ ಎಲ್ಲಾ ಬಗೆಯ ಪಾಪ ಪರಿಹಾರವಾಗುತ್ತದೆ, ಸುಖ–ಶಾಂತಿ

* ೪೭, ವೇಣುಗೋಪಾಲ ಲೇಔಟ್, ಗಂಗೇನಹಳ್ಳಿ, ಬೆಂಗಳೂರು-೫೬೦ ೦೩೨

ಲಭಿಸುತ್ತದೆ ಹಾಗೂ ಶ್ರೇಯೋಭಿವೃದ್ಧಿಯಾಗುತ್ತದೆ ಎಂಬ ನಂಬುಗೆ ಬಲವಾಯಿತು.

ರಾಜನು ತನ್ನ ಮತ್ತು ತನ್ನ ರಾಜ್ಯದ ಶ್ರೇಯಸ್ಸಿಗಾಗಿ ಷೋಡಶ ಮಹಾದಾನಗಳನ್ನು ಮಾಡಬೇಕು ಎಂದು ಮತ್ಸ್ಯ ಪುರಾಣದಲ್ಲಿ ಹೇಳಿದೆ. ಈ ಹಿನ್ನೆಲೆಯಲ್ಲಿ ಧಾರ್ಮಿಕ ನಂಬುಗೆ ಬಲವಾಗಿ ಬೆಳೆದಿರಬೇಕು.

ಮತ್ಸ್ಯ ಪುರಾಣದಲ್ಲಿ ಹೇಳಿರುವ ಷೋಡಶ ಮಹಾದಾನಗಳು ಅಕ್ಷರಶಃ ಶಾಸನಗಳಲ್ಲಿ ಉಲ್ಲೇಖವಾಗಿವೆ. ಮತ್ಸ್ಯ ಪುರಾಣದಲ್ಲಿ ಹೇಳಿರುವಂತೆ ಷೋಡಶ ಮಹಾದಾನಗಳು ಇವು : ೧. ತುಲಾಪುರುಷ ದಾನ ೨. ಹಿರಣ್ಯಗರ್ಭದಾನ ೩. ಬ್ರಹ್ಮಾಂಡ ದಾನ ೪. ಕಲ್ಪವೃಕ್ಷ ದಾನ ೫. ಗೋ ಸಹಸ್ರ ದಾನ ೬. ಹಿರಣ್ಯಾ ಕಾಮಧೇನು ದಾನ ೭. ಹಿರಣ್ಯಾಶ್ವದಾನ ೮. ಹಿರಣ್ಯಾಶ್ವರಥ ದಾನ ೯. ಹೇಮಹಸ್ತಿರಥದಾನ ೧೦. ಪಂಚಲಾಗಲ ದಾನ ೧೧. ಭೂದಾನ ೧೨. ವಿಶ್ವಚಕ್ರದಾನ ೧೩. ಕಲ್ಪಲತಾದಾನ ೧೪. ಸಪ್ತಸಾಗರದಾನ ೧೫. ರತ್ನಧೇನು ದಾನ ೧೬. ಪಂಚಭೂತ ಘಟ ದಾನ

ಷೋಡಶ ಮಹಾದಾನಗಳ ಸಂಕ್ಷಿಪ್ತ ವಿವರಣೆ

೧. ತುಲಾಪುರುಷದಾನ : ದಾನ ಮಾಡುವ ವ್ಯಕ್ತಿಯು ತೂಕದ ಸಮನಾದ ತೂಕದ ಚಿನ್ನವನ್ನು ವೇದ ಶಾಸ್ತ್ರ ಪಾರಂಗತನಾದ ಬ್ರಾಹ್ಮಣನಿಗೆ ದಾನ ಮಾಡುವುದು. ಈ ದಾನವು ಸಂಸಾರದಿಂದ ಪಾರು ಮಾಡುತ್ತದೆ.

೨. ಹಿರಣ್ಯಗರ್ಭ ದಾನ : ಎಪ್ಪತ್ತೆರಡು ಅಂಗುಲ ಎತ್ತರವಿರುವ, ತಾವರೆಯ ಮೊಗ್ಗಿನ ಆಕಾರದ ಶುಭಕರವಾದ ಸುವರ್ಣ ಕುಂಭವನ್ನು ಮಾಡಿ ಪುರಾಣವಲ್ಲಿ ಸವಿವರವಾಗಿ ಹೇಳಿರುವಂತೆ ಶಾಸ್ತ್ರವಿಧಿಯಂತೆ ಅದರೊಳಗೆ ಹೊಕ್ಕು ಕುಳಿತುಕೊಳ್ಳಬೇಕು. ಬ್ರಾಹ್ಮಣೋತ್ತಮರು ಗರ್ಭಾದಾನ, ಪುಂಸದಾನ, ಸೀಮಂತೋನ್ನಯನ ಮುಂತಾದ ಸಂಸ್ಕಾರವನ್ನು ಗರ್ಭಕ್ಕೆ ನಡೆಸುವರು. ನಂತರ ಆಚಾರ್ಯನು ಯಜಮಾನನನ್ನು ಎಬ್ಬಿಸುವನು. ಜಾತಕರ್ಮ ಮುಂತಾದ ಷೋಡಶ ಸಂಸ್ಕಾರವನ್ನು ಮಾಡುವರು. ಪ್ರಾಜ್ಞನಾದ ಯಜಮಾನನು ಬಳಿಕ ಸುವರ್ಣಮಯವಾದ ಗರ್ಭವನ್ನು ಋತ್ವಿಕರಿಗೆ ದಾನ ಮಾಡಬೇಕು. ಈ ದಾನದಿಂದ ದಿವ್ಯ ದೇಹವು ಲಭಿಸುವುದು ಕಲಿದೋಷವು ಬಳಿ ಸೇರದು.

೩. ಬ್ರಹ್ಮಾಂಡದಾನ : ತನ್ನ ಯೋಗ್ಯತೆಗೆ ತಕ್ಕಂತೆ ಇಪ್ಪತ್ತರಿಂದ ಸಾವಿರ ಫಲಗಳ ತೂಕದವರೆಗೆ ಎರಡು ಕಲಶಗಳು ಒಂದರೊಡನೊಂದು ಸೇರಿ ಆದಂತೆ ನಿರ್ಮಿಸಬೇಕು. ಇದನ್ನು ಶಾಸ್ತ್ರ ವಿಧಿಯಂತೆ ಪೂಜಿಸಿ ಶುಭ ದಿನದಂದು ದಾನ ಮಾಡಬೇಕು. ದಾನಿಯು ದಿವ್ಯ ದೇಹವನ್ನು ಹೊಂದಿ, ಪಾಪಗಳೆಲ್ಲಾ ಪರಿಹಾರವಾಗುವುದು.

೪. ಕಲ್ಪವೃಕ್ಷದಾನ : ಚಿನ್ನದಲ್ಲಿ ಶಾಸ್ತ್ರವಿಧಿಯಂತೆ ಕಲ್ಪವೃಕ್ಷವನ್ನು ನಿರ್ಮಿಸಿ ಶಾಸ್ತ್ರೋಕ್ತವಾಗಿ ದಾನ ಮಾಡಬೇಕು. ಸಕಲ ವಿಧವಾದ ಪಾಪಗಳಿಂದ ಬಿಡುಗಡೆಯಾಗುವನು. ಅಶ್ವಮೇಧ ಯಾಗ ಫಲ ದೊರಕುವುದು.

೫. ಗೋಸಹಸ್ರದಾನ : (ಮಹಾ ದಾನಗಳಲ್ಲೆಲ್ಲಾ ಅತಿ ಶ್ರೇಷ್ಠವಾದ ದಾನವೆಂದು ಪರಿಗಣಿಸಲ್ಪಟ್ಟಿರುವ ದಾನ) ಸುಲಕ್ಷಣವಾದ ಸುವರ್ಣ ವೃಷಭವನ್ನು ನಿರ್ಮಿಸಿ, ಪುರಾಣದಲ್ಲಿ ಹೇಳಿರುವಂತೆ ಸಾವಿರ ಗೋವುಗಳಲ್ಲಿ ಹತ್ತನ್ನು ಆರಿಸಿ ಚಿನ್ನದಿಂದ ಅಲಂಕರಿಸಿ, ಪೂಜಿಸಿ ನಂತರ ಹಾಲ್ಗರೆವ ಪಾತ್ರೆಯೊಂದಿಗೆ ಒಬ್ಬೊಬ್ಬನಿಗೂ ನೂರು, ಐವತ್ತು, ಇಪ್ಪತ್ತು, ಹತ್ತು ಅಥವಾ ಐದನ್ನಾದರೂ ದಾನವಾಗಿ ವೇದಶಾಸ್ತ್ರ ಪಾರಂಗತರಾದ ಸತ್ಪಾತ್ರ ಬ್ರಾಹ್ಮಣರಿಗೆ ದಾನ ಮಾಡಬೇಕು. ಸರ್ವಪಾಪ ಪರಿಹಾರವಾಗುವುದು. ಐಶ್ವರ್ಯವು ಯಥೇಚ್ಚವಾಗಿ ಬೆಳೆಯುವುದು.

೬. ಹಿರಣ್ಯ ಕಾಮಧೇನು ದಾನ : ಅಪ್ಪಟ ಚಿನ್ನದಿಂದ ಹಸುವನ್ನು ಕರುವನ್ನು ನಿರ್ಮಿಸಿ ಪೂಜಿಸಿ ಶಾಸ್ತ್ರವಿಧಿಯಂತೆ ದಾನ ಮಾಡಬೇಕು. ದಾನಿಯು ಪರಮೇಶ್ವರನ ಸಾನಿಧ್ಯವನ್ನೈದುವನು.

೭. ಹಿರಣ್ಯಾಶ್ವದಾನ : ಚಿನ್ನದ ಕುದುರೆಯನ್ನು (ಮೂರು ಫಲ ತೂಕದಿಂದ ಸಾವಿರ ಫಲ ತೂಕದವರೆಗೆ ತೂಕವಿಟ್ಟು) ನಿರ್ಮಿಸಿ, ಶಾಸ್ತ್ರೋಕ್ತವಾಗಿ ದಾನ

ಮಾಡಬೇಕು. ಪಾಪ ಪರಿಹಾರವಾಗುವುದು. ಅಶ್ವ ಮೇಧ ಯಾಗ ಫಲ ದೊರೆಯುವುದು.

೮. ಹಿರಣ್ಯಾಶ್ವರಥದಾನ : ಚಿನ್ನದ ತೇರು ಅದಕ್ಕೆ ನಾಲ್ಕು ಅಥವಾ ಏಳು ಕುದುರೆಗಳೂ, ನಾಲ್ಕು ಗಾಲಿಗಳೂ ನೊಗವೂ ಇರಬೇಕು. ಶಾಸ್ತ್ರವಿಧಿಯಂತೆ ದಾನ ಮಾಡಬೇಕು. ಈ ದಾನದಿಂದ ಮಹಾಪಾತಕಗಳು ದೂರವಾಗುವುದು. ಬ್ರಹ್ಮದೇವನೊಡನೆ ಚಿರಕಾಲ ಸುಖವಾಗಿರುವನು.

೯. ಹೇಮಹಸ್ತಿರಥದಾನ : ಚಿನ್ನದ ಆನೆ ಯನ್ನು ರತ್ನಖಚಿತ ರಥವನ್ನೂ ಶಾಸ್ತ್ರವಿಧಿಯಂತೆ ದಾನ ಮಾಡುವುದು.

೧೦. ಪಂಚಲಾಂಗಲ ದಾನ : ಐದು ನೇಗಿಲುಗಳೊಡನೆ ಭೂಮಿಯನ್ನು ದಾನ ಮಾಡುವುದು. (ಐದು ಚಿನ್ನದ ನೇಗಿಲುಗಳು, ಹತ್ತು ಎತ್ತುಗಳು). ಯಜಮಾನನು ತನ್ನ ಶಕ್ತಿಗೆ ತಕ್ಕಂತೆ ಪಟ್ಟಣವನ್ನೊ, ಊರನ್ನೊ, ಸಸ್ಯ ಸಮೃದ್ಧವಾದ ಹಳ್ಳಿಯನ್ನೊ ದಾನ ಮಾಡಬಹುದು. ಯುಗಾದಿ, ಗ್ರಹಣ, ಮುಂತಾದ ಪುಣ್ಯ ದಿನಗಳಲ್ಲಿ ದಾನ ಮಾಡಬೇಕು. ಘೋರ ಪಾತಕ ಗಳನ್ನು ಪರಿಹರಿಸುವ ಅತ್ಯಂತ ಶ್ರೇಷ್ಠವಾದ ದಾನ.

೧೧. ಭೂದಾನ : ಜಂಬೂ ದ್ವೀಪವನ್ನು ಹೋಲಿಸುವ ಭೂ ಮಂಡಲವನ್ನು ಚಿನ್ನದಿಂದ ನಿರ್ಮಿಸಿ, ನಟ್ಟನಡುವೆ ಪರ್ವತಗಳು, ನದಿಗಳೂ, ಸಪ್ತಸಾಗರಗಳೂ ಆಯಾ ಸ್ಥಳವನ್ನು ಆಕ್ರಮಿಸಬೇಕು. ಉತ್ತಮವಾದ ರತ್ನಗಳು ಅಲ್ಲಲ್ಲಿ ಹೊಳೆಯಬೇಕು. ನಂತರ ಭೂದೇವಿ ಯನ್ನು ಪ್ರಾರ್ಥಿಸಿ ಪೂಜಿಸಿ ಬ್ರಾಹ್ಮಣರಿಗೆ ಶಾಸ್ತ್ರ ವಿಧಿಯಂತೆ ದಾನ ಮಾಡಬೇಕು. ಈ ದಾನವು ಅಮಂಗಲವನ್ನು ದೂರ ಮಾಡುವುದು.

೧೨. ವಿಶ್ವ ಚಕ್ರ : ಅಪ್ಪಟ ಚಿನ್ನದಿಂದ ವಿಶ್ವಚಕ್ರವನ್ನು ನಿರ್ಮಿಸಬೇಕು. (ಸಾವಿರ ಫಲದಿಂದ ಇಪ್ಪತ್ತು ಫಲದವರೆಗೆ ತೂಕವಿರಬಹುದು) ದಾನ ಮಾಡ ಬೇಕು.

೧೩. ಕಲ್ಪಲತಾ ದಾನ : ಚಿನ್ನದಲ್ಲಿ ಕಲ್ಪ ಲತೆಯನ್ನು ಶಾಸ್ತ್ರ ವಿಧಿಯಂತೆ ನಿರ್ಮಿಸಿ ಶಾಸ್ತ್ರ ವಿಧಿ ಯಂತೆ ದಾನ ಮಾಡುವುದು, ಘೋರ ಪಾಪಗಳನ್ನು ಪರಿಹರಿಸುವುದು.

೧೪. ಸಪ್ತಸಾಗರ ದಾನ : ಶಾಸ್ತ್ರ ವಿಧಿ ಯಂತೆ ಏಳು ಚಿನ್ನದ ಕುಂಡಗಳನ್ನು ನಿರ್ಮಿಸಬೇಕು. ಹಾಲು, ಜೇನು, ಮೊಸರುಗಳಿಂದ ತುಂಬಿದ ಈ ಕುಂಡಗಳು ಏಳು ಸಾಗರಗಳನ್ನು ಪ್ರತಿನಿಧಿಸುತ್ತವೆ. ಇದನ್ನು ಋತ್ವಿಕ್ಕುಗಳಿಗೆ ದಾನ ಮಾಡುವುದು ಸಕಲ ಪಾಪ ಪರಿಹಾರಕ.

೧೫. ರತ್ನಧೇನು ನಾನ : ಸುಲಕ್ಷಣವಾದ, ಸಕಲ ವಸ್ತ್ರ, ವಜ್ರ ವೈಢೂರ್ಯಗಳಿಂದ ಅಲಂಕೃತವಾದ ಸುವರ್ಣ ಧೇನುವನ್ನು ಬ್ರಾಹ್ಮಣರಿಗೆ ದಾನ ಮಾಡು ವುದು,

೧೬. ಪಂಚಭೂತ ಘಟ : ಪಂಚ ಭೂತ ಗಳನ್ನು ಪ್ರತಿನಿಧಿಸುವ ಐದು ಪದಾರ್ಥಗಳಿಂದ ತುಂಬಿದ ಚಿನ್ನದ ಘಟವನ್ನು ಬ್ರಾಹ್ಮಣರಿಗೆ ದಾನ ಮಾಡು ವುದು.

ಈ ಷೋಡಶ ಮಹಾದಾನಗಳನ್ನು ಪುರಾಣ ಪುರುಷರಾದ ಕೃಷ್ಣ, ವಾಸುದೇವ, ಅಂಬರೀಷ, ಪ್ರಹ್ಲಾದ, ಪೃಥು ಹಾಗೂ ಭರತ ಮುಂತಾದವರು ಮಾಡಿದ್ದರು ಎಂದು ಮತ್ಸ್ಯ ಮಹಾಪುರಾಣ ಹೇಳುತ್ತದೆ.

ಹೀಗೆ ಪುರಾಣ ಪುರುಷರ ಹಾಗೂ ಪುರಾಣಗಳ ಹಿನ್ನೆಲೆಯಲ್ಲಿ ಷೋಡಶ ಮಹಾದಾನಗಳ ಚಮತ್ಕಾರಿಕ ಪ್ರಭಾವದ ಮೇಲೆ ನಂಬಿಕೆ ಬೆಳೆಯುತ್ತಾ ಹೋಯಿತು. ಈ ದಾನಗಳು ಪುರಾಣಗಳಲ್ಲೇ ಉಳಿಯದೆ ಅಕ್ಷರಶಃ ಪಾಲಿಸಲ್ಪಟ್ಟವು. ಈಗ ಶಾಸನಗಳ ಹಿನ್ನೆಲೆಯಲ್ಲಿ ಷೋಡಶ ಮಹಾದಾನಗಳನ್ನು ವಿವೇಚಿಸೋಣ. ನಾಲ್ಕು ಜಿಲ್ಲೆಗಳಾದ ಮಂಡ್ಯ, ಕೊಡಗು, ಮೈಸೂರು ಮತ್ತು ಹಾಸನ ಜಿಲ್ಲೆಗಳಲ್ಲಿರುವ ಶಾಸನಗಳಲ್ಲಿ ಉಲ್ಲೇಖಿತವಾಗಿ ರುವ ಮಹಾದಾನಗಳನ್ನು ಪರಿಶೀಲಿಸಲು ಪ್ರಯತ್ನಿಸಿ ದ್ದೇನೆ.

ಗಂಗರ ಶಿಲಾಶಾಸನಗಳಲ್ಲಿ ಹಾಗೂ ತಾಮ್ರ ಶಾಸನ ಗಳಲ್ಲಿ ಅನೇಕ ಬಗೆಯ ದಾನಗಳ ವಿಚಾರ ಬಂದಿದ್ದರೂ

ಸಹ ಷೋಡಶ ಮಹಾ ದಾನಗಳ ಉಲ್ಲೇಖ ಎಲ್ಲಿಯೂ ದೊರೆಯುವುದಿಲ್ಲ. ಹಾಗೆಯೇ ಹೊಯ್ಸಳರ ಕಾಲದ ಶಾಸನಗಳಲ್ಲಿಯೂ ಮಹಾದಾನಗಳ ವಿಚಾರ ಬರುವುದಿಲ್ಲ. ಅಂದರೆ ಹದಿಮೂರನೆಯ ಶತಮಾನದ ಅಂತ್ಯದವರೆಗೂ ಮಹಾದಾನಗಳ ಉಲ್ಲೇಖವಿಲ್ಲ. ಆದರೆ ವೈದಿಕ ಧರ್ಮಾವಲಂಬಿ ರಾಜರುಗಳಿದ್ದ ಪ್ರದೇಶದಲ್ಲಿ ಮಹಾದಾನಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುವುದು. ಷೋಡಶ ಮಹಾದಾನ ಇದೇ ಕಾಲದಲ್ಲಿ ರೂಢಿಯಲ್ಲಿತ್ತು ಎನ್ನುವುದಕ್ಕಾಗಿ ನನ್ನ ಅಭ್ಯಾಸದ ಸೀಮಿತ ಪ್ರದೇಶವನ್ನು ದಾಟಿ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ.

ಡಾ॥ ಎಂ. ಚಿದಾನಂದಮೂರ್ತಿಯವರ ಸಂಶೋಧನ ತರಂಗ–೨ರಲ್ಲಿ ಶಾಸನೋಕ್ತ ಕೆಲವು ಮಹಾದಾನಗಳು ಲೇಖನದಲ್ಲಿ ಕ್ರಿ.ಶ. ೫೪೩ರ ಒಂದು ಶಾಸನವು ಒಂದನೆಯ ಪುಲಿಕೇಶಿಯು ಅಶ್ವಮೇದಾದಿ ಯಜ್ಞವನ್ನು ಮಾಡಿ ಹಿರಣ್ಯಗರ್ಭ ಮಹಾದಾನವನ್ನು ಮಾಡಿದ ಎಂದು ತಿಳಿಸುತ್ತಾರೆ (EI, 8 XXIII, p.8. 543 A.D.).

ಶಿವಮೊಗ್ಗ ಜಿಲ್ಲೆಯ ಮಾವಳಿ ಶಾಸನದಲ್ಲಿ ಕುಲಮುದ್ದ ಎನ್ನುವವನು ಗೋಸಹಸ್ರ ಹಾಗೂ ಕನ್ಯಾದಾನವನ್ನು ಮಾಡಿದ್ದನು ಎಂದು ಹೇಳುತ್ತದೆ. ಈ ಶಾಸನವನ್ನು ಕುಲಮುದ್ದನೇ ಹಾಕಿಸಿದ್ದಾನೆ. ಇದ ಎಂಟನೆಯ ಶತಮಾನದ ರಾಷ್ಟ್ರಕೂಟ ಗೋವಿಂದನ ಕಾಲದ್ದು ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿರುವ ಹುಂಚ ಎಂಬ ಜೈನ ಕ್ಷೇತ್ರದಲ್ಲಿರುವ ಪಂಚಬಸ್ತಿಯ ತೋರಣ ಬಾಗಿಲ ಬಲಭಾಗದ ಕಂಬದ ಮೇಲಿರುವ ಶಾಸನವು ಕಲ್ಯಾಣಿ ಚಾಲುಕ್ಯರ ಸಮ್ರಾಟ ತ್ರಿಭುವನ ಮಲ್ಲನು ಮಹಾದಾನ ತುಲಾಪುರುಷ ಮತ್ತು ಹಿರಣ್ಯಗರ್ಭದಾನವನ್ನು ಮಾಡಿದವನು ಎಂದು ಪ್ರಶಂಸಿಸುತ್ತದೆ. ಅದೇ ಬಸದಿಯಲ್ಲಿರುವ ಮತ್ತೊಂದು ಶಿಲಾ ಶಾಸನವೂ ಇದೇ ಮಾತನ್ನು ಹೇಳುತ್ತದೆ. ಇದರಿಂದ ಷೋಡಶ ಮಹಾದಾನಗಳು ರಾಷ್ಟ್ರಕೂಟ ಹಾಗೂ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿಯೂ ಸಹ ಅಂದರೆ ಆರನೇಯ ಶತಮಾನದಿಂದಲೂ ಪ್ರಸಿದ್ಧವಾಗಿದ್ದು, ಪ್ರಚಲಿತವಾಗಿದ್ದವು ಎಂದು ಹೇಳಬಹುದು.

ನಮ್ಮ ಅಭ್ಯಾಸದ ಪ್ರದೇಶದಲ್ಲಿ ಮಹಾದಾನಗಳ ಉಲ್ಲೇಖ ಮೊದಲಿಗೆ ವಿಜಯನಗರದರಸರ ಕಾಲದಿಂದ ಕಾಣಸಿಗುತ್ತವೆ. ಮೊದಲನೆಯದಾಗಿ ಕ್ರಿ.ಶ. ೧೩೯೬ರ ಹಾಸನ ಜಿಲ್ಲೆಯ ಚಿಕ್ಕ ಕಡಲೂರಿನಲ್ಲಿ ಸಿಕ್ಕಿರುವ ಒಂದು ಶಾಸನದಲ್ಲಿ[1] ವಿಜಯನಗರದರಸ ಇಮ್ಮಡಿ ಹರಿಹರನು ತನ್ನ ಶತ್ರುಗಳ ಖಜಾನೆಯಿಂದ ತಂದ ಸಂಪತ್ತಿನಿಂದ ರಾಶಿ ರಾಶಿಯಾಗಿ ಚಿನ್ನವನ್ನು ಬಳಸಿ ಷೋಡಶ ಮಹಾದಾನಗಳನ್ನು ಮಾಡಿದನೆಂದು ಹೇಳುತ್ತದೆ.

ಕ್ರಿ.ಶ. ೧೪೩೦ರ ಒಂದು ತಾಮ್ರ ಶಾಸನದ[2] ಪ್ರಕಾರ ವಿಜಯನಗರದರಸರ ವಂಶಾವಳಿಯಲ್ಲಿ ಅರಸು ಹರಿಹರನು ಇಷ್ಟೊಂದು ಮಹಾದಾನಗಳನ್ನು ಮಾಡಿದನು ಎಂದರೆ ಅದರಿಂದ ಉಂಟಾಗುವ ಹರ್ಷವು ಹದಿನಾಲ್ಕು ಲೋಕಗಳನ್ನು ದಾಟಿ ಹೊರಗೆ ಹೋಗುತ್ತದೆ ಎಂದು ಹೇಳುತ್ತದೆ. ಅದರ ಸಾಲುಗಳು ಹೀಗಿವೆ.

"............ ಹಾರ ಗೌರವಂ ಯಶಃ ಪೂರಶಾಲೋ ಹರಿಹರೇಶ್ವರಃ । ಯತೋಡಶ ಮಹಾದಾನಾಯಶಸಾಂ ದಿಗ್ವಿಹಾರಿಣಾಂ । ಭೂಯಸಾಂ ಭಗವಾನಾಲಂ ಭುವನಾನಿ ಚತುರ್ದಶ...."

ಇದೇ ಶಾಸನವು ಅರಸು ದೇವರಾಯನು ಪ್ರತೀದಿನ ಮಹಾದಾನಗಳನ್ನು ಮಾಡುತ್ತಿದ್ದನು ಎಂದು ಹೇಳುತ್ತದೆ. "ಪ್ರತ್ಯಹಂ ಚಿನ್ವಿತಾನೇಕ ಮಹಾದಾನ ಯಶೋನಿ"........

ಕೃಷ್ಣರಾಜಪೇಟೆಯ ಕೈಗೊಂಡನಪಲ್ಲಿಯಲ್ಲಿ ದೊರೆತಿರುವ ಕ್ರಿ.ಶ. ೧೪೬೨ರ ಒಂದು ತಾಮ್ರ ಶಾಸನವು[3] ವಿಜಯನಗರದರಸು ವೀರನರಸಿಂಹನು ಮಹಾದಾನಗಳನ್ನು ಮಾಡಿದವನು ಎಂದು ಪ್ರಶಂಸಿಸುತ್ತದೆ. ಪುಣ್ಯ

1 EC VIII, ಹಾಸನ ೧೧೫ ಚಿಕ್ಕಕಡಲೂರು
2 EC VI, ಶ್ರೀರಂಗಪಟ್ಟಣ, ೨೫
3 EC. VI, ಕೆ. ಆರ್. ಪೇಟೆ ೭೧, ಕೈಗೊಂಡನಪಲ್ಲಿ

ಕ್ಷೇತ್ರಗಳ ಹಾಗೂ ಷೋಡಶ ಮಹಾದಾನಗಳ ಪಟ್ಟಿಯನ್ನೆ ಕೊಡುತ್ತದೆ.

ಹೆಗ್ಗಡದೇವನ ಕೋಟೆಯ ಕ್ರಿ.ಶ. ೧೪೯೩ರ ಒಂದು ತಾಮ್ರದ ಶಾಸನ[4]ವು ವಿಜಯನಗರದರಸು ಸಾಳುವ ಇಮ್ಮಡಿ ನರಸಿಂಹನು ಮಾಡಿದ ಅಗ್ರಹಾರ ದಾನವನ್ನು ಹೇಳುತ್ತಾ, ಸಾಳುವ ನರಸಿಂಹನು ದಿನೇ ದಿನೇ ಹದಿನಾರು ಮಹಾದಾನಗಳನ್ನು ಮಾಡುತ್ತಿದ್ದನು. ಚಿನ್ನವನ್ನು ದಾನ ಮಾಡುವುದು ಅವನಿಗೆ ಮಕ್ಕಳು ಮಣ್ಣಿನಲ್ಲಿ ಆಡಿದಂತೆ ಎಂದು ವರ್ಣನೆ ಮಾಡಿದೆ. ಶಾಸನದ ವಾಕ್ಯಗಳು ಹೀಗಿವೆ.

"ದೈನಂದಿನಂ ಯಸ್ಯಕೃತ್ಯಂ ಮಹಾದಾನಾನಿ ಷೋಡಶಾವಸಂತ್ರ"

"ಕನಕತ್ಯಾಗೋ ಬಾಲ್ಯಾಹ್ಮಂ ಪಾಂಸಖೇಲನಂ ।"

ವೀರನರಸಿಂಹನ ಮತ್ತು ನಂತರದ ವಿಜಯನಗರದ ತಾಮ್ರ ಶಾಸನಗಳಲ್ಲೆಲ್ಲಾ ಸಿದ್ಧಪಡಿಸಿದ ಪಾಠವಾಗಿದ್ದು, ಅರಸು ವೀರನರಸಿಂಹನ ಹಾಗೂ ಕೃಷ್ಣದೇವರಾಯ ಇವರುಗಳು ಷೋಡಶ ಮಹಾದಾನಗಳನ್ನು ಮಾಡಿದ ಪುಣ್ಯಕ್ಷೇತ್ರಗಳ ಪಟ್ಟಿಯನ್ನು ಕೊಟ್ಟು ಪ್ರಶಂಸಿಸುತ್ತವೆ. ಈ ತಾಮ್ರ ಶಾಸನಗಳೆಲ್ಲಾ ಒಂದೇ ಬಗೆಯಾಗಿದ್ದು, ಈ ತಾಮ್ರ ಶಾಸನಗಳ ಮಾದರಿಯಾಗಿ ಕ್ರಿ.ಶ. ೧೫೧೬ರ ಶ್ರೀರಂಗಪಟ್ಟಣದ ಒಂದು ತಾಮ್ರ ಶಾಸನ[5]ದ ವಾಕ್ಯಗಳನ್ನು ಇಲ್ಲಿ ಉದಾಹರಿಸುತ್ತೇನೆ.

ಸಾಲು ೨೮ ..........। "ಜಾತೌ ವೀರನೃಸಿಂಹೇಂದ್ರ ಕೃಷ್ಣರಾಯ ಮಹೀಪತಿ । ವೀರಶ್ರೀ
೨೯ ನಾರಸಿಂಹಃಸ ವಿಜಯನಗರೇ ರತ್ನಸಿಂಹಾಸನಸ್ಥಃ ಕ್ರೀರ್ತ್ಯಾ ನೀತ್ಯಾನಿ
೩೦ ರಸ್ಯ ನೃಪನಳ ನಹುಷಾನಪ್ಯವನ್ಯಾ ಮಧಾನ್ಯಾನ್ । ಆಸೇತೋರಾಸುಮೇ
೩೧ ರೋರವನಿಸುರನುತಃ ಸ್ವೈರಮೂಚೋದಯಾದ್ರೇ ರಾಪಾಚ್ಯಾತ ಚಲಾಂತಾದಖಿ
೩೨ ಲ ಹೃದಯ ಮಾವರ್ಜ್ಯ ರಾಜ್ಯಂ ಶಶಾಸ । ನಾನಾ ದಾನಾನ್ಯ ಕಾರ್ಷೀತ್ಕನಕಶ
೩೩ ದಸಿಯಃ ಶ್ರೀ ವಿರೂಪಾಕ್ಷ ದೇವಸ್ಥಾನೇ ಶ್ರೀಕಾಲಹಸ್ತೀ ಶಿತುರಪಿನಗರೇ
೩೪ ವೆಂಕಟಾದ್ರೌಚ ಕಾಚ್ಯಂ ಶ್ರೀ ಶೈಲೇ ಶೋಣಶೈಲೆಮಹಿತಿ ಹರಿಹರೇ ಹೋಬ
೩೫ ಲೇ ಸಂಗಮೇಚ । ಶ್ರೀರಂಗೇ ಕುಂಭಕೋಣೇ ಹತತಮಸಿ ಮಹಾನಂದಿ ತೀರ್ಥೇ
೩೬ ನಿವೃತ್ತೈಃ । ಗೋಕರ್ಣೇ ರಾಮಸೇತೌ, ಜಗತಿ ತದಿತರೇಸ್ವಪ್ಯಶೇಷೇಷು ಪುಂ
೩೭ ಣ್ಯಸ್ಥಾನೇಷ್ವಾಲಬ್ಧನಾನಾವಿಧ ಬಹಲ ಮಹಾದಾನ ವಾರಿ ಪ್ರವಾಹೈಃ
೩೮ ಯಸ್ಯೋದಂಚತ್ತುರಂಗ ಪ್ರಕರಖುರರಜ ಶುಷ್ಯದಂಬೋಧಿ ನುಗ್ನಃಕ್ಷ್ಮಾಭೃ
೩೯ ತ್ಪಕ್ಷಚ್ಛಿದೋತ್ತರ ಕುಲಿಶಧರೋತ್ಕಂಠಿತಾ ಕುಂಠಿತಾಭೂತ್ । ಬ್ರಹ್ಮಾಂಡಂ
೪೦ : ವಿಶ್ವಚಕ್ರಂ ಘಟಮುದಿತ ಮಹಾಭೂತಕಂ ರತ್ನಧೇನುಂ । ಸಪ್ತಾಂಭೋದಿಂ ಚ
೪೧ : ಕಲ್ಪಕ್ಷಿತಿರುಹಲತಿಕೇ ಕಾಚನೀಂ ಕಾಮಧೇನುಂ । ಸ್ವರ್ಣಕ್ಷ್ಮಾಯೋ
೪೨ : ಹಿರಣ್ಯಾಶ್ವರಥಮಪಿ ತುಲಾಪುರುಷಂ ಗೋಸಹಸ್ರಂ ಹೇಮಾಶ್ವಂ ಹೇಮಗ
೪೩ : ರ್ಭಂ ಕನಕಕರಿರಥಂ ಪಂಚಲಾಂಗಲ್ಯತಾನೀತ್ ।..........................

4 EC. III, ಹೆಗ್ಗಡದೇವನಕೋಟೆ ೪೯

5 EC. VI, ಶ್ರೀರಂಗಪಟ್ಟಣ ೨೬

ಮೇಲಿನ ಶಾಸನದಲ್ಲಿ ಹೇಳಿರುವಂತೆ ಷೋಡಶ ಮಹಾದಾನಗಳನ್ನು ಜೀವನದಲ್ಲಿ ಒಮ್ಮೆ ಮಾತ್ರ ಮಾಡುತ್ತಿದ್ದರು ಎನ್ನುವಂತಿಲ್ಲ. ಮಹಾದಾನಗಳನ್ನು ಅನೇಕ ಭಾರಿ, ಅನೇಕ ಪುಣ್ಯಕ್ಷೇತ್ರಗಳಲ್ಲಿ ಮಾಡುತ್ತಿದ್ದರು.

ವಿಜಯನಗರದರಸು ಕೃಷ್ಣದೇವರಾಯನ ಕಾಲದಲ್ಲಿ ಅನೇಕ ತಾಮ್ರಪಟ ದಾನ ಶಾಸನಗಳು* ದೊರೆತಿದ್ದು, ಅವುಗಳಲ್ಲೆಲ್ಲಾ ಮಹಾದಾನಗಳ ಉಲ್ಲೇಖ ಪ್ರಶಂಸೆಯ ರೂಪದಲ್ಲಿ ತಪ್ಪದೆ ಸಿಗುತ್ತದೆ.

ಕೃಷ್ಣದೇವರಾಯನ ನಂತರವೂ ಸಹ ವೈದಿಕ ಧರ್ಮದ ಪ್ರಭಾವ ಹಾಗೂ ಮಹಾದಾನಗಳ ವಿಚಾರದಲ್ಲಿದ್ದ ನಂಬುಗೆ ವಿಜಯನಗರದರಸರಲ್ಲಿದ್ದ ಹಾಗೆಯೇ ಮುಂದುವರೆದಿದೆ.

ಕ್ರಿ.ಶ. ೧೫೩೨ರ ಕೃಷ್ಣರಾಜಪೇಟೆಯ ಒಂದು ತಾಮ್ರಶಾಸನ[6] ಅಚ್ಯುತರಾಯನು ಮಹಾದಾನಗಳಲ್ಲಿ ಒಂದಾದ ಸಪ್ತಸಾಗರದಾನವನ್ನು ಮಾಡಿದ ವಿಚಾರ ಹೇಳುತ್ತವೆ. ಕ್ರಿ.ಶ. ೧೫೩೩ರ ಮದ್ದೂರಿನ ಒಂದು ತಾಮ್ರಶಾಸನವು[7] (ಅರಸು ಅಚ್ಯುತರಾಯನದು) ವಂಶಾವಳಿ ಹಾಗೂ ಪ್ರಶಂಸೆಯಲ್ಲಿ ಅರಸು ಕೃಷ್ಣದೇವರಾಯನು ಷೋಡಶ ಮಹಾದಾನಗಳನ್ನು ನಾನಾ ಪುಣ್ಯಕ್ಷೇತ್ರಗಳಲ್ಲಿ ಹಾಗೂ ಪುನಃ ಪುನಃ ತುಲಾಪುರುಷ ಮುಂತಾದ ಮಹಾದಾನಗಳನ್ನು ಮಾಡುತ್ತಿದ್ದನೆಂದು ಹೇಳುತ್ತದೆ.

ಕ್ರಿ.ಶ. ೧೫೩೫ರ ಒಂದು ದಾನಶಾಸನ[8] ವಿಜಯನಗರದ ಸಿದ್ಧಪಡಿಸಿದ ಪಾಠದಲ್ಲಿ ವೀರನರಸಿಂಹ ಹಾಗೂ ಕೃಷ್ಣದೇವರಾಯನು ಮಹಾದಾನಗಳನ್ನು ಮಾಡಿದವರು ಎಂದು ಪ್ರಶಂಸಿಸಿದೆ. ವಿಜಯನಗರದ ಸದಾಶಿವರಾಯ ರಾಮರಾಯನ ಕಾಲದ ಕ್ರಿ.ಶ. ೧೫೬೧ರ ಒಂದು ತಾಮ್ರ ಶಾಸನವು[9] ಮೇಲೆ ಹೇಳಿದಂತೆ ವೀರನರಸಿಂಹ ಮತ್ತು ಕೃಷ್ಣದೇವರಾಯನನ್ನು ಪ್ರಶಂಸಿಸುತ್ತದೆ.

ಇದುವರೆಗೆ ವಿಜಯನಗರದರಸರ ದಾನ ಶಾಸನಗಳಲ್ಲಿ, ಈ ಅರಸರು ಷೋಡಶ ಮಹಾದಾನಗಳನ್ನು ಮಾಡಿದವರು ಎಂದು ಪ್ರಶಂಸೆಯ ರೂಪದಲ್ಲಿ ಹೇಳಿದೆ. ಆದರೆ ಕೆಲವು ದಾನಶಾಸನಗಳು ಮಹಾದಾನಗಳಿಗೆ ಪೂರಕವಾಗಿ ಗ್ರಾಮದಾನಗಳನ್ನು ಮಾಡಿದ ಉಲ್ಲೇಖವನ್ನು ಹೊಂದಿದೆ. ಇವು ಸ್ಪಷ್ಟವಾಗಿ ಮಹಾದಾನವನ್ನು ಮಾಡಿ, ಪೂರಕವಾಗಿ ಮಾಡಿದ ಗ್ರಾಮ ದಾನಗಳನ್ನು ಹೇಳುತ್ತವೆ. ಇಂತಹ ಕೆಲವು ವಿಜಯನಗರದರಸರ ಕಾಲದ ಶಾಸನಗಳನ್ನು ಪರಿಶೀಲಿಸೋಣ. ಇವು ಮಹಾದಾನ ಆಚರಣೆಗಳನ್ನು ಸ್ವಲ್ಪಮಟ್ಟಿಗೆ ನಿಜರೂಪದಲ್ಲಿ ತೋರಿಸುತ್ತವೆ.

---

* EC VI, ಶ್ರೀರಂಗಪಟ್ಟಣ, ೨೬, ಕ್ರಿ.ಶ. ೧೫೧೬
EC VII, ನಾಗಮಂಗಲ ೧೩೪, ದೊಡ್ಡಬೆಟಕ ಕ್ರಿ.ಶ. ೧೫೧೨
EC VII, ಮಂಡ್ಯ ೭, ಕ್ರಿ.ಶ. ೧೫೧೬
EC VIII, ಹಾಸನ ೮, ಕಿತ್ತಾನೆ ಕ್ರಿ.ಶ. ೧೫೧೫
EC VIII, ಹಾಸನ ೮೩, ಕುದುರೆಗುಂಡಿ, ಕ್ರಿ.ಶ. ೧೫೨೪
EC III, ನಂಜನಗೂಡು ೩೯೮, ಕ್ರಿ.ಶ. ೧೫೧೩
EC III, ಗುಂಡ್ಲುಪೇಟೆ ೧, ಕ್ರಿ.ಶ. ೧೫೧೭
EC V, ಟಿ. ನರಸೀಪುರ ೧೦೫, ಕ್ರಿ.ಫ. ೧೫೨೧
6 EC VI, ಕೆ. ಆರ್. ಪೇಟೆ ೯೯, ಕ್ರಿ.ಶ. ೧೫೩೨
7 EC VII, ಮದ್ದೂರು ೧೪೪, ಹುರಗಲವಾಡಿ
8 EC V, ಮೈಸೂರು ೧೦೫
9 EC VIII, ಹಾಸನ ೯

**ಹೇಮಾಶ್ವದಾನ :** ನಾಗಮಂಗಲ ತಾಲ್ಲೂಕು ದೇವಲಾಪುರದ ಒಂದು ಶಾಸನ[10] ವಿಜಯನಗರದ ಕೃಷ್ಣ ದೇವರಾಯನು ಕಾಲ ಏಪ್ರಿಲ್ ೧೯, ಕ್ರಿ.ಶ. ೧೫೧೩ರಲ್ಲಿ ವಿರೂಪಾಕ್ಷನ ಸಂನಿಧಿಯಲ್ಲಿ ಮಾಡಿದ ಹೇಮಾಶ್ವ ಎಂಬ ಮಹಾದಾನವನ್ನು ಮಾಡಿದ ಅಂಗವಾಗಿ ಗ್ರಾಮದಾನ ವೆಂದು ಸ್ಪಷ್ಟವಾಗಿ ಹೇಳುತ್ತದೆ (EC VII, ಪುಟ ೧೫೮).

"...............ಕೊಟ್ಟ ದರ್ಮಶಾಸನ ಷೋಡಶಮಹಾದಾನ ಗೊಳಗಣ ಹೇಮಾಶ್ವದಾನ್ಸ್ವಮಾಡಿದಲ್ಲಿ ತದಂಗ ಭೂದಾನ ವಾಗಿ ದಾರೆಯನೆರೆದು ಕೊಟ್ಟ ಅಗ್ರಹಾರ ಮದನಪುರ ಮಲ್ಲಿಗೆರೆಗ್ರಾಮ ೨ನ್ನು ಪಂಪಾಕ್ಷೇತ್ರ ಶ್ರೀ ವಿರೂಪಾಕ್ಷ ದೇವರ ಸಂನಿಧಿಯಲ್ಲಿ..............."

**ರತ್ನಧೇನು ಮಹಾದಾನ :** ಶ್ರೀರಂಗಪಟ್ಟಣದ ಒಂದು ತಾಮ್ರಶಾಸನ[11] ಕ್ರಿ.ಶ. ೧೫೩೦ರಲ್ಲಿ ತುಂಗಭದ್ರಾ ತೀರದಲ್ಲಿ ವಿರೂಪಾಕ್ಷನ ಸಂನಿಧಿಯಲ್ಲಿ ರತ್ನಧೇನು ಮಹಾ ದಾನ ಮಾಡುವಾಗ ಆದರ ಅಂಗವಾಗಿ ಚಂಡಿಗಲ ಗ್ರಾಮವನ್ನು ದಾನವಾಗಿ ಕೊಟ್ಟಿದ್ದು. ಶಾಸನವು (EC VI, ಪುಟ ೩೬೦).

..........."ರತ್ನದೇನು ಮಹಾದಾನಂ ಕೃತ್ವಾತತ್ರೋಕ್ತ ದಕ್ಷಿಣಂ" ಎಂದು ಹೇಳುತ್ತದೆ.

**ತುಲಾಪುರುಷ ದಾನ :** ಗುಂಡ್ಲುಪೇಟೆಯ ಒಂದು ತಾಮ್ರಶಾಸನ[12] ವಿಜಯನಗರದರಸು ಮಲ್ಲಿ ಕಾರ್ಜುನನ ಕಾಲದ್ದು. ಈ ಶಾಸನದ ಮುಖ್ಯ ಉದ್ದೇಶ ಮಲ್ಲಿಕಾರ್ಜುನನು ಮಾಡಿದ ತುಲಾಪುರುಷ ದಾನದ ಅಂಗವಾಗಿ ಕಾಲಪುಸಂಜನವೆಂಬ ಭೂಮಿದಾನವಾಗಿ ೧) ಬೆಟ್ಟದ ಬೀಡು ೨) ಕಲ್ಲೊಟ್ಟಿ ಗ್ರಾಮ ೩) ಕೇತ ಹಳ್ಳಿ ಎಂಬ ಗ್ರಾಮಗಳನ್ನು ೨ ಫೆಬ್ರವರಿ, ಕ್ರಿ.ಶ. ೧೪೪೮ ಗೋ ದ್ವಾದಶಿಯಂದು ತುಂಗಭದ್ರಾ ನದಿತೀರ ಪಂಪಾ ವಿರೂಪಾಕ್ಷನ ಸಂನಿಧಿಯಲ್ಲಿ ದಾನ ಮಾಡಿದೆ ಎಂದು ದೃಢೀಕರಿಸುವುದು (EC III, ಪುಟ ೧೦೫).

..........। "ತತ್ರ ಕುರ್ವನ್ಮಹಾದಾನಂ ತುಲಾಪುರುಷ ಸಂಜ್ಞಿತಾ ಅಂತರಿಯಾತಯಾ ಭೂವಿದಾನಂ ಕಾಲ ಪುದಂಜನಂ ।"....................

ಮೈಸೂರಿನ ಒಂದು ಶಿಲಾಶಾಸನ[13] ವಿಜಯ ನಗರದ ಅರಸು ಸಾಳುವ ಇಮ್ಮಡಿ ನರಸಿಂಹ ಶಕ ವರ್ಷ ೧೪೧೯ (ಕ್ರಿ.ಶ. ೧೪೯೭) ಪಿಂಗಳ ಸಂವತ್ಸರ ಶ್ರಾವಣ ಪೌರ್ಣಿಮೆ ಶನಿವಾರದಂದು ತುಲಾಪುರುಷ ದಾನದ ಅಂಗವಾಗಿ ದೂದಣಾಯಕ ಹಳ್ಳಿ ಎಂಬ ಗ್ರಾಮವನ್ನು ದಾನ ಮಾಡಿದುದಾಗಿ ಸ್ಪಷ್ಟವಾಗಿ ಹೇಳಿದೆ. (EC V, ಪುಟ ೩೨೨).

..............."ಶಾಸ್ತ್ರಸಂಶೋಧ ಸಂಪ್ರಾಪ್ತ ತುಲಾಪುರುಷ ಕಾರಣಾತ್"

**ಮಹಾಭೂತ ಘಟಿಕ :** ಗುಂಡ್ಲುಪೇಟೆಯ ಒಂದು ಶಿಲಾಶಾಸನ[14] ವಿಜಯನಗರದ ಅರಸು ನರಸಿಂಹ ಮಹಾರಾಯ ಶಕ ವರ್ಷ ೧೩೨[೭] ಕ್ರೋಧನ ಸಂವತ್ಸರ ಪಾಲ್ಗುಣ ಶು ೪ ಮೀನ ಸಂಕ್ರಾಂತಿಯಂದು ಉಭಯ ಕಾವೇರಿ ಮಧ್ಯ ಶ್ರೀರಂಗ ಕ್ಷೇತ್ರದಲ್ಲಿ ಶ್ರೀರಂಗನಾಥ ದೇವರ ಸಂನಿಧಿಯಲ್ಲಿ ಮಹಾಭೂತ ಘಟಕವೆಂಬ ಮಹಾ ದಾನದ ಅಂಗವಾಗಿ ಹೊಣಕನಹಳ್ಳಿ ಎಂಬ ಗ್ರಾಮವನ್ನು ಚಿಕ್ಕದೇವರಾಯಪುರವೆಂದು ನಾಮಕರಣ ಮಾಡಿ ಸಕಲ ವೇದ ಪಾರಂಗತರಾದ ಬ್ರಾಹ್ಮಣರಿಗೆ ದಾನ ಮಾಡುತ್ತಾನೆ (EC III, ಪುಟ ೨೪).

..........."ಭೂದಾನಾದಿ ಷೋಡಶ ಮಹಾದಾನಗಳ ಮಾಡುವಲು ಅದರೊಳಗಣ ಮಹಾಭೂತ ಘಟವೆಂಬ ಮಹಾದಾನವನು ಶ್ರೀರಂಗ ಕ್ಷೇತ್ರವಾದ ಉಭಯ ಕಾವೇರಿ ಮಧ್ಯ ಚಂದ್ರ ಪುಷ್ಕರಣಿ ತೀರದಲಿ ನೆಲಸಿಹ ಶ್ರೀರಂಗನಾಥ ದೇವರ ಸಂನಿಧಿಯಲ್ಲಿ........"

---

10 EC VII, ನಾಗಮಂಗಲ ೧೬೦, ದೇವಲಾಪುರ
11 EC VI, ಶ್ರೀರಂಗಪಟ್ಟಣ ೨೫
12 EC III, ಗುಂಡ್ಲುಪೇಟೆ ೧೪೭, ತ್ರಿಯಂಬಕಪುರ
13 EC V, ಮೈಸೂರು ೨೨೫, ಕುರುಬಾರಹಳ್ಳಿ
14 EC III, ಗುಂಡ್ಲುಪೇಟೆ ೨೬, ಹೊಣಕನಹಳ್ಳಿ

ಈ ಗ್ರಾಮದಾನವನ್ನು ಮಹಾಭೂತಘಟವೆಂಬ ಮಹಾದಾನ ಮಾಡುವಾಗ ಮಾಡಿದ್ದು ಎಂದು ಸ್ಪಷ್ಟವಾಗಿ ಹೇಳುತ್ತದೆ.

**ಧರಾ ಮಹಾದಾನ :** ಗುಂಡ್ಲುಪೇಟೆಯ ಒಂದು ಶಿಲಾಶಾಸನ[15] ವಿಜಯನಗರದರಸ ನರಸಿಂಹ ಮಹಾರಾಯನು ಮಾಡಿದ ಗ್ರಾಮದಾನ. ವಿವರವನ್ನು ಮಹಾಭೂತ ಘಟಕ ಮಹಾದಾನದ ಶೀರ್ಷಿಕೆಯಲ್ಲಿ ಹೇಳಿದೆ. ಭೂದಾನಾದಿ ಷೋಡಶ ಮಹಾದಾನವನ್ನು ಮಾಡಿದ ಎಂದು ಹೇಳುತ್ತದೆ (EC III, ಪುಟ ೨೪).

"ಭೂದಾನಾದಿ ಷೋಡಶ ಮಹಾದಾನಗಳ ಮಾಡುವಲು....

ಹೆಗ್ಗಡದೇವನ ಕೋಟೆಯ ಒಂದು ತಾಮ್ರ ಶಾಸನವು[16] ವಿಜಯನಗರದರಸು ಹರಿಹರನು ಶಕವರ್ಷ ೧೩೦೧ ಸಿಧಾರ್ಥಿ ಸಂವತ್ಸರ ಕಾರ್ತಿಕ ಮಾಸ ಬಹುಳ [೩೦] ಧಾರಾದಾನವನ್ನು ಮಾಡಿದನೆಂದು ಹೇಳುತ್ತದೆ.

...........। "ಹರಿಹರೇಣ ಪ್ರೀತಿ ಪೂರ್ವಂ ವಿಭುದೇಂದ್ರ ಸರಸ್ವತೇಃ । ದತ್ತಃ ಕರತಲೇ ಧಾರಾದಾನಂ ಸ್ವನೋದಕಂ

**ಸಪ್ತಸಾಗರ ದಾನ :** ಕೃಷ್ಣರಾಜಪೇಟೆಯ ಒಂದು ತಾಮ್ರ ಶಾಸನ[17] ವಿಜಯನಗರದರಸು ತುಳು ವಂಶದ ವೀರನರಸಿಂಹನು ಶಕವರ್ಷ೧೩೮೩(?)ಚಿತ್ರಭಾನು ಸಂವತ್ಸರ ಮಾಘ ಬಹುಳ ೧೪, ರವಿವಾರ ಶಿವರಾತ್ರಿ ಶ್ರೀಶೈಲ ಕ್ಷೇತ್ರದಲ್ಲಿ ಸಪ್ತಸಾಗರ ದಾನ ಮಾಡುವಾಗ ಕೈಗೊಂಡನಪಲ್ಲಿ ಎಂಬ ಗ್ರಾಮವನ್ನು ದಾನ ಮಾಡುತ್ತಾನೆ. ಇದನ್ನು ಶಾಸನ ಹೀಗೆ ಹೇಳುತ್ತದೆ EC VI, ಪುಟ ೫೪.

.....................................। "ಸೋಯಂ ರಾಜಾಧಿರಾಜೇಂದ್ರ ಸಮಸ್ತಗುಣವಾರಿದಿಃ । ಸಪ್ತಸಾಗರದಾನಸ್ಯ ವೇಳಾಯಾಮತ್ರಿಗೋತ್ರಿಣೆ ।.........................

ಕೃಷ್ಣರಾಜಪೇಟೆಯ ಮತ್ತೊಂದು ತಾಮ್ರ ಶಾಸನದಲ್ಲಿ[18] ವಿಜಯನಗರದ ಅರಸು ಅಚ್ಯುತರಾಯನು ಬೆಲೆಕೆರೆ ಗ್ರಾಮವನ್ನು ಶಕವರ್ಷ ೧೪೫೩ ಖರ, ಮಾಘ ಬಹುಳ ೧೪ [ಕ್ರಿ.ಶ. ೧೫೩೨ ಪ್ರೆ ೪] ಮಹಾದಾನ ಮಾಡಿದನು. ಈ ದಾನವನ್ನು ಮೊದಲು ವೀರನರಸಿಂಹನು ವಿಭವ ಸಂವತ್ಸರ ವೈಶಾಖ ಸು. ೧೨ [ಕ್ರಿ.ಶ. ೧೫೦೮ ಏಪ್ರಿಲ್ ೧೨] ಶ್ರೀಶೈಲದಲ್ಲಿ ಸಪ್ತಸಾಗರದಾನ ಮಾಡುವಾಗ ದಾನ ಮಾಡಿದ್ದನು. ಇದು ಸ್ಪಷ್ಟವಾಗಿ ಉಲ್ಲೇಖವಾಗಿದೆ EC VI, ಪುಟ.

............"ಸಪ್ತಸಾಗರ ದಾನಸ್ಯ ಪ್ರದಾಯಾಚಾರ್ಯ್ಯ ಸನ್ನಿಧೌ । ಭೂದಾನ ಹೇತೋಃ ಶ್ರೀ ವೀರ ನಾರಸಿಂಹ ಮಹಿಪತಿಃ ।

ಇದುವರೆಗೆ ವಿಜಯನಗರದ ಕಾಲದಲ್ಲಿ ಷೋಡಶ ಮಹಾದಾನಗಳನ್ನು ಆಚರಿಸುತ್ತಿದ್ದ ಬಗ್ಗೆ ಖಚಿತ ಮಾಹಿತಿಯನ್ನು ಕೊಡುವ ಶಾಸನಗಳ ಅಭ್ಯಾಸ ಮಾಡಿದೆವು.

ವಿಜಯನಗರದ ಪತನದ ನಂತರ ಮೈಸೂರರಸರು ವಿಜಯನಗರದ ಉತ್ತರಾಧಿಕಾರಿಗಳಂತೆ ರಾಜ್ಯವಾಳಿದರು. ರಾಜಕೀಯವಾಗಿ ಮಾತ್ರವಲ್ಲದೆ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿಯೂ ಉತ್ತರಾಧಿಕಾರಿಗಳಾಗಿದ್ದರು. ಈ ಮಾತು ದಾನ ಮತ್ತು ಮಹಾದಾನಗಳ ಆಚರಣೆಯಲ್ಲೂ ಕಂಡಬರುತ್ತದೆ. ಈ ಮೈಸೂರರಸರ ಕಾಲದ ಶಾಸನಗಳಲ್ಲಿ ಷೋಡಶ ಮಹಾದಾನಗಳ ಉಲ್ಲೇಖಗಳನ್ನು ಗಮನಿಸೋಣ.

ಪಾಂಡವಪುರದ ಒಂದು ತಾಮ್ರಶಾಸನ[19]ವು ಮೈಸೂರರಸ ಇಮ್ಮಡಿ ಕೃಷ್ಣರಾಜರು (ಕ್ರಿ.ಶ. ೧೭೨೨ ಡಿಸೆಂಬರ್ ೧೧ರಂದು) ಒಂದು ಗ್ರಾಮದಾನವನ್ನು ಮಾಡಿದ ವಿಷಯವನ್ನು ತಿಳಿಸುತ್ತದೆ. ಮೈಸೂರು ಅರಸರ ವಂಶಾವಳಿಯನ್ನು ಹೇಳುತ್ತಾ ವಂಶದ ಮೂಲ

---

15 EC III, ಗುಂಡ್ಲುಪೇಟೆ ೨೬
16 EC III, ಹೆಗ್ಗಡದೇವನ ಕೋಟೆ
17 EC VI, ಕೃಷ್ಣರಾಜಪೇಟೆ ೭೧
18 EC VI, ಕೃಷ್ಣರಾಜಪೇಟೆ ೯೯
19 EC VI, ಪಾಂಡವಪುರ ೯೯

ಪುರುಷನಾದ ಚಂದ್ರನು ೧೫ ಮಹಾದಾನಗಳನ್ನು ಮಾಡಿ ಒಂದನ್ನು ಬಿಟ್ಟುಬಿಡುತ್ತಾನೆ, ಆದರೆ ಚಿಕ್ಕದೇವರಾಯನು ಅವನನ್ನು ಮೀರಿಸಿ ಮಹಾದಾನಗಳಾದ ತುಲಾಪುರುಷ ಮೊದಲಾದ ಹದಿನಾರು ಮಹಾದಾನಗಳನ್ನು ಮಾಡಿದ್ದಾನೆ ಎಂದು ಪ್ರಶಂಸಿಸುತ್ತದೆ.

ಪಾಂಡವಪುರ–ಮೇಲುಕೋಟೆಯ ಮತ್ತೊಂದು ತಾಮ್ರಶಾಸನ[20] ಮೈಸೂರರಸ ಇಮ್ಮಡಿ ಕೃಷ್ಣರಾಜರ (ಕ್ರಿ.ಶ. ೧೭೨೪ ಡಿ. ೩೦ರಂದು) ಗ್ರಾಮದಾನ ಮಾಡಿದ ವಿಚಾರ.

ಅರಸರ ವಂಶಾವಳಿಯನ್ನು ಹೇಳುತ್ತಾ ಪ್ರಶಂಸಿಸುತ್ತಾ ವಂಶದ ಚಂದ್ರನು ಷೋಡಶ ಮಹಾದಾನಗಳನ್ನು ಒಂದೊಂದಾಗಿ ಮಾಡುತ್ತಾ ಒಂದನ್ನು ಬಿಟ್ಟುಬಿಡುತ್ತಾನೆ. ಆದರೆ ಕೃಷ್ಣರಾಜನು ೧೬ ಮಹಾದಾನಗಳನ್ನು ಸಗಟಾಗಿ ಯಾವುದೇ ಹಿಂಜರಿಕೆಯಿಲ್ಲದೆ ದಾನ ಮಾಡುತ್ತಾನೆ ಎಂದು ಪ್ರಶಂಸಿಸುತ್ತದೆ. ಹೀಗೆ ಶಾಸನದ ಮಾತು ಮಹಾದಾನಗಳನ್ನು ಮಾಡುವುದರಲ್ಲಿ ಹೆಗ್ಗಳಿಕೆಯ ಜೊತೆಗೆ ರಾಜನು ಅಪರಿಮಿತ ಸಂಪತ್ತುಳ್ಳವನಾಗಿರಬೇಕೆಂಬ ಅಭಿಪ್ರಾಯವನ್ನು ಕೊಡುತ್ತದೆ.

ಮೈಸೂರಿನ ಜಗನ್ಮೋಹನ ಬಂಗಲೆಯಲ್ಲಿ ಹಿತ್ತಾಳೆ ತಗಡಿನ ಮೇಲೆ ಕೆತ್ತಿ ಇಟ್ಟಿರುವ ವಂಶಾಂಬುಜ[21] ಮೈಸೂರರಸರು ಮುಮ್ಮಡಿ ಚಾಮರಾಜೇಂದ್ರರು "ತುಲಾಪುರುಷ, ಹಿರಣ್ಯಗರ್ಭ, ಗೋಸಹಸ್ರ ವಸುಂಧರಾಗ್ರಹಾರಾದ್ಯನೇಕ ಮಹಾದಾನ ವಿತರಣ" ಎಂದು ವರ್ಣಿಸಿದೆ. ಟಿ. ನರಸೀಪುರದ ಮತ್ತೊಂದು ಶಾಸನ[22] ಮೈಸೂರರಸರ ವಂಶಾವಳಿಯನ್ನು ಸವಿಸ್ತಾರವಾಗಿ ಬಣ್ಣಿಸಿ ಅರಸು ಚಿಕ್ಕದೇವೇಂದ್ರನು ಹದಿನಾರು ಮಹಾದಾನಗಳನ್ನು ಮಾಡಿದ್ದನು ಎಂದು ಹೇಳುತ್ತದೆ (ಈ ಶಾಸನದಲ್ಲಿ ಕಾಲ ಮತ್ತು ಸ್ಥಳದ ಉಲ್ಲೇಖವಿಲ್ಲ).

ಕೃಷ್ಣರಾಜನಗರದ ಒಂದು ಶಾಸನ[23] ಸರ್ವಾಧಿಕಾರಿ ನಂಜರಾಜ (ಅರಸು ಕೃಷ್ಣರಾಜ, ಮೈಸೂರು) ಶಕವರ್ಷ ೧೬೬೩ ದುಮತಿ ಸಂವತ್ಸರ ಶ್ರಾವಣ, ಶನಿವಾರ ಗೋಕುಲಾಷ್ಟಮಿ, ರೋಹಿಣಿ ನಕ್ಷತ್ರ (ಕ್ರಿ.ಶ. ೧೭೪೧ ಆಗಸ್ಟ್ ೨೨ರಂದು) ಮಾಡಿದ ಒಂದು ಗ್ರಾಮದಾನ ಶಾಸನ. ಈ ಶಾಸನದಲ್ಲಿ ನಂಜರಾಜನ ವಂಶಾವಳಿಯನ್ನು ಹೇಳುತ್ತಾ, ನಂಜರಾಜನು ತನ್ನ ಅರಸನಿಂದ ಅಪ್ಪಣೆ ಪಡೆದು ಹದಿನಾರು ಮಹಾದಾನಗಳನ್ನು ಅಂದರೆ (EC V, ಪುಟ).

.........................ಬ್ರಹ್ಮಾಂಡಂ ವಿಶ್ವಚಕ್ರಂ, ಕನಕಗಜ
ಹಯಸ್ಕಂದ ನಾನ್ಗೋ ಸಹಸ್ರ ಕಲ್ಪದ್ರುಮಂ ಕಲ್ಪವಲ್ಲೀಂ
ನಿಜತನುತುಲಿತಂ ಹೇಮಹೈರಣ್ಯ ಗರ್ಭ, ಅಬ್ದೀನ್ಬುತಾನಿ
ಸಿರಾನಜನಕನಕಜಂ ಧೇನುಯುಗ್ಮಂ ಧರಾಂಚ ಪ್ರಾದಾದ್ಮೋ
ಭೂಸುರೇಭ್ಯೋಯದನುಮತಿ ವಶಾನ್ನಂಜರಾಜಕ್ಷೀತೀಂದ್ರಃ।

ಮತ್ಸ್ಯ ಪುರಾಣದಲ್ಲಿ ಹೇಳಿರುವಂತೆ ಹದಿನಾರು ಮಹಾದಾನಗಳನ್ನು ಉಲ್ಲೇಖಿಸಿದೆ.

ಟಿ. ನರಸೀಪುರದ ಶಾಸನವೊಂದು[24] ವಿಜಯ ರಘುನಾಥ ಸೇತುಪತಿ ರೌತ್ತದೇವ ರಾಮನಾಡು ದೊರೆಯನ್ನು ಪ್ರಶಂಸಿಸುತ್ತಾ ಹದಿನಾರು ಮಹಾದಾನಗಳನ್ನು ತುಲಾಪುರುಷ ಮುಂತಾದ ದಾನಗಳನ್ನು ಮಾಡಿದವನೆಂದು ಹೊಗಳುತ್ತದೆ. ಇದೇ ಟಿ. ನರಸೀಪುರದ ಮತ್ತೊಂದು ಶಾಸನ ಇದೇ ದೊರೆಯನ್ನು ಹೊಗಳುತ್ತಾ ಹಿರಣ್ಯಗರ್ಭ ದಾನವನ್ನು ಮಾಡಿದವನು ಎಂದು ಪ್ರಶಂಸಿಸುತ್ತದೆ.

ಮೈಸೂರಿನ ತಾಮ್ರ ಶಾಸನವೊಂದು[25] ಧನ್ನೋಜಿಯೆಂಬ ಬ್ರಾಹ್ಮಣ ವ್ಯಾಪಾರಿಯೊಬ್ಬನು ಗುಜರಾತಿನಿಂದ ಬಂದು ದೊರೆಯ ಪ್ರೀತಿಯನ್ನು ಸಂಪಾದಿಸಿ ಅನೇಕ ದಾನಗಳನ್ನು ಮಾಡುತ್ತಾನೆ. ಪ್ರಸ್ತುತ ಶಾಸನದಲ್ಲಿ ಕನ್ನಂಬಾಡಿ ಸ್ಥಳದಲ್ಲಿರುವ ಹೊಸಕೋಟೆ ಎಂಬ ಗ್ರಾಮ

20 EC VI, ಪಾಂಡವಪುರ ೨೦೫
21 EC V, ಮೈಸೂರು ೨೬
22 EC V, ಟಿ. ನರಸೀಪುರ ೧೪
23 EC V, ಕೃಷ್ಣರಾಜನಗರ ೧೧೭, ಕ್ರಿ.ಶ. ೧೭೪೧
24 EC V, ಟಿ. ನರಸೀಪುರ ೧೧೬
25 EC V, ಮೈಸೂರು ೧೦೪, ಕ್ರಿ.ಶ. ೧೬೬೭

ವನ್ನು ಅಗ್ರಹಾರವನ್ನಾಗಿ ಮಾಡಿ ಅನೇಕ ಬ್ರಾಹ್ಮಣರಿಗೆ ದಾನ ಮಾಡುತ್ತಾನೆ. ದನ್ನೋಜಿ ಮಾಡಿದ ಅನೇಕ ದಾನಗಳನ್ನು ಪ್ರಶಂಸಿಸುತ್ತಾ ದನ್ನೋಜಿಯು ಮಹಾದಾನವಾದ ತುಲಾಭಾರ ದಾನವನ್ನು ಮಾಡುವುದಕ್ಕಾಗಿ ತಕ್ಕಡಿಯನ್ನು ಹತ್ತಿದವನು ಎಂದು ಪ್ರಶಂಸಿಸುತ್ತದೆ.

ಈ ರೀತಿಯಲ್ಲಿ ನಮಗೆ ಹತ್ತೊಂಬತ್ತನೆಯ ಶತಮಾನದವರೆಗೂ ಮಹಾದಾನಗಳ ಆಚರಣೆಯ ಬಗ್ಗೆ ಶಾಸನಗಳಲ್ಲಿ ಮಾಹಿತಿ ಸಿಗುತ್ತದೆ.ವಿ.ಆರ್. ರಾಮಚಂದ್ರ ದೀಕ್ಷಿತರು ತಮ್ಮ ಮತ್ಸ್ಯಪುರಾಣ ಒಂದು ಅಭ್ಯಾಸ ಎಂಬ ಇಂಗ್ಲೀಷ್ ಭಾಷೆಯ ಪುಸ್ತಕದಲ್ಲಿ ಮಹಾದಾನಗಳ ಆಚರಣೆಯ ಬಗ್ಗೆ ಮಹಾದಾನಗಳನ್ನು ಇತ್ತೀಚಿನವರೆಗೂ ರಾಜ ಮಹಾರಾಜರುಗಳು ಆಚರಿಸುತ್ತಾ ಬಂದಿದ್ದಾರೆ ಎಂದು ಹೇಳುತ್ತಾ ಇಪ್ಪತ್ತನೆಯ ಶತಮಾನದ ಆದಿಭಾಗದವರೆಗೂ ತಿರುವನಂತಪುರದ ಹಿಂದೂ ರಾಜರು ಆಚರಿಸುತ್ತಾ ಬಂದಿದ್ದಾರೆ ಎಂದು ಹೇಳುತ್ತಾರೆ.

ಈಗ ಮುಖ್ಯವಾಗಿ ರಾಜಮನೆತನಗಳನ್ನು ವಿಂಗಡಿಸಿಕೊಂಡು ಶಾಸನಾಧಾರ ಮಹಾದಾನಗಳ ಆಚರಣೆಯನ್ನು ವಿವೇಚಿಸೋಣ. ನಮ್ಮ ಅಭ್ಯಾಸ ಪ್ರದೇಶದ ಪರಿಮಿತಿಯಲ್ಲಿ ಮೊದಲಿಗೆ ಆಳಿದವರು ಗಂಗರು ಅನೇಕ ಬಗೆಯ ದಾನಗಳ ವಿಚಾರವಿದ್ದರೂ ಎಲ್ಲಿಯೂ ಮಹಾದಾನಗಳ ಉಲ್ಲೇಖವಿಲ್ಲ. ನಂತರ ಹೊಯ್ಸಳರು ಎಂದರೆ ಹತ್ತನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದವರೆಗೆ ಆಳಿದ್ದರೂ ಸಹ ಅವರ ಯಾವುದೇ ಶಾಸನಗಳಲ್ಲಿಯೂ ಮಹಾದಾನಗಳ ಉಲ್ಲೇಖವಿಲ್ಲ. ಇದಕ್ಕೆ ಮುಖ್ಯ ಕಾರಣ ಈ ವಂಶದ ಅನೇಕ ದೊರೆಗಳು ಹಾಗೂ ರಾಣಿಯರು ಜೈನ ಮತಾವಲಂಬಿಗಳಾಗಿದ್ದುದೂ ಹಾಗೂ ಜೈನ ಮತದ ಪ್ರಭಾವಕ್ಕೊಳಗಾಗಿದ್ದವರೂ ವೈದಿಕ ಧರ್ಮವನ್ನು ಅವಲಂಬಿಸಿದ ದೊರೆಗಳಿದ್ದರೂ ವೈದಿಕ ಧರ್ಮದ ಷೋಡಶ ಮಹಾದಾನಗಳು ಅಷ್ಟು ಪ್ರಭಾವ ಬೀರಿಲ್ಲ.

ಆದರೆ ಮಹಾದಾನಗಳು ಇದೇ ಕಾಲದಲ್ಲಿ ಆಚರಣೆಯಲ್ಲಿತ್ತು ಎನ್ನುವುದಕ್ಕೆ ಕೆಲವು ಉದಾಹರಣೆಗಳನ್ನು ಮೊದಲೇ ಕೊಟ್ಟಿದ್ದೇನೆ.

ನಮ್ಮ ಸೀಮಿತ ಪ್ರದೇಶದಲ್ಲಿ ವಿಜಯನಗರದರಸರ ಕಾಲದಲ್ಲಿ ವಿಪುಲವಾಗಿ ಷೋಡಶ ಮಹಾದಾನಗಳ ಉಲ್ಲೇಖ ಬರುತ್ತದೆ. ವಿಜಯನಗರದ ಪ್ರಾರಂಭ ಕಾಲದಿಂದ ಅವನತಿಯ ಕಾಲದವರೆಗೂ ಪ್ರತಿಯೊಬ್ಬ ರಾಜನೂ ಮಹಾದಾನಗಳನ್ನು ಮಾಡಿದ ಉಲ್ಲೇಖ ಶಾಸನಗಳಲ್ಲಿ ದೊರಕುತ್ತದೆ. ವೈದಿಕಧರ್ಮದ ರಕ್ಷಣೆಗಾಗಿಯೇ ತಲೆ ಎತ್ತಿದ ರಾಜ್ಯವಾದುದರಿಂದ ದಾನ, ಮಹಾದಾನಗಳು ಮತ್ತು ಇತರ ವೈದಿಕ ಧರ್ಮಾನುಚಾರಗಳು ರಾಜಕೀಯವಾಗಿ ಅವಶ್ಯವಾಗಿದ್ದಿರಬಹುದು.

ವಿಜಯನಗರದರಸರು ಮಹಾದಾನಗಳನ್ನು ಆಗಾಗ್ಗೆ ಮಾಡುತ್ತಿದ್ದರು, ಅವರ ಶಾಸನಗಳಲ್ಲೆ ಹೇಳಿರುವಂತೆ ಚಿನ್ನವನ್ನು ದಾನ ಮಾಡುವುದು ಅವರಿಗೆ ಮಕ್ಕಳು ಮಣ್ಣಿನಲ್ಲಿ ಆಡಿದಂತೆ ಎಂಬ ಮಾತು ನಿಜವಿರಲೂ ಬಹುದು, ಏಕೆಂದರೆ ಹೀಗೆ ದಾನ ಮಾಡಲು ಸಾಮ್ರಾಜ್ಯವು ಖಂಡಿತವಾಗಿಯೂ ಸಂಪತ್ಭರಿತವಾಗಿರಬೇಕು. ಇದು ಸಮೃದ್ಧಿಯ ಪ್ರತೀಕ.

ವಿಜಯನಗರದ ಸಾಮ್ರಾಜ್ಯವು ಸ್ಥಾಪನೆಯಾದಾಗಿನಿಂದಲೂ, ಸಾಮ್ರಾಜ್ಯದ ಮೇಲೆ ಮುಸಲ್ಮಾನರು ಧಾಳಿ ಮಾಡುತ್ತಲೆ ಇದ್ದರು. ಸಾಮ್ರಾಜ್ಯವನ್ನು ನಾಶ ಮಾಡಬೇಕೆಂದು ಛಲದಿಂದ ಪ್ರಯತ್ನಿಸುತಿದ್ದರು. ಇಂತಹ ಸನ್ನಿವೇಶದಿಂದಾಗಿ, ಮಾನಸಿಕವಾಗಿ ನೆಮ್ಮದಿ ಪಡೆಯುವುದಕ್ಕಾಗಿ, ಷೋಡಶ ಮಹಾದಾನಗಳನ್ನು ಮಾಡುವುದರಿಂದ ಪುರಾಣಗಳಲ್ಲಿ ಹೇಳಿರುವಂತೆ ತನ್ನ ಮತ್ತು ತನ್ನ ರಾಜ್ಯದ ಮೇಲೆ ಎರಗಬಹುದಾದ ಪೀಡಾ ಪರಿಹಾರವಾಗುವುದೆಂಬ ನಂಬಿಕೆಯಿಂದ ಮಹಾದಾನಗಳನ್ನು ಆಗ್ಗಿಂದಾಗ್ಗೆ ಮಾಡುತ್ತಿದ್ದಿರಬಹುದು.

ವೈದಿಕ ಧರ್ಮದ ಪ್ರಭಾವ ರಾಜರ ಮೇಲೆ ಹೆಚ್ಚಾಗಿರಬಹುದು. ವೈದಿಕರಾದ ವೇದಶಾಸ್ತ್ರ ಪಾರಂಗತರಾದ ಪುರೋಹಿತ ಪಂಗಡಕ್ಕೆ ಸೇರಿದ ಬ್ರಾಹ್ಮಣರು ರಾಜಕೀಯವಾಗಿ ಹಾಗೂ ಸಾಮಾಜಿಕವಾಗಿ ಹೆಚ್ಚು ಪ್ರಭಾವಶಾಲಿಗಳಾಗಿದ್ದು, ರಾಜ್ಯಕ್ಕೆ ಹಾಗೂ ರಾಜ್ಯಾಡಳಿತಕ್ಕೆ ಅವರ ಅಭಿಪ್ರಾಯ ಮತ್ತು ವಿಶ್ವಾಸ ತುಂಬಾ ಬೇಕಾಗಿದ್ದಿರಬಹುದು. ಇಂತಹ ಬ್ರಾಹ್ಮಣರ ಮನಸ್ಸಂತೋಷ ಪಡಿಸುವುದಕ್ಕಾಗಿಯೂ ಮಹಾದಾನಗಳ

ನೆಪದಲ್ಲಿ ಅವರನ್ನು ಸಂತೋಷಪಡಿಸುತ್ತಿದ್ದಿರಬಹುದು. ವಿಜಯನಗರದರಸರು ಮಾಡಿರುವ ಗ್ರಾಮದಾನಗಳ ಸಂಖ್ಯೆಯನ್ನು ನೋಡಿದಾಗ ಈ ಅಭಿಪ್ರಾಯ ಬರುವುದು. ಸಾಮಾಜಿಕವಾಗಿ ತಾವು ಸಂಪ್ರದಾಯಸ್ಥರು ಹಾಗೂ ವೈದಿಕ ಧರ್ಮ ಸಂರಕ್ಷಕರು ಎಂಬ ಅಭಿಪ್ರಾಯವನ್ನು ಮೂಡಿಸುವುದಕ್ಕಾಗಿಯೂ ಇರಬಹುದು.

ವಿಜಯನಗರದ ದಾನ ಶಾಸನಗಳಲ್ಲಿ ಕೃಷ್ಣದೇವ ರಾಯ ಪದೇ ಪದೇ ತುಲಾ ಪುರುಷದಾನವನ್ನು ಮಾಡುತ್ತಿದ್ದ ಎಂಬ ಪ್ರಶಂಸೆ ಬರುತ್ತದೆ. ಈ ಮಾತಿಗೆ ಪೂರಕವಾಗಿ ನಮಗೆ ಹಂಪಿಯಲ್ಲಿ ತುಲಾಭಾರ ಮಂಟಪವಿದ್ದು ಇಲ್ಲಿ ಕೃಷ್ಣದೇವರಾಯನು ಪ್ರತಿ ವರ್ಷ ಚಿನ್ನದಲ್ಲಿ ತುಲಾಭಾರ ಮಾಡಿಕೊಂಡು ಆ ಚಿನ್ನವನ್ನು ದಾನ ಮಾಡುತ್ತಿದ್ದನು ಎನ್ನುವ ಪ್ರತೀತಿಯಿದೆ. ಇದರಿಂದ ತುಲಾಪುರುಷದಾನ ಮಾಡುತ್ತಿದ್ದನು ಎನ್ನುವುದಕ್ಕೆ ಆಧಾರ ಸಿಗುತ್ತದೆ.

ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಮಹಾದಾನಗಳೆಲ್ಲಾ ಮತ್ಸ್ಯಪುರಾಣದಲ್ಲಿ ಹೇಳಿರುವಂತೆಯೆ ವಾರ, ತಿಥಿ, ನಕ್ಷತ್ರಗಳನ್ನು ಅನುಸರಿಸಿ ಮಾಡಿದ್ದಾರೆ. ಮತ್ಸ್ಯಪುರಾಣದ ಅಧ್ಯಾಯ ೨೪ ಶ್ಲೋಕ ೧೯ ರಿಂದ ೨೩ ರವರೆಗೆ ಶಾಸ್ತ್ರೋಕ್ತವಾದ ಕಾಲ ದೇಶಗಳನ್ನು ಹೀಗೆ ಹೇಳಿದೆ. ಉತ್ತರಾಯಣ, ದಕ್ಷಿಣಾಯನ, ವಿಷುವತ್ಪುಣ್ಯ ಕಾಲಗಳು, ವ್ಯತಿಪಾತ, ಯುಗಾದಿ, ಚಂದ್ರ, ಸೂರ್ಯ ಗ್ರಹಣಗಳು, ಸಂಕ್ರಮಣ ಚತುರ್ದಶಿ, ಅಷ್ಟಮಿ, ಹುಣ್ಣಿಮೆ ಪರ್ವದಿನಗಳು ದ್ವಾದಶಿ ಅಷ್ಟಕಾಶ್ರಾದ್ಧ ದಿನಗಳು ಇವೇ ಮೊದಲಾದ ಸಮಯಗಳು ಪ್ರಶಸ್ತ. ಪುಣ್ಯ ತೀರ್ಥಗಳು, ದೇವಸ್ಥಾನ, ಬಾವಿಯ ತೀರ, ತೋಟ, ನದೀ ತೀರ ಅಥವಾ ಮನೋಹರವಾದ ಕೆರೆಯ ದಡ.

ಮಹಾದಾನಗಳನ್ನು ವೇದಶಾಸ್ತ್ರ ಪಾರಂಗತರಾದ ಸತ್ಪಾತ್ರರಾದ ಬ್ರಾಹ್ಮಣರಿಗೆ ಕೊಡಬೇಕು ಎಂಬ ಮಾತನ್ನು ಸಹ ಅಕ್ಷರಶಃ ಪಾಲಿಸಿಕೊಂಡು ಬಂದಿದ್ದಾರೆ. ಈ ಮಾತು ದಾನ ಸ್ವಿಕಾರ ಮಾಡುವವನ ಬಣ್ಣನೆ ಮತ್ತು ಪ್ರಶಂಸೆಯಿಂದ ಖಚಿತವಾಗುತ್ತದೆ. ದಾನ ಸ್ವೀಕಾರ ಮಾಡುವವನನ್ನು ದಾನಿಗಿಂತ ಹೆಚ್ಚಾಗಿ ಪ್ರಶಂಸಿದ್ದಾರೆ ಎಂಬುದು ಉಲ್ಲೇಖಾರ್ಹ.

ಶಾಸನಗಳ ಆಧಾರದ ಮೇಲೆ ಹೇಳಬೇಕಾದರೆ ಷೋಡಶ ಮಹಾದಾನಗಳನ್ನು ಸಮ್ರಾಟರು ಹಾಗೂ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಪ್ರಬಲರಾಗಿದ್ದವರು ಮಾತ್ರ ಆಚರಿಸುತ್ತಿದ್ದರು ಎಂದು ಹೇಳಬಹುದು.

ಆದರೆ ಮಹಾದಾನಗಳಲ್ಲಿ ಚಿನ್ನವೇ ದಾನದ ಪ್ರಧಾನವಾದುದರಿಂದ ಹಾಗೂ ಚಿನ್ನದ ದಾನವು ಚರಾಸ್ತಿ (Moveable) ಯಾದುದರಿಂದ ದಾನದ ದಾಖಲೆಯನ್ನು (record) ಶಾಸನಗಳ ರೂಪದಲ್ಲಿ ನಿರ್ಮಿಸುವ ಅಗತ್ಯತೆಯುಂಟಾಗುತ್ತಿರಲಿಲ್ಲ. ಮಹಾದಾನಗಳಿಗೆ ಪೂರಕವಾಗಿ ಗ್ರಾಮದಾನವನ್ನಾಗಲಿ, ಭೂದಾನವನ್ನಾಗಲಿ ಸಾಮಾನ್ಯನು ಮಾಡಲು ಸಾಧ್ಯವಿಲ್ಲದಿರುವರಿಂದ ಇಂತಹ ದಾಖಲೆಗಳ (ಶಾಸನಗಳ ರೂಪದಲ್ಲಿ) ನಿರ್ಮಾಣವಾಗಿಲ್ಲ ಹಾಗೂ ನಮಗೆ ಮಾಹಿತಿ ಸಿಗುವ ಸಾಧ್ಯತೆಗಳಿಲ್ಲ.

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಪ್ರಬಲರಾಗಿದ್ದವರು, ಮತ್ತು ವರ್ತಕರು ಮಹಾದಾನಗಳನ್ನು ಮಾಡಿದ ಉಲ್ಲೇಖಗಳು ಸಿಗುವುದಿಲ್ಲ. ಆದರೆ ಮೈಸೂರಿನ ತಾಮ್ರಶಾಸನದ ವಿವರಣೆಯಂತೆ ದನ್ನೋಜಿಯೆಂಬ ವ್ಯಾಪಾರಿಯು ಮಹಾದಾನವಾದ ತುಲಾಪುರುಷ ದಾನವನ್ನು ಮಾಡಿರುವ ವಿವರವನ್ನು ಈ ಮೊದಲೇ ಹೇಳಿದ್ದೇನೆ.

ಹೀಗೆ ಧನಿಕರು, ವರ್ತಕರು, ಅಧಿಕಾರಿಗಳು ಮಹಾದಾನಗಳನ್ನು ಬಹು ಪುರಾತನ ಕಾಲದಿಂದಲೂ ಮಾಡುತ್ತಾ ಬಂದಿರಬಹುದು, ಆದರೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಬದಲಾವಣೆಗಳಾಗುತ್ತಾ ಜನರಿಗೆ ದಾನ ವಿಚಾರದಲ್ಲಿ ನಂಬುಗೆಯಿದ್ದರೂ ಸಹ ಆಚರಣೆ ಕಡಿಮೆಯಾಗಿರಬಹುದು. ರಾಜ, ಮಹಾರಾಜರುಗಳು ಕಣ್ಮರೆಯಾದಂತೆ ಮಹಾದಾನ ಪದ್ಧತಿಯೂ ಸಹ ಸಮಾಜದಿಂದ ಕಣ್ಮರೆಯಾಗಿದೆ. ಮಹಾದಾನಗಳಲ್ಲಿ ಒಂದಾದ ತುಲಾಪುರುಷ ದಾನ ತನ್ನದೇ ಆದ ರೂಪದಲ್ಲಿ ಉಳಿದು ಬಂದಿದೆ. ರಾಜಕೀಯ ಪುಡಾರಿಗಳು ತಮ್ಮ ಅಭಿಮಾನಿಗಳಿಂದ ತುಲಾಭಾರವನ್ನು ಮಾಡಿಸಿಕೊಂಡು ತಾವೇ ಸ್ವೀಕಾರ ಮಾಡುವಂತಹ ವಿಚಿತ್ರ ಪದ್ಧತಿಯು ಧಾರ್ಮಿಕ ಹಿನ್ನಲೆಯಲ್ಲಿ ಆಧುನಿಕವಾಗಿ ಹುಟ್ಟಿಕೊಂಡಿದೆ.

ಜನಸಾಮಾನ್ಯರಲ್ಲಿ ತುಲಾಪುರುಷ ದಾನವು ತನ್ನದೇ ಆದ ರೀತಿಯಲ್ಲಿ ಪರಿವರ್ತನೆ ಹೊಂದಿ ಉಳಿದುಕೊಂಡು ಬಂದಿದೆ. ಚಿನ್ನವನ್ನು ತನ್ನ ತೂಕಕ್ಕೆ ಸರಿಯಾಗಿ ಕೊಡುವುದು ಅಸಾಧ್ಯವಾದುದರಿಂದ ತಮ್ಮ ತೂಕಕ್ಕೆ ಸರಿಯಾಗಿ ಬೆಲ್ಲ ಹಾಗೂ ಧಾನ್ಯಗಳನ್ನು ದೇವಸ್ಥಾನಗಳಿಗೂ ಸಂಸ್ಥೆಗಳಿಗೂ ಕೊಡುವುದು ಈಗಲೂ ರೂಢಿಯಲ್ಲಿ ಉಳಿದು ಬಂದಿದೆ.

## ಆಧಾರಿತ ಗ್ರಂಥಗಳು


ಎಂ. ಚಿದಾನಂದಮೂರ್ತಿ : ಸಂಶೋಧನ ತರಂಗ-೨, ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು ೧೯೭೦.

ವಿ. ಆರ್. ರಾಮಚಂದ್ರ ದೀಕ್ಷಿತರ್ : The Matsya Purana A Study, ಮದ್ರಾಸ್ ವಿಶ್ವವಿದ್ಯಾಲಯ, ೧೯೩೫.

ಶ್ರೀ ಮತ್ಸ್ಯ ಪುರಾಣ (ಕನ್ನಡ ಅನುವಾದ ಸಹಿತ) ಸಂಪುಟ-೭ : ಅನುವಾದ ವಾಜಪೇಯಿ ಶ್ರೀ ರಂಗಾಚಾರ್, ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ ಸಂಖ್ಯಾ–೩೩, ೧೯೪೮

ಶ್ರೀ ಲಿಂಗ ಪುರಾಣ ಭಾಗ ೨ : ಅನುವಾದಕರು, A Board of Scholars, Pub : Mothilal Banarasidas, Delhi

ಶ್ರೀ ಲಿಂಗ ಮಹಾಪುರಾಣ, ಉತ್ತರಭಾಗ ಸಂಪುಟ ೬, ಸಂಸ್ಕೃತ ಮೂಲ ಕನ್ನಡದಲ್ಲಿ ಅರ್ಥಾನುವಿವರಣೆಯೊಡನೆ, ಅನುವಾದಕರು : ಆಸ್ಥಾನ ವಿದ್ವಾನ್, ಎಡತೊರೆ ಚಂದ್ರಶೇಖರಶಾಸ್ತ್ರಿ, ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ, ಮೈಸೂರು, ಬೆಂಗಳೂರು ಪ್ರೆಸ್ ಬ್ರಾಂಚ್, ೧೯೪೭

ಬಿ. ಆರ್. ಹಿರೇಮಠ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.

'ಎಫಿಗ್ರಾಫಿಯಾ ಕರ್ನಾಟಿಕ' ಸಂಪುಟಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

ಡಾ॥ ಮೃತ್ಯುಂಜಯ ರುಮಾಲೆ*

# ಸಪ್ತ ಸಂತಾನಗಳು : ಒಂದು ಸ್ಥೂಲ ಅಧ್ಯಯನ

ತಟಾಕಮ್ ಧನ ನಿಕ್ಷೇಪೋ ಬ್ರಹ್ಮಾಸ್ಥಾಪನಮೇವಚ
ವನಮ್ ದೇವಾಲಯಃ ಕಾವ್ಯಮ್ ಸುತಶ್ಚ ಸ್ವರ್ಗದಾನ್ಯ
ಣಾವ್-ಶಂಭು ರಹಸ್ಯಂ
ಪೂನಿಮಗ್ರಾಹಾರ ವರಪುತ್ರ ಸಮುನ್ನತಿ ದೇವಾತಾಲಯೋ
ದಾನ ತಟಾಕ ಸತ್ಕೃತಿ ನಿಧಾನ ಮುಲಾ ಶಶಿತಾರ ಕಂಬು
—ಕುಮಾರ ಸಂಭವಮು (೧–೪೬)

ಅಗ್ರಹಾರ, ಪುತ್ರ, ದೇವಾಲಯ, ತಟಾಕ, ನಿಧಿ, ವನ, ಕಾವ್ಯ—ಇವು ಸಪ್ತ ಸಂತಾನಗಳು. ಸಪ್ತ ಸಂತತಿ ಎಂಬುದೂ ಇವುಗಳಿಗಿರುವ ಮತ್ತೊಂದು ಹೆಸರು.

ಈ ಸಪ್ತ ಸಂತಾನಗಳು ಪ್ರಾಚೀನ ಕಾಲದಲ್ಲಿ ಸಾಮಾನ್ಯವಾಗಿ ರಾಜರಿಂದ, ಸಮಾಜದ ಗಣ್ಯವರ್ಗದವರಿಂದ, ಆರ್ಥಿಕವಾಗಿ ಸ್ಥಿತಿವಂತರಿಂದ, ಕೆಲವೊಮ್ಮೆ ಪುಣ್ಯ ವಿಶೇಷ ಫಲದ ಕಾರಣವಾಗಿ ಸಾರ್ವಜನಿಕರಿಂದ ನೆರವೇರಲ್ಪಡುತ್ತಿದ್ದವು.

ರಾಜರೇ ಅಲ್ಲದೇ ಯಾರೇ ಮಾಡಬಹುದಾದ ಈ ಸಾಮಾಜಿಕ ಅವಶ್ಯಕತೆಗಳು ಪ್ರತಿಷ್ಠೆಯ ಸಾಧನೆಯೆನಿಸಿದ್ದು ಅಂದಿನವರ ಉಜ್ವಲ ಭವಿಷ್ಯದ ಕಲ್ಪನೆಯನ್ನು ಎತ್ತಿ ತೋರಿಸುತ್ತವೆ. ಅದೂ ಅಲ್ಲದೇ, ಪ್ರಾಚೀನರ ಬಹುಮುಖ ಧ್ಯೇಯ ಧೋರಣೆಗಳು ಕರ್ತವ್ಯದ ಹಿನ್ನೆಲೆಯಲ್ಲೂ ಮತ್ತು ಪರಂಪರಾಗತವಾಗಿ ಮುಂದುವರೆಯಬೇಕೆಂಬ ಅರ್ಥದ 'ಸಂತಾನಗಳು' ಶಬ್ದದ ಬಳಕೆ ಅವರ ಆರೋಗ್ಯಕರ ನಿಲುವೆನಿಸುತ್ತದೆ.

ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ಸಪ್ತ ಸಂತಾನಗಳ ಉಲ್ಲೇಖ ಅತಿ ವಿರಳವೆಂದೇ ಹೇಳಬಹುದು. ಕಾವ್ಯಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೧೪೬೦ ರಲ್ಲಿದ್ದ ಚಿಕ್ಕ ಮಲ್ಲಿಕಾರ್ಜುನ ತನ್ನ ಧರ್ಮಸಂಪಾದನೆಯಲ್ಲಿ,

ಕೆರೆಯು ಧನ ನಿಕ್ಷೇಪ ವನಗಳು
ಹರನ ಆಲಯ ಬ್ರಹ್ಮಸ್ಥಾಪ್ಯವು
ಪರಮ ಸತ್ಕೃತಿ ಪುತ್ರಮಿಂತಿವು ಸಪ್ತ ಸಂತಾನ
ಧರೆಯೊಳಗೆ ಮಿಗಿಲೆನಿಪ ಧರ್ಮಿಗ
ಗಳಂತು ಮಾಳ್ಪರು ಧರ್ಮಕೀರ್ತಿಯ
ಧರಿಸಿ ಚಿಕ ವೀರೇಶ ಸತ್ಕೃತಿ ಪುತ್ರನಂ ಪಡೆದಾ

—ಎಂದು ಸಾಂದರ್ಭಿಕವಾಗಿ ಮೊದಲ ಬಾರಿಗೆ ಸಪ್ತ ಸಂತಾನಗಳನ್ನು ಉಲ್ಲೇಖಿಸುತ್ತಾನೆ. ಶಾಸನಕ್ಕೆ ಸಂಬಂಧಿಸಿದಂತೆ, 'ಸಪ್ತ ಸಂತಾನಗಳು' ಎಂಬ ಶೀರ್ಷಿಕೆ ಎಲ್ಲೂ ಬಳಕೆಯಾಗಿಲ್ಲ. ಆದರೆ, ಸಪ್ತ ಸಂತಾನಗಳಲ್ಲಿ ಬರುವ ವಿವಿಧ ಕರ್ತವ್ಯಗಳನ್ನು ಅವು ಉಲ್ಲೇಖಿಸುತ್ತವೆ. ಈ ಹಿನ್ನೆಲೆಯಲ್ಲಿ ಜಿನವಲ್ಲಭನ ಕುರಿಕ್ಯಾಲ ಶಾಸನ ಮಹತ್ವದ್ದೆನಿಸುತ್ತದೆ. ಶಾಸನದಲ್ಲಿ ಜಿನವಲ್ಲಭ ಎಲ್ಲೂ ಪ್ರಸ್ತುತ ಶೀರ್ಷಿಕೆಯನ್ನು ಉಲ್ಲೇಖಿಸುವುದಿಲ್ಲ. ಆದರೆ ಆ ಕೆಲಸವನ್ನು ಮಾಡಿ ತೋರಿಸಿದ್ದಾನೆ. 'ವಾಗ್ವಧೂವರ ವಲ್ಲಭ' ನಾದ ಇವನು ಸ್ವತಃ ಕವಿ[1] ಜೊತೆಗೆ ಕೆರೆ, ಬನ, ದೇವಾಲಯಗಳನ್ನೂ ನಿರ್ಮಿಸಿದ ದಾನಿಶ್ರೇಷ್ಠ. ಅರಿಕೇಸರಿ ಪಂಪನಿಗೆ ದತ್ತಿ ನೀಡಿದ ಅಗ್ರಹಾರದ ಬಗ್ಗೆ ಕಾಳಜಿ

* ಕನ್ನಡ ಉಪನ್ಯಾಸಕರು, ವಿಜಯನಗರ ಕಾಲೇಜ್, ಹೊಸಪೇಟೆ–೫೮೩೨೦೧

1 ಮಾರ್ಗ ೧, ಡಾ॥ ಎಂ. ಎಂ. ಕಲಬುರ್ಗಿ, ಪುಟ. ೬೭

ವಹಿಸಿದಾತ. ಸಧ್ಯದ ಶಾಸನ ಈ ಕೆಳಗಿನ ಅಂಶಗಳಿಂದ ಮುಖ್ಯವೆನಿಸುತ್ತದೆ.

೧) ಪಂಪನು ಕನ್ನಡದ ಆದಿ ಕವಿ. ತಾನು ವಿಕ್ರಮಾರ್ಜುನ ವಿಜಯವನ್ನು ಬರೆದುದಕ್ಕೆ ತನಗೆ ಅರಿಕೇಸರಿ 'ಧರ್ಮವುರ' ಎಂಬ ಅಗ್ರಹಾರವನ್ನು ದತ್ತಿಯಾಗಿ ಬಿಟ್ಟುಕೊಟ್ಟಂತೆ ತನ್ನ ಕೃತಿಯಲ್ಲಿ ಹೇಳಿಕೊಂಡಿರುವುದಲ್ಲದೆ ಜಿನವಲ್ಲಭನ ಕುರಿಕ್ಯಾಲ ಶಾಸನವು ಅದನ್ನು 'ದ್ವಿಜಾವಸಥ ಗ್ರಾಮ' (ಬ್ರಾಹ್ಮಣರ ಊರು) ಎಂದು ಹೇಳುತ್ತದೆ.

೨) ಜಿನವಲ್ಲಭ ತನ್ನ ಅಣ್ಣ ಪಂಪನ ಹೆಸರಲ್ಲಿ ಆತನ ಬಿರುದಾದ 'ಕವಿತಾಗುಣಾರ್ಣವ' ಎಂಬ ಕೆರೆಯನ್ನು ಕಟ್ಟಿಸಿದ್ದನ್ನು ಶಾಸನದಲ್ಲಿ ಹೇಳಿದೆ.

೩) 'ಮದನ ವಿಲಾಸ'ವೆಂಬ ಬನ ಮಾಡಿಸಿದ್ದು ಶಾಸನೋಕ್ತವಿದೆ.

೪) ಜೊತೆಗೆ 'ತ್ರಿಭುವನ ತಿಲಕ ಬಸದಿ' ಎಂಬ ಬಸದಿಯನ್ನು ಜಿನವಲ್ಲಭ ನಿರ್ಮಿಸಿದ್ದಾಗಿ ತಿಳಿಯುತ್ತದೆ. ಹೀಗೆ ಜಿನವಲ್ಲಭ ಮಾಡಿಸಿದ ಸ್ಮಾರಕಗಳ ಪಟ್ಟಿಯೇ ನಮಗೆ ಇಲ್ಲಿ ಸಿಕ್ಕುತ್ತದೆ.

> "....ಜಿನವಲ್ಲಭಂ ಸಬ್ಬಿನಾಡ ನಟ್ಟ ನಡುವಣ ಧರ್ಮವುರದುತ್ತರ ದಿಗ್ಭಾಗದ ವೃಷಭ ಗಿರಿಯೆಂಬನಾದಿ ಸಂಸಿದ್ಧ ತೀರ್ಥದ ದಕ್ಷಿಣ ದಿಶಾಭಾಗದೀ ಸಿದ್ಧ ಶಿಲೆಯೊಳ್ತನ್ನ ಕುಲದೈವಮಾದ್ಯಂತ ಜಿನಬಿಂಬಗಳುಮಂ ಚಕ್ರೇಶ್ವರಿಯುಮಂ ಪೆಱವು ಜಿನಪ್ರತಿಮೆಗಳುಮಂ ತ್ರಿಭುವನ ತಿಲಕಮೆಂಬ ಬಸದಿಯುಮಂ ಕವಿತಾಗುಣಾರ್ಣವಮೆಂಬ ಕೆಱೆಯುಮಂ ಮದನವಿಳಾಸಮೆಂಬ ಬನಮುಮಂ ಮಾಡಿಸಿದಂ."[2]

ಇಲ್ಲಿ ಪಂಪ ಸ್ವತಃ ರಾಜಾಶ್ರಿತ ಕವಿಯಾಗಿ, ಆಶ್ರಯದಾತ ಅರಿಕೇಸರಿಯಿಂದ ಅಗ್ರಹಾರವನ್ನು, ತಮ್ಮ ಜಿನವಲ್ಲಭನಿಂದ ಕೆರೆ, ಬನ ಪಡೆದವನಾಗಿ ಮತ್ತು ಆ ಸಂದರ್ಭದಲ್ಲಿ ಜಿನವಲ್ಲಭನಿಂದ ಜಿನ ಬಸದಿಯ ನಿರ್ಮಾಣವೂ ಆಗಿ ಹಲವು ಅನುಕೂಲಗಳನ್ನು ಪಡೆದವನಾಗಿಯೂ ಕಾಣುತ್ತಾನೆ. ಅರಿಕೇಸರಿಯ ಸಂಗದಲ್ಲಿದ್ದಾಗ ಪಂಪ ಆರ್ಥಿಕ ಸೌಲಭ್ಯವನ್ನು ಪಡೆದಿದ್ದ ಎನ್ನಬಹುದಾದರೆ ಮತ್ತು ಅದನ್ನು ಸಪ್ತ ಸಂತಾನಗಳಲ್ಲಿ ಬರುವ 'ನಿಧಿ' ಪರಿಗಣಿಸಬಹುದಾದರೆ 'ಪುತ್ರ' ಒಂದನ್ನು ಬಿಟ್ಟು ಪಂಪ ಎಲ್ಲಾ ಸೌಕರ್ಯಗಳನ್ನು ಅನುಭವಿಸಿದವನಾಗಿ ಕಾಣುತ್ತಾನೆ. ಈ ಹಿನ್ನೆಲೆಯಲ್ಲಿ ಕನ್ನಡ ಕವಿಗಳಲ್ಲಿಯೇ ಸಪ್ತ ಸಂತಾನಗಳನ್ನು ಅನುಭವಿಸಿದ ಮೊದಲ ಕವಿ ಎಂದು ಸ್ಥೂಲವಾಗಿ ಕರೆಯಬಹುದಾಗಿದೆ.

ಏಳು ಕಾರ್ಯಗಳು ಇಲ್ಲಿ ಇಬ್ಬರ ನಡುವೆ ಹಂಚಿ ಹೋಗಿರುವುದು ಮತ್ತು ಅದರಲ್ಲಿ ಒಂದರ ಕಡಿತವಾಗಿರುವುದನ್ನು ಇಲ್ಲಿ ಸೂಚ್ಯವಾಗಿ ಗಮನಿಸಬಹುದು. ಆದರೆ, ಆಂಧ್ರಪ್ರದೇಶದಲ್ಲಿ ಸಪ್ತಸಂತಾನ ದಾನಗಳು ಏಕ ವ್ಯಕ್ತಿಯಿಂದಲೇ ನಡೆದಿರುವುದು ಕಂಡುಬರುತ್ತದೆ.

ಕನ್ನಡ ಕಾವ್ಯ-ಶಾಸನಗಳು ಸಪ್ತಸಂತಾನಗಳ ಉಲ್ಲೇಖ ಮಾಡದಿದ್ದರೂ ಕನ್ನಡಿಗರು ಆ ಕೆಲಸಗಳನ್ನು ಪ್ರತ್ಯೇಕವಾದ ರೀತಿಯಲ್ಲಿ ನಿರಂತರವಾಗಿ ಮಾಡಿಕೊಂಡು ಬಂದಿದ್ದಾರೆ. ಕನ್ನಡಿಗರಿಗೆ 'ಸಪ್ತ ಸಂತಾನಗಳ' ಕಲ್ಪನೆ ಇತ್ತೋ ಇದ್ದಿಲ್ಲವೋ ಎಂಬುದು ಬಹುಶಃ ಇಲ್ಲಿ ಮುಖ್ಯವಾದ ಅಂಶವಾಗುತ್ತದೆ.

ಕನ್ನಡಿಗರಲ್ಲಿ ರಾಜರು, ಸಮಾಜದ ಗಣ್ಯರು, ಸಾರ್ವಜನಿಕರು ಎಂದು ಮೂರು ರೀತಿಯಲ್ಲಿ ವಿಂಗಡಿಸಬಹುದಾದ ಸ್ತರಗಳನ್ನು ಗಮನಿಸಬಹುದು.

ಕ್ರಿ.ಶ. ೧೧೩೨ರ ಕೃಷ್ಣಾ ಜಿಲ್ಲೆಯ ಗನ್ನವರಮು ತಾಲೂಕಿನ ಏನಮಲಕುದುರು ಗ್ರಾಮದಲ್ಲಿ ದೊರೆತ ಭೀಮಣ್ಣನು ಹಾಕಿಸಿದ ತೆಲುಗು ಶಾಸನದಲ್ಲಿ ಪ್ರಥಮ ಬಾರಿಗೆ ಸಪ್ತ ಸಂತಾನಗಳಂಥ ಉಲ್ಲೇಖವನ್ನು ಡಾ॥ ಎಸ್. ವಿದ್ಯಾಶಂಕರ ಗುರುತಿಸಿದ್ದಾರೆ.[3] ಆಂಧ್ರದಲ್ಲಿ ಸಪ್ತ ಸಂತಾನಗಳಂಥ ಸಾಮೂಹಿಕ ಪುಣ್ಯ ಕಾರ್ಯಗಳು ಸದ್ಗತಿ ಮತ್ತು ಕೀರ್ತಿ ಸಂಪಾದನೆಗಾಗಿ ಮಾಡಲಾಗುತ್ತಿತ್ತು. ತೆಲುಗು ಕಾವ್ಯಗಳ ಪೀಠಿಕಾ ಪ್ರಕರಣದಲ್ಲಿ ಸಪ್ತ ಸಂತಾನಗಳ ಉಲ್ಲೇಖ ಸಾಮಾನ್ಯವಾಗಿರುತ್ತಿತ್ತು. ಅದರಲ್ಲೂ ಮನುಚರಿತಮು-

---

2 ಹೊಸತು ಹೊಸತು, ಡಾ॥ ಎಂ. ಚಿದಾನಂದಮೂರ್ತಿ, ಪುಟ ೧೦೯, ಉಧೃತ

3 ಸಾಧನೆ (೯-೪). ಪುಟ ೧೬

ಸಪ್ತ ಸಂತಾನ ಮುಲಲೋ ಬ್ರಶಸ್ತಿ ಗಾಂಡಿ
ಖಿಲಮು ನಾಕುಂಡು ನದಿ ಧಾತ್ರಿ ಗೃತಿಯ ಕಾನ
ಕೃತಿ ರಚಿಂ ಪುಮು ಮಾತು ಶಿರಿಕ್ಷ ಕುಸುಮ
ಪೇಶಲ ಸುಧಾಮ ಯೋಕ್ತ್ಯುಲ ಬೆದ್ದನಾರ್ಯ
(ಮನುಚರಿತಮು)

(ಬೆದ್ದನಾರ್ಯನೇ, ಸಪ್ತ ಸಂತಾನಗಳಲ್ಲಿ ಪ್ರಶಸ್ತಿ ಪಡೆದು ನಾಶ ಪಡೆಯಬೇ ಇರುವುದು, ಭೂಮಿಯಲ್ಲಿ ಕೃತಿ ಮಾತ್ರ. ಆದ್ದರಿಂದ ಶಿರಿಕ್ಷ, ಕುಸುಮ, ಪೇಶಲ, ಸುಧಾಮ, ಮುಕ್ತಿಗಳಿಂದ ಒಂದು ಕೃತಿಯನ್ನು ರಚಿಸು)

ಸಪ್ತ ಸಂತಾನಗಳಲ್ಲೇ ಸಾಹಿತ್ಯ ರಚನೆಯು ಶ್ರೇಷ್ಠವೆಂದು ಹೇಳುತ್ತದೆ.

ಕರ್ನಾಟಕದಲ್ಲಿ ರಾಜರುಗಳು ಈ ಮಾತನ್ನು ಬಹುಶಃ ಹೆಚ್ಚು ನೆಚ್ಚಿಕೊಂಡಂತೆ ಕಾಣುತ್ತದೆ. ಸಪ್ತ ಸಂತಾನಗಳ ಸಮಗ್ರತೆಯ ಪ್ರಭಾವ ಇಲ್ಲಿ ಕಡಿಮೆಯಾಗಿರುವ ಕಾರಣವಾಗಿ ಅವುಗಳನ್ನು ಆಸಕ್ತಿ-ಅಭಿರುಚಿಗೆ ಅನುಸಾರವಾಗಿ ಮಾಡಿದಂತೆ ಕಾಣುತ್ತದೆ. ಅದನ್ನು ನೋಡುವುದು ಪ್ರಸ್ತುತ ಸಂಪ್ರಬಂಧದ ಮತ್ತೊಂದು ಉದ್ದೇಶ.

ಸಾಮೂಹಿಕ ಪುಣ್ಯಕಾರ್ಯಗಳಿಗೆ ಸಂಬಂಧಿಸಿದಂತೆ ಕನ್ನಡದ ಕೆಲವು ಶಾಸನಗಳನ್ನು ಪ್ರಾತಿನಿಧಿಕವಾಗಿ ಇಲ್ಲಿ ಗಮನಿಸಬಹುದು.

ನಾಗಾರ್ಜುನ ಪಂಡಿತನ ಶಾಸನ (ಕ್ರಿ.ಶ. ಸು. ೧೧೨೫) ವು–

ಕೆರೆ ಬಾವಿ ಬಸದಿ ದೇಗುಲ
ಮರವಂಟಿಗೆ ಸತ್ರವೆಂಬ ಧರ್ಮಮುನಿತುಂ
ನೆರೆದುವು ಮುಗುಂದ ಮೂವ
ತ್ತರ ವಿಧು ಚಾವುಂಡರಾಯ ನಿಂದಂ ಜಗದೊಳ್

ಎಂದು ಕೆರೆ, ಬಾವಿ, ಬಸದಿ, ದೇಗುಲ, ಅರವಟ್ಟಿಗೆ, ಸತ್ರಗಳ ಮತ್ತು ಲಕ್ಷ್ಮೀಧರ ಅಮಾತ್ಯನ ಶಾಸನವು–

'....ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರಗ್ಗಿಂಬು ಕೆಯಿ ನಂಬಿದವರ್ಗ್ಗೆರೆ ಪೆಟ್ಟಾಗಿರು ಶಿಷ್ಟರಂ ಪೊರೆಯುನು ತ್ತಿಂತೆಲ್ಲವಂ. ..''

ಎಂದು ಕೆರೆ, ಬಾವಿ, ದೇವಾಲಯ, ಅನಾಥರ ಬಿಡುಗಡೆ, ಸ್ನೇಹ, ಆಶ್ರಯ, ಶಿಷ್ಟರರಕ್ಷಣೆಗಳನ್ನು ಕುರಿತ ಕರ್ತವ್ಯಗಳ ಪಟ್ಟಿಗಳನ್ನೇ ನೀಡುತ್ತವೆ.

ಈ ಎರಡೂ ಶಾಸನಗಳಲ್ಲಿ ಉಲ್ಲೇಖಿತವಿರುವ ಪುಣ್ಯ ಕಾರ್ಯಗಳು ಪ್ರಾಚೀನ ಕರ್ನಾಟಕದಲ್ಲಿ ಸಾಮಾನ್ಯವೆನಿಸಿದ್ದವು.

ಪಂಪ ವಿಕ್ರಮಾರ್ಜುನ ವಿಜಯದಲ್ಲೂ (೨–೯೭ವ)

'ಆಗಿ ತಾವಾದಿ ಗರ್ಭೇಶ್ವರರಪ್ಪುದರಿಂ ತಳರ್ದೆಡೆಯೆಡೆಯ ಮರಂಗಳ ತೊರೆಗಳ ಬಾಡಂಗಳ ಪೆಸರ್ಗಳ ಬೆಸಗೊಳುತ್ತುಂ ಮಹಾಗ್ರಹಾರಂಗಳ ಮಹಾಜನಗಳ ಕೊಟ್ಟ ಪೊನ್ನ ಜನ್ನವಿರಂಗಳು ಮನವರ ಪರಕೆಯುಮಂ ಕೈಕೊಳ್ಳುತ್ತವರ್ಗೆ ಬಾಧೆಯಾಗದಂತು ಕಾಪಂ ನಿಯಮಿಸುತ್ತುಂ....'

ಅಲ್ಲಿಗಲ್ಲಿಗೊಡೆದ ಕೆರೆಗಮಳಿದಾಯ ತನಕ್ಕುಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ ಬಂದು'–ಎಂಬಲ್ಲಿಯ ಪಾಂಡವರ ರಾಜೋಚಿತ ಪ್ರಯಾಣದ ವರ್ಣನೆಯಲ್ಲಿ ಅಂದಿನ ರಾಜವರ್ಗ ಮಾಡಬೇಕಾದ ಸಾಮಾಜಿಕ ಕಾರ್ಯವನ್ನು ತಿಳಿಸಿದ್ದು ಇಲ್ಲಿ ಗಮನಾರ್ಹ. ಕರ್ನಾಟಕದಲ್ಲಿ ಸಪ್ತ ಸಂತಾನಗಳ ವಿವಿಧ ಕಾರ್ಯಗಳನ್ನು ಸೂಚಿಸುವ ಕೆಲವು ಮುಖ್ಯ ಶಾಸನಗಳನ್ನು ಪ್ರಾತಿನಿಧಿಕವಾಗಿ ಗಮನಿಸಬಹುದು.

**ಕೆರೆ :** ಸಪ್ತ ಸಂತಾನಗಳಲ್ಲಿ ಕೆರೆಯನ್ನು ನಮ್ಮ ಪ್ರಾಚೀನರು ಯಥೇಚ್ಛವಾಗಿ ನಿರ್ಮಿಸಿರುವುದು ಕಂಡು ಬರುತ್ತದೆ. ಕೆರೆ ನಿರ್ಮಾಣ ಕದಂಬರ ಕಾಲದಷ್ಟು ಪ್ರಾಚೀನತೆಯನ್ನು ಪಡೆದುಕೊಳ್ಳುತ್ತದೆ. ಕದಂಬರು ಕರ್ನಾಟಕದಲ್ಲಿ ತಟಾಕ ನಿರ್ಮಾಣವನ್ನು ಅತಿ ಮಹತ್ವದ ಪೌರಹಿತ್ಯ ಕಾರ್ಯವೆಂದು ಪರಿಗಣಿಸಿದ್ದರು.[4] ಪ್ರಾಚೀನ ಕರ್ನಾಟಕ ಸಮಾಜದ ಹಿತಾಸಕ್ತಿಯನ್ನು ಗಮನದಲ್ಲಿಟ್ಟು

4 ಬನವಾಸಿಯ ಕದಂಬರು, ಪುಟ ೪೯

ಕೊಂಡು ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಮಹತ್ವವನ್ನು ಕೆರೆ ಕಟ್ಟುವುದರ ಮೂಲಕ ಎತ್ತಿ ತೋರಿಸಿದೆ. ಸಾರ್ವಜನಿಕವಾಗಿ ಆರ್ಥಿಕ ನಿಯಂತ್ರಣ ಹೊಂದಿದ್ದು ಜನಗಳಲ್ಲಿ ವಿಶೇಷವಾಗಿ ದುಡಿಮೆಗಾರರಲ್ಲಿ ಈ ಕೆರೆಗಳು ಪೂಜನೀಯುವೆನಿಸಿವೆ. ಸ್ಥಿತಿವಂತರು ಈ ಕೆರೆ ನಿರ್ಮಾಣದಲ್ಲಿ ಜನ್ಮಸಾರ್ಥಕ್ಯವನ್ನು ಅನುಭವಿಸಿದ್ದಾರೆ. ಕೆರೆಗಳು ವ್ಯವಸಾಯೋತ್ಪನ್ನ ಸಂಪನ್ಮೂಲಗಳಾಗಿ, ನೀರಿನ ಸೌಲಭ್ಯವನ್ನೊದಗಿಸುವ ಸಾಮಗ್ರಿಗಳಾಗಿ, ಕೆರೆ ನಿಮಿತ್ತ ಸುಂಕ, ತೆರಿಗೆ ಸಂಗ್ರಹವೂ ಇದರಿಂದ ನಡೆಯುತ್ತಿದ್ದು ಒಂದು ಉತ್ತಮ ಆದಾಯ ಮಾಧ್ಯಮವಾಗಿ ಬಹುಪಯೋಗಿ ಎನಿಸಿದ್ದವು.

"ಸತ್ತವನ ಪ್ರೇತವು ಬಹಳ ಬಾಯಾರಿಕೆಯಿಂದ ಬಳಲುವುದೆಂದೂ ತಟಾಕ ನಿರ್ಮಾಣ ಮುಂತಾದ ಧರ್ಮಕಾರ್ಯಗಳಿಂದ ಅದರ ಬಾಯಾರಿಕೆ ಹಿಂಗುವುದೆಂದೂ ಅಂದಿನ ಜನರು ನಂಬಿರುವುದರಿಂದ"[5] ಹಿಂದಿನ ಜನ ಇದರಲ್ಲಿ ಅಲೌಕಿಕತೆಯ ಪ್ರಾಮಾಣಿಕ ಪ್ರಯೋಗಶೀಲತೆಯನ್ನು ಅನುಭವಿಸಿದ್ದನ್ನು ಕಾಣಬಹುದು. ಅದೇ ರೀತಿಯಾಗಿ, "ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು, ನೀರನ್ನು ಕುಡಿದು ತೃಪ್ತರಾಗುವರೋ ಅವರು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾರೆ,"[6] ಎಂದೂ ನಂಬಿದ್ದರು.

ಕೆರೆ ನಿರ್ಮಾಣದಲ್ಲಿ ಸಮಾಜದ ವಿವಿಧ ಸ್ತರದವರನ್ನು ಕುರಿತ ಕೆಲವು ಶಾಸನಗಳನ್ನಿಲ್ಲಿ ನೋಡಬಹುದು.

ಬಿದಿಯೆಜೆ[3]ಯ ಎಂಬಾತನು ಒಂದು ಕೆರೆಯನ್ನು ಕಟ್ಟಿಸಿದ್ದಕ್ಕೆ ಆವನಿಗೆ ಶ್ರೀವೀರನೊಳಂಬನು 'ನೊಳಂಬ ದೊಡ್ಡ' ಎಂಬ ಹೆಸರಿಟ್ಟು ಅವನಿಗೆ ಕಡಗ ವಿಡುತ್ತಾನೆ.[7] ಕ್ರಿ.ಶ. ೧೦೬೭ರ ಶಿಗ್ಗಾವಿ ತಾಲೂಕಿನ ಹೊಟ್ಟೂರು ಶಾಸನವು ಕೇಶಿಗಾವುಂಡನೆಂಬಾತ ಉದಕ, ಅನ್ನ, ಗೋವು, ಭೂಮಿ, ವಿದ್ಯಾ, ಕನ್ಯಾ ಮೊದಲಾದ ದಾನಗಳನ್ನು ಮಾಡಿದ ಬಗ್ಗೆ ತಿಳಿಸುತ್ತಿದ್ದು ಅದರಲ್ಲಿ ಪ್ರಸ್ತಾಪಿತವಾದ 'ಉದಕ'ವು ಕೆರೆ, ಕಾಲುವೆ, ಬಾವಿಗಳ ನಿರ್ಮಾಣವೇ ಆಗಿರಬೇಕು.[8] ಎಕ್ಕಲ ಶೆಟ್ಟಿ ಎಕ್ಕ ಸಮುದ್ರ ಕಟ್ಟಿಸಿದ್ದಕ್ಕಾಗಿ ೪೦ ಕಂಬ ಜಮೀನನ್ನು ಆತ 'ಕೆರೆ ಕೊಡುಗೆ'ಯಾಗಿ ಪಡೆದಿದ್ದ.[9] ಬೊಮ್ಮಯ್ಯ ಎಂಬುವನು ಕೆರೆಗೆ ದಕ್ಷಿಣದ ತೂಬನ್ನು ಕಟ್ಟಿಸಿ ಕೊಟ್ಟದ್ದಕ್ಕಾಗಿ ಆ ಕೆರೆಯ ಸಮೀಪ ೧೦ ಖಂಡುಗ ಗದ್ದೆಯನ್ನು ಆತನ ಕೆಲಸಕ್ಕೆ ಪ್ರತಿಫಲವಾಗಿ ಕೊಡಲಾಗಿತ್ತು.[10] ಪಟ್ಟಣಸ್ವಾಮಿ ನೊಕ್ಕಯ್ಯನೆಂಬುವನು ಪಟ್ಟಣಸ್ವಾಮಿ ಕೆರೆ ಎಂದು ತನ್ನ ಹೆಸರಿನ ಕೆರೆ ನಿರ್ಮಿಸಿದ್ದಾನೆ.[11] ರಟ್ಟರ ಸಾಮಂತ ಎಱೆಯಪ್ಮನ ಹೆಸರಿನಲ್ಲಿ 'ರಟ್ಟಸಮುದ್ರ' ಎಂಬ ಕೆರೆಯನ್ನು ಕಟ್ಟಿಸಿದ್ದಾನೆ.[12] ಚಿಲ್ಲುಕ ಭಟಾರ ಎಂಬ ಸುಪ್ರಸಿದ್ಧ ಶೈವ ಸನ್ಯಾಸಿಗಳು ಐದು ಕೆರೆಗಳನ್ನು ಕಟ್ಟಿಸಿದರೆಂದು ಒಂದು ಶಾಸನ ಹೇಳುತ್ತದೆ.[13] ಇವು ವ್ಯಕ್ತಿ ನಿರ್ಮಿತ ಕೆರೆಗಳೆನಿಸಿದರೆ, ಧಾರವಾಡ ಜಿಲ್ಲೆಯ ನರಗುಂದದಲ್ಲಿ ಸಾರ್ವಜನಿಕರಿಂದ ಒಂದು ಕೆರೆ ನಿರ್ಮಾಣಗೊಂಡಿದ್ದು[14] ಊರಿನ ಜನ ಒಗ್ಗಟ್ಟಾಗಿ ಕೆರೆ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದಕ್ಕೆ ಉತ್ತಮ ಉದಾಹರಣೆ ಎನಿಸುತ್ತದೆ. ಚಾವುಂಡಯ್ಯನೆಂಬಾತ ಮಾಡಿಸಿದ ಕೆರೆಗೆ ಬಿಟ್ಟ ಭೂಮಿಯನ್ನು ಆ ಊರಿನ ಮಹಾರಾಜರು ಪಾಲಿಸುವರು.[15] ಈ ಶಾಸನ ಕೆರೆಯ ಮೂಲಕವಾಗಿ

---

5 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೪೫೨

6 ಅದೇ., ಪುಟ ೪೫೨

7 SII, IX, I, 17, C. 900 AD

8 EI. Vol. 16. p. 83, ಉಧೃತ, ಕರ್ನಾಟಕ ಭಾರತಿ, ೨೩-೩,೪

9 MAR. 1928, ಸಂ. ೧೯, ಕ್ರಿ.ಶ. ೧೨೨೭

10 EC. 5, 180. ಕ್ರಿ.ಶ. ೧೨೧೫

11 EC. VIII, 58, ಕ್ರಿ.ಶ. ೧೦೬೨

12 BKI, I, i, 74, ಕ್ರಿ.ಶ. ೧೦೪೧

13 EC. XII, Si 9, ಕ್ರಿ.ಶ. ೧೦೭೨

14 IA. XII, ಪುಟ ೨೨೨

15 BKI, I, ii, 151 ಕ್ರಿ.ಶ. ೧೧೦೨

ಸಾರ್ವಜನಿಕ–ರಾಜರ ಸಂಬಂಧದಲ್ಲಿ ಅನ್ಯೋನ್ಯತೆಯನ್ನು ಕಾಣಬಹುದಾಗಿದೆ. ಕೆರೆಯು ಊರುಊರುಗಳ ನಡುವೆ ಅವಲಂಬನೆ–ಸ್ವಾವಲಂಬನೆಗೆ ಕಾರಣವಾಗಿತ್ತು ಎಂಬುದಕ್ಕೆ ಒಂದು ಶಾಸನ ಈ ನಿಯಮವನ್ನು ಹೇಳುತ್ತದೆ. 'ಒಂದು ಊರಿನ ಕೆರೆಯ ನೀರನ್ನು ಇನ್ನೊಂದು ಊರಿನವರು ಬಳಸಬೇಕಾದರೆ ನಾಡಿನ ಎಲ್ಲ ಪ್ರಭುಗಾವುಂಡಗಳ ಅನುಮತಿ ಪಡೆಯಬೇಕಾಗಿತ್ತು.'[16] ಹಿರಿಯ ದಂಡನಾಯಕ ಗಂಗಪ್ಪಯ್ಯ ಕನ್ನೇಗಾಲ ಕದನದಲ್ಲಿ ಜಯಗಳಿಸಿದ್ದಕ್ಕಾಗಿ ಗಂಗಸಮುದ್ರ ಕಟ್ಟಿಸಿ ದೇವರಿಗೆ ದತ್ತಿ ಬಿಟ್ಟಿದ್ದನು.[17] ಎಂಬಲ್ಲಿ ಕೆರೆ ಸ್ವಾಮಿಗೆ ಭಕ್ತಿಯ ಕಾಣಿಕೆ ನೀಡುವ ವನೌಲ್ಯನಿಷ್ಠವಾಗಿತ್ತು ಎಂಬುದನ್ನು ಕಾಣಬಹುದು.

ಅದೇ ರೀತಿಯಾಗಿ,

ಎರಡನೇ ಬಲ್ಲಾಳನ ಕಾಲದಲ್ಲಿ ಹೊನ್ನಮಾರ ಗೌಡನೆಂಬವನು ತನ್ನ ತಾಯಿ ಮಾಯಕ್ಕನ ಹೆಸರಿನಲ್ಲಿ ಮಾಚ ಸಮುದ್ರ ಕಟ್ಟಿಸುತ್ತಾನೆ.[18] ಸೀಯಣ್ಣನೆಂಬುವನು ದೊಡ್ಡ ಕೆರೆಯೊಂದನ್ನು ನಿರ್ಮಿಸಿದ್ದಕ್ಕಾಗಿ ಪೆರಿಯನಾಡಿನ ನಿವಾಸಿಗಳಿಂದ ೬ ಖಂಡುಗ ಗದ್ದೆಯನ್ನು 'ಕಟ್ಟು ಕೊಡುಗೆ'ಯಾಗಿ ಪಡೆಯುತ್ತಾನೆ.[19]

ಕನ್ನಡ ಸಾಹಿತ್ಯದಲ್ಲಿ ಕವಿಯಾಗಿ ಹೆಸರು ಮಾಡಿದ ಕೆರೆಯ ಪದ್ಮರಸ ವಿಭೂತಿ ತಳಿದು ಕೆರೆ ಕಟ್ಟಿಸಿದ್ದಾಗಿ ಕಾವ್ಯೋಕ್ತ ವಿಷಯವೊಂದರಿಂದ ತಿಳಿಯುತ್ತದೆ.

ರಟ್ಟಕವಿ ತನ್ನ ರಟ್ಟಮತದಲ್ಲಿ ಕೆರೆ, ತೊರೆ, ಬಾವಿ ಮತ್ತು ಕೊಳಗಳು ನೀರಾವರಿಯ ಮೂಲವೆಂದು ಹೇಳುತ್ತಾನೆ. 'ಕೆರೆಯಂ ಕಂಡು ಕಳವೆಯಂ ಬಿತ್ತುವಂತೆ'– ಎಂದು ಧರ್ಮಾಮೃತದಲ್ಲಿ ನಯಸೇನ ಸಾಂದರ್ಭಿಕವಾಗಿ ಕೆರೆಯ ಮಹತ್ವವನ್ನು ತಿಳಿಸುತ್ತಾನೆ.

ಚಟ್ಟಲದೇವಿ ಎಂಬಾಕೆ 'ಧರ್ಮಂ ಪ್ರಾಣೇವ ಚಿಂತಯೇತ್' ಎಂಬುದನ್ನು ಸ್ಮರಿಸಿ ಕೆರೆ, ಬಸದಿ, ದೇಗುಲ, ಅರವಂಟಿಗೆ, ತೀರ್ಥ, ಚತ್ರ, ಅರವೆ (=ತೋಪು) ಮೊದಲಾದವುಗಳನ್ನು ಮಾಡಿಸಿದಂತೆ ಒಂದು ಶಾಸನ[20] ಹೇಳುತ್ತದೆ. ದ್ವಾರಸಮುದ್ರದ ಪಟ್ಟಣಶೆಟ್ಟಿಯಾದ ಹೊಯ್ಸಳ ಶೆಟ್ಟಿಯ ಹೆಂಡತಿ ದೇವಿಯಕ್ಕ ಕತ್ತರಿಘಟ್ಟದಲ್ಲಿ ಒಂದು ಜಿನಾಲಯ ಮಾಡಿಸಿದಾಗ ನೊಳಂಬ ಶೆಟ್ಟಿಯು ಅದಕ್ಕೆ ಅರ್ಹನಹಳ್ಳಿಯನ್ನು, ದಾನಶಾಲೆಯನ್ನು ಎರಡು ಗಾಣಗಳನ್ನೂ ಕೆರೆಯನ್ನೂ ದತ್ತಿ ಬಿಟ್ಟನಂತೆ.[21]

ಹೊಯ್ಸಳ ರಾಣಿ ಶಾಂತಲೆ ಶ್ರವಣಬೆಳಗೊಳದಲ್ಲಿ 'ಸವತಿ ಗಂಧವಾರಣ' ಎಂಬ ಹೆಸರಿನ ಬಸದಿಯ ಜೊತೆಗೆ ಒಂದು ಕೆರೆಯನ್ನು ಕಟ್ಟಿಸಿ, ಆ ಬಸದಿಗೆ ದತ್ತಿ ಬಿಡುತ್ತಾಳೆ.[22]

ಶ್ರೀಕರಣಾಧಿಕಾರಿ ವಿಶ್ವನಾಥನು ನಿರಗುಂದ ನಾಡಿನಲ್ಲಿ ವೀರನರಸಿಂಹಪುರ ಅಗ್ರಹಾರ ನಿರ್ಮಿಸಿದ್ದಲ್ಲದೆ ಕೆರೆಗಳನ್ನು ಕಟ್ಟಿಸುತ್ತಾನೆ.[23] ಮಹಾಪ್ರಧಾನ ಕೇಶಿರಾಜ ಚಮೂಪತಿಯ ನೇತೃತ್ವದಲ್ಲಿ ಕೇಶವಪುರ ಅಗ್ರಹಾರದ ಜೊತೆಗೆ ಕೇಶವಸಮುದ್ರ ಮತ್ತು ಲಕ್ಷ್ಮೀಸಮುದ್ರ ಕೆರೆಗಳು ಅಸ್ತಿತ್ವಕ್ಕೆ ಬಂದಿದ್ದವು.[24]

ವನ : ಪ್ರಕೃತಿ ಸಂರಕ್ಷಣೆ ಕೇವಲ ಕರ್ತವ್ಯವಷ್ಟೇ ಅಲ್ಲ ಅದು ಒಂದು ಧರ್ಮದ ಕಾರ್ಯವೇ ಆಗಿತ್ತು. ವೇದ ಕಾಲದಿಂದಲೂ ಪ್ರಕೃತಿಗೆ ಮನುಷ್ಯ

---

16 EC, VIII-86-359, ಕ್ರಿ.ಶ. ೧೧೨೯
17 EC, 2, 558, ಕ್ರಿ.ಶ. ೧೧೪೫
18 EC, 5, 96, ಕ್ರಿ.ಶ. ೧೩೧೪
19 MAR, 1919, ಪುಟ ೩೨, ಕ್ರಿ.ಶ. ೧೩೪೦
20 EC, VI, 36, ಕ್ರಿ.ಶ. ೭೬೬
21 EC, VI, 3
22 EC, II, 162
23 EC, 5, 203. ಕ್ರಿ.ಶ. ೧೨೨೩
24 EC, 5, 244, ಕ್ರಿ.ಶ. ೧೨೧೦

ಪೂಜ್ಯನೀಯ ಸ್ಥಾನ ನೀಡಿದ್ದಾನೆ. ಅವರ ಸಂರಕ್ಷಣೆಯ ಮೂಲಕ ಮನುಕುಲದ ಸಂರಕ್ಷಣೆಯೂ ಆಗುವ ಪಾರಸ್ಪರಿಕ ಸಂಬಂಧವನ್ನು ಅರ್ಥ ಮಾಡಿಕೊಂಡಿದ್ದರು. ಕ್ರಮೇಣ ಈ ಅರಣ್ಯ, ತೋಟ, ಕೃಷಿ, ನಾಗರಿಕ ಸಮಾಜದ ಸ್ವಾವಲಂಬನೆಗೆ ಸಾಧನವಾಗತೊಡಗಿದಂತೆ ಅವನ್ನು ಪೋಷಿಸುವ ಹಿನ್ನೆಲೆಯಲ್ಲಿ ಸಪ್ತ ಸಂತಾನಗಳಲ್ಲಿ ವನ, ಹೂದೋಟವೂ ಒಂದಾಗಿರುವುದು ಸಹಜವಾಗಿದೆ.

"ಅರಣ್ಯ ಪ್ರದೇಶಗಳು ಇತ್ತೀಚೆಗೆ ಬಯಲುಗಳಾಗುತ್ತಿವೆ. ಆದರೆ ಪ್ರಾಚೀನ ಕರ್ನಾಟಕದಲ್ಲಿ ಪ್ರತಿಯೊಂದು ಗ್ರಾಮದಲ್ಲಿಯೂ ಅರಣ್ಯ ಪ್ರದೇಶಕ್ಕಾಗಿ ಪ್ರತ್ಯೇಕ ಭೂಮಿಯನ್ನು ಮೀಸಲಾಗಿಡುತ್ತಿದ್ದು, ಅರಣ್ಯದ ಬೆಳವಣಿಗೆಗೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗುತ್ತಿತ್ತು. ಅರಣ್ಯಗಳು ನಾಶವಾಗದಂತೆ ನೋಡಿಕೊಳ್ಳಲಾಗುತ್ತಿತ್ತು. ಜನರಿಗೆ ನಿತ್ಯ ಬಳಕೆಗೆ ಅಗತ್ಯವಾದ ಉರುವಲು ಕಟ್ಟಿಗೆಯನ್ನು ಒದಗಿಸುವ ಗಿಡಗಳನ್ನೂ ಅರಣ್ಯ ಪ್ರದೇಶದಲ್ಲಿ ಬೆಳೆಸಲಾಗುತ್ತಿತ್ತು. ವನಮೃಗಗಳಿಗೆ ಒಂದು ಆವಾಸ ಸ್ಥಾನವನ್ನು ದೊರಕಿಸಿ ಕೊಟ್ಟಂತಾಗಿತ್ತು."[25] ದೇಶಾದ್ಯಂತ ಅಡವಿಗಳನ್ನು ಅಭಿವೃದ್ಧಿ ಪಡಿಸಬೇಕೆಂದು ಕೃಷ್ಣದೇವರಾಯನ ರಾಜನೀತಿಶಾಸ್ತ್ರ ಆಮುಕ್ತಮಾಲ್ಯದಾ (iv-೨೫೬) ಹೇಳುತ್ತದೆ. ವನ ಬೆಳೆಸುವುದು ಬಹುಶಃ ವನದುರ್ಗಕ್ಕೆ ತಕ್ಕ ರಕ್ಷಣೆಯನ್ನು ನೀಡುತ್ತಿರಬೇಕು. ಆದರಲ್ಲೂ ಶುಕ್ರನೀತಿಯು 'ದಟ್ಟವಾದ ಅರಣ್ಯ, ಮುಳ್ಳು, ಮರಗಳಿಂದ ಆವೃತವಾಗಿರತಕ್ಕ'ದೆಂದು ವನದುರ್ಗಕ್ಕೆ ಸಂಬಂಧಿಸಿದಂತೆ ಹೇಳುತ್ತದೆ.

ಕುದಗೋಡ ದುರ್ಗದ ಪ್ರಾಬಲ್ಯಕ್ಕೆ ಸುತ್ತಮುತ್ತಲಿನ ನಿಸರ್ಗ ಸಂಪತ್ತು ಪೂರಕವಾಗಿದೆ ಎಂಬರ್ಥದಲ್ಲಿ ಕುರುಗೋಡಿನ ಶಾಸನವೊಂದು ಹೇಳುತ್ತದೆ.[26]

ವಿಹಾರಾರ್ಥವಾಗಿಯೂ ಈ ವನಗಳು ನಿರ್ಮಾಣವಾಗುತ್ತಿದ್ದಂತೆ ಕಂಡುಬರುತ್ತದೆ. ವಿಜಯನಗರ ಕೆಳದಿ ಅರಸರ ಕಾಲದಲ್ಲಿ ಸಾರ್ವಜನಿಕರಿಗೆ ಮತ್ತು ರಾಜರಿಗೆ ಪ್ರತ್ಯೇಕ ಉದ್ಯಾನಗಳಿದ್ದವು. ವಿಶೇಷ ಸಂದರ್ಭಗಳಲ್ಲಿ ರಾಜರ ಉದ್ಯಾನಗಳಿಗೆ ಪ್ರಜೆಗಳಿಗೆ ಪ್ರವೇಶ ದೊರೆಯುತ್ತಿತ್ತು[27] ಇಕ್ಕೇರಿ ಅರಮನೆಗೆ ಸಮೀಪ ರಾಜರಿಗೆ ಸಂಬಂಧಿಸಿದ ಒಂದು ಉದ್ಯಾನವಿತ್ತು.[28] ಕೆಳದಿ ಹಿರಿಯ ವೆಂಕಟಪ್ಪನಾಯಕನು ಆನಂದಪುರದ ಸಮೀಪ 'ಚಂಪಕ ಸರಸಿ' ಎಂಬ ಸರೋವರ ಮತ್ತು ಉದ್ಯಾನವನ್ನು, ಸಾಗರದ ಮಹಾಗಣಪತಿ ದೇವಾಲಯದ ಸಮೀಪ ಚಂದನವನ (ಚಂದ್ರ ಮಾವಿನ ಕೊಪ್ಪಲು)ವನ್ನೂ ಕೆಳದಿ ಅರಮನೆಗೆ ಸಮೀಪ 'ಸಂಪಕಟ್ಟೆ' ಎಂಬ ಕೆರೆ ಮತ್ತು ಮಾವಿನ ತೋಟವನ್ನು ನಿರ್ಮಿಸಿದ್ದನು.[29] "ಕ್ರಿ.ಶ. ೧೯೯ರಲ್ಲಿ ಹಂಪೆಯಲ್ಲಿದ್ದ 'ದೇವದೋಟ'ವನ್ನು ನಿರ್ಮಾಣ ಮಾಡಿದ್ದು ಬಹುಶಃ 'ವಿರೂಪಾಕ್ಷ ತೀರ್ಥ'ದ ಸಂರಕ್ಷಣೆಗಾಗಿ ಕುರುಗೋಡಿನ ದೊರೆಗಳು ನೇಮಿಸಿದ್ದ ನಾಯಕ ಪಾಳೇಗಾರ ಮನೆತನದವರು"[30] ಎಂದು ಡಾ॥ ಎಂ. ಚಿದಾನಂದಮೂರ್ತಿಯವರು ಊಹಿಸುತ್ತಾರೆ. ಕ್ರಿ.ಶ. ೧೧೨೧ರ ಶಾಸನವು ನಾಣಿಮಯ್ಯ ಎಂಬಾತನು ತನ್ನ 'ಆರವೆ'ಯಲ್ಲಿ ಅರವಟ್ಟಿಗೆಯನ್ನಿಟ್ಟಿದ್ದನೆಂದು ಹೇಳುತ್ತದೆ.[31] ಕ್ರಿ.ಶ. ೩ನೇ ಶತಮಾನದ ಬನವಾಸಿ ನಾಗರಕಲ್ಲಿನ ಪ್ರಾಕೃತ ಶಾಸನವು 'ಸಿವಖಡನಾಗಸಿರಿ' ಎಂಬುವಳು ನಾಗಪ್ರತಿಮೆ, ಕೆರೆ ಹಾಗೂ ವಿಹಾರಗಳನ್ನು ಧರ್ಮಾರ್ಥವಾಗಿ ದಾನ ಮಾಡಿದ್ದನ್ನು ತಿಳಿಸುತ್ತದೆ.[32]

ಅಶೋಕನು ರಸ್ತೆ ಪಕ್ಕದಲ್ಲಿ ಮರಗಳನ್ನು ನೆಡಿಸಿದನೆಂಬುದು ಬಹುಶಃ ಎಲ್ಲಾ ಅಧಿಕಾರ ವರ್ಗದವರಿಗೆ ಮಾದರಿ ಎನಿಸಿರುವುದರಲ್ಲಿ ಅಸಹಜವೇನೂ ಇಲ್ಲ.

---

25 ಹರತಿಸಿರಿ, ಪುಟ ೪೩೭
26 SII. Vol. 9
27 ಉಧೃತ, ಇತಿಹಾಸ ದರ್ಶನ ೬, ಪುಟ ೧೪೩
28 ಅದೇ., ಪುಟ ೧೪೪
29 ಅಲ್ಲೇ.,
30 ಹೊಸತು ಹೊಸತು, ಪುಟ ೩೧೫
31 BKI. I-ii, 196
32 EI, XXXIV, 38, ಪುಟ ೨೩೯

ದೇವಾಲಯ : ನಾಗರಿಕ ಸಮಾಜದಲ್ಲಿ ಮಾನವನ ಬದುಕಿಗೆ ಧಾರ್ಮಿಕ, ಸಾಂಸ್ಕೃತಿಕ ಮತ್ತು ಮುಖ್ಯವಾಗಿ ಶೈಕ್ಷಣಿಕವಾಗಿ ದೇವಾಲಯಗಳು ವಿಶೇಷ ಪಾತ್ರ ವಹಿಸಿವೆ. ದೇವಾಲಯವು ಶ್ರದ್ಧೆ-ನಿಷ್ಠೆಯಂಥ ಭಾವುಕತೆಯನ್ನುಂಟು ಮಾಡುತ್ತಿದ್ದುದರಿಂದ ಅದು ಮಠವಾಗಿ ಧರ್ಮ ಬೋಧನೆಯನ್ನು, ವಿದ್ಯಾ ಕೇಂದ್ರವಾಗಿ ಶಿಕ್ಷಣವನ್ನು, ಹಬ್ಬಹರಿದಿನ, ಪೂಜೆ ಇತ್ಯಾದಿ ಆಚರಣೆಯ ಕೇಂದ್ರವಾಗಿ ಸಾಂಸ್ಕೃತಿಕತೆಯನ್ನೂ, ನ್ಯಾಯಾಲಯವಾಗಿ ಕಾನೂನನ್ನೂ, ವೈದ್ಯಶಾಲೆಯೂ (ತಮಿಳು ನಾಡಿನಲ್ಲೂ ಇಂಥ ಒಂದು ಉದಾಹರಣೆಯಿದೆ.) ಆಗಿ ಆರೋಗ್ಯವರ್ಧನೆಯನ್ನು ಉಂಟು ಮಾಡುವ ಒಂದು ಸಾಮಾಜಿಕ ಸಂಸ್ಥೆಯಾಗಿತ್ತು. ದೇವಾಲಯಗಳು ಕೇವಲ ಉಳ್ಳವರ ಕಾಣಿಕೆಯಾಗಿರದೆ ಅಂದಿನ ಜನಗಳ ಮನೋಸ್ವಾಸ್ಥ್ಯವನ್ನು ಕಾಪಾಡುವ ವೇದಿಕೆಯೂ ಆಗಿತ್ತು. "ನಗರ ಹಾಗೂ ಗ್ರಾಮ ಅಥವಾ ಅಗ್ರಹಾರಗಳ ಸರ್ವತೋಮುಖ ಅಭಿವೃದ್ಧಿಯಲ್ಲಿ ದೇವಸ್ಥಾನವು ವಹಿಸಿದ ಪಾತ್ರವನ್ನು ಮರೆಯುವಂತಿಲ್ಲ. ಅದು ಧಾರ್ಮಿಕ ಕೇಂದ್ರವಾಗಿದ್ದುದಲ್ಲದೆ, ಸಾರ್ವಜನಿಕ ಕಾರ್ಯಗಳಲ್ಲಿ ಮಹತ್ವದ ಸ್ಥಾನ ಪಡೆದಿದ್ದಿತು. ದೇವಸ್ಥಾನವು ಬೃಹತ್ ಪ್ರಮಾಣದಲ್ಲಿ ಉದ್ಯೋಗ ಕೇಂದ್ರವಾಗಿದ್ದು ಎಷ್ಟೋ ಜನರಿಗೆ ಉದ್ಯೋಗ ದೊರಕಿಸಿ ಕೊಡುತ್ತಿದ್ದಿತು. ವ್ಯವಸಾಯದ ಅಭಿವೃದ್ಧಿಯನ್ನು ನೋಡಿಕೊಳ್ಳುತ್ತಿದ್ದಿತು. ದೇವಸ್ಥಾನಕ್ಕಾಗಿ ಬಿಟ್ಟ ಭೂಮಿಯನ್ನು ಯೋಗ್ಯ ರೀತಿಯಿಂದ ರೈತರಿಗೆ ಸಾಲವನ್ನು ಕೊಡುವ ಪದ್ಧತಿಯಿದ್ದಿತು."[33] ಇದು ದೇವಸ್ಥಾನಗಳ ಸಾಮಾಜಿಕ ಪಾತ್ರದ ಸಮಗ್ರ ಚಿತ್ರವಾಗಿದೆ.

ಹೆಬ್ಬೆಯನಾಯಕನೆಂಬುವನಿಗೆ ದೇವಸ್ಥಾನ ನಿರ್ಮಾಣಕ್ಕೆ ಒದಗಿ ಬಂದ ಪ್ರಚೋದನೆಯ ಸಂದರ್ಭವನ್ನು ಒಂದು ಶಾಸನವು ವಿವರಿಸುತ್ತದೆ. ಅವನು ಯಾವುದೋ ಕಥಾಗೋಷ್ಠಿಯಲ್ಲಿ ಭಾಗವಹಿಸಿ ಧರ್ಮ ಶ್ರವಣವನ್ನು ಮಾಡುತ್ತಿದ್ದಾನೆ. "ಎಲ್ಲ ಸಂಪತ್ತುಗಳಿಗೂ ಪುಣ್ಯವೇ ಮೊದಲು.ಎಲ್ಲ ಪುಣ್ಯಕ್ಕೂ ಈಶ್ವರ ಪ್ರತಿಷ್ಠೆಯೇ ಮೊತ್ತಮೊದಲು. ಆ ಪುಣ್ಯದ ಬಳಿವಿಡಿದು ಎಲ್ಲ ಪುಣ್ಯಗಳೂ ಬರುತ್ತವೆ. ವ್ಯಕ್ತಿ ಯಾವ ದೇವತೆಯ ಪ್ರತಿಷ್ಠೆಯನ್ನು ಮಾಡಿಸುವನೋ, ಆ ದೇವತೆಗೆ ಅವನ ಹೆಸರು ಬರುತ್ತದೆ. ಈಶ್ವರನ ಪ್ರತಿಷ್ಠೆ ಮಾಡಿಸಿದರೆ ಅವನು ಈಶ್ವರನೇ ಆಗುತ್ತಾನೆ ಎಂಬುದನ್ನು ದೇವರಿಗೆ ಅವನ ಹೆಸರೇ ರೂಢವಾಗುವುದರ ಮೂಲಕ ತಿಳಿದುಕೊಳ್ಳಬಹುದು. ಮರ, ಇಟ್ಟಿಗೆಗಳಲ್ಲಿ ಕಟ್ಟಿಸುವುದಕ್ಕಿಂತ ಶಿಲೆಯಲ್ಲಿ ದೇವಸ್ಥಾನವನ್ನು ಕಟ್ಟಿಸುವುದು ಹೆಚ್ಚು ಫಲವನ್ನು ಕೊಡುತ್ತದೆ...."[34] ಭಕ್ತಿ ಭಾವದಿಂದ ಹೆಬ್ಬೇಶ್ವರನನ್ನು ಪ್ರತಿಷ್ಠಿಸಿ, ಶಿಲೆಯಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಾನೆ. ಇಂಥ ದೇವಾಲಯಗಳನ್ನು ಕೆಲವು ಶಾಸನಗಳು 'ವಿದ್ಯಾಮಂತ್ರರ ಮನೆ'[35], 'ರಂಗಭೋಗದ ವಿದ್ಯಾವಂತರು'[36] ಎಂದು ಕರೆದಿರುವುದರಲ್ಲಿ ಸಂಗೀತ ಶಿಕ್ಷಣಗಳಿಗೆ ಸಂಬಂಧಿಸಿದಂತೆ ದೇವಾಲಯಗಳು ಪ್ರತಿಸ್ಪಂದಿಸುತ್ತಿದ್ದನ್ನು ಗಮನಿಸಬಹುದು. ಕ್ರಿ.ಶ. ಸು. ೧೫೦ರ ಶಾಸನ ಒಂದು ದೇವಾಲಯ 'ಮಹಾಮುನಿಗಳ ವಾಸಸ್ಥಾನ'ವಾಗಿತ್ತೆಂದು ಹೇಳುತ್ತದೆ.[37]

ಅಗ್ರಹಾರ : "ಅಗ್ರಹಾರವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು"[38] ಎಂದರ್ಥ. "ಕದಂಬರ ಅನೇಕ ತಾಮ್ರಪಟಗಳು ವೈದಿಕರಿಗೆ ಕೊಟ್ಟ ದತ್ತಿಗಳನ್ನು ಹೇಳುತ್ತವೆ."[39] "ಕದಂಬರಾಜ ಶ್ರೀ ವೀರ ಸೋಮ ಭೂಮಿಪತಿಯು ಮೂರುಹಳ್ಳಿಗಳೊಡಗೂಡಿದ ಕೆಲ್ಲಿಗುಂಡ ಎಂಬ ಗ್ರಾಮದ ಸರ್ವಸ್ವಾಮ್ಯವನ್ನು

---

33 ಹರತಿಸಿರಿ, ಪುಟ ೪೩೬

34 KI, (i) 25, ಕ್ರಿ.ಶ. ೧೧೮೬, ಉದ್ಧೃತ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೧೭೬-೧೭೭

35 EC, 6, ೧೬೧, ಕ್ರಿ.ಶ. ೧೦೬೩

36 ಅದೇ., ೧೨೪, ಕ್ರಿ.ಶ. ೧೧೩೩

37 EC, VII, 263, ಕ್ರಿ.ಶ. ೧೫೦

38 ಶಬ್ದವಿಹಾರ, ಡಿ.ಎಲ್.ಎನ್. ಪುಟ ೫೫-೬೧

39 EC, V, 245, ಕ್ರಿ.ಶ. ೪೨೦

ಎಪ್ಪತ್ತಾರು ಬ್ರಾಹ್ಮಣರಿಗೆ ಬಿಟ್ಟುಕೊಡುತ್ತಾನೆ."[40] ಇದು ರಾಜಮನೆತನಗಳಿಂದ ನಡೆಯುತ್ತಿರುವ ದತ್ತಿ ಅಗ್ರಹಾರವಾದರೆ, "ತಮ್ಮ ಊರು ವಿದ್ವಾಂಸರ ನೆಲೆ ವೀಡಾಗಬೇಕೆಂದು ಆ ಊರಿನ ಜನರು ಸೇರಿ ವಿದ್ವಾಂಸ ನಾದವನಿಗೆ ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾಗಿ"[41] ಕ್ರಿ.ಶ. ೯೮೦ರ ಒಂದು ಶಾಸನ ತಿಳಿಸುತ್ತದೆ. "ವಿಷ್ಣುವರ್ಧನ ಹೊಯ್ಸಳನು ತನ್ನ ತಮ್ಮ ಉದಯಾದಿತ್ಯದೇವನ 'ಪರೋಕ್ಷ ವಿನಯ'ಕ್ಕಾಗಿ ಕೆಲ್ಲವತ್ತಿ ಎಂಬ ಊರನ್ನು ಅಗ್ರಹಾರವಾಗಿ ಮಾಡಿ, ಅದನ್ನು ಹದಿನೆಂಟು ವೃತ್ತಿ ಗಳಾಗಿ ವಿಂಗಡಿಸಿ ಬ್ರಾಹ್ಮಣರಿಗೆ ಧಾರಪೂರ್ವಕವಾಗಿ"[42] ಕೊಡುವುದನ್ನು ಹೇಳುವ ಕ್ರಿ.ಶ. ೧೧೨೩ರ ಶಾಸನವು ಅಗ್ರಹಾರಕ್ಕೆ ಸಂಬಂಧಿಸಿದಂತೆ ಒಂದು ಉತ್ತಮ ಉದಾಹರಣೆ. ಅಗ್ರಹಾರದ ದತ್ತಿಕಾರ್ಯ ಪ್ರಾಚೀನ ಕರ್ನಾಟಕದಲ್ಲಿ ಸಮಾಜದ ವಿವಿಧ ಸ್ತರದವರಿಂದ ನೆರ ವೇರಿಸಲ್ಪಟ್ಟು 'ವಿದ್ಯಾವಂತಿಕೆ'ಯನ್ನು ಜೀವಂತವಾಗಿಟ್ಟ ದ್ದಾಗಿ ಕಂಡುಬರುತ್ತದೆ.

ಪುತ್ರ : ಸಂವೈಧಾನಿಕ ರಾಜತ್ವದಿಂದ ಅನು ವಂಶಿಕ ರಾಜತ್ವಕ್ಕೆ ರಾಜತ್ವದ ವಿಕಾಸವಾಗತೊಡಗಿದಂತೆ ಉತ್ತರಾಧಿಕಾರಿ ಸ್ಥಾನಕ್ಕಾಗಿ ರಾಜ ತನ್ನ ಮಗ ಅಥವಾ ತನ್ನ ವಂಶದ ಯೋಗ್ಯನೊಬ್ಬನನ್ನು ಆರಿಸುವುದು ಮೊದ ಲಾಯಿತು. "ಮೊದ ಮೊದಲು ಆರ್ಯರು....ಹೊರಗಿನ ಶತ್ರುಗಳ ಭಯ ತಗ್ಗಿದ ಮೇಲೆ ರಾಜತ್ವಕ್ಕಾಗಿ ತಮ್ಮಲ್ಲಿಯೇ ಅಂತಃಕಲಹಗಳು ತಲೆದೋರಿದಂತೆ ತೋರುತ್ತದೆ. ಈ ಜಗಳವನ್ನು ತಪ್ಪಿಸುವುದಕ್ಕಾಗಿ ವಂಶ ಪಾರಂಪರ್ಯವಾದ ರಾಜತ್ವ ರೂಢಿಗೆ ಬಂದಿರಬೇಕು."[43] ಎಂಬ ವೇದದ ಮಾತೂ ಮತ್ತು "....ಕಾಲಕ್ರಮೇಣ ಭರತ, ಕುರು-ಪಾಂಚಾಲ, ಕಾಶಿ ಮುಂತಾದ ರಾಜವಂಶ ದವರು ಪ್ರಬಲರಾಗಿ ರಾಜ್ಯಗಳನ್ನು ವಿಸ್ತರಿಸುತ್ತ ಬಂದು ದರಿಂದ ರಾಜಪದವಿ ವಂಶಕ್ರಮವಾಗಿ ಬಂದಿತು."[44] ಎಂಬ ರಾಮಾಯಣದ ಮಾತುಗಳ ಹಿನ್ನೆಲೆಯಲ್ಲಿ ಉತ್ತರಾಧಿಕಾರಿಯಾಗಬಹುದಾದ ಮಗನ ಬಗ್ಗೆ ವಿಶೇಷ ಆಸ್ಥೆ ತೋರುವುದು ಮೊದಲಾಯಿತು.

ಹಿರಿಯ ಮಗನು ಹುಟ್ಟಿದಾಗ ತಂದೆಯು ತನ್ನ ಪಿತೃಗಳ ಋಣದಿಂದ ಮುಕ್ತನಾಗುವನೆಂದು ಮನುಸ್ಮೃತಿ (೯-೧೦೬) ಹೇಳುತ್ತದೆ. ಕನ್ನಡದ ಒಂದು ಶಾಸನವು ಈ ಮಾತಿಗೆ ಪೂರಕವಾಗಿ 'ತಂದೆ ಮಾಡಿದ ಧರ್ಮವನ್ನು ಕಾಪಾಡಿಕೊಂಡು ಬರುವವನು ಗಂಡು ಮಗನೇ'[45] ಎಂದು ಹೇಳುತ್ತದೆ. ಆದ್ದರಿಂದ 'ರಾಜನಿಗೆ ಪುತ್ರೋತ್ಸವವಾದಾಗ ಆ ಸಂತೋಷದ ಕುರುಹಾಗಿ ಸೆರೆಮನೆಯ ಅನೇಕ ಬಂಧಿ ಗಳನ್ನು ಬಿಡುಗಡೆ ಮಾಡಿಸುತ್ತಿದ್ದನು, ಎಂದು ಅಜಿತ ಪುರಾಣವು (೪-೭) ಈ ಸಂಬಂಧವಾಗಿ 'ಭೂನಾಯಕರಂ ಬಿಡಿಸೆ ಬಿಟ್ಟ ಬಹುಬಂದಿಯಂ। ಪಲವಗ್ರಹಾರಮಂ ಕುಡೆ ಪಡೆವ ಪಾರ್ವರಿ' ಎಂದು ಹೇಳುತ್ತದೆ.

ಮತ್ತೊಂದು ಶಾಸನವು 'ರಾತ್ರಿಗೆ ಚಂದ್ರನು ದೀಪಕ, ಪ್ರಾತಃಕಾಲಕ್ಕೆ ಸೂರ್ಯನು ದೀಪಕ. ಮೂರೂ ಲೋಕಗಳಿಗೆ ಧರ್ಮವು ದೀಪಕ. ಕುಲಕ್ಕೆ ಸುಪುತ್ರನು ದೀಪಕ,"[46] ಎಂದು ತಿಳಿಸುತ್ತದೆ.

ತನ್ನ ಒಡೆಯನಿಗೆ ಪುತ್ರ ಸಂತಾನವಾಗಲಿ ಎಂದು ಹರಕೆ ಹೊತ್ತು, ಆ ಹರಕೆ ಈಡೇರದಿದ್ದಾಗ ತಮ್ಮನ್ನು ಆತ್ಮಬಲಿಗೆ ತೊಡಗಿಸಿಕೊಂಡ ಉದಾಹರಣೆಗಳು ನಮಗೆ ಸಿಕ್ಕುತ್ತವೆ.

ಉದಾ : "ಅರಸಿಗೆ ಗಂಡು ಮಗನಾಗಲಿ ಎಂಬ ಹರಕೆ ಹೊತ್ತು 'ಅಕಟಿ' ಎಂಬುವನು ಶಿರವನ್ನು ಕತ್ತರಿಸಿ ಕೊಂಡ ವಿಷಯ ಕ್ರಿ.ಶ. ೯೯೧ರ ಹೆಚ್ಚೆ ಶಾಸನದಲ್ಲಿದೆ."[47]

---

40 EC, VII, 117, ಕ್ರಿ.ಶ. ೧೧೧೮
41 BKI, I-i, 45, ಕ್ರಿ.ಶ. ೯೮೦
42 EC, V 10?, ಕ್ರಿ.ಶ. ೧೧೨೩
43 ಕೆ.ಅ.ಸಂ.ಯ ಕನ್ನಡ ಸಾಹಿತ್ಯ ಚರಿತ್ರೆ ೧, ಪು. ೧೦೪
44 ರಾಮಾಯಣ, ಅಯೋಧ್ಯಾ ಪರ್ವ ೨-೧೯, ೨೦
45 EC, VII, 287, ಕ್ರಿ.ಶ. ೧೧೧೨
46 EC, VI, 94, ಕ್ರಿ.ಶ. ೧೦೬೦
47 EC, VII, 476, ಕ್ರಿ.ಶ. ೯೯೧

"ಮಹಾ ಸಾಮಂತ ಬೊಪ್ಪರಸನ ರಾಣಿ ಮಾಯಾದೇವಿ ಗಂಡು ಹಡೆಯಬೇಕೆಂದು ಕೊಂಡಸಬಾವಿಯ ಬ್ರಹ್ಮದೇವರಿಗೆ ಹರಕೆ ಹೊತ್ತು ದೇಕೆಯ ನಾಯಕ ಸಿಡಿದೆಲೆ ಕೊಟ್ಟಿದ್ದನ್ನು ಒಂದು ಶಾಸನ ಹೇಳುತ್ತದೆ."[48]

ಪುತ್ರ ಅಥವಾ ರಾಜನ ನಂತರ ಬರುವ ಉತ್ತರಾಧಿಕಾರಿ ಕೇವಲ ರಾಜನಿಗೆ ಮಾತ್ರ ಮಗನಾಗಿರದೆ ರಾಜ್ಯಕ್ಕೆ ಮಗನಾಗಿದ್ದ ಎಂಬ ಭಾವವೆ ನಮ್ಮ ಪ್ರಾಚೀನರಿಗಿತ್ತು.

ಸಾಹಿತ್ಯ : ಯಾವುದೇ ನಾಡಿನ ಸಾಹಿತ್ಯ ಚರಿತ್ರೆಯಲ್ಲಿ ರಾಜಾಶ್ರಯದ ಸಾಹಿತ್ಯ ಒಂದು ಪ್ರಮುಖವಾದ ಮತ್ತು ಬಹುಭಾಗವಾಗಿರುತ್ತದೆ. ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ರಾಜಾಶ್ರಯದ ಪಾತ್ರವು ಮಹತ್ವಪೂರ್ಣವೆನಿಸುತ್ತದೆ. ಕನ್ನಡ ಸಾಹಿತ್ಯ ವಿಂಗಡಣೆಯಲ್ಲಿ 'ರಾಜಾಶ್ರಯ', 'ರಾಜಸತ್ತೆ'ಗಳು ಒಂದು ಮಾನದಂಡವಾಗಿರುವುದು ಈ ಸಂದರ್ಭದಲ್ಲಿ ಗಮನಾರ್ಹವಾದುದು.

ಸಪ್ತ ಸಂತಾನಗಳಲ್ಲಿ ಸತ್ಕಾವ್ಯ ರಚನೆಯೇ ಅತ್ಯಂತ ಮೌಲಿಕವಾದುದು ಎಂಬುದು ಇಲ್ಲಿ ಮುಖ್ಯವಾದುದು. "ತಾನು ಬರೆವುದಲ್ಲದೆ ಬರೆಯುವವರಿಗೆ ಆಶ್ರಯ ನೀಡುವುದರ ಮೂಲಕ ಗ್ರಂಥೋತ್ಪಾದನೆ ರಾಷ್ಟ್ರದ ಉತ್ಪಾದನೆಗಳಲ್ಲಿ ಒಂದು ಎಂದು ನಮ್ಮ ರಾಜ ವರ್ಗ ಭಾವಿಸಿದ್ದುದು ತುಂಬಾ ಬೆಲೆಯುಳ್ಳ ವಿಚಾರವಾಗಿದೆ."[49]

ಒಂದು ನಾಡಿನ ಸಂಸ್ಕೃತಿಯ ಸಮರ್ಥ ಅಭಿವ್ಯಕ್ತಿಯಾದ ಸಾಹಿತ್ಯ ಅರಮನೆಯ ಸ್ನೇಹ–ಸಂಬಂಧವಾಗಿ ಕರ್ತವ್ಯದ ಕಕ್ಷೆಯಲ್ಲಿ ಬಂದದ್ದು ರಾಜನ ಪ್ರಣಾಳಿಕೆಯ ಅತ್ಯುತ್ತಮ ಬೆಳವಣಿಗೆಯಾಗಿದೆ.

ನಿಧಿ : ನಿಧಿ ಸಂಗ್ರಹ ಬಹುಶಃ ಅತಿವೃಷ್ಟಿಯಿಂದಲೋ ಅನಾವೃಷ್ಟಿಯಿಂದಲೋ ನಾಡು ದಿಗ್ಭ್ರಮೆಗೊಂಡಾಗ ಆರ್ಥಿಕ ನೆರವಿಗೆ ಈ ಧನ ನಿಕ್ಷೇಪ ಆಪದ್ಬಾಂಧವನಂತೆ ಕೆಲಸ ಮಾಡುತ್ತಿತ್ತು. ರಾಜ್ಯದ ಯಾವುದೇ ದುರ್ಭರ ಪ್ರಸಂಗವನ್ನು ಈ ನಿಧಿ ತುಂಬಬಲ್ಲುದಾಗಿತ್ತು. ರಾಜ್ಯದ ಸಪ್ತಾಂಗಗಳಲ್ಲಿ ಬರುವ ಕೋಶ ಮತ್ತು ಸಪ್ತ ಸಂತಾನಗಳಲ್ಲಿ ಬರುವ ನಿಧಿ ಒಂದೇ ಆಗಿರಬೇಕು.

ಧರ್ಮನಿಧಿ ಎಂಬುದು ಸತ್ರ, ವಿದ್ಯೆ ಇತ್ಯಾದಿ ಸಾಮಾಜಿಕ, ಶೈಕ್ಷಣಿಕ ಯೋಜನೆಗಳಿಗೆ ರಾಜ ಬೊಕ್ಕಸದಿಂದ ಬಳಸುತ್ತಿದ್ದ ಧನ ರೂಪದ ನಿಧಿಯಾಗಿರಬೇಕು. ದೇವಾಲಯ–ಅಗ್ರಹಾರಗಳ ನಿರ್ಮಾಣ ದಾನ ದತ್ತಿಗಳಂಥ ಸಾಂಸ್ಕೃತಿಕ ಚೌಕಟ್ಟಿನ ಒಳಗೆ ಬರುತ್ತಿದ್ದ ಚಟುವಟಿಕೆಗಳಿಗೆ ಮೀಸಲಿದ್ದ ಧನವೇ ಈ ನಿಧಿಯಾಗಿರುವ ಸಾಧ್ಯತೆಯಿದೆ. ಇದು ತೆರಿಗೆ–ಕರ ಇತ್ಯಾದಿಗಳಿಂದ ಸಂಗ್ರಹವಾಗುತ್ತಿರಬೇಕು.

ಒಟ್ಟಾರೆಯಾಗಿ ಸಪ್ತಸಂತಾನಗಳನ್ನು ನಮ್ಮ ರಾಜರ, ಪ್ರಾಚೀನರ ಮುಂದಿಟ್ಟು ನೋಡಿದಾಗ ಪ್ರತ್ಯೇಕವಾಗಿ ಆ ಎಲ್ಲಾ ಕಾರ್ಯಗಳನ್ನು ನೆರವೇರಿಸಿರುವುದು ಸ್ಪಷ್ಟವಾಗುತ್ತದೆ. ರಾಜರೇ ಕವಿಗಳಾಗಿ, ಸಾಮಾಜಿಕ ಸೇವಾ ಧುರಂಧರಾಗಿರುವುದು ; ರಾಜ ಮಾಡಬಹುದಾದ ಕಾರ್ಯಗಳನ್ನು ಜನಸಾಮಾನ್ಯರೂ ಆಸಕ್ತಿವಹಿಸಿ ಮಾಡಿರುವುದು ಕಂಡುಬರುತ್ತದೆ. ಈ ಸಪ್ತಸಂತಾನಗಳು ಕರ್ನಾಟಕದಲ್ಲಿ ಪ್ರತ್ಯೇಕವಾಗಿ ಮಾಡಲ್ಪಟ್ಟಿದ್ದರೂ ಅವೆಲ್ಲವುಗಳೂ ಪರಸ್ಪರ ಅವಲಂಬಿತವಾಗಿ ಅಂದಿನ ಸಮಾಜಕ್ಕೆ ಕಳೆ ನೀಡಿವೆ.

---

48 MAR, 1914-15, ಪುಟ ೩೨

49 ಸಾಹಿತ್ಯ ಸಂಪಾದನೆ, ಡಾ॥ ಎಂ.ಎಂ. ಕಲಬುರ್ಗಿ, ಪುಟ ೩

ಡಾ|| ಬಾ. ರಾ. ಗೋಪಾಲ*

# ಹಂಪಿಯಲ್ಲಿ ಶ್ರೀ ವೈಷ್ಣವ ಆಳ್ವಾರುಗಳು

ಸುಮಾರು ದಶಕದ ಹಿಂದೆ, ಹಂಪಿಯ ವಿಠಲನ ಗುಡಿಯ ಸಮೀಪದಲ್ಲಿ ಪುರಂದರ ಮಂಟಪದ ಸಮೀಪ ಕಂಡುಬಂದ ಒಂದು ವಿಗ್ರಹ ಪುರಂದರರ ಪ್ರತಿಕೃತಿಯಾಗಿದ್ದಿತೆಂಬ ಪ್ರಕಟಣೆ ಬಂದ ಬಳಿಕ, ಅದು ಶ್ರೀ ವೈಷ್ಣವ ಆಳ್ವಾರರಲ್ಲಿ ಒಬ್ಬನಾಗಿರಬಹುದೆಂಬ ಸೂಚನೆಯೂ ಬಂದಿತು. ಈ ಹಿನ್ನೆಲೆಯಲ್ಲಿ ಇದಕ್ಕೆ ಸಂಬಂಧಿಸಿದ ಕೆಲವು ಶಾಸನಗಳನ್ನು ಕುತೂಹಲದಿಂದ ಪರಿಶೀಲಿಸಿವೆ.

ಕ್ರಿ. ಶ. ೧೫೩೪ರಲ್ಲಿ ವಾಣಿಜ್ಯವೈಶ್ಯ ನಗರದ ಶೆಟ್ಟಿಣ ಎಂದು ವರ್ಣಿಸಲ್ಪಟ್ಟ ಅಧಿಕಾರಿ ತಿಪ್ಪಿಶೆಟ್ಟಿಯ ಮಗ ಗಂಧದ ತಿಪ್ಪಿಶೆಟ್ಟಿಯು ವಿಠಲ ದೇವಾಲಯದ ಪ್ರಾಕಾರದೊಳಗೆ ಉತ್ತರಕ್ಕೆ ೪೪ ಅಂಕಣದ ಗುಡಿಯೊಂದನ್ನು ಕಟ್ಟಿಸಿದನೆನ್ನುತ್ತದೆ ಹಂಪಿಯ ಶಾಸನ.[1] ಇದು ತಿರುಕಚ್ಚಿ ನಂಬಿಯನ್ನೊಳಗೊಂಡಂತೆ ಹದಿಮೂರು ಆಳ್ವಾರುಗಳನ್ನು ಪ್ರತಿಷ್ಠಾಪಿಸಲೆಂದು ಕಟ್ಟಿಸಲ್ಪಟ್ಟದು. ಈ ಶಾಸನ ವಿಠಲನ ಆಲಯದ ಮಧ್ಯದ ಗುಡಿಯ ಪಶ್ಚಿಮದ ಗೋಡೆಯ ಅಡಿಪಾಯದ ಪೀಠದ ಮೇಲಿದೆ. ಆಳ್ವಾರರುಗಳು ಒಟ್ಟು ೧೨. ಇನ್ನೊಬ್ಬರು ತಿರುಕ್ಕಚ್ಚಿ ನಂಬಿ. ಇವರು ಶೈವನಂಬಿಯರು. ೬೪ ಶಿವಶರಣರಲ್ಲಿ ಪ್ರಮುಖರು. ಇಲ್ಲಿ ಇವರನ್ನು ಹೆಸರಿಸಿರುವುದೂ ಗಮನಾರ್ಹ.

ಹಜಾರರಾಮಸ್ವಾಮಿಯ ದೇವಾಲಯದಲ್ಲಿರುವ ತೆಲುಗು ಶಾಸನದಲ್ಲಿ ಆರವೀಡಿನ ವೆಂಗಳರಾಜುವು 'ರಾಮ ಚಂದ್ರುನಿ ಕೋವಿಲಲೋನ'–ರಾಮಚಂದ್ರಾಲಯದಲ್ಲಿ ಆಳ್ವಾರರ ಪ್ರತಿಷ್ಠೆ ಮಾಡಿದನೆಂದು ಶಾಸನ ತಿಳಿಸುತ್ತದೆ, ಎಂದಮೇಲೆ ದೇವಸ್ಥಾನದ ಒಳಗಡೆಯೇ ಗುಡಿ (?) ಯನ್ನು ಕಟ್ಟಿಸಿರಬಹುದು. ಕೊನೆಯಪಕ್ಷಕ್ಕೆ ದೇವಾಲಯದ ಭಿತ್ತಿಗಳಲ್ಲಿ ಆಳ್ವಾರರ ಚಿತ್ರಗಳನ್ನು ಕೆತ್ತಿಸಿರಬಹುದು. ಶಾಸನದಲ್ಲಿ ಕಾಲದ ನಿರ್ದೇಶನವಿಲ್ಲ.[2]

ವಿಠಲನ ಆಲಯದ ಸಮೀಪದಲ್ಲಿರುವ ಈಗ ಭಗ್ನವಾಗಿರುವ ಗುಡಿಯೊಂದರಲ್ಲಿ ಕ್ರಿ. ಶ. ೧೫೫೩ನೆಯ ವರ್ಷದ ಸದಾಶಿವರಾಯನ ಕಾಲದ ಶಾಸನವಿದೆ.[3] ಕಂಚುಮಾವಿನಕಟ್ಟೆಯ ಹಿರಿಯ ಹಿಟುಬೋಗಿನ ಸ್ಥಳದಲ್ಲಿ ಹಿರಿಯ ತಿರುಮಲ ರಾಜಯನು ೭ ಕೊಡಗೆ ಭೂಮಿ ೧೦೦ ವರಹಗಳಿಗೆ ಕಂಭಂಕಾಮಾದೀಕ್ಷಿತರಿಂದ ಪಡೆದನು. ಈ ಭೂಮಿಯನ್ನು ಇದಕ್ಕೂ ಮೊದಲು ಶ್ರೀಕೃಷ್ಣ ದೇವರಾಯನು ದೋಮಣಜೋಯಿಸರ ಮಗ ರಂಗುಭಟ

* ಡಾ|| ಬಾ. ರಾ. ಗೋಪಾಲ. ೩೮. ಜಾನಕಿ, ೪ನೇ ಮೈನ್, ಸರಸ್ವತಿಪುರಂ, ಮೈಸೂರು ೫೭೦೦೦೯

1 ಬಾ. ರಾ. ಗೋಪಾಲ (ed) : *Vijayanagara Inscription* Vol 1, K. N. 336 ; SII, ix (ii) No. 560.

2 *Vijayanagara Progress Report of 1983-84*, No. 61.

3 ಬಾ. ರಾ. ಗೋಪಾಲ (ಸಂ). ಪೂರ್ವೋಕ್ತ, K N ೩೫೫.

ನಿಗೆ ದಾನ ಮಾಡಿದ್ದನು.[4] ವಾರ್ಷಿಕ ವರದಿಯಲ್ಲಿ ನೀಡಿರುವ ವರದಿಯಂತೆ ಕಂಭನ ದೀಕ್ಷಿತನು ಆರು ಮುಡಿ ಭೂಮಿಯನ್ನು ಆಳುವಾರ್ಯದೇವರಿಗೆ ದತ್ತಿಯಾಗಿ ನೀಡಿದ್ದನು. ಆದರೆ ಸಿ. ಎಸ್. ಪಾಟೀಲರು ಶಾಸನ ಪಾಠವನ್ನು ಭಿನ್ನವಾಗಿ ಓದಿದ್ದಾರೆ. ಕಂಭಂ ಕಾಮಾದೀಕ್ಷಿತನು ಪುಠಪರತಿಯ ಲಿಂಗಂಭಟ್ಟನ ಮಗ. ಈತ ವಿಠಲದೇವರ ತೇರಿನ ಬಳಿಯಲ್ಲಿ ತಿರುಮಟಿಶ್ಶೈ ಆಳುವಾರ ದೇವರಿಗೆ ಭೂಮಿಯನ್ನು ಧಾರೆಯನೆರೆದು ಕೊಟ್ಟನು.[5]

ಭಗ್ನವಾಗಿರುವ ಗುಡಿಯ ಪಕ್ಕದಲ್ಲಿನ ಇನ್ನೊಂದು ಶಾಸನದಲ್ಲಿ ತಿಕದಾಸರಿಯ ಮೊಮ್ಮಗ, ತಿಮ್ಮಯ್ಯನ ಮಗ ಸಾತಾನಿ ತಿರುಮಲಯ್ಯ ಶ್ರೀ ವಿಠಲದಲ್ಲಿ ಮೊದಲ ಆಳ್ವಾರರಿಗೆ ಆಲಯವೊಂದನ್ನು ಕಟ್ಟಿಸಿದ. ಪರಾಶರ ಭಟ್ಟ ಚಿಕ್ಕಯಾಚಾರ್ಯನ ಮೊಮ್ಮಗ ಪೆದ್ದಯಾಚಾರ್ಯನ ಮಗ ಚಿಕ್ಕಯಾಚಾರ್ಯನಿಗೆ ಮನೆಯ ನಿವೇಶನವೊಂದನ್ನು ದಾನವಾಗಿ ನೀಡಿದ. ಹನ್ನೆರಡು ಆಳ್ವಾರರುಗಳಲ್ಲಿ ಮೊದಲಿಗರೆಂದರೆ ಭೂತತ್ತಾಳ್ವಾರರು. ಆದರೆ ಇವರ ಬಗೆಗೇನೂ ತಿಳಿಯದು. ಅವರು ೧೦೦ ಪಾಶುರಗಳನ್ನು ರಚಿಸಿದ್ದಾರೆಂಬುದಷ್ಟು ಗೊತ್ತು. ಆದರೆ ನಮ್ಮಾಳ್ವಾರರು ಇವರುಗಳಲ್ಲಿ ಸುಪ್ರಸಿದ್ಧರು. ಬಹುಶಃ ಇವರಿಗೇ ಆಲಯವನ್ನು ಕಟ್ಟಿಸಿರಬೇಕು. ಈ ಶಾಸನದ ಕಾಲ ಕ್ರಿ. ಶ. ೧೫೫೯.[6]

ಕ್ರಿ. ಶ. ೧೫೫೫ನೆಯ ವರ್ಷದ ಶಾಸನದಲ್ಲಿ ಗುತ್ತವೊಳಲ ಸೀಮೆಯ ಹಂದಿಗನೂರು ಗ್ರಾಮವನ್ನು ಅಳಿಯ ರಾಮರಾಜನು ವಿಠಲನ ಸಮೀಪದ ನಮ್ಮಾಳ್ವಾರರ ಸೇವೆಗಾಗಿ ದಾನಮಾಡಿದನೆಂದು ಒಂದು ಶಾಸನ ತಿಳಿಸುತ್ತದೆ.[7]

ಇವುಗಳನ್ನು ಗಮನಿಸಿದಾಗ ವಿಠಲ ದೇವಾಲಯದ ಸಮೀಪದಲ್ಲಿರುವ ಈಗ ಭಗ್ನವಾಗಿರುವ ಗುಡಿಯಲ್ಲಿ ಆಳ್ವಾರರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿತ್ತೆಂದೂ, ಬಹುಶಃ ಅದರಲ್ಲೊಂದಾದ ನಮ್ಮಾಳ್ವಾರರ ವಿಗ್ರಹ ಇತ್ತೀಚೆಗೆ ದೊರೆತಿರಬಹುದೆಂದೂ ಊಹಿಸಬಹುದಾಗಿದೆ. ಆ ವಿಗ್ರಹ ಪುರಂದರದಾಸರದ್ದಲ್ಲವೆಂದು ಖಚಿತವಾಗಿ ಹೇಳಬಹುದು.

ವಿಠಲ ದೇವಾಲಯದ ನಮ್ಮಾಳ್ವಾರು ಎಂಬವ, ದಿನಂಪ್ರತಿ ಪ್ರಾತಃ ಪೂಜೆಯ ನಂತರದ ದೇವರ ನೈವೇದ್ಯವನ್ನು ತನಗೆ ವಾದ್ಯ–ಸಂಗೀತಸಮೇತ ಕಳುಹಿಸುವುದಕ್ಕಾಗಿ ಭೂದಾನವೊಂದನ್ನು ಮಾಡಿದನೆಂದು ಇನ್ನೊಂದು ಶಾಸನ ತಿಳಿಸುತ್ತದೆ.[8] ಇದು ಕ್ರಿ. ಶ. ೧೫೬೩ರಲ್ಲಿ.

---

4 ಭಾರತೀಯ ಶಾಸನ ಇಲಾಖೆಯ ೧೯೭೫-೭೬ನೆಯ ವರ್ಷದ ವರದಿ, ಸಂಖ್ಯೆ ೯೭.
5 *Vijayanagara Progress Report of 1983-84*, No. 21.
6 *A R I E*, 1975-76, No. 98.
7 SII ix, pt II No. 657.
8 ಬಾ. ರಾ. ಗೋಪಾಲ (ಸಂ) ಪೂರ್ವೋಕ್ತ, K N ૩૬૩.

ಡಾ|| ಚೆನ್ನಕ್ಕ ಪಾವಟೆ*

# ಕೂಡ್ಲಿ ಶೃಂಗೇರಿ ಸಂಸ್ಥಾನಕ್ಕೆ ಹಂಡೆ ಪಾಳೆಯಗಾರರ ದಾನ

ವಿಜಯನಗರ ಪಾಳೆಯಗಾರರಲ್ಲಿ ಹಂಡೆ ಮನೆತನ ಮುಖ್ಯವಾದುದು. ಕೃಷ್ಣದೇವರಾಯ ಅಚ್ಯುತರಾಯನ ಕಾಲದಿಂದ ಪ್ರಾರಂಭವಾಗಿ ಆದಿಲಶಾಹಿ ಟಿಪ್ಪು ಕೊನೆಗೆ ಕರ್ನಲ್‌ಮನ್ರೊ, ಗಹಗನ್ ಮುಂತಾದ ಆಂಗ್ಲ ಅಧಿಕಾರಿಗಳ ವರೆಗೆ ಅಧಿಕಾರ ಮುಂದುವರಿಸಿದ ಮನೆತನವಿದು. ಕರ್ನಾಟಕದ ವಿಜಾಪುರ ಜಿಲ್ಲೆಯಲ್ಲಿ ಹುಟ್ಟಿ ಬಳ್ಳಾರಿ ಕುರಗೋಡುಗಳಲ್ಲಿ ವ್ಯಾಪಿಸಿ ಕೊನೆಗೆ ಆಂಧ್ರ ಪರಿಸರದಲ್ಲಿ ನೆಲೆನಿಂತು ಸುಮಾರು ೩೦೦ ವರ್ಷ ಅಧಿಕಾರ ನಿರ್ವಹಿಸಿದ ಪಾಳೆಯಗಾರ ಮನೆತನವಿದು.

"ಶ್ರೀಮನ್ ಮಹಾರಾಜಾಧಿರಾಜ, ಖಂಡೇಯ ಯಶವಂತ, ಪರದಳವಿಭಾಡ, ಅರಿರಾಯಮರ್ದನ" ಎಂಬುದು ಇವರ ಬಿರುದು. ಹಂಡೆ ಅನಂತಪುರ ಕೈಫಿಯತ್ತು ತಿಳಿಸುವಂತೆ ವಿಜಾಪುರ ದೇಶದಲ್ಲಿರುವ ಬಾಗವಾಡಿ ವಿಭಾಗದ ಮುತ್ತಿಗೆ ಮತ್ತು ವಡವಡಿಗೆ ಗ್ರಾಮಗಳಲ್ಲಿದ್ದ ಈ ಮನೆತನದ ಮೂಲಪುರುಷ ಲಕ್ಕಿನಾಯಕ. ಅವನಿಗೆ ಬಾಲದ ಹನುಮಪ್ಪನಾಯಕ ಮತ್ತು ಬಳಗನಾಯಕ ಎಂಬ ಇಬ್ಬರು ಮಕ್ಕಳು. ಹನುಮಪ್ಪನಾಯಕ ನಿಜಾಂ ಬಾದಶಹನನ್ನು ಕೈ ಸೆರೆ ಹಿಡಿದು ರಾಮರಾಯನಿಗೆ ಒಪ್ಪಿಸಿ ಅವರ ಕೃಪೆಯಿಂದ ಮಾಂಡಲಿಕನಾದ. ಆತನ ಪರಾಕ್ರಮಕ್ಕೆ ಮೆಚ್ಚಿದ ರಾಮರಾಯ ಹನುಮಪ್ಪನಿಗೆ ನಂದ್ಯಾಲ, ಬುಕ್ಕರಾಯ ಸಮುದ್ರ, ಧರ್ಮಾವರ, ಕಣೇಕಲ್ಲು, ಬಳ್ಳಾರಿ, ಕುರಗೋಡ ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟ. ಬಾಲದ ಹನುಮಪ್ಪನಾಯಕನ ಪ್ರಖ್ಯಾತಿ ಕಾಲಾಂತರದಲ್ಲಿ ಬೆಳೆದು ಅವನ ವಂಶಜರು ಬಳ್ಳಾರಿ ಅನಂತಪುರದೆಡೆಗೆ ಚಲ್ಲುವರಿದರೆ ಬಳಗನಾಯಕ ವಂಶಜರು ಮೂಲಸ್ಥಳದಲ್ಲಿಯೇ ಉಳಿದರು.

ಇವರ ಇತಿಹಾಸದ ಪ್ರಮುಖ ಆಕರಗಳಲ್ಲಿ ಬಳ್ಳಾರಿ ಹಾಗೂ ಕುರುಗೋಡ ಕೈಫಿಯತ್ತು ಮುಖ್ಯವಾದವು. ಈ ಮನೆತನಕ್ಕೆ ಸಂಬಂಧಿಸಿದ ಯಾವುದೋ ಒಂದು ತೆಲುಗು ಮೂಲ ಕೃತಿಯನ್ನು ಅವಲಂಬಿಸಿ ಚಾರ್ಲ್ಸ್ ಫಿಲಿಪ್ಸ್ ಬ್ರೌನ್ ರಚಿಸಿದ 'War of the Rajas' ಹೆಸರಿನ ಕೃತಿಯಲ್ಲದೆ ಹಂಡೆ ಮನೆತನದ ಗುರುಪೀಠವೆನಿಸಿದ ಶ್ರೀಶೈಲದ ನಿಡುಮಾಮಿಡಿ ಪೀಠದ ಕೆಲವು ಚರಿತ್ರೆಗಳು ಇಲ್ಲಿ ಪ್ರಯೋಜಕವೆನಿಸುತ್ತವೆ. ಹಂಡೆ ಮನೆತನದ ಸಮಕಾಲೀನ ತೆಲುಗು ಕೃತಿ ಪುಲ್ಲಕವಿ ವಿರಚಿತ 'ಶ್ರೀಶೈಲ ಪಂಡಿತಾರಾಧ್ಯ ಚರಿತೆ', ಸಿರಿಪಿ ಆಂಜನೇಯಲು ವಿರಚಿತ 'ಕರಿಬಸವಸ್ವಾಮಿ ಕಾವ್ಯ', ನಾಗಸಂದ್ರಂ ವಾಸುದೇವರಾವ್ ವಿರಚಿತ 'ಅನಂತಪುರ ಮಂಡಲ ಚರಿತ್ರ ಕಥಲು' ಕೃತಿ, ಶ್ರೀಶೈಲಪೀಠದರ್ಶನವೆಂಬ ಹೊಸಗನ್ನಡ ಕೃತಿ ಈ ಮನೆತನದ ಬಗೆಗೆ ಸಿಗುವ ತುಂಡು ತುಂಡು ವಿಷಯದ ಆಕರಗಳೆನಿಸಿವೆ.

ಕರ್ನಾಟಕ ಇತಿಹಾಸ ಅಕಾದೆಮಿ ವಿಚಾರ ಸಂಕಿರಣದಲ್ಲಿ ದಾವಣಗೆರೆಯಲ್ಲಿ ಜರುಗಿದ ಸಮ್ಮೇಳನದಲ್ಲಿ "ಬಂಕಾಪುರದಲ್ಲಿ ಹಂಡೆ ಪಾಳೆಯಗಾರರು" ಚಿತ್ರದುರ್ಗದಲ್ಲಿ "ಹಂಡೆ ಪಾಳೆಯಗಾರರ ಮೇಲೆ ಹೊಸ ಬೆಳಕು"

* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ರಾಯಚೂರಿನಲ್ಲಿ "ಹಂಡೆ ಪಾಳೆಯಗಾರರು : ಒಂದು ವಿಶ್ಲೇಷಣೆ" ಪ್ರಬಂಧಗಳನ್ನು ಮಂಡಿಸಿದ್ದೆ. ನಾನು ಈಗ 'ಕೂಡ್ಲಿ ಶೃಂಗೇರಿ ಸಂಸ್ಥಾನಕ್ಕೆ ಹಂಡೆ ಪಾಳೆಯ ಗಾರರ ದಾನ' ವಿಷಯದ ಪ್ರಬಂಧವನ್ನು ಮಂಡಿಸು ತ್ತಿದ್ದೇನೆ.

ಮೂಲತಃ ಕುರುಬರಾಗಿದ್ದರೂ ಲಿಂಗಧಾರಿಗಳೂ ಆಗಿರುವ ಈ ಹಂಡೆ ಪಾಳೆಯಗಾರರು ಸಿದ್ಧರಾಮನ ಭಕ್ತರು. ಇವರ ಮೊಹರುಗಳ ಮೇಲೆ 'ಸಿದ್ಧರಾಮೇಶ್ವರ' ಎಂಬ ಬರವಣಿಗೆ ಕಂಡುಬರುತ್ತದೆ. ಹಂಡೆ ರಾಮಪ್ಪ ನಾಯಕನ ಗುರು ತೋಂಟದ ಸಿದ್ಧಲಿಂಗೇಶ್ವರ ಸಂಪ್ರ ದಾಯದ ವಿರಕ್ತಮಠದ ನೀಲಕಂಠ ಸ್ವಾಮಿಗಳು ಎಂದು ಒಂದು ಹಸ್ತಪ್ರತಿ ಪ್ರಶಸ್ತಿ ತಿಳಿಸುತ್ತದೆ. ಹೀಗೆ ವೀರ ಶೈವ ಪರವಾಗಿದ್ದರೂ ಈ ಪಾಳೆಯಗಾರರು ಕೂಡ್ಲಿ ಶೃಂಗೇರಿ ಸಂಸ್ಥಾನದಲ್ಲಿಯೂ ಭಕ್ತಿಯಿಟ್ಟಿದ್ದರೆಂದು ತಾಮ್ರಪಟಗಳಿಂದ ತಿಳಿದುಬರುತ್ತದೆ.[1]

ಕೂಡ್ಲಿ ಶೃಂಗೇರಿ ಕ್ಷೇತ್ರ ಶಿವಮೊಗ್ಗೆಗೆ ಈಶಾನ್ಯ ದಿಕ್ಕಿನಲ್ಲಿ ೯ ಮೈಲು ದೂರದಲ್ಲಿದೆ. ಪಶ್ಚಿಮ ಘಟ್ಟಗಳಿಗೆ ಸೇರಿದ ಸಹ್ಯಾದ್ರಿಯ ಸಾಲಿನಲ್ಲಿರುವ ವರಾಹಪರ್ವತದಲ್ಲಿ ಹುಟ್ಟಿ ಹರಿದು ಬರುತ್ತಿರುವ ತುಂಗಾ ಮತ್ತು ಭದ್ರಾ ಎಂಬ ಎರಡು ಪವಿತ್ರ ನದಿಗಳು ಕೂಡಲಿ ಗ್ರಾಮದ ಬಳಿ ಸಂಗಮಗೊಳ್ಳುವುದರಿಂದ ಇದೊಂದು ಪುರಾಣ ಪ್ರಸಿದ್ಧ ಕ್ಷೇತ್ರವೆನಿಸಿದೆ. ಶಂಕರಾಚಾರ್ಯರಿಂದ ೪೭ನೆಯವರಾದ ತೃತೀಯ ಶ್ರೀ ನರಸಿಂಹಭಾರತಿ ಸ್ವಾಮಿಗಳು ೧೫೭೬ರಲ್ಲಿ ಮೂಲ ಶೃಂಗೇರಿಯನ್ನು ಬಿಟ್ಟು ಶ್ರೀ ಕೂಡಲಿ ಕ್ಷೇತ್ರ ದಲ್ಲಿ ನೆಲೆಸಿ ಇಲ್ಲಿಂದಲೇ ಧಾರ್ಮಿಕ ಕಲಾಪ ನಡೆಸಲಾರಂಭಿ ಸಿದರು. ಈ ಪೀಠವು ಶ್ರೀ ಮಜ್ಜಗದ್ಗುರು ಕೂಡಲಿ ಶೃಂಗೇರಿ ಶಂಕರಾಚಾರ್ಯರ ಮಹಾಸಂಸ್ಥಾನವಾದ ಶ್ರೀ ದಕ್ಷಿಣಾಮ್ನಾಯ ಶಾರದಾ ಮಹಾಪೀಠವೆಂದು ಪ್ರಸಿದ್ಧವಾಗಿದೆ.

ಈ ಕೂಡ್ಲಿ ಶೃಂಗೇರಿಮಠದ ಶ್ರೀ ಮದ್ರಾಜಗುರು ಶೃಂಗೇರಿ ಶ್ರೀ ನಾರಸಿಂಹಭಾರತಿ ಸ್ವಾಮಿಗಳವರ ಕರ ಕಮಲಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತಿ ಸ್ವಾಮಿಗಳಿಗೆ ಹಂಡೆ ಪಾಳೆಯಗಾರ ರಾಮಪ್ಪನಾಯಕರ ಪುತ್ರ ಪವಾಡಪ್ಪನಾಯಕರು ಬರೆದುಕೊಟ್ಟ ಭೂದಾನ ಧರ್ಮಶಾಸನ ಹೀಗಿದೆ : "ಪ್ಲವಂಗ ಕಾರ್ತಿಕ ಶು. ೧೫ ಶಾ. ಶ. ೧೫೪೯ ಅಂದರೆ ಕ್ರಿ. ಶ. ೧೬೬೭ರಂದು ಗ್ರಹಣ ಪುಣ್ಯ ಕಾಲದಲ್ಲಿ ಶ್ರೀ ವಿದ್ಯಾಶಂಕರದೇವರ ದೀಪಾರಾಧನೆಗೆ ಅಲ್ಲಾಪುರವೆಂಬ ಗ್ರಾಮವನ್ನು ಸಕಲ ಸುವರ್ಣಾದಾಯ ಸಹಿರಣ್ಯೋದಕ ಧಾರಾಪೂರ್ವಕ ಗ್ರಾಮಸ್ಥಳ ನಿರ್ದೇಶನ ಮಾಡಿ ಬಿಟ್ಟುಕೊಟ್ಟಿರುವರು."

ಅನಂತರ ೮೦ ವರ್ಷಗಳ ತರುವಾಯ ಈ ಪವಾಡಪ್ಪನಾಯಕನ ಪ್ರಪೌತ್ರ ಪ್ರಸನ್ನಪ್ಪನಾಯಕನ ಪುತ್ರ ಹಂಡೆ ರಾಮಪ್ಪನಾಯಕನು ಅನಂತಪುರ ಬುಕ್ಕರಾಯಸಮುದ್ರ, ಹೊಸಕೆರೆ, ಬುಕ್ಕಪಟ್ಟಣ ಮುಂತಾದ ಸೀಮೆಗಳನ್ನು ಆಳುತ್ತಿದ್ದ ಸಂದರ್ಭದಲ್ಲಿ "ಅಕ್ಷಯ ಜೇಷ್ಠ ಬಹುಳ ಶಾ. ಶ. ೧೬೬೮ ಕ್ರಿ. ಶ. ೧೭೪೬ರ ಸೋಮವಾರ ಪುಣ್ಯಕಾಲ ಶ್ರೀಮಠದ ದೀಪಾರಾಧನೆ, ನೈವೇದ್ಯ ನಡೆವುದಕ್ಕೆ ಹೊಸಕೆರೆ ಸಮೀಪ ಈಚರ್ಲಗ್ರಾಮಕ್ಕೆ ಪ್ರತಿನಾಮ ರಾಮದುರ್ಗದ ಮಜರೆ ಗುಂಟಹಳ್ಳಿ ಎಂಬ ಗ್ರಾಮವನ್ನು ದೇವರ ಪ್ರೀತ್ಯರ್ಥ ದತ್ತಿ ಬಿಟ್ಟು" ಶಾಸನ ಬರೆಯಿಸಿದ್ದಾನೆ. ಈ ದಾನವನ್ನು ಮಠದ ಪಾ. ಗೋವಿಂದಭಟ್ಟರ ವಶಕ್ಕೆ ಕೊಡಲು ಈಚರ್ಲಗ್ರಾಮದ ಪ್ರತಿನಾಮ ರಾಮದುರ್ಗದ ದೊರೀಶೀನಪ್ಪ ಕಾರಕೂನರೆಡ್ಡಿ ಶ್ಯಾನಭೋಗರಿಗೆ ನಿರೂಪ ಬರೆದುಕಳಿಸಿದ್ದಾನೆ. ಪ್ರಸ್ತುತ ಈ ದಾನ ಸ್ವೀಕರಿಸಿ ದವರು ಕೂಡ್ಲಿ ಶೃಂಗೇರಿ ಮಠದ ಶ್ರೀ ಶಂಕರಭಾರತಿ ಗಳವರ ಪ್ರಶಿಷ್ಯ ಶ್ರೀ ಶಂಕರಭಾರತಿಗಳವರು. ಮೇಲೆ ಹೇಳಿದ ೨ ತಾಮ್ರಶಾಸನ ಒಂದು ಸನದುಗಳ ಮೇಲೆ ಮೊಹರಿದ್ದು ಅದರಲ್ಲಿ "ವಿದ್ಯಾಶಂಕರಭಾರತಿ ಶ್ರೀ ಸಿದ್ಧ ರಾಮೇಶ್ವರ" ಎಂಬ ಒಕ್ಕಣಿಕೆಯಿರುವುದು ವಿಶೇಷ ವೆನ್ನಿಸಿದೆ.

ಈ ಎರಡೂ ದಾಖಲೆಗಳಿಂದ ಹಂಡೆ ಪಾಳೆಯ ಗಾರರು ಕೂಡ್ಲಿ ಶೃಂಗೇರಿ ಪೀಠದಲ್ಲಿಟ್ಟ ಅನನ್ಯ ಭಕ್ತಿ ವಿದಿತವಾಗುತ್ತದೆ.

---

1 ಶ್ರೀ ಮಜ್ಜಗದ್ಗುರು ಶ್ರೀ ಕೂಡ್ಲಿಗಿ ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ, ರಜತೋತ್ಸವ ಕಾಣಿಕೆ, ೧೯೬೫

ಡಾ|| ಸಿ. ಮಹದೇವ*

# ತಿರುಮಲಾದೇವಿಯರ ಪಟ್ಟಣ-ನಾಗಲಾಪುರ ಹೊಸಪೇಟೆ : ಒಂದು ಪರಿಶೀಲನೆ

---

ಹೊಸಪೇಟೆ ನಗರ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಹಾಗೂ ಉಪವಿಭಾಗ ಕೇಂದ್ರವಾಗಿದೆ. ಕೃಷಿ ಮತ್ತು ಕೈಗಾರಿಕಾ ಸಂಪನ್ಮೂಲ ಹೊಂದಿರುವ ಈ ಪರಿಸರವು ನಗರದ ನಿರಂತರ ಬೆಳವಣಿಗೆಗೆ ಕಾರಣವಾಗಿದೆ. ರೇಖಾಂಶ ೭೬° ೨೬' ೧೩" ಮತ್ತು ಅಕ್ಷಾಂಶ ೧೫° ೧೫' ೩೬"ರಲ್ಲಿ ಇರುವ ಹೊಸಪೇಟೆ ಸಮುದ್ರಮಟ್ಟದಿಂದ ೪೬೭ ಮೀಟರ್ ಎತ್ತರದಲ್ಲಿದ್ದು ದಕ್ಷಿಣದಿಂದ ಉತ್ತರಕ್ಕೆ ಪೂರ್ವದಿಂದ ಪಶ್ಚಿಮಕ್ಕೆ ಇಳಿಜಾರಾಗಿರುವ ಪ್ರದೇಶದಿಂದ ಕೂಡಿದೆ. ಇಲ್ಲಿಗೆ ಕೇವಲ ಹದಿಮೂರು ಕಿ. ಮೀ.ಗಳ ಅಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಭಗ್ನಾವಶೇಷಗಳನ್ನು ಹೊಂದಿರುವ ಹಂಪೆ ಇದ್ದು ಪ್ರವಾಸಿಗಳೆಲ್ಲ ಸಾಮಾನ್ಯವಾಗಿ ಈ ಪಟ್ಟಣದ ಮೂಲಕವೇ ಹೋಗುತ್ತಾರೆ.

ಹೊಸಪೇಟೆಯ ಇತಿಹಾಸ ಕುರಿತು ಆಲೋಚಿಸುವಾಗ ನಾವು ಮುಖ್ಯವಾಗಿ ಶಾಸನಗಳನ್ನು ಮತ್ತು ವಿಜಯನಗರ ಕಾಲದಲ್ಲಿ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗರ ಬರಹಗಳನ್ನು ಆಶ್ರಯಿಸುತ್ತೇವೆ. ಅವು ನಿರ್ದಿಷ್ಟ ಆಕರಗಳು ಸಹ ಆಗಿವೆ. ಅಲ್ಲದೆ ಸ್ಥಳೀಯ ಮಾಹಿತಿಗಳು ಸಹ ಅಲ್ಪಸ್ವಲ್ಪ ಲಭ್ಯವಾಗುತ್ತವೆ. ರಾಬರ್ಟ್ ಸ್ಯುಯೆಲ್ ಅವರು ಹೊಸಪೇಟೆಯ ಇತಿಹಾಸ ಹೇಳುವ ಸಂದರ್ಭಗಳಲ್ಲಿ ವಿದೇಶಿ ಪ್ರವಾಸಿಗರ ಬರಹಗಳನ್ನು ಮಾತ್ರ ಆಧರಿಸಿ ನಾಗಲಾಪುರವೇ ಇಂದಿನ ಹೊಸಪೇಟೆ ಎಂದು ತಿಳಿಸುತ್ತಾರೆ.[1] ಈ ಅಭಿಪ್ರಾಯ ಎಷ್ಟರಮಟ್ಟಿಗೆ ಸಮಂಜಸವಾದುದು ಎಂಬುದನ್ನು ಕುರಿತಂತೆ ಇಲ್ಲಿನ ಶಾಸನಗಳು ಮತ್ತು ವಿದೇಶಿ ಪ್ರವಾಸಿಗಳ ಬರಹಗಳ ಸಹಾಯದಿಂದ ಪರಿಶೀಲಿಸುವ ಒಂದು ಪ್ರಯತ್ನವೇ ಈ ಲೇಖನದ ಉದ್ದೇಶ.

ವಾಸ್ತವವಾಗಿ ಹೊಸಪೇಟೆಯ ಚಾರಿತ್ರಿಕ ಮಹತ್ವ ಕಳಚೂರಿ ಬಿಜ್ಜಳದೇವನ ಕಾಲದಿಂದ ಅಥವಾ ಅದಕ್ಕೂ ಪೂರ್ವದಿಂದ ಪ್ರಾರಂಭವಾಗುತ್ತದೆ. ಸುಮಾರು ೧೨ನೇ ಶತಮಾನಕ್ಕೆ ಸೇರುವ ಒಡೆದ ಶಾಸನವೊಂದು[2] ಹೊಸಪೇಟೆಯ ಸಣ್ಣಕ್ಕಿ ವೀರಭದ್ರ ದೇವಾಲಯದ ಹಿಂಭಾಗದ ಮರದ ಬುಡದಲ್ಲಿ ಬಿದ್ದಿದೆ. ಈ ಶಾಸನ ಕಳಚೂರಿ ಬಿಜ್ಜಳದೇವನ ಕಾಲಕ್ಕೆ ಸೇರಿದ್ದು ಕನ್ನಡ ಲಿಪಿ ಮತ್ತು

---

* ಸಂಶೋಧನ ಸಂಶೋಧಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೫೮೩ ೨೧೧

1 Robert Sewell, *A Forgotten Empire* (Vijayanagara), Asian Educationl Services Madras. 1992

2 *Annual Report on Indian Epigraphy*, No. 122, 1980-81, Date about 12th Century A. D. Hospet

ಭಾಷೆಯಲ್ಲಿದೆ. ಶ್ಲೋಕಗಳಿಂದ ಕೂಡಿದ ಶಾಸನದಲ್ಲಿ ಹನ್ನೊಂದು ಸಾಲುಗಳು ಲಭ್ಯವಾಗುತ್ತವೆ. ಮೇಲ್ಭಾಗದಲ್ಲಿ ಜಿನ ಬಿಂಬ, ಅದರ ಮೇಲೆ ಮುಕ್ಕೊಡೆ, ಇಕ್ಕೆಲಗಳಲ್ಲಿ ಚಾಮರ, ಬಲಭಾಗದಲ್ಲಿ ಕಠಾರಿ, ಎಡಭಾಗದಲ್ಲಿ ಹಸು–ಕರುವಿನ ಉಬ್ಬು ಶಿಲ್ಪಗಳಿವೆ. ಇದರಿಂದಾಗಿ ಈ ಶಾಸನ ಜೈನರಿಗೆ ಸಂಬಂಧಿಸಿದ್ದು, ಇಲ್ಲಿ ನೆಲೆಯೊಂದು ಇದ್ದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಈ ಪ್ರದೇಶವನ್ನು ಈಗ ನೆಹರು ಸಹಕಾರ ಕಾಲೋನಿ ಎಂದು ಕರೆಯಲಾಗುತ್ತೆ. ವಿಜಯನಗರಕ್ಕೂ ಪೂರ್ವದಲ್ಲೇ ಈ ಭಾಗದಲ್ಲಿ ಜೀವಂತ ಗ್ರಾಮವೊಂದಿತ್ತೆಂದು ಸ್ಪಷ್ಟ. ಆದರೆ, ಅದರ ಹೆಸರ ಬಗ್ಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ. ಇದಕ್ಕೆ ಅಬ್ದುರ್ ರಜಾಕನ ವಿವರಣೆ ಆಧಾರವಾಗಿ ನಿಲ್ಲುತ್ತದೆ.

ಕ್ರಿ. ಶ. ೧೪೪೩ ಏಪ್ರಿಲ್ ತಿಂಗಳ ಕೊನೆಯಿಂದ ಡಿಸೆಂಬರ್ ೫ರ ವರೆಗೆ ವಿಜಯನಗರದಲ್ಲಿದ್ದ ಪರ್ಷಿಯ ದೇಶದ ರಾಯಭಾರಿ ಅಬ್ದುರ್ ರಜಾಕ್ ಪಶ್ಚಿಮ ಕರಾವಳಿಯಿಂದ ವಿಜಯನಗರಕ್ಕೆ ತಲುಪುವವರೆಗಿನ ವಿವರಗಳನ್ನು ನೀಡುತ್ತಾನೆ. ಆತನ ವಿವರಣೆಯನ್ನು ಆಧಾರಿಸಿ ಸ್ಯುಯೆಲ್ ಅವರು ಈ ರೀತಿ ಊಹೆ ಮಾಡುತ್ತಾರೆ. 'ಪ್ರವಾಸಿ ನೈಋತ್ಯದಿಂದ ಬಳಿಸಾರಿದ ಮತ್ತು ಅವನು ನೋಡಿದ ಗೋಡೆಯು ಪ್ರಥಮ ಸುತ್ತು ಹೊಸಪೇಟೆಯ ನೈಋತ್ಯಕ್ಕಿರುವ ಎರಡು ಗುಡ್ಡಗಳ ಮಧ್ಯವಿರುವ ಭೂಕಂಠದ ಮೇಲಿರುವದಾಗಿರಬೇಕು. ಈ ಬಾಹ್ಯ ರಕ್ಷಣಾ ಕಟ್ಟಡವನ್ನು ಕರಾವಳಿಯಿಂದ ಬಂದ ಪ್ರವಾಸಿಗರಿಗೆಲ್ಲ ಮೊಟ್ಟಮೊದಲು ಕಣ್ಣಿಗೆ ಬೀಳುವಂಥದೆಂದು ಡೊಮಿಂಗೊಪಾಯಿಸ್ ಕೂಡ ವರ್ಣಿಸಿದ್ದಾನೆ. ಈ ಪ್ರವೇಶದ್ವಾರದಲ್ಲಿ ಬರಮಾಡಿಕೊಳ್ಳಲಾದ ರಜಾಕ್ 'ಸಾಗುವಳಿ ಮಾಡಿದ ಜಮೀನುಗಳು, ಮನೆಗಳು ಮತ್ತು ಉದ್ಯಾನಗಳ ಮಾರ್ಗವಾಗಿ ಕೆಳಗೆ' ಹೊಸಪೇಟೆಯ ದ್ವಾರ ತಲುಪಿರಬೇಕು, ಅಲ್ಲಿ ಕೋಟೆಯ ಎರಡನೆಯ ಸುತ್ತು ಅಡ್ಡಗಟ್ಟಿತು. ಆ ಪಟ್ಟಣ ಆಗ ಜನಸಾಂದ್ರವಾಗಿರಲಿಲ್ಲ. ಅವನು ನಗರದ ಉತ್ತರ ಬದಿಯಲ್ಲಿರುವ ಮೂರನೇ ಸುತ್ತಿನ ಗೋಡೆ ದಾಟುವವರೆಗೆ ಅದೇ ಲಕ್ಷಣಗಳು ಅವನ ಕಣ್ಣಿಗೆ ಬೀಳುತ್ತವೆ.[3]

ಈ ವಿವರಣೆಯಲ್ಲಿ ಬರುವ ಎರಡು ಮತ್ತು ಮೂರನೇ ಸುತ್ತಿನ ನಡುವಿನ ಪಟ್ಟಣದ ಉಲ್ಲೇಖ ಮತ್ತು ಅದು ಅಷ್ಟೇನು ಜನಸಾಂದ್ರವಾಗಿರಲಿಲ್ಲ ಎಂಬ ಸ್ಯುಯೆಲ್ಲರ ಊಹೆ ನಿಜವಾಗಿದ್ದಲ್ಲಿ ಆ ಪಟ್ಟಣ ಈಗಿನ ಸಣ್ಣಕ್ಕಿ ವೀರಭದ್ರ ದೇವಾಲಯದ ಪರಿಸರದಲ್ಲಿತ್ತು. ಆದರೆ, ಅದರ ಹೆಸರು ತಿಳಿದುಬರುವುದಿಲ್ಲ. ಮುಂದೆ ವಿಜಯನಗರದ ತುಳುವ ಮನೆತನದ ಶ್ರೀಕೃಷ್ಣದೇವರಾಯನು ಇದೇ ಪರಿಸರದಲ್ಲಿ ತನ್ನ ಪಟ್ಟಮಹಾದೇವಿಯಾದ ತಿರುಮಲಾದೇವಿಯ ಹೆಸರಿನಲ್ಲಿ ತಿರುಮಲಾದೇವಿಯರ ಪಟ್ಟಣವನ್ನು ನಿರ್ಮಿಸಿ[4] ಅಲ್ಲಿ ತಿರುವೆಂಗಳನಾಥನ ದೇವಾಲಯವನ್ನು ಕಟ್ಟಿಸಿದನು. ಕ್ರಿ. ಶ. ೧೫೧೩ರ ಕೃಷ್ಣದೇವರಾಯನ ಶಾಸನವೊಂದು ಮುದಲಾಪುರವನ್ನು (ಇಂದಿನ ಹೊಸಪೇಟೆಗೆ ಹೊಂದಿಕೊಂಡಿರುವ ಮುದ್ಲಾಪುರ) ತಿರುಮಲದೇವಿಯರ ಪಟ್ಟಣದ ಮಾಗಣೆಗೆ ಸೇರಿಸಿ ಹಂಪೆಯ ಕೃಷ್ಣಸ್ವಾಮಿ ದೇವರಿಗೆ ಸಮರ್ಪಿಸಿದನೆಂದು ತಿಳಿಸುತ್ತದೆ.[5] ಸಣ್ಣಕ್ಕಿ ವೀರಭದ್ರ ದೇವಾಲಯದ ಸಮೀಪವಿರುವ ಶಾಸನವೊಂದು[6] ತಿರುಮಲದೇವಿಯರ ಪಟ್ಟಣದ ಗೌರೇಶ್ವರ ದೇವರನ್ನು ಪ್ರಸ್ತಾಪಿಸುತ್ತದೆ. ಇದೇ ಪ್ರದೇಶದ ಮತ್ತೊಂದು ಶಾಸನವು[7] ಅಯ್ಯಾವಳಿ ಮುಖ್ಯನಾದ ತಿರುಮಲಾದೇವಿಯರ ಪಟ್ಟಣದ ಸೆಟ್ಟಿ ಪಟ್ಟಣಸ್ವಾಮಿಗಳ ಸಮ್ಮುಖದಲ್ಲಿ ಪ್ರಧಾನ

---

3 ರಾಬರ್ಟ್ ಸಿವೆಲ್ : ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ. ಅನು : ಸದಾನಂದ ಕನವಳ್ಳಿ. ಪ್ರಸಾರಾಂಗ, ಕನ್ನಡ ವಿ. ವಿ., ಹಂಪಿ, ೧೯೯೨, ಪು. ೯೫-೯೬

4 ಈ ಭಾಗ ಇಂದಿನ ಹೊಸಪೇಟೆಯ ನೈಋತ್ಯ ಭಾಗವಾಗಿದ್ದು 'ನೆಹರು ಸಹಕಾರ ಕಾಲೊನಿ' ಎಂದು ಕರೆಯಲಾಗುತ್ತದೆ.

5 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ ೪, ಸಂಖ್ಯೆ ೨೫೫ ಕ್ರಿ. ಶ. ೧೫೧೩, ಹಂಪೆ. ಮುದಲಾಪುರವು ಮೊದಲಿಗೆ ಹೊಸೂರಿನ ಮಾಗಣೆಗೆ ಸೇರಿತ್ತು. ಮಾಗಣೆ ಎಂದರೆ ವಿಜಯನಗರ ಕಾಲದಲ್ಲಿನ ಆಡಳಿತದ ಸಣ್ಣ ಘಟಕವನ್ನು ಸೂಚಿಸುವ ಪದವಾಗಿದೆ

6 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ ೯, ಭಾಗ-೨ ಸಂಖ್ಯೆ ೫೩೯ ಕ್ರಿ. ಶ. ೧೫೩೧, ಹೊಸಪೇಟೆ

7 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ ೯, ಭಾಗ-೨ ಸಂಖ್ಯೆ ೫೭೩ ಕ್ರಿ. ಶ. ೧೫೩೫, ಹೊಸಪೇಟೆ

ತಿರುಮಲರಾಜನ ಪ್ರತಿನಿಧಿಯಾದ ಅಬ್ಬರಾಜ ತಿಮ್ಮಪ್ಪನು ಕೆಲವು ಗ್ರಾಮಗಳ ಮೂಲವೀಸವನ್ನು ಅಲ್ಲಿಯ ತಿರುವೆಂಗಳನಾಥದೇವರಿಗೆ ದತ್ತಿಬಿಡುತ್ತಾನೆಂದು ಹೇಳುತ್ತದೆ.

ಈ ಮೇಲಿನ ಶಾಸನಗಳಿಂದ ತಿರುಮಲದೇವಿಯರ ಪಟ್ಟಣದ ಪ್ರಾಮುಖ್ಯತೆ ಅರಿವಾಗುತ್ತದೆ. ಇಲ್ಲಿ ಬಹು ಸಂಖ್ಯೆಯ ವರ್ತಕರಿದ್ದು, ದೇವಾಲಯಗಳ ನಿರ್ಮಾಣ ವನ್ನು ಕಾಣುತ್ತೇವೆ. ವಿಜಯನಗರಕ್ಕೆ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗ ಡೊಮಿಂಗೊ ಪಾಯಿಸ್ (ಬಹುಶಃ ಕ್ರಿ. ಶ. ೧೫೨೦–೨೧ರಲ್ಲಿ ಬರೆದುದು) ತನ್ನ ಬರಹದಲ್ಲಿ 'ಪಶ್ಚಿಮಕ್ಕೆ ಮುಖ್ಯ ಮತ್ತು ಗೋವಾದಿಂದ ಬರುವವರು ಹಾಯುವ ಹೊರಬಾಗಿಲಾಗಿರುವುದರ ಪ್ರವೇಶದಲ್ಲಿ ರಾಜ ಅದರೊಳಗೆ ಗೋಡೆ ಮತ್ತು ಗೋಪುರಗಳಿಂದ ಬಲವಾದ ನಗರವನ್ನು ಕಟ್ಟಿದ್ದಾನೆ. ಗಟ್ಟಿ ಕಲ್ಲುಗಳಿಂದ ಮತ್ತು ಸಪಾಟಾದ ಮಾಳಿಗೆಗಳುಳ್ಳ ಕಟ್ಟಡಗಳ ಅತಿ ಸುಂದರ ಸಾಲುಗಳಿದ್ದು ಅದರಲ್ಲಿ ಅನೇಕ ಗಣ್ಯವರ್ತಕರು ವಾಸವಾಗಿದ್ದಾರೆ ಮತ್ತು ರಾಜ ಇಲ್ಲಿ ಅನೇಕ ವಿಗ್ರಹ ಗಳುಳ್ಳ ದೇವಾಲಯ ಕಟ್ಟಿಸಿದ ಎಂದು ಹಾಗೂ ಈ ನಗರವನ್ನು ಹಿಂದೆ ವಾರಾಂಗನೆಯಾಗಿದ್ದ ತನ್ನ ಪ್ರೀತಿಯ ಪತ್ನಿಯ ಗೌರವಾರ್ಥ ನಿರ್ಮಿಸಿದನೆಂದು ಹೇಳುತ್ತಾನೆ.[8]

ಪಾಯಿಸ್ ಕೊಡುವ ವಿವರಗಳು ಮತ್ತು ತಿರುಮಲಾ ದೇವಿಯರ ಪಟ್ಟಣದ ಬಗೆಗೆ ಶಾಸನಗಳು ಹೇಳುವ ವಿವರ ಗಳ ನಡುವೆ ಸಾಮ್ಯವಿದೆ. ವಾಸ್ತವವಾಗಿ ಇಲ್ಲಿ ಪಾಯಿಸ್ ತಿರುಮಲದೇವಿಯರ ಪಟ್ಟಣವನ್ನು ವರ್ಣಿಸಿದ್ದು, ಅದನ್ನು ತನ್ನ ಪ್ರೀತಿಯ ವಾರಾಂಗನೆ ಪತ್ನಿಯ ಹೆಸರಿನಲ್ಲಿ ಕಟ್ಟಿಸಿದ್ದನೆಂದು ತಪ್ಪುಗ್ರಹಿಕೆ ಮಾಡುತ್ತಾನೆ. ಕ್ರಿ. ಶ. ೧೫೧೩ರ ವೇಳೆಗಾಗಲೇ ಕೃಷ್ಣದೇವರಾಯನು ತನ್ನ ವಾರಾಂಗನೆ ಪತ್ನಿಯಾದ ಚಿನ್ನಾ ದೇವಿಯ ಹೆಸರಿನಲ್ಲಿ ತಿರುಮಲಾದೇವಿಯರ ಪಟ್ಟಣದ ಪೂರ್ವಕ್ಕೆ ನಗರವೊಂದನ್ನು ನಿರ್ಮಿಸಿ ನಾಗಲಾಪುರವೆಂಬ ಹೆಸರಿನಲ್ಲಿ ಕರೆಯಲಾಗಿತ್ತು. ಇದಕ್ಕೆ ಆಧಾರವಾಗಿ ಫರ್ನಾವ್ ನೂನಿಸನು (ಪ್ರಾಯಶಃ ಕ್ರಿ. ಶ. ೧೫೩೫–೩೭ರಲ್ಲಿ ಬರೆದದ್ದು) ರಾಜ ನಿರ್ಮಿಸಿದ ನಗರವು ಗಚ್ಚು ಗಾರೆಗಳಿಂದ ಕಟ್ಟಿದ ಮನೆಗಳು, ಉದ್ದ ಮತ್ತು ವಿಶಾಲ ವಾದ ರಸ್ತೆ ಹಾಗೂ ಈ ಹೊಸ ನಗರದ ಸುತ್ತ ಗೋಡೆ ಯೊಂದನ್ನು ನಿರ್ಮಿಸಲಾಯಿತೆಂದು ತಿಳಿಸುತ್ತಾನೆ. ಇಲ್ಲಿ ಅರಮನೆಗಳನ್ನು ಕಟ್ಟಿಕೊಳ್ಳುವಂತೆ ತನ್ನ ರಾಜ್ಯದ ದೊರೆ ಗಳಿಗೆ ಆಜ್ಞೆಯಿತ್ತನು ಮತ್ತು ಅವರು ಹಾಗೆಯೇ ಮಾಡಿ ದರು. ಇದನ್ನು ತನ್ನ ಪ್ರೀತಿಯ ಪತ್ನಿಯಾದ ಚಿನ್ನಾ ದೇವಿಯ ಗೌರವಾರ್ಥ ನಿರ್ಮಿಸಿ ಇದನ್ನು ನಾಗಲಾಪುರ ವೆಂದು ಕರೆದನು. ಮದುವೆಗೆ ಮುಂಚೆ ಇವಳಲ್ಲಿ ಗುಪ್ತ ಪ್ರಣಯ ಹೊಂದಿದ್ದು ಅವಳು ವಾರಾಂಗನೆಯಾಗಿದ್ದ ಳೆಂದು ತಿಳಿಸುತ್ತಾನೆ. ಕ್ರಿ. ಶ. ೧೫೧೩ರ ಸಂಕ್ಲಾಪುರದ ಶಾಸನವು[10] ಸಂಕ್ಲಾಪುರದ ಪಶ್ಚಿಮಕ್ಕೆ ನಾಗಲಾಪುರ ವಿತ್ತೆಂದು ತಿಳಿಸುತ್ತದೆ.[10A] ಈ ಶಾಸನದ ಹಿನ್ನೆಲೆಯಲ್ಲಿ ನ್ಯೂನಿಸ್ ಹೇಳಿಕೆಯನ್ನು ಪರಿಶೀಲಿಸಲಾಗುತ್ತದೆ.

ಈ ಮೇಲಿನ ವಿವರಗಳಿಂದ ತಿರುಮಲಾದೇವಿಯರ ಪಟ್ಟಣ ಮತ್ತು ನಾಗಲಾಪುರವೆಂಬ ಎರಡು ಪಟ್ಟಣ ಗಳನ್ನು ಕೃಷ್ಣದೇವರಾಯನು ತನ್ನ ಇಬ್ಬರು ಪ್ರಧಾನ ಪತ್ನಿಯರಾದ ತಿರುಮಲಾದೇವಿ ಮತ್ತು ಚಿನ್ನದೇವಿಯರ ಹೆಸರಿನಲ್ಲಿ ಕ್ರಿ. ಶ. ೧೫೧೩ರ ವೇಳೆಗಾಗಲೇ ನಿರ್ಮಿಸಿದ್ದ ಸಂಗತಿ ಸ್ಪಷ್ಟವಾಗುತ್ತದೆ. ಪಾಯಿಸ್ ಕೃಷ್ಣದೇವ ರಾಯನ ಪ್ರೀತಿಯ ಹೆಂಡತಿಯ ಹೆಸರನ್ನಾಗಲಿ ಪಟ್ಟಣದ ಹೆಸರನ್ನಾಗಲಿ ಹೇಳುವುದಿಲ್ಲ. ನ್ಯೂನಿಸ್ ಆತನ ಪ್ರೀತಿಯ ಹೆಂಡತಿಯ ಹೆಸರು ಚಿನ್ನಾದೇವಿಯೆಂದು ಆಕೆಯ ಹೆಸರಿನಲ್ಲಿ ನಿರ್ಮಿಸಿದ ಪಟ್ಟಣದ ಹೆಸರು ನಾಗಲಾಪುರ ವೆಂದು ವಿಭಿನ್ನ ಹೆಸರುಗಳನ್ನು ನೀಡಿ ಸ್ವಲ್ಪ ಗೊಂದಲ ವನ್ನುಂಟುಮಾಡುತ್ತಾನೆ. ಈ ಕುರಿತು ಸ್ಯುವೆಲ್‌ರು ಸಮರ್ಪಕ ವಿವರಣೆ ನೀಡುವುದಿಲ್ಲ. ಆದರೆ, ಪರಿಶೀಲಿಸಿ ದಾಗ ಚಿನ್ನಾದೇವಿಯ ನಿಜ ಹೆಸರು ನಾಗಲಾದೇವಿಯೆಂದು

---

8 ರಾಬರ್ಟ್ ಸಿವೆಲ್ : ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ. ಅನು : ಸದಾನಂದ ಕನವಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೨, ಪು. ೨೬೪ ರಿಂದ ೨೬೬

9 ಅದೇ. ಪು. ೩೮೬-೮೭

10 ಎಪಿಗ್ರಾಫಿಯ ಇಂಡಿಕಾ : ಸಂಪುಟ ೪, ಸಂಖ್ಯೆ ೩೮, ಪು. ೨೬೬, ಸಂಕಲಾಪುರ, ಹೊಸಪೇಟೆ ತಾಲ್ಲೂಕು

10A ಸಂಕಲಾಪುರವು ಇಂದಿನ ಹೊಸಪೇಟೆಯ ಪೂರ್ವಕ್ಕಿದ್ದು ಬಳ್ಳಾರಿ ರಸ್ತೆಗೆ ಸಮೀಪದಲ್ಲಿದೆ.

ತಿಳಿಯುತ್ತದೆ.[11] ಅವಳ ಗೌರವಾರ್ಥ ನಿರ್ಮಿಸಿದ ನಗರಕ್ಕೆ ನಾಗಲಾಪುರವೆಂದು ಕರೆಯಲಾಯಿತು. ಸ್ಯೂವೆಲ್‌ರವರು ವಿದೇಶಿ ಪ್ರವಾಸಿಗರ ಬರಹಗಳನ್ನಾಧರಿಸಿ ನಾಗಲಾಪುರವೇ ಇಂದಿನ ಹೊಸಪೇಟೆ ಎಂಬ ತೀರ್ಮಾನಕ್ಕೆ ಬರುತ್ತಾರೆ. ಆದರೆ, ಅಲ್ಲಿನ ಅವಶೇಷ ಗಳು ವಿದೇಶಿ ಪ್ರವಾಸಿಗರಾದ ರಜಾಕ್, ಪಾಯಿಸ್ ಮತ್ತು ನೂನಿಸರ ಬರಹಗಳನ್ನು ಸೂಕ್ಷ್ಮವಾಗಿ ಪರಿಶೀಲಿ ಸಿದಾಗ ಕೆಲವು ಅಂಶಗಳು ವ್ಯಕ್ತವಾಗುತ್ತವೆ.

ಪಾಯಿಸ್ ವಾಸ್ತವವಾಗಿ ತಿರುಮಲಾದೇವಿಯುವರ ಪಟ್ಟಣದ ವಿವರ ನೀಡುತ್ತಾನೆ. ನ್ಯೂನಿಸ್ ನಾಗಲಾ ಪುರವನ್ನು ಕುರಿತು ವರ್ಣಿಸುತ್ತಾನೆ. ತಿರುಮಲಾದೇವಿ ಯುವರ ಪಟ್ಟಣದ ನಿರ್ಮಾಣಕ್ಕೂ ಮುಂಚೆ ಅದೇ ಸ್ಥಳದಲ್ಲಿ (ಸಣ್ಣಕ್ಕಿ ವೀರಭದ್ರ ದೇವಾಲಯದ ಪ್ರದೇಶ) ಕಲ್ಯಾಣದ ಚಾಲುಕ್ಯ ಅಥವಾ ಕಳಚೂರಿ ಅರಸರ ಕಾಲಕ್ಕೆ ಸೇರುವ ಊರಿತ್ತು ಮತ್ತು ಅದು ಜೈನರ ನೆಲೆಯಾಗಿದ್ದಿರ ಬಹುದು. ಇದೇ ಊರು ಇಂದಿನ ಹೊಸಪೇಟೆಯ ಮೂಲ ನೆಲೆ. ಕೃಷ್ಣದೇವರಾಯನ ಕಾಲಕ್ಕೆ ನಿರ್ಮಾಣ ವಾದ ತಿರುಮಲಾದೇವಿಯುವರ ಪಟ್ಟಣದ ತಿರುವೆಂಗಳ ನಾಥ ದೇವಾಲಯ ಬಹುಶಃ ವಿಜಯನಗರದ ಪತನದ ನಂತರ ಸಣ್ಣಕ್ಕಿ ವೀರಭದ್ರನ ದೇವಾಲಯವಾಗಿ ಪರಿ ವರ್ತನೆಯಾಗಿರುವ ಸಾಧ್ಯತೆ ಇದೆ. ಸಣ್ಣಕ್ಕಿ ವೀರಭದ್ರ ದೇವಾಲಯದ ಸುಖನಾಸಿಯ ದ್ವಾರಪಾಲಕರ ಉಬ್ಬು ಶಿಲ್ಪಗಳು ವೈಷ್ಣವ ಸಂಪ್ರದಾಯಕ್ಕೆ ಸೇರಿವೆ. ದೇವಾ ಲಯದ ಹಿಂಭಾಗದಲ್ಲಿ ವೈಷ್ಣವ ದ್ವಾರಪಾಲಕರ ಉಬ್ಬು ಶಿಲ್ಪವಿರುವ ದ್ವಾರಾವಶೇಷಗಳು ಕಂಡುಬರುತ್ತವೆ. ಶಾಸನಗಳು ಮತ್ತು ದೇವಾಲಯಗಳ ಅವಶೇಷಗಳಿಂದಾಗಿ ಹೊಸಪೇಟೆಯ ನೈಋತ್ಯ ಭಾಗವೇ ತಿರುಮಲದೇವಿಯರ ಪಟ್ಟಣವೆಂದು, ಸಂಕ್ಲಾಪುರದಿಂದ ಪಶ್ಚಿಮಕ್ಕಿರುವ ಹೊಸಪೇಟೆಯ ಹಳೇ ವಸತಿ ಪ್ರದೇಶ (ಇಂದಿನ ವಡಕ ರಾಯಸ್ವಾಮಿ ದೇವಾಲಯದ ಪ್ರದೇಶ) ನಾಗಲಾಪುರ ವೆಂದು ಸ್ಪಷ್ಟವಾಗುತ್ತದೆ. ಹೆಚ್ಚು ಶಾಸನಗಳು ತಿರುಮಲಾದೇವಿಯ ಪಟ್ಟಣವನ್ನು ಪ್ರಸ್ತಾಪಮಾಡು ತ್ತವೆ. ನಾಗಲಾಪುರವನ್ನು ಕುರಿತು ಸಂಕಲಾಪುರದ ಒಂದೇ ಒಂದು ಶಾಸನ ಗಡಿ ಕುರಿತು ಹೇಳುವಾಗ ಮಾತ್ರ ಪ್ರಸ್ತಾಪಿಸುತ್ತದೆ. ಸಣ್ಣಕ್ಕಿವೀರಭದ್ರ ದೇವಾಲಯ ದಿಂದ ನೈಋತ್ಯಕ್ಕೆ ಒಂದು ಫರ್ಲಾಂಗ್ ಅಂತರದಲ್ಲಿ ಹೆಚ್ಚು ಕಡಿಮೆ ವಿಜಯನಗರ ಕಾಲಕ್ಕೆ ಸೇರುವ ಮುಸ್ಲಿಮರಿಗೆ ಸಂಬಂಧಿಸಿದ ಎರಡು ಗುಮ್ಮಟಗಳಿವೆ. ಇದು ತಿರುಮಲಾದೇವಿಯರ ಪಟ್ಟಣದ ಒಂದು ಭಾಗದಲ್ಲಿ ಮುಸ್ಲಿಮರು ವಾಸ್ತವ್ಯ ಹೂಡಿದ್ದರೆಂದು ಸ್ಪಷ್ಟವಾಗು ತ್ತದೆ.

ಇನ್ನು ಸ್ಥಳೀಯ ಮಾಹಿತಿಗಳನ್ನು ಗಮನಿಸಿದಾಗ ದ್ವಾರಸಮುದ್ರದ ಅರಸನಾದ ೩ನೇಯ ಬಲ್ಲಾಳನು ತನ್ನ ಕೋಟೆಯ ರಕ್ಷಣೆಗಾಗಿ ಸುತ್ತಲೂ ಕಿರಾತ ಪಡೆಗಳನ್ನು ಸ್ಥಾಪಿಸಿದನೆಂದು ಅವೇ ಕಾಲಾನುಕ್ರಮದಲ್ಲಿ ಗ್ರಾಮ ಗಳಾದವೆಂದು ತಿಳಿದುಬರುತ್ತದೆ.[12] ಅವುಗಳೆಂದರೆ ಶ್ರೀ ಜಗಳೀಕಟ್ಟೆರಾಯನೆಂಬ ಆಂಜನೇಯ ಗುಡಿಯ ಹತ್ತಿರ ಜಗಳೀಕಟ್ಟೆ, ಬೈಲು ಹನುಮಪ್ಪನ ಗುಡಿಯ ಹತ್ತಿರ ಹಂದಿಗನೂರು, ಉತ್ತರಾದಿ ಮಠದ ಹತ್ತಿರ ವಿರೂಪಾಕ್ಷಪುರ, ಸಣ್ಣಕ್ಕಿ ವೀರಭದ್ರನ ಗುಡಿಯ ಹತ್ತಿರ ತಿರುಮಲಾಪುರ ಮತ್ತು ಶ್ರೀ ವೇಣುಗೋಪಾಲಕೃಷ್ಣ ದೇವಾಲಯದ ಹತ್ತಿರ ವಿಜಯಪುರ ಗ್ರಾಮಗಳು. ಮತ್ತೊಂದು ಮಾಹಿತಿಯಂತೆ ಹರಪನಹಳ್ಳಿಯ ಸೋಮ ಶೇಖರನಾಯ್ಕನ (೧೭೪೨–೬೬) ಕಾಲದಲ್ಲಿ ಜಗಳೀಕಟ್ಟೆ, ವಿರೂಪಾಕ್ಷಪುರ, ವಿಜಯಪುರ, ನಾಗಲಾಪುರ ಮತ್ತು ಹಂದಿಗನೂರು ಗ್ರಾಮಗಳನ್ನು ಒಂದುಗೂಡಿಸಿ ಹೊಸ ಪೇಟೆಯನ್ನಾಗಿ ಪರಿವರ್ತಿಸಲಾಯಿತೆಂದು ತಿಳಿದುಬರು ತ್ತದೆ.[13] ಹೊಸಪೇಟೆಯ ಹಳೆಯ ವಸತಿ ಸ್ಥಾನಗಳಲ್ಲಿ ಕೋಟೆಯ ಪ್ರದೇಶ ಮುಖ್ಯವಾಗಿದ್ದು ಬಹುಶಃ ವಿಜಯ ನಗರ ಕಾಲದ ನಾಗಲಾಪುರವೇ ಇದಾಗಿದೆ. ಇದರಮೇರೆ ಗಳು ಪೂರ್ವಕ್ಕೆ ಮದಿಯಪ್ಪನಗುಡಿ ಉತ್ತರಕ್ಕೆ ಬಳ್ಳಾರಿ ದುರ್ಗಮ್ಮನ ಗುಡಿ ಪಶ್ಚಿಮ ಮತ್ತು ದಕ್ಷಿಣದಲ್ಲಿ ಪ್ರಾಕಾರ

11 ತೆಲುಗಿನ ಚಿನ್ನ ಎಂದರೆ ಕನ್ನಡದಲ್ಲಿ ಚಿಕ್ಕ ಎಂದರ್ಥ. ಕಿರಿಯ ರಾಣಿಯಾದ ನಾಗಲಾದೇವಿಯನ್ನು ಪ್ರೀತಿಯಿಂದ ಚಿನ್ನದೇವಿ (ಚಿಕ್ಕದೇವಿ) ಎಂದು ಕರೆದಿರಬಹುದು

12 ಸುವರ್ಣ ಪುಷ್ಪಾಂಜಲಿ : ಹೊಸಪೇಟೆಯ ಪುರಸಭೆ ಸುವರ್ಣ ಮಹೋತ್ಸವ ಸೆನಪಿನ ಸಂಪುಟ ೧೯೬೪. ಪು. ೧೫

13 ಅದೇ. ಪು. ೧೭

ಗೋಡೆಯಿದ್ದು ಉತ್ತರದಲ್ಲಿ ಗೋಡೆಯ ಹೊರಗೆ ಕಬ್ಬೇರ, ಅಗಸ ಮತ್ತು ಕುರುಬರ ಕೇರಿಗಳಿವೆಯೆಂದು ಹೇಳಲಾಗುತ್ತದೆ. ಇಲ್ಲಿನ ದೇಸಾಯಿ ಮನೆತನದ ನರಸಪ್ಪನಿಗೆ ಸಹಾಯಕರಾಗಿದ್ದ ೭೦೦೦ ಬೇಡರಿಗೆ ಹೊಸಪೇಟೆ ಕೋಟೆಯ ಸುತ್ತಲೂ ವಾಸಿಸಲು ನಿವಾಸ ಗಳನ್ನು ಏರ್ಪಡಿಸಲಾಯಿತು. ನಂತರದ ಕಾಲದಲ್ಲಿ ಸಂಭವಿಸಿದ ಮಲೇರಿಯಾ ಕಾಯಿಲೆ ಪರಿಣಾಮವಾಗಿ ಸಮೀಪದ ಗ್ರಾಮಗಳಿಂದ ಎತ್ತರದ ಹೊಸಪೇಟೆಗೆ ಜನರ ವಲಸೆ ಬಂದಿತು. ಹಾಗೂ ಪ್ಲೇಗ್‌ನಂತಹ ಕಾಯಿಲೆ ನಿಯಂತ್ರಣಕ್ಕೆ ಇಲ್ಲಿನ ಕೋಟೆಗಳನ್ನು ಕೆಡವಿ ಹಳ್ಳ ಕೊಳ್ಳ ಗಳನ್ನು ಮುಚ್ಚಲಾಯಿತು. ಇದರಿಂದಾಗಿ ಊರು ವಿಶಾಲವಾಗಿ ಬೆಳೆಯಲು ಅವಕಾಶವಾಯಿತು. ಸಮೀಪದ (ಮೇಲೆ ಹೇಳಿದ ಸ್ಥಳೀಯ ಮಾಹಿತಿಯಂತೆ) ವಿಜಯಪುರ ವಿರೂಪಾಕ್ಷಪುರ, ಹಂದಿಗನೂರು, ಮುದ್ದಲಾಪುರ, ಚಿತ್ರವಾಡ್ಗಿ, ಅಮರಾವತಿ ಗ್ರಾಮಗಳನ್ನು ಒಳಗೊಂಡು ಹೊಸಪೇಟೆ ವಿಶಾಲವಾಗಿ ಬೆಳೆಯಿತು.

ಸಣ್ಣಕ್ಕಿವೀರಭದ್ರ ದೇವಾಲಯದ ಪ್ರದೇಶದಲ್ಲಿ ವಿಜಯನಗರ ಪೂರ್ವದಿಂದಲೂ ಇದ್ದ ಊರು, ಅಲ್ಲಿಯೇ ವಿಜಯನಗರ ಕಾಲದಲ್ಲಿ ನಿರ್ಮಿಸಿದ ತಿರುಮಲಾದೇವಿಯರ ಪಟ್ಟಣ ಹಾಗೂ ಅದರ ಪೂರ್ವಕ್ಕೆ ನಿರ್ಮಿಸಿದ ನಾಗಲಾ ಪುರ ಪಟ್ಟಣಗಳು ಇಂದಿನ ಹೊಸಪೇಟೆಯ ಪ್ರಮುಖ ನೆಲೆಗಳೆಂದು ತಿಳಿಸುವುದೇ ಪ್ರಸ್ತುತ ಲೇಖನದ ಉದ್ದೇಶ. ನಂತರದ ಶತಮಾನಗಳಲ್ಲಿ ಕೋಟೆಯಾಚೆಗೆ ಬೆಳೆದ ಪೇಟೆಯು ಪ್ರಾಮುಖ್ಯತೆ ಪಡೆಯಲಾಗಿ ಹೊಸದಾದ ಪೇಟೆಯನ್ನು ಹೊಸಪೇಟೆಯೆಂದು ಕರೆಯಲಾಯಿತು. ಮುಂದೆ ಇದೇ ಹೆಸರು ಇಡೀ ಊರಿಗೇ ಅನ್ವಯಿಸಿತು.

14 ಮೈಸೂರು ರಾಜ್ಯದ ಗ್ಯಾಜಟೀಯರ್, ಬಳ್ಳಾರಿ ಜಿಲ್ಲೆ, ಬೆಂಗಳೂರು ೧೯೭೨

[ನಾಗಲಾದೇವಿ ಎಂಬುದು ಕೃಷ್ಣದೇವರಾಯನ ತಾಯಿಯ ಹೆಸರು : ಅವಳ ಹೆಸರಿನಲ್ಲಿ ಇಲ್ಲಿ ಒಂದು ಬಡಾವಣೆ ಆಯಿತು–ಸಂಪಾದಕ]

ಡಾ॥ ಜ್ಯೋತ್ಸ್ನಾ ಕಾಮತ್*

# ಕನ್ನಡಿಗರ ಕನ್ನಡಿಗಳು

ತನ್ನ ಪಡಿನೆಳಲನ್ನು ನೀರಿನಲ್ಲಿ ಕಂಡಾಗಲೇ ಮಾನವನಿಗೆ ಮೊದಲ ಕನ್ನಡಿಯ ಆವಿಷ್ಕಾರದ ವಿಚಾರ ಹೊಳೆದಿರಬೇಕು. ಅವನು ಕಾಲಕಾಲಕ್ಕೆ ನುಣುಪಾದ, ಹೊಳಪುಳ್ಳ ವಸ್ತುಗಳಲ್ಲಿ ತನ್ನ ಪ್ರತಿಬಿಂಬವನ್ನು ಕಂಡು ಆನಂದಿಸಿದ. ವಿವಿಧ ಧಾತುಗಳೆಲ್ಲ ಬಳಕೆಯಲ್ಲಿ ಬಂದಾಗ ಕನ್ನಡಿಗನ ಅಲಂಕಾರ ಪ್ರಿಯತೆಗೆ ಗರಿ ಮೂಡಿದವು. ಪ್ರಾರಂಭದಲ್ಲಿ ಲೋಹದ ತುಂಡುಗಳನ್ನು ಉಜ್ಜಿ, ತೀಡಿ ಕನ್ನಡಿಗಳನ್ನು ಸಿದ್ಧಪಡಿಸುತ್ತಿದ್ದರು. ಅವುಗಳಿಗೆ ಬೇಡಿಕೆ ಹೆಚ್ಚಿದಂತೆ ಕ್ರಮೇಣ ಅದೊಂದು ಲಾಭದಾಯಕ ಉದ್ದಿಮೆಯಾಗಿ ಮಾರ್ಪಟ್ಟಿತು. ಇತರ ಧಾತುಗಳಿಗಿಂತ ಕಂಚನ್ನೇ ಹೆಚ್ಚಾಗಿ ಬಳಸಲಾರಂಭಿಸಿದರು. ದೇವ ದೇವತೆಗಳ ವಿಗ್ರಹಗಳನ್ನು, ಪೂಜಾ ಸಾಮುಗ್ರಿಗಳನ್ನು ಉತ್ಪಾದಿಸಲು, ಕಂಚನ್ನು ಬಳಸುವದು ಆದಾಗಲೇ ರೂಢಿಯಾಗಿದ್ದರಿಂದ, ಸ್ವಾಭಾವಿಕ ಹೊಳಪನ್ನು ಹೊಂದಿದ್ದ ಕಾರಣದಿಂದ, ಕಂಚಿನ ಕನ್ನಡಿಗಳು ಬಳಕೆಯಲ್ಲಿ ಬಂದವು. ಗಾಜಿನ ಆವಿಷ್ಕಾರವಾಗಿ ಕನ್ನಡಿಗಳ ನಿರ್ಮಾಣ ಪ್ರಾರಂಭವಾದಾ ಗರೋಪ್ ಮತ್ತು ಚೀನಗಳಿಂದ ಕನ್ನಡಿಗಳು ಭಾರತಕ್ಕೂ ಕರ್ನಾಟಕಕ್ಕೂ ಬರಲಾರಂಭಿಸಿದವು. ಕೆಲವು ಪ್ರಕಾರದ ಅಪರೂಪದ ಕನ್ನಡಿಗಳು ಇಲ್ಲಿಯೂ ಸಿದ್ಧವಾಗುತ್ತಿದ್ದವು. ಕುಶಾನರ ಕಾಲದಲ್ಲಿ ಬಳಕೆಯಲ್ಲಿದ್ದ ಹಸ್ತಿದಂತದ ಹಿಡಿಕೆಯ ಕನ್ನಡಿಯೊಂದು ಇತ್ತೀಚೆಗೆ ಏಶಿಯಾ ಮಾಯನರ್ ಪ್ರದೇಶದಲ್ಲಿ ಉತ್ಖನನದಲ್ಲಿ ಸಿಕ್ಕಿದೆ. (ಕ್ರಿ.ಶ. ಪೂ. ೧ನೇ ಶತಕ) ಕನ್ನಡಿಗರ ಕನ್ನಡಿಗೂ ಉಜ್ವಲ ಪರಂಪರೆ, ಇತಿಹಾಸಗಳಿವೆ.

ಸಾಹಿತ್ಯದಲ್ಲಿ ಮುಕುರ, ಆದರ್ಶ, ದರ್ಪಣ, ದರ್ಶನಿಗಳೆಂಬ ವಿವಿಧ ಹೆಸರುಗಳಿಂದ ಕನ್ನಡಿಗಳನ್ನು ಗುರುತಿಸಲಾಗಿದೆ. ಬಸವಣ್ಣನವರ ವಚನವೊಂದು, "ದರ್ಪಣವು ಬೇರೆ ಕಂಚಲ್ಲ, ಬಟ್ಟಲು ಬೇರೆ ಕಂಚಲ್ಲ, ಭಾಂಡ ಒಂದೇ, ಭಾಜನ ಬೇರೆ. ಬೆಳಗೆ, ಕನ್ನಡಿ ಎನಿಸಿತಯ್ಯಾ" ಎಂದು ಸಾರುತ್ತದೆ. ಕಂಚಿನ ದರ್ಪಣಗಳಿಗೆ ವಿಶಿಷ್ಟವಾದ ಹೊಳಪನ್ನು ಕೊಟ್ಟು ಪ್ರತಿಬಿಂಬ ಸ್ಪಷ್ಟವಾಗಿ ಗೋಚರಿಸುವಂತೆ ಶ್ರಮ ವಹಿಸುತ್ತಿದ್ದರು. ಹಡಪದ ಲಿಂಗಮ್ಮನ ವಚನ, "ಗಾಳಿ ಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ ಮನ ನಿರ್ಮಳವಾದದ್ದಲ್ಲದೇ ಆ ಮಹಾಘನವ ಕಾಣಬಾರದು." ಎಂದು ಹೇಳುತ್ತದೆ.[1] ಮನಸ್ಸಿನ ಶುಭ್ರತೆಯನ್ನು ಕನ್ನಡಿಯ ಶುಭ್ರತೆಯೊಂದಿಗೆ ಹೇಗೆ ಕಾಪಾಡಿಕೊಳ್ಳಬೇಕೆಂದು ಪರಿಚಯಿಸುವದು ಅವಳ ಉದ್ದೇಶ. ಪ್ರಭುಲಿಂಗಲೀಲೆಯಲ್ಲಿ ಮಾಯಾದೇವಿ, ಮಧುಕೇಶ್ವರನ ಪೂಜೆಗೆ ಹೊರಟಾಗ ಹಲವಾರು ದ್ರವ್ಯಗಳೊಂದಿಗೆ ಹೊಂಗನ್ನಡಿ (ಹೊನ್ನಿನ ಕನ್ನಡಿ)ಯನ್ನು ಹೊತ್ತ ಪರಿಚಾರಿಕೆಯರು ಅವಳೊಂದಿಗೆ ಹೊರಡುತ್ತಾರೆ.[2] ಕನ್ನಡಿ ಹೊರಲು ಪ್ರತ್ಯೇಕವಾಗಿ ಕನ್ನೆಯರು ನೇಮಿಸಲ್ಪ

---

* ೧೧೦, ಶಶಿಕಿರಣ ಎಪಾರ್ಟ್‌ಮೆಂಟ್ಸ್, ೧೮ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-೫೬೦೦೫೫

1 'ಶಿವಶರಣೆಯರ ವಚನಗಳು' : ಸಂ॥ ಆರ್.ಸಿ.ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮, ಪು.೨೩೧, ವ.೯

2 ಕವಿ ಚಾಮರಸ ವಿರಚಿತ 'ಪ್ರಭುಲಿಂಗಲೀಲೆ', ಸಂ. ಎಮ್. ಎಸ್. ಸುಂಕಾಪುರ, (ಪೂರ್ವೋಕ್ತ) ೧೯೭೬, ಗತಿ ೪, ಪದ ೨೦

ಡುತ್ತಿದ್ದರು. ದೇವಪ್ಪಕವಿಯ ರಾಮ ವಿಜಯ ಕಾವ್ಯದಲ್ಲಿ 'ಹೊಸಗನ್ನಡಿ'ಯ ಉಲ್ಲೇಖ ವಿವಾಹ ಸಂದರ್ಭದಲ್ಲಿ ಬರುತ್ತದೆ.[3] ಶುಭಕಾರ್ಯಗಳಿಗೆಲ್ಲ ಹೊಚ್ಚ ಹೊಸ ಕನ್ನಡಿಗಳನ್ನು ಖರೀದಿಸಲಾಗುತ್ತಿರಬೇಕು. ಕನ್ನಡಿ ಕಾಯಕದ ಶರಣರಿದ್ದರು.[4] ವಚನಕಾರ್ತಿ ರೆಮ್ಮವ್ವೆ ಕನ್ನಡಿ ಕಾಯಕದವಳು. "ಕೈಯಲ್ಲಿ ಕನ್ನಡಿಯಿರಲು ತನ್ನ ತಾ ನೋಡಬಾರದೇ ?"[5] ಎಂದು ಆತ್ಮ ಶೋಧದ ವಚನ ವನ್ನು ರಚಿಸಿದ್ದಾಳೆ. ಉಳ್ಳವರು ಮಗಳ ಮದುವೆಯ ಸಂದರ್ಭದಲ್ಲಿ ಕನ್ನಡಿಗಳ ಜೊತೆಗೆ, ಅದರ ಊಳಿಗದವ ರನ್ನೂ ಅಳಿಯನ ಮನೆಗೆ ಕಳಿಸುವ ಪರಿಪಾಠವಿತ್ತು.[6] ಅವರಿಗೆ ಕನ್ನಡಿಯನ್ನು ವಿವಿಧ ಕೋನಗಳಲ್ಲಿ ಎತ್ತಿ, ಹಿಡಿದು, ತನ್ನ ಮುಖ ಅದರಲ್ಲಿ ತಪ್ಪಿಯೂ ಗೋಚರಿಸ ದಂತೆ ಎಚ್ಚರ ವಹಿಸಲು, ಒಡತಿಗೆ ಅನುಕೂಲವಾಗಲು ತರಬೇತಿ ನೀಡಲಾಗುತ್ತಿತ್ತು.[7] ಬಸವಪುರಾಣದಲ್ಲಿ ವೇಶ್ಯೆ ಯರ ನಿವಾಸಗಳಲ್ಲಿ ರಸಿಕರನ್ನು ರಂಜಿಸಲು, ಶಯನ ಗೃಹದಲ್ಲಿ 'ಮಲಗುಗನ್ನಡಿ'ಯನ್ನು ಹೊಂದಿಸಿ ಇಡು ತ್ತಿದ್ದುದನ್ನು ಭೀಮಕವಿ ಉಲ್ಲೇಖಿಸಿದ್ದಾನೆ. ಶಿಕಾರಿಪುರದ ೧೧೭೪ನೇ ವರ್ಷದ ಶಾಸನವೊಂದರಿಂದ ದೇವಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಪಾತ್ರದ ಹೆಂಗಳೆಯರಿಗೆ (ಸೂಳೆಯರ್ಗೆ) 'ಕನ್ನಡಿವಣ' ಕೊಡಮಾಡಿದ ವಿಚಾರ ತಿಳಿದು ಬರುತ್ತದೆ.[8] ವೀರಗಲ್ಲಿಗೂ ಕನ್ನಡಿ ಕಲಶದ ಸೇವೆ ಸಂದಾಯವಾಗುತ್ತಿತ್ತು. ರಾಮನಾಥ ಚರಿತ ಕಾವ್ಯದಲ್ಲಿ ಕಡುಗಲಿ ರಾಮನಾಥನ ಹತ್ಯೆಯ ಗಾಳಿ ಸುದ್ದಿ ಕೇಳಿದ ಅವನ ಮಡದಿಯರು ಸತಿ ಹೋಗಲು ನಿಶ್ಚಯಿಸಿ ಗಂಧದ ಅಗ್ನಿಗೆ ಏರ್ಪಾಡು ಮಾಡುತ್ತಾರೆ. ಆ ಸಮಯದಲ್ಲಿ ಅಲ್ಲಿಗೆ ಬಂದ ರಾಮನಾಥನು "ತನ್ನಳಿವುಳಿವ ಕೇಳುತ ಕೆಳದಿಯರಿಂದ ಕನ್ನಡಿ ನಿಂಬೆಹಣ್ಣುಗಳನು ಮನ್ನಿಸುತ ಲಿರ್ದ ನಿಜಸತಿಯರ ಮೊಗಗನ್ನಡಿಗಳ ಕಂಡನಲ್ಲಿ"[9] ಎಂಬ ವರ್ಣನೆ ಬರುತ್ತದೆ.ಸತಿಯ ಸಿಂಗಾರ, ಮೆರವಣಿಗೆ ಎರಡರಲ್ಲೂ ಕನ್ನಡಿಗೆ ಆದ್ಯತೆಯಿತ್ತು. ಪ್ರವಾಸಕ್ಕೆ ಹೊರಟಾಗ ಸ್ತ್ರೀಯರಂತೆ ಪುರುಷರೂ ತಮ್ಮ ಅಲಂಕಾರ ಸಾಮಗ್ರಿಗಳೊಂದಿಗೆ ಕನ್ನಡಿಯನ್ನು ತಪ್ಪದೇ ಸೇರಿಸು ತ್ತಿದ್ದರು.[10]

ಕನ್ನಡ ಕವಿಗಳಂತೆ, ಕನ್ನಡ ಶಿಲ್ಪಿಗಳೂ ಕನ್ನಡಿಗಳ ಪ್ರಕಾರಗಳು ಮತ್ತು ಬಳಕೆಯ ವಿಧಾನಗಳನ್ನು ಭಾವೀ ಪೀಳಿಗೆಗಾಗಿ ತಮ್ಮ ಕೃತಿಗಳಲ್ಲಿ ಮೂಡಿಸಿದ್ದಾರೆ. ಬೇಲೂರಿನ ಶಿಲಾಬಾಲಿಕೆಯರಲ್ಲಿ ದರ್ಪಣ ಸುಂದರಿಯ ವಿಗ್ರಹವನ್ನು ಮೆಚ್ಚದವರಿಲ್ಲ. ಸುಂದರ ಮೈಕಟ್ಟಿನ ಸಿಂಹ ಕಟಿಯ ತೋರಕೇಶರಾಶಿಯ ಮೈತುಂಬ ಆಭರಣ ಗಳನ್ನು ಧರಿಸಿದ ಕನ್ಯೆ, ಎಡಗೈಯಲ್ಲಿ ಹಿಡಿದ ಬಾಹ್ಯ ಗೋಲಾಕಾರದ ಕನ್ನಡಿಯಲ್ಲಿ ತನ್ನ ಕೊರಳ ಮುತ್ತಿನ ಹಾರ ಹೇಗೆ ಕಾಣುತ್ತದೆ, ಎಂದು ಪರೀಕ್ಷಿಸುತ್ತಿರುವಂತಿದೆ. ಕರ್ನಾಟಕದಂತೆ ಮಧ್ಯಭಾರತದ ಚಂದೇಲ ಆಳರಸರ ಶಿಲ್ಪಿಗಳಿಗೂ ಕನ್ನಡಿಯ ಪ್ರತಿಮೆ ಆಕರ್ಷಕವೆನಿಸಿರಬೇಕು. ಅಂತೆಯೇ ಖಜುರಾಹೋ ದೇವಸ್ಥಾನಗಳ ಮದನಿಕೆಗಳ

---

3 ದೇವಪ್ಪಕವಿ ವಿರಚಿತ 'ರಾಮವಿಜಯ ಕಾವ್ಯ', ಸಂ. ಪ್ರೊ॥ ಟಿ. ಕೇಶವಭಟ್ಟ. ಬೆಂಗಳೂರು, ೧೯೬೯. ಅಧ್ಯಾಯ ೮, ಪದ್ಯ ೬೧ (ರಾ. ವಿ)

4 ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ' ಕನ್ನಡಿ ಕಾಯಕದ ತಿಮ್ಮಣ್ಣನನ್ನು ಹೆಸರಿಸುತ್ತದೆ.

5 ಶಿವಶರಣೆಯರ ವಚನಗಳು, ಪು. ೪೦೫, ವ. ೨೩೫

6 ರಾ.ವಿ. ಅಧ್ಯಾಯ ೮, ಪದ್ಯ ೫೨-೫೪

7 ನಂಜುಂಡ ಕವಿ ವಿರಚಿತ ರಾಮನಾಥ ಚರಿತ, ಸಂ॥ ಎಚ್. ದೇವೀರಪ್ಪ, ಮೈಸೂರು, ೧೯೬೪, ಭಾಗ ೨, ಅಧ್ಯಾಯ ೬, ಸಂಧಿ ೨೪, ಪದ್ಯ ೧೬೨ (ರಾ.ನಾ.ಚ)
"ಓರ್ವಳು ತನ್ನ ಮುಖೇಂದುವ ಕಾಣಿಸಿಕೊಳ್ಳದೇ । ಬಂದು ಪಿಡಿಯೆ ಮುಕುರವನವರೊಳು ತನ್ನ । ಕಂದಿರ್ದ ಮೊಗವ ನೋಡಿದಳು " ಪು. ೮೩

8 ಎಪಿಗ್ರಾಫಿಯ ಕರ್ನಾಟಿಕ VII, ಶಿಕಾರಿಪುರ ೨೯೫

9 ರಾ.ನಾ.ಚ, ಅಧ್ಯಾಯ ೫, ೪೫ನೇ ಸಂಧಿ. ಪದ್ಯ ೫೩

10 'ಪದ್ಮರಾಜ ಪುರಾಣಂ', ಸಂ॥ ಆರ್. ಸಿ. ಹಿರೇಮಠ, ಧಾರವಾಡ, ೧೯೫೨. ಪದ್ಮರಸನು ವನವಿಹಾರಕ್ಕೆ ಹೊರಟಾಗ ಒಯ್ದ 'ಹಡಪ'ದಲ್ಲಿ ಹೊನ್ನಗಿಂಡಿ, ಮೊಗದುಕೂಲ, ಪನ್ನೀರಿನ ಕುಪ್ಪಿ, ಕಸ್ತೂರಿಯ ತಟ್ಟೆ, ಸಾದಿನ ಭರಣಿ, ಜವ್ವಾದಿಯ ವಂಕಿ, ಶ್ರೀಗಂಧದ ಶಿಂಪು, ಕರ್ಪೂರದ ನಾಳಿಯೊಂದಿಗೆ ಕನ್ನಡಿಯೂ ಇತ್ತು. ಅಧ್ಯಾಯ ೮, ಪದ್ಯ ೭

ಅಲಂಕಾರ ಪ್ರಿಯ ಸುರಸುಂದರಿಯರನ್ನು ಇಂದಿಗೂ ಕಾಣಬಹುದಾಗಿದೆ. ದುಬೆಲ್ಲಾ ಕಲಾ ಸಂಗ್ರಹಾಲಯ ದಲ್ಲೂ ಕನ್ನಡಿ ಹಿಡಿದ ಸುರ ಸುಂದರಿಯರ ವಿಗ್ರಹಗಳಿವೆ. ಬಾದಾಮಿಯ ಗುಹಾಲಯದಲ್ಲಿ, ವರ್ತುಲಾಕಾರದ ಆಸನ ವೊಂದರಲ್ಲಿ ಆರೂಢಳಾಗಿ ಅಲ್ಪವಸನ ಧರಿಸಿದ ಯುವತಿ ಯೊಬ್ಬಳು ಎಡಗೈಯಲ್ಲಿ ಹಿಡಿದ ಕಿರುಗನ್ನಡಿಯ ಸಹಾಯದಿಂದ ಕುಂಕುಮವನ್ನು ಹಣೆಗಿಡುತ್ತಿದ್ದಾಳೆ. ಸುಗಂಧದ್ರವ್ಯದ ಹೂಜೆ ಹೊತ್ತ ಸೇವಕಿ ಬಲಗಡೆಗೆ ನಿಂತರೆ, ಎಡಗಡೆಗೆ ನಿಂತಾಕೆ ಚಾಮರ ಬೀಸುತ್ತಿದ್ದಾಳೆ. ಮೂಡಬಿದುರೆಯ ಬಸದಿಯಲ್ಲಿ ಸಾಮಾನ್ಯ ಗೃಹಿಣಿ ಯೋರ್ವಳು ಕನ್ನಡಿಯಿರುವ ಪುಟ್ಟ ಕುಂಕುಮದ ಭರಣಿ ಹಿಡಿದು ಹಣೆಗಿಟ್ಟುಕೊಳ್ಳುವ ಶಿಲ್ಪವನ್ನು ಕಾಣಬಹುದು. ಇಂಥ ವಸ್ತುವುಳ್ಳ ಶಿಲ್ಪಗಳನ್ನು ಅನೇಕಾನೇಕ ದೇವಾಲಯಗಳಲ್ಲಿ ಕಾಣಬಹುದಾಗಿದೆ.

ಕರ್ನಾಟಕದಲ್ಲಿ ಭಿತ್ತಿ ಚಿತ್ರಗಳ ಸಂಪತ್ತು ಸಮೃದ್ಧ ವಾಗಿದ್ದಂತೆ ಅವುಗಳಲ್ಲಿಯ ಕನ್ನಡಿಗಳ ವೈವಿಧ್ಯವನ್ನು ಗುರುತಿಸಬಹುದಾಗಿದೆ. ಕನ್ನಡಿತಿಯರು ವೀಳ್ಯ ಮೆಲ್ಲುವ ವರಾಗಿದ್ದು ಸದಾ ಕೆಂದುಟಿ ಹೊಂದಿರುತ್ತಿದ್ದರಿಂದ ಪಾಶ್ಚಾತ್ಯ ನಾರಿಯರಂತೆ ತುಟಿಗೆ ಬಣ್ಣ ಸವರಿಕೊಳ್ಳುವ ಪ್ರಮೇಯವೇ ಇರುತ್ತಿರಲಿಲ್ಲ, ಎಂದು ಸರ್ವ ಸಾಧಾರಣ ವಾಗಿ ನಂಬಲಾಗುತ್ತಿದೆ. ಆದರೆ ಶ್ರವಣಬೆಳ್ಗೊಳದ ಜೈನ ಮಠದಲ್ಲಿರುವ ಭಿತ್ತಿ ಚಿತ್ರವೊಂದರಲ್ಲಿ ಅರಸಿಯೋರ್ವಳು ಕನ್ನಡಿ ಬಳಸಿ ತುಟಿಗೆ ಬಣ್ಣ ಸವರಿಕೊಳ್ಳುವ ಅಪರೂಪದ ಚಿತ್ರವಿದೆ. ಸೀಬಿಯ ನರಸಿಂಹಸ್ವಾಮಿ ದೇವಾಲಯದಲ್ಲಿ ವಿವಿಧ ಪ್ರಕಾರದಲ್ಲಿ ಕನ್ನಡಿಯನ್ನು ಬಳಸಿದ ಅನೇಕ ಭಿತ್ತಿ ಚಿತ್ರಗಳಿವೆ. ಗರತಿಯೋರ್ವಳು ಉಚ್ಚ ಆಸನದಲ್ಲಿ ಕಾಲು ಬಿಟ್ಟು ಸುಖವಾಗಿ ಕುಳಿತು ಬಲಗೈಯಲ್ಲಿ ಹಿಡಿದ ಕನ್ನಡಿ ಯಲ್ಲಿ ಮುಖ ನೋಡಿಕೊಳ್ಳುತ್ತಿದ್ದಾಗ, ಅವಳ ಹಿಂದೆ ನಿಂತ ಊಳಿಗದವಳು ಅವಳ ಕೂದಲು ಬಾಚಿ ಹೆರಳು ಹಾಕುವ ಸಿದ್ಧತೆ ನಡೆಸಿದ್ದಾಳೆ. ಇನ್ನೊಂದು ಅಂಕಣದಲ್ಲಿ ಪರಿಚಾರಕಿಯೋರ್ವಳು ಭಾರವಾದ ಕನ್ನಡಿಯೊಂದನ್ನು ಎರಡೂ ಕೈಗಳಲ್ಲಿ ಹಿಡಿದು, ಒಡತಿಗೆ ಅಲಂಕಾರ ಮಾಡಿ ಕೊಳ್ಳಲು ನೆರವು ನೀಡುತ್ತಿದ್ದಾಳೆ. ಸೀಬಿ ದೇವಾಲಯದ ಹೊರ ಗೋಪುರದ ಮುಚ್ಚಿಗೆಯಲ್ಲಿ ಹಲವಾರು ರತಿ ಕ್ರೀಡೆಯ ಚಿತ್ರಗಳಿವೆ. ಒಂದು ಚಿತ್ರದಲ್ಲಿ ರಸಿಕ ನೋರ್ವನು ಕ್ರೀಡೆಯಲ್ಲಿ ತೊಡಗಿದ್ದರೂ ಎಡಗೈಯಲ್ಲಿ ಕನ್ನಡಿ ಹಿಡಿದು, ದೃಶ್ಯವನ್ನು ವೀಕ್ಷಿಸಲು ಯತ್ನಿಸಿದ್ದಾನೆ. ಇನ್ನೊಂದು ಚಿತ್ರದಲ್ಲಿ ನಲ್ಲೆಯ ಅಸ್ತವ್ಯಸ್ತವಾದ ಕೂದಲನ್ನು ನಲ್ಲನು ಬಾಚಿ ಮುಡಿ ಕಟ್ಟುವ ಯತ್ನದಲ್ಲಿ ದ್ದಾಗ ಆಕೆ ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದಾಳೆ. ಇಂಥ ಅನೇಕ ಚಿತ್ರಗಳು ಅಲ್ಲಿ ಈ ಮೊದಲು ವಿರಾಜಿಸುತ್ತಿದ್ದಿರ ಬೇಕು. ಕಾಲಚಕ್ರದ ಸುಳಿಯಲ್ಲಿ ಸಿಕ್ಕು ಅವೆಲ್ಲ ನಶಿಸಿ ಹೋಗಿರಲು ಸಾಕು.

ಶಿಲ್ಪಿ ಚಿತ್ರಕಾರರಂತೆ ಕೊರಡನ್ನು ಕೊರೆದು ಸುಂದರವಾದ ತೇರು (ರಥ)ಗಳನ್ನು ನಿರ್ಮಿಸುವ ಗುಡಿ ಗಾರರಿಗೂ ಕನ್ನಡಿ, ಆಕರ್ಷಕವಾದ ವಸ್ತು. ಆದರೆ ಅವನ್ನು ಕಂಡು ಹಿಡಿದು ನೋಡಿ ಆನಂದಿಸಲು ಶ್ರಮ ಪಡಬೇಕು. ರಥಗಳ ಅಂಕಣಗಳು ತೀರ ಚಿಕ್ಕವಾಗಿದ್ದು ಕಣ್ಣಿನ ನೇರ ನೋಟದ ಸ್ತರಕ್ಕಿಂತ ತುಂಬ ಎತ್ತರದ ಮೇಲೆ ಇರುತ್ತವೆ. ಅಲ್ಲದೇ ಪ್ರತೀವರ್ಷ ಜಾತ್ರೆಯ ಸಮಯದಲ್ಲಿ ಅವಕ್ಕೆ ಎಣ್ಣೆ ಸವರುವದರಿಂದ, ಕಾಲ ಕ್ರಮೇಣ ಚಿತ್ರಗಳು ಕಪ್ಪಿಡುತ್ತವೆ. ಅಲ್ಲದೇ ಶಿಲ್ಪ, ಭಿತ್ತಿ ಚಿತ್ರಗಳಿಗಿರುವ ನಯ–ನಾಜೂಕುಗಳ ಕೊರತೆ ಇಲ್ಲಿ ವಿಪುಲವಾಗಿರುತ್ತದೆ. ತೀರ ಹಳೆಯದಾದ ತೇರನ್ನು ತ್ಯಜಿಸಿದಾಗ, ಇಂಥ ಚಿತ್ರ ಕೊರೆದ ಕೊರಡುಗಳು ಬಿದ್ದಿರುತ್ತವೆ. ಅವನ್ನು ತೊಳೆದು ಸ್ವಚ್ಛಗೊಳಿಸಿದಾಗ ಮಾತ್ರ ಅವುಗಳ ಅಧ್ಯಯನ ಸಾಧ್ಯ. ರಾಮಾಯಣ, ಮಹಾಭಾರತಗಳ ಉಪಕಥೆಗಳ ಚಿತ್ರಪಟ್ಟಿಕೆಗಳ ಜೊತೆಗೆ, ಸಾಮಾಜಿಕ ಜನಜೀವನದ ದೃಶ್ಯಾವಳಿಗಳನ್ನು ಸೇರಿಸು ವದು ಈ ಕಲಾಕಾರರ ವೈಶಿಷ್ಟ್ಯ. ಪ್ರಣಯಶಿಲ್ಪಗಳೂ ಸಾಕಷ್ಟು ಇರುತ್ತವೆ. ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದ ತೇರಿನ ಮೇಲೆ, ಅಲಂಕರಿಸಿಕೊಳ್ಳುತ್ತಿ ರುವ ಯುವತಿಗೆ ರಸಿಕನೋರ್ವನು ಕೀಟಲೆ ಕೊಡುವ ದೃಶ್ಯವಿದೆ. ಕನ್ನಡಿಗಳಿಗೆ ಹಿಡಿಕೆಯಿರುವದು ಸಾಮಾನ್ಯ ವಾದರೂ ಈ ಕನ್ನಡಿಗೆ ದಾರಗಳ ಹಿಡಿಕೆಯ ಜೋಡಣೆ ಯಿದೆ. ಶ್ರೀರಂಗಪಟ್ಟಣದ ಶ್ರೀರಂಗ ದೇವಸ್ಥಾನದ ತೇರಿನಲ್ಲಿ ಎತ್ತರದ ಆಸನದಲ್ಲಿ ಕುಳಿತು ಕನ್ನಡಿಯನ್ನು ವೀಕ್ಷಿಸುತ್ತಿರುವ ವ್ಯಕ್ತಿಯ ಉಬ್ಬು ಚಿತ್ರವಿದೆ. ಉತ್ತರ ಕನ್ನಡ ಜಿಲ್ಲೆಯ ಗುಣವಂತೆಯ ತೇರೊಂದರಲ್ಲಿ ಕನ್ನಡಿ ಯಲ್ಲಿ ತನ್ನನ್ನು ತಾನು ನೋಡಿಕೊಳ್ಳುತ್ತ ಮೈಮರೆತಿರು ವವಳ ಚಿತ್ರವಿದೆ.

ನಮ್ಮ ರಾಜ್ಯದ ಉದ್ದಗಲಕ್ಕೂ ಅನೇಕಾನೇಕ ಮಾಸ್ತಿ ಸ್ಮಾರಕಗಳು ಉಳಿದುಕೊಂಡು ಬಂದಿವೆ. ಸತಿ ಹೋದವರನ್ನು ದೈವತ್ವಕ್ಕೆ ಏರಿಸುತ್ತಿದ್ದ ಸಂಪ್ರದಾಯವೇ ಇದಕ್ಕೆ ಕಾರಣವೆನಿಸುತ್ತದೆ. ಈ ಸ್ಮಾರಕಗಳನ್ನು ಪಾರ್ವತಿ ಇಲ್ಲವೇ ಲಕ್ಷ್ಮಿ (ಮಹಾಮಾಯೆ)ಯನ್ನು ಪ್ರತಿನಿಧಿಸುತ್ತ ವೆಂದು ದೃಢವಾಗಿ ನಂಬಿ, ದೇಗುಲಗಳನ್ನು ನಿಲ್ಲಿಸಿ ಪೂಜಿಸುವವರೂ ಇಲ್ಲದಿಲ್ಲ. ಈ ಸ್ಮಾರಕಗಳಿಂದಾಗಿ ಹಿಂದಿನ ಮುತ್ತೈದೆಯರು, ಮುಖ್ಯವಾಗಿ ಮಹಾಸತಿ ಯಾಗುವವರು, ಹೇಗೆ ಸಿಂಗರಿಸಿಕೊಳ್ಳುತ್ತಿದ್ದರು ? ಅವರ ಸಿಂಗಾರ ಸಾಧನಗಳು ಯಾವವಾಗಿರುತ್ತಿದ್ದವು ? ಎಂಬು ದರ ನಿಚ್ಚಳ ಕಲ್ಪನೆ ಬರುತ್ತದೆ. ಕೇದಿಗೆಯಂಥ ತೀವ್ರ ಸುಗಂಧ ಹೊಮ್ಮಿಸುವ ಹೂವನ್ನು ಮುಡಿಯಲ್ಲಿ ಹೆಣೆದು ತಲೆ, ಬೈತಲೆ, ಕಿವಿ, ಕೊರಳು, ಕೈ–ಕಾಲುಗಳಿಗೆ ಅನೇಕಾ ನೇಕ ಆಭರಣಗಳನ್ನು ಅವರು ತೊಡುತ್ತಿದ್ದರು. ಮಾಟ ವಾದ ಕಸೂತಿಯ ಕುಪ್ಪಸ ತೊಡುತ್ತಿದ್ದರು. ಒಂದು ಕೈಯಲ್ಲಿ ನಿಂಬೇಹಣ್ಣು ಇನ್ನೊಂದು ಕೈಯಲ್ಲಿ ಕನ್ನಡಿ ಹಿಡಿದಿರುವದು, ಮಾಸ್ತಿಶಿಲ್ಪಗಳಲ್ಲಿ ಸಾಮಾನ್ಯ ದೃಶ್ಯ. ಕೆಲವು ಮನೆತನಗಳಲ್ಲಿ ಇಂಥ ಕನ್ನಡಿಯನ್ನು ಪೂಜಾಸ್ಥಳ ದಲ್ಲಿ ಇಟ್ಟು ಸಕಲ ಪೂಜಾ ಸಾಮಗ್ರಿಗಳ ನಿಯಮಿತ ಪೂಜೆಯನ್ನು ಇಂದಿಗೂ ಸಲ್ಲಿಸಲಾಗುತ್ತದೆ. ವೀರಗಲ್ಲಿಗೆ ಕಲಶ–ಕನ್ನಡಿಗಳ ಪೂಜೆ ಸಲ್ಲಿಸಲು ದತ್ತಿಯನ್ನು ಕೊಡ ಮಾಡಿದಂತೆ, ಮಾಸ್ತಿ ಕಲ್ಲಿಗೂ ಕಾಲ ಕಾಲಕ್ಕೆ ಪೂಜೆ– ಪುರಸ್ಕಾರ ಸಲ್ಲಿಸಲು ವಿಶೇಷ ವ್ಯವಸ್ಥೆ ಇದ್ದಿರಬೇಕು.

ಮುದ್ರಿತ ಪುಸ್ತಕಗಳು ಬಳಕೆಯಲ್ಲಿ ಬರುವ ಪೂರ್ವದಲ್ಲಿ ಕಲ್ಲಚ್ಚಿನ ಗ್ರಂಥಗಳು ಪ್ರಚಾರದಲ್ಲಿದ್ದವು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು 'ಸೌಗಂಧಿಕಾ ಪರಿಣಯ'ದಂತಹ ಸಚಿತ್ರ ಪುಸ್ತಕವನ್ನು ಪ್ರಕಟಿಸಿದರು. ಈ ಗ್ರಂಥ ಸುಚರಿತ ರಾಜನ ಕಥೆಗೆ ಪ್ರಾಶಸ್ತ್ಯ ಕೊಟ್ಟರೂ ಕಲಾಕಾರರು ಸಮಕಾಲೀನ ಸಾಮಾಜಿಕ ಜೀವನವನ್ನು ಕಡೆಗಾಣಿಸಿಲ್ಲ. ಹದಿನೆಂಟನೆಯ ಶತಮಾನದ ಉತ್ತರಾರ್ಧದಿಂದ ಕಿರುಕೈಗನ್ನಡಿಗಳ ಬದಲಾಗಿ ಬೃಹದಾಕಾರದ ಭವ್ಯ ಕನ್ನಡಿಗಳನ್ನು ಗೃಹಾಲಂಕಾರಗಳ ಸಾಧನಗಳಾಗಿ ಹೆಚ್ಚೆಚ್ಚು ಬಳಸಲಾರಂಭಿಸಿದರು. ಅಂತೆಯೇ ಈ ಕನ್ನಡಿಗಳನ್ನು ಸ್ಥಾಯಿಯಾಗಿ ಒಂದೇ ಸ್ಥಳಕ್ಕೆ ಸೀಮಿತಗೊಳಿಸುವದು ಅನಿವಾರ್ಯವಾಯಿತು. ಹಿತ್ತಾಳೆ, ತಾಮ್ರ, ಕಬ್ಬಿಣಗಳ ಚೌಕಟ್ಟನ್ನು ಇವಕ್ಕೆ ಬಳಸಲಾರಂಭಿಸಿದರು. ಇಂಥ ಕಲಾತ್ಮಕವಾಗಿ ರಚಿಸ ಲಾಗುತ್ತಿದ್ದ ಕನ್ನಡಿಯ ಸ್ಟ್ಯಾಂಡುಗಳು ಇಂದಿಗೂ ಅನೇಕ ವಸ್ತು ಸಂಗ್ರಹಾಲಯಗಳಲ್ಲಿ ಇವೆ. ಸಂಪೂರ್ಣ ಅಲಂಕೃತ ವ್ಯಕ್ತಿಯನ್ನು ಕಣ್ತುಂಬ ನೋಡಬಹುದಾದಂಥ ನಿಲುವು ಗನ್ನಡಿಗಳು ಆಗಲೇ ಬಳಕೆಯಲ್ಲಿ ಬಂದಿದ್ದವು.

ಪುರುಷರು ತಮ್ಮ ಗಡ್ಡ ಮೀಸೆಗಳನ್ನು ನಾಪಿತ ರಿಂದ ಎಚ್ಚರಿಕೆಯಿಂದ ರೂಪಿಸಿಕೊಂಡರೂ ಅವರೂ ಹೆಂಗಳೆಯರಷ್ಟೇ ಕನ್ನಡಿಗಳಿಗೆ ಮಾರುಹೋಗಿದ್ದರು. ಸಂಸಾರದ ಆಕರ್ಷಣೆಗಳನ್ನು ತ್ಯಜಿಸಿ ಕಾವಿಬಟ್ಟೆಯನ್ನು ತೊಡುವ ಓರ್ವ ಯೋಗಿಗೂ ಕನ್ನಡಿಯ ಮಾಯೆಯನ್ನು ಬಿಡುವದು ಸಾಧ್ಯವಾಗಲಿಲ್ಲ ! ಅಂತೆಯೇ ಭಟಕಳದ ಇಂಥ 'ತ್ಯಾಗಿ'ಯು ಕಿರುಮಣೆಯ ಮೇಲೆ ಕುಳಿತು ಕೈಗನ್ನಡಿಯಲ್ಲಿ ಕಿವಿಯ ರುದ್ರಾಕ್ಷದ ಓಲೆಯನ್ನು ವೀಕ್ಷಿಸುತ್ತಿದ್ದಾನೆ. ಇನ್ನೊಂದು ಚಿತ್ರದಲ್ಲಿ ಅಧಿಕಾರಿ ಯಂತೆ ತೋರುವ ಒಬ್ಬಾತ, ಸೇವಕನಿಗೆ ನಿರ್ದೇಶನ ಗಳನ್ನು ಕೊಡುತ್ತಿರುವಾಗ ಹುಲುಸಾಗಿ ಬೆಳೆಸಿದ ತನ್ನ ಮೀಸೆಗಳನ್ನು ಕನ್ನಡಿಯಲ್ಲಿ ನೋಡಿಕೊಂಡು ಆನಂದಿಸು ತ್ತಿದ್ದಾನೆ. ಸಿರಿವಂತರ ಮಕ್ಕಳಿಗೆ ಕನ್ನಡಿ ಬೇಕಾದಂತೆ ತಿರುಗಿಸಿ, ಎತ್ತಿ ಹಿಡಿದು ತೋರಿಸಲು ಪರಿಚಾರಕರು ಬೇಕಾಗುತ್ತಿದ್ದರು. ರಾಜರು ಓಲಗಕ್ಕೆ ಹೊರಡುವ ಮುನ್ನ ತಮ್ಮ ಎಲ್ಲ ಅಲಂಕಾರಗಳು ಸರಿಯಾಗಿವೆಯೇ ? ಎಂದು 'ಆದರ್ಶ'ದಲ್ಲಿ ಕಂಡುಕೊಳ್ಳುತ್ತಿದ್ದಿರಬೇಕು ! ಸೇವಕರು ಗಾಳಿ ಬೀಸುವಾಗ, ನರ್ತಕಿಯರು ನರ್ತಿಸು ವಾಗ ಎತ್ತರದ ಕಾಲುಮಣೆಯ ಮೇಲೆ ಆರೂಢನಾದ ಉಚ್ಚ ಅಧಿಕಾರಿಯೋರ್ವನು ತನ್ನ ಸೌಂದರ್ಯವನ್ನು ಕನ್ನಡಿಯಲ್ಲಿ ನೋಡಿಕೊಳ್ಳುವದರಲ್ಲಿ ಮೈಮರೆತಿದ್ದಾನೆ.

ಕನ್ನಡಿಗ ಎಷ್ಟೇ ಬಡವನಾಗಿರಲಿ, ಸಿರಿವಂತನಿರಲಿ, ಕನ್ನಡಿಯೆಂಬ ಶೃಂಗಾರವಸ್ತು ಅವನ ಪ್ರತಿನಿತ್ಯ ಜೀವನದ ಅವಿಭಾಜ್ಯ ಅಂಗವಾಗಿತ್ತು. ಈ ಕಂಪ್ಯುಟರ್ ಯುಗದಲ್ಲಿ ಕನ್ನಡಿಗೆ ಯಾವ ಭವಿಷ್ಯ ಕಾದಿದೆಯೋ ಎನ್ನುವದು ತಿಳಿಯದು !

ಎಂ. ಜಿ. ನಾಗರಾಜ್*

# ಭೂ ಇತಿಹಾಸದ ಬೆಳಕಿನಲ್ಲಿ ಕೊಡಗಿನ ಕಾವೇರಿ ಮತ್ತು ಗಂಗೆ

ಕೊಡಗಿನಲ್ಲಿ ಬ್ರಹ್ಮಗಿರಿ ಶ್ರೇಣಿಯು ಸುಮಾರು ೧೩೪೧ ಮೀಟರ್ ಎತ್ತರದಲ್ಲಿ ಚಿಮ್ಮುವ ತಲಕಾವೇರಿಯು ನೆಲೆ ಇದೆ. ಪೌರಾಣಿಕ ಹಿನ್ನೆಲೆಯಲ್ಲಿ ಈ ನೆಲೆಗೆ ಬ್ರಹ್ಮ ಕುಂಡಿಕೆ, ಕಾವೇರಿಕುಂಡಿಕೆ ಎಂಬ ಹೆಸರೂ ಒದಗಿದೆ. ಶಾಸನಗಳಲ್ಲಿ 'ಮೊದಲ್ಕಾವೇರಿ' ಎಂದು ತಲಕಾವೇರಿಗೆ ಉಲ್ಲೇಖವಿದೆ.[1] ಭೂವಿಜ್ಞಾನದ ರೀತ್ಯಾ ಕೋಟಿ ಕೋಟಿ ವರ್ಷಗಳ ಭೂ ಇತಿಹಾಸ ದಕ್ಷಿಣ ಭಾರತದ ಭೂಮಿಗಿದೆ. ನಿರಂತರವಾಗಿ ಈ ಹಿನ್ನೆಲೆಯಲ್ಲಿ ಚಿಮ್ಮಿ ಬರುತ್ತಿರುವ ಈ ಕಾವೇರಿ ನದಿ ಮಾನವನ ಕಣ್ಣಿಗೆ ಕನಿಷ್ಠ ಮೂರು ಸಾವಿರ ವರ್ಷಗಳ ಹಿಂದೆಯೇ ಬಿದ್ದಿರುವಂತಿದೆ. ಏಕೆಂದರೆ ಕುಂಭಸಂಭವ ಅಗಸ್ತ್ಯನು ಆರ್ಯಸೋದರರಿಂದ ಬಹಿಷ್ಕೃತನಾಗಿ ದ್ರಾವಿಡ ಪೂರ್ವ ಬುಡಕಟ್ಟುಗಳ ವಂಶಿಕರೊಡನೆ ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳ ಕಡೆಗೆ ಕ್ರಿ. ಪೂ. ೧೦೭೫ರ ವೇಳೆಗೆ ಬಂದನೆನ್ನಲಾಗಿದೆ.[2] ೧೧ನೇ ಶತಮಾನದ ವೀರಶೋಳಿಯನ್‌ನ ತಮಿಳು ವ್ಯಾಕರಣವು ಅಗಸ್ತ್ಯನು ಅವಲೋಕಿತನಿಂದ (ಬುದ್ಧಮಿತ್ರ) ಅರಿವು ಪಡೆದವನೆಂದು ತಿಳಿಸುತ್ತದೆ.[3] ಒಂದು ಕಾಲಕ್ಕೆ ಉತ್ತರ ಭಾರತವೆಲ್ಲ ಸಮುದ್ರವಾಗಿತ್ತು. ಆಗ ಭಾರತದ ದಕ್ಷಿಣ ಭಾಗವಷ್ಟೆ ಇದ್ದದ್ದು ಉತ್ತರಕ್ಕೆ ಚಲಿಸಿ ಏಷ್ಯಾಖಂಡದೊಂದಿಗೆ ಡಿಕ್ಕಿ ಹೊಡೆಯಿತು. ಅದರಿಂದಾಗಿ ಟಿಬೆಟ್ ಪ್ರಸ್ಥಭೂಮಿ ಹಾಗೂ ಹಿಮಾಲಯ ಪರ್ವತ ಪಂಕ್ತಿಗಳು ಉಂಟಾದುವು.[4] ಈ ಪರ್ವತ ಶ್ರೇಣಿಗಳ ಅನೇಕ ಶಿಖರಗಳಲ್ಲಿ ಆನೆ, ಖಡ್ಗಮೃಗಗಳ ಪಳೆಯುಳಿಕೆಗಳು ಕಂಡು ಬಂದಿವೆ. ಅಂದರೆ ಭೂ ಬದಲಾವಣೆಯ ಸಂದರ್ಭಗಳ ಮುನ್ನ ಹಿಮಾಲಯದ ಆರಂಭದೆಸೆಯಲ್ಲಿ ಅದು ಸಮತಟ್ಟು ಪ್ರದೇಶವಾಗಿತ್ತು ಎಂದಾಗುತ್ತದೆ.[5] ಇದೆಲ್ಲ ಬದಲಾವಣೆಗೊಳ್ಳಲು ಲಕ್ಷ ಲಕ್ಷ ವರ್ಷಗಳ ಅವಧಿ ಹಿಡಿದಿದೆ. ಈ ಹಿನ್ನೆಲೆಯಲ್ಲಿ ಅಗಸ್ತ್ಯನ ಸಮುದ್ರಾಪೋಶನ ಕತೆ, ಲೋಪಾಮುದ್ರೆ–ಕಾವೇರಿಯನ್ನು ಮದುವೆಯಾದ ಕತೆ ಇತ್ಯಾದಿ ರೋಚಕ ಸಂಗತಿಗಳು ಅಗಸ್ತ್ಯನ ಹೆಸರಿನವರುಗಳುಳ್ಳ ಅಗಸ್ತ್ಯ ಪಂಥವಿದ್ದ ಬಗ್ಗೆ ಸೂಚನೆ ದೊರೆಯುತ್ತದೆ. ಭೂ ಬದಲಾವಣೆಗಳ ಮಾಹಿತಿ ಪೌರಾಣಿಕ ಕಥನ ವಿವರ ನೀಡುತ್ತದೆ.

ಲೋಪಾಮುದ್ರೆ ಹಾಗೂ ಕಾವೇರಿ ಎಂಬ ದ್ವಯ ಹೆಸರಿನ ಸ್ತ್ರೀಯನ್ನು ಜಲರೂಪದಲ್ಲಿ ನದಿದೇವತೆಯಂತೆ

---

* ಸಂ. ೨೯ (ಮಹಡಿ), ೨ನೇ ಕ್ರಾಸ್, ಶ್ರೀರಾಮನಗರ, ಮಹಾಲಕ್ಷ್ಮೀಪುರ, ಬೆಂಗಳೂರು ೫೬೦ ೦೮೬

1 ಎ. ಕ. ಸಂಪುಟ ೧ (ಪರಿಷ್ಕೃತ), ಕೊಡಗು ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ, ೧೯೭೨, ಮಡಿಕೇರಿ ೨, ಕ್ರಿ. ಶ. ೧೦೦೧

2 Manner ; *Kerala Culture*, 1942, pp. 80-81

3 A. C. Burnel ; *Elements of South Indian Palaeography*, Delhi, 1968, p. 47

4 ಡಾ॥ ಆರ್. ನಿಜಗುಣಪ್ಪ ; 'ಪ್ಲೇಟ್ ಟೆಕ್ಟಾನಿಕ್ಸ್ ಎಂದರೇನು ?', ಕನ್ನಡಪ್ರಭ, ೭-೧೧-೧೯೯೩

5 'ಹಿಮಾಲಯ ಸಮತಟ್ಟು ಪ್ರದೇಶವಾಗಿತ್ತೆ ?'-ಪ್ರೊ॥ ಕೆ. ಎಸ್. ವಲ್ಡಿಯಾ ಅವರ ಉಪನ್ಯಾಸದಿಂದ ಉದ್ಧೃತ ವರದಿ; ನೋಡಿ : ಕನ್ನಡಪ್ರಭ, ೨೨-೧೧-೧೯೯೩

ಕಂಡಿರುವಲ್ಲಿ ಕಾವೇರಿಯು ಮೊದಲಿಗೆ ಎರಡು ಕವಲುಗಳಾಗಿ ಹರಿಯುತ್ತಿದ್ದಂತಹ ಪೌರಾಣಿಕ ಸೂಚನೆ ಕಾಣುತ್ತದೆ. ತಮಿಳಿನ 'ಶಿಲಪ್ಪದಿಕಾರಂ' ಕೃತಿಯಲ್ಲಿ ಉಕ್ತವಾಗಿರುವ ಐತಿಹ್ಯದ ರೀತ್ಯಾ ಚೋಳದೊರೆ ಕಾಂತಮನ್‌ನ ರಾಜ್ಯ ಬರಪೀಡಿತವಾಗಿತ್ತು. ಕಾವೇರ ಮುನಿಯು ಸಂತಾನಪ್ರಾಪ್ತಿಗಾಗಿ ಪ್ರಾರ್ಥಿಸುತ್ತಿದ್ದ. ಆಗ ಲೋಪಾಮುದ್ರೆ–ಕಾವೇರಿ ಕನ್ನಿಕೆಯನ್ನು ಬ್ರಹ್ಮನಿಂದ ದತ್ತುಪುತ್ರಿಯಾಗಿ ಪಡೆಯಲು ದೇವವಾಣಿ ನುಡಿಯಿತಂತೆ ; ಈ ಕಾವೇರಿಯನ್ನು ಮದುವೆಯಾಗಿ ಜಲರೂಪದಲ್ಲಿ ಅಗಸ್ತ್ಯನು ಕಮಂಡಲುವಿನಲ್ಲಿ ಬಂಧಿಸಿರುವ ಸಮಯದಲ್ಲಿ, ಅದನ್ನು ಕಾಗೆಯೊಂದು ಉರುಳಿಸಿದಾಗ ಕಾಂತಮನ್‌ನ ರಾಜ್ಯದಲ್ಲಿ ಕಾವೇರಿ ಹರಿದು ಬರ ಇಂಗುತ್ತದೆ ಎಂದೂ ಆ ವಾಣಿ ನುಡಿಯಿತಂತೆ.[6] ಈ ಕತೆ ಸಾಂಕೇತಿಕವಾಗಿ ಕಾವೇರಿಯ ಚಿಮ್ಮುವಿಕೆ ಹಾಗೂ ಕೊಡಗಿನಿಂದ (ಬೆಟ್ಟದಿಂದ) ರಭಸವಾಗಿ ಹರಿದುಬರುವ ಸಂಗತಿಯನ್ನು ಸೂಚಿಸುವಂತಿದೆ. ಭೂ ವಿಜ್ಞಾನದ ರೀತ್ಯಾ ಇದು ಸಹಜವೇ ಸರಿ. ತಮಿಳುನಾಡಿನಲ್ಲಿ ಸಾಮಾನ್ಯವಾಗಿ ಆಗಸ್ಟ್ ತಿಂಗಳಲ್ಲಿ ನಡೆಯುವ '೧೮ನೇ ಉಕ್ಕುವಿಕೆ (Eighteenth increase ೧೮ನೇ ಭರತ) ಹಬ್ಬದಾಚರಣೆ[7] ಹಾಗೂ ಕೊಡಗಿನಲ್ಲಿ ಸಾಮಾನ್ಯವಾಗಿ ಅಕ್ಟೋಬರ್ ೧೬–೧೮ನೇ ದಿವಸದಲ್ಲಿ ಸಂಭವಿಸುವ ತುಲಾ ಸಂಕ್ರಮಣದ ತೀರ್ಥೋದ್ಭವವೂ ಒಂದು ರೀತಿಯ ಪೌರಾಣಿಕ ಸಂಬಂಧವನ್ನು ಸೂಚಿಸುತ್ತವೆ. ಜೊತೆಗೆ ಇತಿಹಾಸದ ಎಳೆಗಳನ್ನು ಪರಸ್ಪರ ನೇಯ್ದುಕೊಂಡಿರುವಂತಿದೆ. ಲಕ್ಷಾಂತರ ವರ್ಷಗಳ ಹಿಂದೆ ಭೂವೈಜ್ಞಾನಿಕ ಬದಲಾವಣೆಗಳಿಂದಾಗಿ ಕಾವೇರಿಯ ಹರಿವಿನ ಪಥದಲ್ಲಿಯೂ ಬದಲಾವಣೆಗಳಾಗಿವೆ. ಕನಿಷ್ಠ ಮೂರು ಸಾವಿರ ವರ್ಷಗಳ ಹಿಂದೆ ಆಕೆಗೊಂದು ಪೌರಾಣಿಕ ಮಹತ್ವ ತರುವ ಸಂದರ್ಭ ಒದಗಿತು ಎಂಬುದಂತು ಸ್ಪಷ್ಟ. ಅದಕ್ಕೆ ಮುನ್ನ ಆಕೆಗಿದ್ದ ಹೆಸರೇನೋ ತಿಳಿಯದು. ತಮಿಳುನಾಡು ಹಾಗೂ ಕರ್ನಾಟಕದ ಇತಿಹಾಸದಲ್ಲಿ ಚಲುವಾಗಿ ಆಕೆಯ ಹೆಸರು ಪವಿತ್ರವಾಗಿ ವರ್ಣಿತವಾಗಿದೆ.

ಸಂಗಮ್ ಯುಗದ ಚೋಳರು ಕ್ರಿ. ಶ. ೨ನೆಯ ಶತಮಾನದಲ್ಲಿ ಅಭಿವೃದ್ಧಿಗೊಂಡರು. ಆಗ ಕಾವೇರಿಯ ಸಾಗರ ಸಂಗಮದ ನೆಲೆಯ ಬಳಿ 'ಕಾವೇರಿ ಪೂಂಪಟ್ಟಣಂ' ಎಂಬ ರಾಜಧಾನಿಯನ್ನು ಕಟ್ಟಿ ಆಳಿದರು. ದಶಕುಮಾರ ಚರಿತವು ಸಿಬಿ ಜನಾಂಗದ ಇತಿಹಾಸವನ್ನು ಕಾವೇರಿ ತೀರದ ಚೋಳ ವಂಶದೊಡನೆ ಗುರುತಿಸುವುದುಂಟು. ಸಿಬಿಗಳನ್ನು ಮತ್ಸ್ಯ ದೇಶದವರೆನ್ನುವುದುಂಟು.[8] ಕೊಡಗಿಗೆ ಮತ್ಸ್ಯದೇಶವೆಂದೂ ಹೆಸರಿರುವ ಕಾರಣ ಗಂಗಾ ತೀರದಲ್ಲಿದ್ದ ಸಿಬಿ ಜನಾಂಗದ ಶಾಖೆಯೊಂದು ಕೊಡಗಿಗೆ ಬಂದಿರುವ ಸಾಧ್ಯತೆಯನ್ನು ಅದು ಸೂಚಿಸುವಂತಿದೆ. ಮಹಾಭಾರತದಲ್ಲಿಯೂ ಸಿಬಿ ದೇಶವನ್ನು ಗಂಗಾತೀರದಲ್ಲಿ ಗುರುತಿಸುವುದುಂಟು.[9] ಹೀಗಾಗಿ ಕಾವೇರಿ ಹಾಗೂ ಗಂಗೆಗೆ ಸ್ಕಾಂದಪುರಾಣದಲ್ಲಿ ನಂಟು ತರುವಲ್ಲಿ ಸಿಬಿಗಳು ಕಾರಣರೆಂದು ತೋರುತ್ತದೆ.

ಕರ್ನಾಟಕದ ಕ್ರಿ.ಶ. ೫೫೦ರ ಬಾದಾಮಿ ಚಾಲುಕ್ಯರ ಯುಳಂದೂರು ಶಾಸನದಲ್ಲಿ ಸಾಮ್ರಾಜ್ಯ ವರ್ಣನೆಯಲ್ಲಿ 'ಕಾವೇರಿ ಕಪುನೀ ಶ್ರೀನದೀಭರಲಂಕೃತಸ್ಯ' ಎಂದಿದೆ. ಅಂದರೆ ಕಾವೇರಿ ಕಪುನೀ ಶ್ರೀನದಿಗಳಿಂದ ಚಾಲುಕ್ಯ ಸಾಮ್ರಾಜ್ಯವು ಅಲಂಕೃತಗೊಂಡಿದೆ ಎಂಬುದಾಗಿದೆ. ಕ್ರಿ. ಶ. ೬೭೪ರ ಚಾಲುಕ್ಯರ ವಿಕ್ರಮಾದಿತ್ಯನ ಸವಣೂರ ಶಾಸನವು ಕಾವೇರಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೦೧ರ ಮಡಿಕೇರಿ ಶಾಸನದಲ್ಲಿ ಪ್ರಪ್ರಥಮವಾಗಿ 'ಕಾವೇರಿಯ ಉಲ್ಲೇಖ ಕಾಣಬರುತ್ತದೆ. 'ಮೊದಲ್ಕಾವೇರಿಯಂ ಮಿನ್ದು ರಾಮೇಶ್ವರ ಮರ್ಚಿ' ಎಂದಿದೆ. ಅಂದರೆ ತಲಕಾವೇರಿಗೆ 'ಮೊದಲ್ ಕಾವೇರಿ' ಎಂಬ ಹೆಸರು ಆಗ ಪ್ರಚಲಿತಗೊಂಡಿತ್ತು ಎನ್ನಬಹುದು. ಸ್ಕಾಂದಪುರಾಣದ ಕತೆ 'ಶಿಲಪ್ಪದಿಕಾರಂ'ನ ಹಿನ್ನೆಲೆಯಲ್ಲಿ ಆ ಕಾಲಕ್ಕೆ ಪ್ರಚಲಿತವಿದ್ದಿರಬೇಕು ಎನ್ನಿಸುತ್ತದೆ.

ಕಾವೇರಿ ಪುರಾಣವು ಮುಸ್ಲಿಮರು ಈ ದೇಶಕ್ಕೆ ಬಂದು ಯುದ್ಧ ಮಾಡಿದ ನಂತರ ಅಂದರೆ ಮುನ್ನೂರು ವರ್ಷಗಳ ಹಿಂದೆ ಹುಟ್ಟಿತು ಎಂದು ೧೯ನೇ ಶತಮಾನದ

---

6 K. Nagarajan ; *Cauvery from Source to Sea*, New Delhi, 1975, p. 19
7 *Ibid*
8–9 Paramananda Gupta ; *Geography from Ancient Indian Coins*, New Delhi, 1989, p 44

ರಿಕ್ಬರ್ ಹೇಳುತ್ತಾನೆ–ಆ ಪುರಾಣದಲ್ಲಿ ಕದಂಬ ಚಂದ್ರ ವರ್ಮನು ಮ್ಲೇಚ್ಛರನ್ನು ಸೋಲಿಸಿ ಓಡಿಸಿದ ಎಂಬ ಅಸಂಬದ್ಧ, ಅತಾರ್ಕಿಕ ವಿಷಯವಿರುವುದೇ ಅದಕ್ಕೆ ಕಾರಣವಂತೆ. ಎಂ. ಎನ್. ಶ್ರೀನಿವಾಸ್ ಅವರೂ ಇದಕ್ಕೆ ದನಿಗೂಡಿಸಿದಂತಿದೆ.[10] ಆದರೆ ಸಂಗಂ ಸಾಹಿತ್ಯದಲ್ಲಿ 'ಕವೇರ ಪುತ್ರಿ ಕಾವೇರಿ' ಎಂದಿದೆ. ೧೧ನೆಯ ಶತಮಾನದ ಮಾಲಂಬಿ ಶಾಸನದಲ್ಲಿ 'ಕವೇರ ಕನ್ಯಕಾ ಸಬೀಯಮಾನ್' ಎಂದಿದೆ[11] ಅಂದರೆ ೧೧ನೆಯ ಶತಮಾನದಲ್ಲಿಯೆ ಕೊಡಗಿನಲ್ಲಿ ಕವೇರ ಪುತ್ರಿಯ ಕತೆ ಸ್ಕಾಂದ ಪುರಾಣದಲ್ಲಿದ್ದುದು ತಿಳಿದಿತ್ತು ಎಂದಾಗುತ್ತದೆ. ಕ್ರಿ. ಶ. ೧೯೩೮ರ ಅಭಿನವ ಮಂಗರಾಜನ ನಿಘಂಟಿನಲ್ಲಿ 'ಮ್ಲೇಚ್ಛರೆನೆ ಕೊಡವ ಕೊಡಗರು ಮೃಗಲಬ್ಧಕಂ ವ್ಯಾಧನಕ್ಕುಂ' ಎನ್ನುವ ಸಾಲಿನ 'ಮ್ಲೇಚ್ಛ' ಶಬ್ದಕ್ಕೆ ಹೊರಗಿನಿಂದ ಬಂದವರು, ಎಂಬ ಅರ್ಥದ ಸೂಚನೆ ಇದೆ. ಹೀಗಿರುವಲ್ಲಿ ಮ್ಲೇಚ್ಛ' ಎಂಬ ಶಬ್ದಕ್ಕೆ 'ಮುಸ್ಲಿಮರು' ಎಂದು ತಪ್ಪಾಗಿ ಗ್ರಹಿಸಿ ಕಾವೇರಿ ಪುರಾಣಕ್ಕೆ ರಿಕ್ಬರನು ಅನ್ವಯಿಸಿಕೊಂಡದ್ದು ತೀರ ಅಸೂಕ್ತವಾಗಿದೆ. ಮೂಲ ನಿವಾಸಿ ಕೊಡಗಿನವರಲ್ಲಿ ಹೊರಗಿನಿಂದ ಬಂದ ಕೊಡವ ಜನಾಂಗದ ಭಾಗವೂ ಇದೆ ಎಂಬ ಸೂಚನೆ ಆ ನಿಘಂಟಿನಲ್ಲಿದೆ. ಕದಂಬ ಚಂದ್ರವರ್ಮನ ವಂಶೀಕರೆಂದು ಹೇಳಿಕೊಳ್ಳುವ ಕೊಡವರು ಹೊರಗಿನಿಂದ ಬಂದ ಬುಡಕಟ್ಟಿನ ಜನರನ್ನು ಸೋಲಿಸಿದ ಸಂಗತಿಯೊಂದು ಕಾವೇರಿ ಪುರಾಣದಲ್ಲಿ 'ಮ್ಲೇಚ್ಛ'ವಾಗಿ ಪರ್ಯಾಯ ಸಂಕೇತವನ್ನು ಹೊಂದಿರುವಂತಿದೆ. ೧೧ನೆಯ ಶತಮಾನದಲ್ಲಿಯೂ ಕೊಡಗು ಕೇರಳದ ವೈನಾಡು ಸಹಿತವಾಗಿ ತೆರಕಣಾಂಬಿವರೆವಿಗೂ ವಿಸ್ತಾರ ಪಡೆದಿತ್ತು. ಕ್ರಿ. ಶ. ೧೦೭೯ರ ಹೆಗ್ಗಡದೇವನ ಕೋಟೆ ತಾಲೂಕು ಕಿತ್ತೂರು ಶಾಸನದಲ್ಲಿ[12] 'ಕದಂಬ ಕಂಠೀರವ, ಬನವಾಸಿ ವಿಷಯಾಧೀಶ್ವರಂ ಮಹೇಶ್ವರ ಭಕ್ತಂ, ಶ್ರೀಮನ್ಮಹಾಮಂಡಳೇಶ್ವರ....ಬೀರ ಬಯಲ್ನಾಡ ನಾಡೆ ಈಕ ರವಿ(ವ)ರ್ಮ್ಮಂ ಬಯಲ್ನಾಡಯ್ದು ಮುನ್ನೂಱು ಮನೇಕ ರಾಜ್ಯಗೈಯುತ್ತಿರೆ..' ಎಂಬಲ್ಲಿಯ ಶಾಸನೋಕ್ತ ರವಿವರ್ಮ ಕದಂಬ ವಂಶಜನೆನ್ನುವ ಹಾನುಗಲ್ಲು ಕದಂಬ ವಂಶದವನೆನಿಸುತ್ತದೆ. ಅಲ್ಲದೆ ಕೊಡಗಿನ ಕ್ರಿ.ಶ.೧೯೦೫ರ ಯಡೂರು ಶಾಸನದ ದುದ್ದರಸನೂ ಹಾನುಗಲ್ಲು ಕದಂಬವಂಶದವನು.[13] ಅಂದರೆ ಈ ಕದಂಬ ವಂಶವು ತೆರಕಣಾಂಬಿಯಿಂದ ಕೊಡಗಿನ ಉತ್ತರ ಭಾಗದವರೆವಿಗೂ ಪ್ರಭಾವಶಾಲಿಯಾಗಿದ್ದು, ಬಹುಶಃ ಆ ಕಾಲಕ್ಕೆ 'ಕದಂಬ ಚಂದ್ರವರ್ಮನ ವಂಶಜ' ಕತೆಯು ಸ್ಪಷ್ಟವಾಗಿ ಸ್ವರೂಪ ಪಡೆದಿರುವಂತಿದೆ. ಹಾಗೂ ಕೇರಳದ ಕಡೆಯಿಂದ ಆ ಕಾಲಕ್ಕೆ ಕೊಡಗಿನ ಒಳಭಾಗಕ್ಕೆ ಬುಡಕಟ್ಟುಗಳು ವಲಸೆ ಬಂದಾಗ ಕಾದಾಟವು ದೇಶೀಯ ಮೂಲನಿವಾಸಿ ದಲಿತ ವರ್ಗದೊಡನೆಯೂ ನಡೆದಿರಬೇಕೆನ್ನಿಸುತ್ತದೆ. ಕಾವೇರಿ ಪುರಾಣದ 'ಮ್ಲೇಚ್ಛ'ರನ್ನು ಸೋಲಿಸಿದ ಸಂಗತಿ ಈ ವಲಸೆಗಾರ ಬುಡಕಟ್ಟುಗಳಿಗೆ ಅನ್ವಯವಾಗಿರುವಂತಿದೆ.

ಕೊಡಗಿನ ದೇಶೀಯ ಮೂಲನಿವಾಸಿ ದಲಿತವರ್ಗವಾದ ಕೆಂಬಟ್ಟಿ ಜನಾಂಗದಲ್ಲಿ ಕಾವೇರಿ ಕುರಿತ ಹಾಡಿದೆ. ಅದರ ರೀತ್ಯಾ ಕವೇರ ಪುತ್ರಿ ಕಾವೇರಿಯು ಕೈಹಿಡಿಯಲು ಅಗಸ್ತ್ಯ ಹಾಗೂ ಕಶ್ಯಪ ಮುನಿಯ ನಡುವೆ ಸ್ಪರ್ಧೆ ಬೀಳುತ್ತದೆ. ಕೊನೆಗೆ ಅಗಸ್ತ್ಯನು ಗೆದ್ದು 'ಹೂ ಮದುವೆ' (ಶುಭಕ್ಕೆ ಬಿಳಿ ಹೂ ಬಂದಾಗ ಮಾಡಿಕೊಳ್ಳುವ ಸರಳ ವಿವಾಹ) ಮಾಡಿಕೊಳ್ಳುತ್ತಾನೆ.[14] ಕಾವೇರಿ ಪುರಾಣದಲ್ಲಿಲ್ಲದ ಈ ಕತೆ ಪರಿಶಿಷ್ಟರ ಪದದಲ್ಲಿ ಮೂಲಕತೆಯಾಗಿ ಸ್ಥಾಯಿಗೊಂಡಿದ್ದಂತೆ ತೋರುತ್ತದೆ. ಅಗಸ್ತ್ಯನಿಗೂ

---

10 M. N. Srinivas ; *Religion and Society Among the Coorgs of South India*, Bombay, 1989 Edn. p. 243

11 ಎ. ಕ ೧. (ಪರಿಷ್ಕೃತ) ಅದೇ, ಮಾಲಂಬಿ ೬೫

12 ಎ. ಕ. ಸಂಪುಟ III (ಪರಿಷ್ಕೃತ) ಮೈಸೂರು ಜಿಲ್ಲೆ, ೧೯೭೪, ಹೆಗ್ಗಡದೇವನಕೋಟೆ–ಕಿತ್ತೂರು ೧೨೩ ; (ಈ ಶಾಸನದ ಬಗ್ಗೆ ಡಾ॥ ದೇವರಕೊಂಡಾರೆಡ್ಡಿ ನನ್ನ ಗಮನ ಸೆಳೆದರು)

13 ಎ.ಕ. ಸಂ. ೧ (ಪರಿಷ್ಕೃತ), ಅದೇ, ಯಡೂರು ೬೨ ಮತ್ತು ಎಂ.ಜಿ. ನಾಗರಾಜ್ : "ಕೊಡಗಿನ ಕೊಲೆಕಲ್ಲುಗಳು", 'ಹರತಿಬಿ' (ಸಂ : ಲಕ್ಷ್ಮಣ್ ತೆಲಗಾವಿ), ೧೯೮೭, ಪು. ೭೧೬

14 ಎಂ. ಜಿ. ನಾಗರಾಜ್ : 'ಕೆಂಬಟ್ಟಿ ಸಂಸ್ಕೃತಿ', ಕರ್ನಾಟಕ ಸಾಹಿತ್ಯ, ಅಕಾದೆಮಿ, ಬೆಂಗಳೂರು, ೧೯೯೩, ಪು. ೧೪೧, ೩೬೪

ದಲಿತವರ್ಗಕ್ಕೂ ಹೇಗೋ ಒಂದು ಪ್ರಾಚೀನ ಸಂಬಂಧ ವಿರುವ ಸಂಗತಿ ಇದಾಗಿದೆ. ಹಲ್ಮಿಡಿಯ ಐದುಪಾಲನೆ ಕೊಳವಾಡಿ ಹರಿಜನರ ಆರಾಧ್ಯ ದೇವತೆ ಹಿರಡೆಲಿಂಗನು ಅಗಸ್ತ್ಯನ ಅವತಾರವೆಂದು ಹಬ್ಬದಾಚರಣೆ ನಡೆಯು ವುದೂ,[15] ಇಲ್ಲಿ ಅಂತೇ ಗಮನಾರ್ಹವಾಗುತ್ತದೆ.

ಇಂತೆಲ್ಲ ಹಿನ್ನೆಲೆಯ ಕಾವೇರಿ 'ಮೊದಲ್ ಕಾವೇರಿ' ಅಥವಾ 'ತಲಕಾವೇರಿ'ಯಿಂದ ಚಿಮ್ಮುತ್ತ ಇಂದು ಸು. ೭೬೫ ಕಿ. ಮೀ (೪೭೫ ಮೈಲಿ) ದೂರ ಹರಿದು ಪೂರ್ವದ ಬಂಗಾಳಕೊಲ್ಲಿಗೆ ಸೇರುತ್ತಾಳೆ. ಕೊಡಗು ಬಿಟ್ಟಮೇಲೆ ಹಾಸನ, ಮೈಸೂರು, ಮಂಡ್ಯ ಹಾಗೂ ಬೆಂಗಳೂರು ಜಿಲ್ಲೆಗಳಲ್ಲಿ ಹರಿದು ತಮಿಳುನಾಡಿಗೆ ಸಾಗುತ್ತಾಳೆ. ಅಲ್ಲಿ ಧರ್ಮಪುರಿ, ಸೇಲಂ ಮತ್ತು ತಿರುಚಿನಾಪಳ್ಳಿ ಜಿಲ್ಲೆಗಳಲ್ಲಿ ಹರಿಯುತ್ತಾಳೆ. ಮುಕ್ಕೊಂ ಎಂಬಲ್ಲಿ ಕೊಲ್ಲಡಂ (ಉತ್ತರ ಭಾಗ) ಮತ್ತು ಕಾವೇರಿ (ದಕ್ಷಿಣ ಭಾಗ) ಎಂದು ಕವಲು ಗಳಾಗಿ ಶ್ರೀರಂಗವನ್ನು ಬಳಸಿ ಮತ್ತೆ ಕೂಡುತ್ತಾಳೆ. ನಂತರ ೧೨ ಊರುಗಳನ್ನು ದಾಟಿ ಕಾವೇರಿ ಪೂಂ ಪಟ್ಟಣದ ಬಳಿ ಬಂಗಾಳಕೊಲ್ಲಿಯನ್ನು ಸೇರುತ್ತಾಳೆ. ಈ ಈ ಪೂಂಪಟ್ಟಣದ ಹೆಸರು; ಹೂಪಟ್ಟಣ ಎಂಬ ಅರ್ಥ ಬರಬಹುದಾದ ಸಂದರ್ಭ, ಅಗಸ್ತ್ಯನ ಸಮುದ್ರಾ ಪೋಶನ ಕತೆ ಇವೆಲ್ಲ ಬಹುಶಃ ಕಾವೇರಿ–ಅಗಸ್ತ್ಯರ ನಡುವಣ 'ಹೂ ಮದುವೆ'ಯ ಸಂಕೇತವಾಗಿರುವಂತಿದೆ.

ಕಾವೇರಿ ಜಲಾಯನ ಪ್ರದೇಶವು ಕರ್ನಾಟಕದಲ್ಲಿ ೨೬,೨೪೦ ಚ. ಕಿ. ಮೀ, ಕೇರಳದಲ್ಲಿ ೨೯೩೦ ಚ.ಕಿ.ಮೀ, ತಮಿಳುನಾಡಿನಲ್ಲಿ ೪೮,೭೭೦ ಚ. ಕಿ. ಮೀ. ನಷ್ಟು ಇದೆ. ಕಾವೇರಿಯ ಆರಂಭಿಕ ಪಾತ್ರ (ಸಮುದ್ರ ಮಟ್ಟಕ್ಕೆ) ಸುಮಾರು ೧೩೦೦ ಮೀ. ಎತ್ತರದಲ್ಲಿದೆ. ತಮಿಳುನಾಡು ಭೂಪ್ರದೇಶದಲ್ಲಿ ೧೦೦–೨೦೦ ಮೀ. ಎತ್ತರದಲ್ಲಿ ಆಕೆಯ ಹರಿವು ಇದೆ. ಕರ್ನಾಟಕದಲ್ಲಿ ಶಿವನಸಮುದ್ರದ ವರೆಗೆ ಏರು ತಗ್ಗು, ತಿರುವು ಮುರುವುಗಳಲ್ಲಿ ಯೌವ್ವನದ ರಭಸದಿಂದ ಕಾವೇರಿ ಸಾಗುತ್ತಾಳೆ. ನಂತರ ಎತ್ತರ ಕುಗ್ಗುತ್ತ ಬಂದು ತಮಿಳುನಾಡಿನ ಮೆಟ್ಟೂರಿನಿಂದ ಮುಂದೆ ನೇರವಾಗಿ ಭವಾನಿ ನದಿಯ ಪಾತ್ರವನ್ನು ಪಶ್ಚಿಮದಿಂದ ಕೂಡುತ್ತಾಳೆ. ಆದರೆ ರಭಸ ಮತ್ತು ಸಮೆತದ ಶಕ್ತಿ ಕುಗ್ಗಿ ವಯಸ್ಸಾದ ಕಾವೇರಿಯಂತೆ ಸಾಗಿ ಮುಕ್ಕೊಂ ಎಂಬಲ್ಲಿ ಎರಡು ಕವಲಾಗುತ್ತಾಳೆ. ಈ ಕವಲುಗಳನ್ನು ಕೆಳಕಾವೇರಿ, ಮೇಲುಕಾವೇರಿ ಎಂದು ವಿಂಗಡಿಸಲಾಗಿದೆ. ಆದರೆ ಕೇರಳದ ಫಾಲ್ಘಾಟ್ ಒಂದು ಕಾಲದ ಕಾವೇರಿ ಗೆರೆಯ ಎರಡು ಬಂಡೆಗಳ ನಡುವಣ ನೆಲೆಯಾಗಿದ್ದಂತೆ ತೋರುತ್ತದೆ. ಇದು ಪಶ್ಚಿಮ ಘಟ್ಟ ಗಳ ವಾರಿನ ಮುಂಚೆ ಫಾಲ್ಘಾಟ್ ಬಳಿ ಪ್ರವಹಿಸುತ್ತಿದ್ದ ಒಂದು ನದಿ ಪಶ್ಚಿಮ ಮುಖಿಯಾಗಿದ್ದಂತೆ ಸೂಚಿಸು ವಂತಿದೆ. ಪಶ್ಚಿಮಾಭಿಮುಖವಾಗಿ ಹರಿದು ಅರಬ್ಬಿ ಸಮುದ್ರ ಸೇರುವ ಭರತಪುಳವು ಬಹುಶಃ ಮೇಲಿನ ಪಶ್ಚಿಮ ಮುಖದ ನದಿಯ ಅವಶೇಷವಾಗಿರುವಂತಿದೆ.

ಫಾಲ್ಘಾಟ್ ಪ್ರದೇಶವು ಸಮುದ್ರಮಟ್ಟಕ್ಕೆ ಕೇವಲ ೭೦೦ ಮೀ. ಎತ್ತರ, ೧೩ ಕಿ. ಮೀ. ಅಗಲವನ್ನು ಹೊಂದಿದೆ. ಭರತಪುಳವು ನದಿಯ ಇಬ್ಬದಿಯ ತೀರ ಪ್ರದೇಶದ ಮಣ್ಣು ಕಪ್ಪು ಜೇಡಿಮಣ್ಣಿನದು, ಹಾಗೂ ಜಿಪ್ಸಮ್‌ನದ್ದು. ಈ ಅಂಶಗಳು ಮೊದಲಿಗೆ ಈ ಭಾಗ ದಲ್ಲಿ ಒಂದು ದೊಡ್ಡ ನದಿ ಇತ್ತು ಎಂಬ ವಾದವನ್ನು ಸಮರ್ಥಿಸುತ್ತದೆ.[16] ಭೂವಿಜ್ಞಾನಿಗಳು ಹೇಳುವ ಈ ಭೂ–ನದಿ ಇತಿಹಾಸದಿಂದ, ಒಟ್ಟಾರೆ ಕಾವೇರಿ ಒಂದು ಕಾಲಕ್ಕೆ ಎರಡು ಕವಲುಗಳಾಗಿ ಬಹುದೂರ ಹರಿಯು ತ್ತಿತ್ತು ; ಒಂದು ಕವಲು ಪೂರ್ವದಿಸೆಗೆ ಸಾಗುತ್ತಿತ್ತು. ಇನ್ನೊಂದು ಕವಲು ಪಶ್ಚಿಮದಿಸೆಗೆ ಸಾಗುತ್ತಿತ್ತು. ತಮಿಳುನಾಡು–ಕೇರಳ ಪ್ರದೇಶದಲ್ಲಿ ಈ ಬೇರ್ಪಡೆ ಆಗಿತ್ತು ಎಂಬ ಸೂಚನೆ ದೊರೆಯುತ್ತದೆ. ಈ ಸಂಗತಿ ಸುಮಾರು ೧೦ ಲಕ್ಷ ವರ್ಷಗಳಿಗೂ ಹಿಂದಿನದು ; ಹಿಮಾಲಯ ಹಾಗೂ ಅರಬ್ಬಿಸಮುದ್ರ ಇಲ್ಲದಿದ್ದ ಕಾಲದ್ದು. ಆಗ ಕಾವೇರಿಯ ಪಶ್ಚಿಮದ ಕವಲು ಆಫ್ರಿಕ ಮತ್ತು ಭಾರತದ ನಡುವಣ ಭೂಸಂಪರ್ಕದ ಮೂಲಕ ಮಡಗಾಸ್ಕರ್‌ವರೆಗೂ ಸಾಗುತ್ತಿತ್ತು ಎಂಬ

15 ಅದೇ, ಪು. ೧೩

16 ಬಿ. ಪಿ. ರಾಧಾಕೃಷ್ಣ : 'ಕಾವೇರಿ ಎರಡು ನದಿಯೇ ?', ಕನ್ನಡಪ್ರಭ, ಬೆಂಗಳೂರು, ೨೬-೭-೯೨, ೧-೯-೯೨ ಮತ್ತು ೨೩-೪-೯೨ರಂದು ಬೆಂಗಳೂರಿನ ಇನ್ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಂಸ್ಥೆಯಲ್ಲಿ ಶ್ರೀಯುತರು ಮಾಡಿದ ಉಪನ್ಯಾಸದ ವಿಷಯ

ಅಭಿಪ್ರಾಯವೂ ಭೂವಿಜ್ಞಾನಿಗಳಲ್ಲಿದೆ. ಭಾರತವೊಂದು ಪರ್ಯಾಯ ದ್ವೀಪವಾಗಿತ್ತು. ಮಧ್ಯಭಾರತ, ದಕ್ಷಿಣ ಭಾರತ ಹಾಗೂ ಆಫ್ರಿಕಗಳ ನಡುವೆ ಭೂಸಂಪರ್ಕವಿತ್ತು. ಇಂಡೋ ಮಡ್‌ಗಾಸ್ಕರ್ ಭೂಖಂಡದ ಈ ಸಂಪರ್ಕ ನೀರಿನಲ್ಲಿ ಮುಳುಗಿದಾಗ ಉತ್ತರ ಭಾರತದ ಹಿಮಾಲಯ, ಟಿಬೆಟ್ ಹಾಗೂ ಚೈನಾದ ಬಹಳಷ್ಟು ಭೂಭಾಗ ಮತ್ತು ಅರಬ್ಬಿಸಮುದ್ರವು ಉದಿಸಿದುವು ಎಂದೂ ಅವರು ಹೇಳುತ್ತಾರೆ.[17] ಇದಲ್ಲದೆ ಆಫ್ರಿಕನ್ ಹಾಗೂ ದ್ರಾವಿಡ ಭಾಷಾಪದ ಶಬ್ದಗಳಲ್ಲಿ ಎಷ್ಟೋ ಕಡೆ ಸಾಮ್ಯವಿದೆ. ರಿಮೂರಿಯನ್ ಸಂಸ್ಕೃತಿಯ ಪಳೆಯುಳಿಕೆಗಳಾಗಿ ಉಳಿದಿರುವ ಕೇರಳದ ಚೋಳನಾಯಿಗ, ಬಿಹಾರದ ಮುಂಡಾ ಆದಿವಾಸಿಗಳು, ದಕ್ಷಿಣ ಕನ್ನಡದ ಕೊರಗರು ಇವರುಗಳ ಆಚಾರಗಳು ದ್ರಾವಿಡ ಸಂತತಿಯ ಪರಾಕಾಷ್ಠೆಯ ಸಂದರ್ಭಗಳಾಗಿವೆ. ಇದೆಲ್ಲ ಭಾರತ, ಆಫ್ರಿಕಾ, ಆಸ್ಟ್ರೇಲಿಯ ಒಂದೇ ಭೂಖಂಡವಾಗಿತ್ತು ಎಂಬುದನ್ನು ಪುಷ್ಟೀಕರಿಸುತ್ತವೆ[18] ಎಂಬ ಅಭಿಪ್ರಾಯ ಭಾಷಾ ಇತಿಹಾಸ ವಿಜ್ಞಾನಿಗಳದಾಗಿದೆ. ಇದಕ್ಕೆಲ್ಲ ಅರಬ್ಬಿಸಮುದ್ರದ ತಳದಲ್ಲಿ ನೂತನ ಪರ್ವತವಿರುವುದನ್ನು, ಕೊಚ್ಚಿಯಿಂದ ನೈಋತ್ಯ ದಿಕ್ಕಿನಲ್ಲಿ ಸುಮಾರು ೫೦೦ ಕಿ. ಮೀ. ದೂರದಲ್ಲಿನ ಸಮುದ್ರಗರ್ಭದಲ್ಲಿ ೨೪೬೪ ಮೀಟರ್ ಎತ್ತರದ 'ಸಾಗರ ಕನ್ಯಾಸಮುದ್ರ ಪರ್ವತ'ವನ್ನು ಸಾಗರಗರ್ಭ ಪತ್ತೆ ಮಾಡಿರುವುದು,[19] ಪೋಷಣೆ ದೊರಕಿಸುವಂತಿದೆ. ಅಂದರೆ ಈ ಪರ್ವತ ಹಾಗೂ ಭೂಸಂಪರ್ಕವು ಮುಳುಗಿದ ಸಮಯದಲ್ಲಿ ಕೊಡಗಿನ ಪಶ್ಚಿಮ ಘಟ್ಟಗಳ ಏರೂ ಹೆಚ್ಚಿತು. ಕಾವೇರಿ ದಕ್ಷಿಣ ಭಾರತದ ಎರಡೂ ಬದಿಯನ್ನು ದಾಟಿಯೂ ಭೂಪ್ರದೇಶದಲ್ಲಿ ಹರಿಯುತ್ತಿತ್ತು ಎಂದಾಗುತ್ತದೆ. ಆದರೆ ಕೋಟಿ ಕೋಟಿ ವರ್ಷಗಳಿಂದ ನಡೆಯುತ್ತ ಬಂದ ಬದಲಾವಣೆ ಸುಮಾರು ೧೦ ಲಕ್ಷ ವರುಷಗಳ ಹಿಂದೆ ಕಾವೇರಿಯ ಮಟ್ಟಿಗೆ ಒಂದು ಸ್ಪಷ್ಟ ಖಚಿತ ಬದಲಾವಣೆಯ ಸ್ವರೂಪವನ್ನು ತಂದುಕೊಟ್ಟಿತು ಎನ್ನಬಹುದು. ಭೂಸಂಪರ್ಕದ ವಾದಕ್ಕೆ ಪೋಷಕವಾಗಿ ಆಫ್ರಿಕೆಯಲ್ಲಿ, ಕರ್ನಾಟಕದಲ್ಲಿ ೧೦ ಲಕ್ಷ ವರ್ಷಗಳ ಹಿಂದಿನ ಮಾನವನ ತಲೆಬುರುಡೆಗಳು ಲಭ್ಯವಾಗಿರುವುದನ್ನು ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಏಳುವ ಪ್ರಶ್ನೆಗಳೆಂದರೆ i) ಪಶ್ಚಿಮಮುಖಿ ಬೃಹತ್ ನದಿಯೊಂದರ ಅವಶೇಷವಾಗಿ ಕೇರಳದಲ್ಲಿ ಹರಿವ ಭರತಪುಳುವಿನ ಉಗಮ ಕೇರಳದಲ್ಲಿಯೆ, ಕೊಡಗಿನಲ್ಲಿಯೇ ? ii) ಕಾವೇರಿಯ ಒಂದು ಕಾಲದ ಕವಲಾದ 'ಕೆಳಕಾವೇರಿ'ಯು ಕೊಡಗಿನಲ್ಲಿದ್ದು, ಅದರ ಪಥವನ್ನು ಆಕ್ರಮಿಸಿದ ನದಿ ಭರತಪುಳವು ಎಂದಾದರೆ, ಕೊಡಗಿನ 'ಬರಪೊಳೆಯೆ', ಕೇರಳದ ಭರತ್‌ಪುಳವು ಆಗಿರಬಹುದೆ? ಇಂತೆಲ್ಲಾ ಪ್ರಾಚೀನತೆಯ ಹಿನ್ನೆಲೆಯ ದಕ್ಷಿಣ ಭಾರತದ ಕಾವೇರಿ, ಉತ್ತರ ಭಾರತದ ಗಂಗೆಗಿಂತ ಪ್ರಾಚೀನಳಲ್ಲವೆ? ಎಂಬುದಾಗಿವೆ.

ಕೊಡಗಿನ ಪಶ್ಚಿಮ ಗಡಿಯ ಬಹಳಷ್ಟು ಭಾಗವು ಸಮುದ್ರತೀರದಿಂದ ಸುಮಾರು ೨೦–೩೦ ಮೈಲಿ ದೂರದಲ್ಲಿದೆ. ಕೊಡಗಿನಲ್ಲಿ ಹರಿವ ನದಿಗಳು ಸತತ ಹರಿವ ನದಿಗಳೇ ವಿನಾ ವಿಶಾಲವಾದ ನದಿಗಳಲ್ಲ. ಹೆಚ್ಚಿನ ಹೊಳೆಗಳು ಪೂರ್ವಕ್ಕೆ ಹರಿಯುತ್ತವೆ. ಅವುಗಳಲ್ಲಿ ಪಶ್ಚಿಮಘಟ್ಟ, ನಾಡಿನ ನಡುವಿನ ಬೆಟ್ಟಗುಡ್ಡ ಕಣಿವೆಗಳಿಂದ ಬರುವ ಹನ್ನೆರಡು ಹೊಳೆಗಳು ಇಂದಿಗೂ ಪೂರ್ವಮುಖಿಯಾಗಿ ಹರಿಯುತ್ತಿರುವ ಕಾವೇರಿಯ ಕವಲಿಗೆ ಸೇರುವಲ್ಲಿ ಬಹಳಷ್ಟು ಪ್ರಮಾಣದಲ್ಲಿ ನೀರನ್ನು ತುಂಬಿಸುತ್ತವೆ. ಜಿಯೋಲಾಜಿಕಲ್ ಅವಧಿಯಲ್ಲಿ ಬಹುಶಃ ಈ ಪೂರ್ವಮುಖಿ ಕವಲಿಗಿಂತ ಕಾವೇರಿಯ ಪಶ್ಚಿಮಮುಖಿ ಕವಲು ವಿಶಾಲವಾಗಿದ್ದಂತೆ ತೋರುತ್ತದೆ.

ಇಂದು ಪಶ್ಚಿಮಕ್ಕೆ ಹರಿವ ಮುಖ್ಯ ಹೊಳೆ ಬರಪೊಳೆಯು ಪ್ರಾಚೀನ ಕಾಲದಲ್ಲಿ ಪಶ್ಚಿಮಘಟ್ಟಗಳ ಏರು ಹೆಚ್ಚಾಗುವ ಮುನ್ನ ಪೂರ್ವಕ್ಕೆ ಹರಿಯುತ್ತಿದ್ದು ಕಾವೇರಿ ಕವಲನ್ನು ಸೇರುತ್ತಿದ್ದಿರಬಹುದು ಎಂಬ ಅಭಿಪ್ರಾಯವೂ

---

17 S. N. Chakravarthy ; Hand Book to the Indian Pre-historp Antiquities, Prince of Wales Museum of Western India, Bombay, 1950, p. 15

18 ದ್ರಾವಿಡ ಭಾಷೆಗೆ ವಿಶ್ವವ್ಯಾಪಿ ಸಂಬಂಧ-ಡಾ॥ ವಿಲಿಯಂ ಮಾಡ್ತಾ ಅವರ ಪ್ರತಿಪಾದನೆ, ಕನ್ನಡಪ್ರಭ, ೧೦–೧–೯೫

19 'ಅರಬ್ಬಿಸಮುದ್ರದಲ್ಲೊಂದು ಪರ್ವತ' ಕನ್ನಡಪ್ರಭ, ಜನವರಿ ೧೯೯೪

ಇದೆ.[20] ಜೊತೆಗೆ ಅರವತೊಕ್ಕಲ್ ಗ್ರಾಮದ ಬಳಿ ಹುಟ್ಟುವ ಮಹಾಂದೋಡು ಬೆಟ್ಟಿಯುನ ನಾಡಿನ ಅನೇಕ ತೋಡುಗಳನ್ನು ಕೂಡಿಕೊಂಡು ಪ್ರಾಚೀನದಲ್ಲಿ 'ಮಾನಂತೋಡಿ'ಯ ಮೂಲಕ ದಕ್ಷಿಣಕ್ಕೆ ಸಾಗಿ ಕೇರಳದ ಫಾಲ್ಘಾಟ್‌ವರೆಗೆ ಸಾಗಿ ನಂತರ ಪಶ್ಚಿಮಕ್ಕೆ (ಕೇರಳದ ನೈಋತ್ಯ ಭಾಗ) ತಿರುಗುತಿದ್ದಂತೆ ಭಾಸವಾಗುತ್ತದೆ. ಮಾನಂತೋಡಿ ಪ್ರದೇಶದ ಎತ್ತರವೂ ಪಶ್ಚಿಮಘಟ್ಟಗಳ ಏರು ಹೆಚ್ಚಿದಾಗ ಹೆಚ್ಚಿರಬೇಕು. 'ಮಹಾಂತೋಡು'ವಿನ ಇಂದಿನ ರೂಪ 'ಮಾನಂತೋಡಿ' ಆಗಿದೆ. ಮತ್ತೆ ಕೊಡಗು–ಕೇರಳ ಗಡಿಯ ಮಾಕುಟ್ಟದ ಬಳಿ ಹಾದು ಹೋಗುವ ಇಂದಿನ ಬರಪೊಳೆಯು ಕೇರಳದ ವಾಯುವ್ಯದಲ್ಲಿನ ಚರಕಲ್‌ನ ಬಳಿ ಸಮುದ್ರ ಸೇರುತ್ತದೆ. ('ಬಲ್ಯಪಥೇಮಿ' ಎಂಬ ಹೆಸರೂ ಉಂಟು) 'ಮಾಕುಟ್ಟ'ವು ಮಹಾಕೂಟ ಎಂಬ ಶಬ್ದವಾಗಿದ್ದಿರಬೇಕು. ಮಹಾಂದೋಡುವಿನ ಪಥ ಹಾಗೂ ಬರಪೊಳೆಯ ಇಂದಿನ ಪಥದ ನಡುವೆ ಫಾಲ್ಘಾಟ್ ನೆಲೆ ಕಾಣಬರುವಲ್ಲಿ ಕಾವೇರಿಯ ಗೆರೆಯ ಎರಡು ಬಂಡೆಗಳು ಈ ಪಥಗಳಾಗಿದ್ದಿರಬೇಕೆಂದು ತೋರುತ್ತದೆ. ಅಂದರೆ ಕಾವೇರಿಗೆ ಪಶ್ಚಿಮ ಮಾರ್ಗದಲ್ಲಿ ಎರಡು ಕವಲುಗಳಿದ್ದು, ಪೂರ್ವಕ್ಕೆ ಒಂದಿದ್ದು, ಪಶ್ಚಿಮ ಘಟ್ಟಗಳ ಏರಿನ ನಂತರ ಪೂರ್ವಮುಖ ಕವಲಿನ ಅಸ್ತಿತ್ವ ಮಾತ್ರ ಉಳಿದಂತಿದೆ ಹಾಗು ಪಶ್ಚಿಮಮುಖಿ ಕಾವೇರಿಯು ಪೂರ್ವದ ಕವಲಿನೊಡನೆ ಐಕ್ಯವಾಗಿರುವಂತಿದೆ.

'ಬರಪೊಳೆ (ಭರತಪೊಳೆ–ಉಕ್ಕಿ ಹರಿವ ಹೊಳೆ)ಯು 'ಭರತೆಪುಳ'ವು ಎಂಬ ಶಬ್ದದ ಕೊಡವ ಭಾಷೆಯ ರೂಪವೆನಿಸುತ್ತದೆ. ಬ್ರಹ್ಮಗಿರಿ ಶ್ರೇಣಿಯ ಮಲೆನಾಡು ಬಾಡಗಕೇರಿ ಬಳಿಯ ತುಂಬೆಮಲೆಯ ಶಿಖರದಲ್ಲಿ ಬರಪೊಳೆ ಹುಟ್ಟುತ್ತದೆ. ಅಲ್ಲಿಂದ ಹತ್ತು ಮೈಲಿ ಪೂರ್ವಕ್ಕೆ ಹರಿದು ಬೊಮ್ಮಂಜಿಯ ಕಿಟ್ಟಪೊಳೆಯನ್ನು ಕೂಡುತ್ತದೆ. ನಂತರ ಕಿಕ್ಕಟ್ಟು ಎಂಬಲ್ಲಿ ಉತ್ತರಕ್ಕೆ ತಿರುಗುತ್ತದೆ. ಅಲ್ಲಿಂದ ಮುಂದೆ ಪಶ್ಚಿಮಕ್ಕೆ ತಿರುಗುವಲ್ಲಿ ಇಂಗ್ಲಿಷ್ 'ಯು' ಅಕ್ಷರದ ಆಕಾರದಲ್ಲಿ ಬರಪೊಳೆ ಹರಿಯುತ್ತದೆ. ಹೈಸೊಡ್ಲೂರು, ಬೇಗೂರು, ಕುತ್ತುನಾಡು, ಬೆಟ್ಟಿಯತ್‌ನಾಡು ಹಾಗೂ ಬೇರಣನಾಡಿನ ಭಾಗವಾಗಿ ಹರಿಯುತ್ತದೆ. ಮಹಾಂದೋಡುವಾದರೇ ಇಂದು ಹಳ್ಳಿಗಟ್ಟು ಬೇಗೂರು ಗ್ರಾಮದ ಮೂಲಕ ಹರಿದು ಅನೇಕ ತೋಡುಗಳನ್ನು ಕೂಡಿಕೊಂಡು ಬರಪೊಳೆಯನ್ನು ಸೇರುತ್ತದೆ. ಇಂದಿನ ಬರಪೊಳೆ ಹೊಳೆಗಳ ನೀರಿನ ಬೃಹತ್ ಜಾಲವನ್ನು ಪಡೆದು ಮಾಕುಟ್ಟದ ಮೂಲಕವಾಗಿ ಕೇರಳದ ಕೂಟುಪೊಳೆಯೊಡನೆ ಕೂಡಿ ಚರಕಲ್ ಬಳಿ ಬಲ್ಯಪದೇಮಿನಲ್ಲಿ ಅರಬ್ಬಿಸಮುದ್ರವನ್ನು ಸೇರುತ್ತದೆ.[21]

ಇವುಗಳಿಂದ ವ್ಯಕ್ತವಾಗುವ ಅಂಶಗಳೆಂದರೆ i) ಬರಪೊಳೆಯ ಹುಟ್ಟು ಕೊಡಗಿನ ಪಶ್ಚಿಮಘಟ್ಟಗಳಲ್ಲಿದೆ. ii) ಕೊಡಗಿನ ಮಹಾಂದೋಡು ಒಂದು ಕಾಲದ ದೊಡ್ಡ ಹೊಳೆಯಾಗಿ ಫಾಲ್ಘಾಟ್ ಮೂಲಕ ಸಾಗುತ್ತಿತ್ತು. iii ) ಇವೆರಡು ಹೊಳೆಯ ಪಥಗಳು ಪ್ರಾಚೀನ ಕಾವೇರಿಯ ಪಶ್ಚಿಮಮುಖಿ ಕವಲುಗಳ ಪಥವಾಗಿರುವಂತಿದೆ. iv) ಬಲ್ಯಪದೇಮಿ ಎಂಬ ಜನಬಳಕೆಯ ಶಬ್ದವು[22] ಮಹಾಂದೋಡು–ಬರಪೊಳೆಯ ದೊಡ್ಡ ಪಥದ ಸಾಂಕೇತಿಕ ಶಬ್ದವಾಗಿರುವಂತಿದೆ. v) ಭೂವಿಜ್ಞಾನದ ಸಂಗತಿಗಳಿಗೆ ಇಲ್ಲಿನ ಹೊಳೆಗಳ ಹರಿವು ಸಾಕ್ಷ್ಯವಾಗಿರುವುದಾಗಿದೆ. vi) ಪೂರ್ವ ಪುರಾಶಿಲಾಯುಗದ ಕಾಲದಲ್ಲಿ (೫೦ ಲಕ್ಷದಿಂದ ೫೦ ಸಾವಿರ ವರ್ಷಗಳ ನಡುವಣ ಅವಧಿ) ಕೊಡಗಿನ ಕಾವೇರಿಗೆ ಪೂರ್ವದಲ್ಲಿ ಒಂದು, ಪಶ್ಚಿಮದಲ್ಲಿ ಎರಡು ಕವಲುಗಳಿದ್ದ ಸಂಭಾವ್ಯತೆ ಕಾಣುತ್ತದೆ.

ತಲಕಾವೇರಿಯಿಂದ ಹರಿದು ಬಂದ ಕಾವೇರಿ ನಾಪೋಕ್ಲುವಿಗೆ ಬರುವಲ್ಲಿ ದಕ್ಷಿಣ, ಪೂರ್ವ, ಪಶ್ಚಿಮ ತಿರುವುಗಳಲ್ಲಿ ಸಾಗುತ್ತದೆ. ನಂತರ ಗುಹ್ಯ ಸಿದ್ದಾಪುರದ ಬಳಿ ಬಂದು ಈಶಾನ್ಯಕ್ಕೆ ತಿರುಗುವಲ್ಲಿ ಇಂಗ್ಲಿಷ್ 'ಯು' ಆಕಾರವಾಗಿ ಸಾಗುವುದನ್ನು ಕಾಣಬಹುದು. ಅಂದರೆ ಭೂಪದರಿನಲ್ಲಿ ಭೇದವಾದ ಅವಧಿಯಲ್ಲಿ ಈ ನೆಲೆಯಲ್ಲಿ ಪಶ್ಚಿಮ ಕವಲುಗಳನ್ನು ಹೊಂದಿದ್ದ ಮಹಾಂದೋಡು, ಬರಪೊಳೆ ಪಥದಲ್ಲಿ ಬಂದು ಸಾಗುತ್ತಿದ್ದಂತೆ ತೋರುತ್ತದೆ. ಅದರಲ್ಲಿಯೂ ಬರಪೊಳೆಯು ಸ್ಪಷ್ಟವಾಗಿ ಪಶ್ಚಿಮ ಘಟ್ಟಗಳ ಏರು ಹೆಚ್ಚಿದ ನಂತರ ಕಾವೇರಿಯ ಪಶ್ಚಿಮ

---

20–21 K. K. Subbaiah : *Archaeology of Coorg*, Mysore, 1978, p. 18

22 ಕುಂದಬೆಟ್ಟದ ಬಳಿಯ ಈಚೂರು ಗ್ರಾಮದ ಶ್ರೀ ಮನಿಯಪಂಡ ಬಿ. ಅಪ್ಪಯ್ಯ ಅವರು ತಿಳಿಸಿದ ವಿಷಯ

ಕವಲೊಂದರ ಪಥವನ್ನು ಆಕ್ರಮಿಸಿ (River Capture) ಸಾಗಿರುವುದನ್ನೂ ಇಂದಿನ ಅದರ ಹರಿವಿನ ಪಥದಿಂದ ಗೋಚರವಾಗುತ್ತದೆ.[23] ಬರಪೊಳೆಯು ಎರಡು ಕಡೆ 'ಯು' ಆಕಾರದಲ್ಲಿ ಪೂರ್ವದಿಂದ ಪಶ್ಚಿಮ ದಿಸೆಗೆ ಸಾಗಿರುವುದೂ ಅದರ ಹರಿವಿನಲ್ಲಿ ಕಾಣುತ್ತದೆ. ಅಲ್ಲದೆ ಮಹಾಂದೋಡು ಇಂದು ಬರಪೊಳೆಗೆ ಸೇರಿಹೋಗುವುದೂ ಗಮನಾರ್ಹವೇ ಆಗಿದೆ. ಅಂದರೆ ಪಶ್ಚಿಮಘಟ್ಟಗಳ ಏರು ಹೆಚ್ಚಾದಾಗೆ, ಅದನ್ನು ಏರಲಾಗದ ಕಾವೇರಿ, ಪೂರ್ವ ಕವಲಿನೊಡನೆ ತನ್ನೆಲ್ಲ ಹರಿವಿನ ಪಥಗಳನ್ನು ಐಕ್ಯಗೊಳಿಸಿಕೊಂಡು, ಪಶ್ಚಿಮ ಕವಲುಗಳ ಹಾದಿಯನ್ನು ಮಹಾಂದೋಡು, ಬರಪೊಳೆಗೆ ಬಿಟ್ಟುಕೊಟ್ಟಂತಿದೆ. ಈ ನದಿ ಹರಿವಿನ ಪ್ರಾಚೀನ ಪಥದ ನೆರೆಯ ಫಲವತ್ತಿಕೆಗೆ ಸಿದ್ದಾಪುರ, ಅಮ್ಮತ್ತಿಯ ಪ್ರದೇಶಗಳು ಸಾಕ್ಷಿ ಆಗಿವೆ. ಇಡೀ ಕಿಗ್ಗಟ್ಟುನಾಡು (ಇಂದಿನ ಮಹಾಂದೋಡು, ಬರಪೊಳೆ ಹರಿವಿನ ನೆರೆ ಪ್ರದೇಶ) ಕೊಡಗಿನ ಭತ್ತದ ಕಣಜ ಎನಿಸಿರುವುದೇ ಆಗಿದೆ. ಜೊತೆಗೆ ಕಾಫಿಯ ಬೆಳೆಯ ಸಮೃದ್ಧಿ ಇಲ್ಲಿನ ಏರುಪ್ರದೇಶಗಳಲ್ಲಿಯೂ ಉಂಟು. ಹೇಗೋ ಏನೋ ತಲಕಾವೇರಿಯ ತೀರ್ಥೋದ್ಭವ ಸಮಯದಲ್ಲಿ ಮಹಾಂದೋಡುವಿಗೆ ಸನಿಹದ ನೆಲೆಯಾದ ಕುಂದಬೆಟ್ಟದಲ್ಲಿ ಮಾತ್ರ ತೀರ್ಥೋದ್ಭವದ ಮರುದಿನದಲ್ಲಿ ಕಾವೇರಿಯ ತೀರ್ಥ ತಂದು ಮಹಾದೇವನಿಗೆ ಅಭಿಷೇಕ, ಜಾತ್ರೆ, ಜನಪದ ಕುಣಿತ, ಕಾವೇರಿಯ ಆರಾಧನಗಳು ನಡೆಯುತ್ತವೆ. ಪ್ರಾಚೀನ ಭೌಗೋಳಿಕ ಸಂಗತಿಯೊಂದನ್ನು ಹೇಗೋ ಪರಂಪರೆಯಿಂದ ತಿಳಿದು ಕಾವೇರಿ ಹರಿವಿನ ಸಂಬಂಧವು ಸಾಂಕೇತಿಕವಾಗಿಯಾದರೂ ಜನಪ್ರಜ್ಞೆಯಲ್ಲಿ ಉಳಿದು ಬಂದಿರುವುದನ್ನು ಈ ಮೇಲಿನ ಆಚರಣೆಗಳು ತೋರುವಂತಿವೆ.

ಇನ್ನು ಕಾವೇರಿಯ ಉಗಮವು ಪಶ್ಚಿಮಘಟ್ಟಗಳ ಏರಿನ ನಂತರ ಹಿಂಬದಿ ಕಣಿವೆಗೆ ಸರಿದಂತೆ ಕಾಣುವುದಿಲ್ಲ. ಆಗ ಸರಿದಿದ್ದಿದ್ದರೆ ಉಗಮದಿಂದಲೇ ಕಾವೇರಿ ಪಶ್ಚಿಮಮುಖಿ ಆಗಿಬಿಡುತ್ತಿತ್ತು. ತಲಕಾವೇರಿಯ ಹಿಂಬದಿಯ ಸಂಪಾಜೆ ಕಣಿವೆಯಲ್ಲಿ ಹುಟ್ಟುವ ನೊಜೆಕಲ್ಲು ಹೊಳೆ ಪೂರ್ಣಪಶ್ಚಿಮ ಗಾಮಿನಿಯಾಗಿ ಕಾಸರಗೋಡಿನ ಬಳಿ ಅರಬ್ಬಿಸಮುದ್ರವನ್ನು ಸೇರುವ ಸಂಗತಿಯು ಮೇಲಿನ ಅನುಮಾನಕ್ಕೆ ಉತ್ತರ ನೀಡುತ್ತದೆ. ಪಶ್ಚಿಮಘಟ್ಟಗಳ ಹೆಚ್ಚಿದ ಏರಿನ ಜೊತೆಯಲ್ಲಿಯೇ ಕೊಡಗಿನಲ್ಲಿ ಆಕೆಯ ಪಥ ಪೂರ್ಣ ಪೂರ್ವಮುಖಿಯಾಗಿ ಹೆಚ್ಚು ಯೌವನದಿಂದ ಲಕ್ಷಾಂತರ ವರ್ಷ ಹರಿಯುವಂತಾಯಿತು. ಕಾಂಟಿನೆಂಟಲ್ ಸಿದ್ಧಾಂತದ ರೀತ್ಯಾ (ಖಂಡಗಳ ಸಂಪರ್ಕಗಳ ಜೋಡಣೆ) ಭಾರತ ಹಾಗೂ ಆಫ್ರಿಕೆಯ ಪ್ರದೇಶಗಳು ಒಂದಕ್ಕೊಂದು ಹತ್ತಿರದ ಜೋಡಣೆಯಾಗಿ, ಅರಬ್ಬಿ ಸಮುದ್ರ ಹುಟ್ಟುವ ಮುನ್ನ ಇದ್ದುವು. ಆದಾಗ ಕಾವೇರಿಯ ಪಶ್ಚಿಮ ಹರಿವಿನ ಪಥವು ಆಫ್ರಿಕೆ ಬಳಿಯ ಮಡಗಾಸ್ಕರ್‌ವರೆಗೂ ಸಹಸ್ರಾರು ಮೈಲಿಯ ಹರಿವಿನ ಪಥವಾಗದೆ ಈ ಸನಿಹದ ಪಥವೇ ಆಗಿದ್ದಿರಬೇಕು. ಮಡಗಾಸ್ಕರಿನ ಈಶಾನ್ಯದಲ್ಲಿ 'ಮಹಾಗಂಗಾ' ಎಂಬ ಹೆಸರಿನ ನೆಲೆ ಇರುವುದೋ ಮಹಾಂದೋಡು ಕಾವೇರಿ ಕವಲಿನ ಪರಂಪರೆಯ ಸಂಕೇತವಾಗಿರಬಹುದು.

ಕಾವೇರಿಯ ಉಗಮ ಹಾಗೂ ಹರಿವಿನ ಪ್ರಾಚೀನತೆಯ ಈ ಹಿನ್ನೆಲೆಯಲ್ಲಿ ಉತ್ತರ ಭಾರತದ ಗಂಗೆ ನಮ್ಮ ಗಮನಕ್ಕೆ ಬರುತ್ತಾಳೆ. ದಕ್ಷಿಣ ಭಾರತದ ನದಿಗಳು ಉತ್ತರ ಭಾರತದ ನದಿಗಳಿಗಿಂತ ಪ್ರಾಚೀನ ಎಂಬುದು ಭೂವಿಜ್ಞಾನದ ಸಂಗತಿ. ಆದರೆ ಶಿವನ ಜಟೆಯಿಂದ ಗಂಗೆ ಬರುವಳೆಂಬ ದಟ್ಟ ಧಾರ್ಮಿಕ ನಂಬಿಕೆಯ ಕಾರಣ ಅವಳಿಗೆ ಪ್ರಚಾರ ಹಾಗೂ ಪ್ರಸಿದ್ಧಿ ದೊರಕಿದೆ. (ಕಾವೇರಿಯ ಅಗಸ್ತ್ಯನಾದರೋ ಬಹಿಷ್ಕೃತ ಸೋದರನಲ್ಲವೆ ?) ಸುಮಾರು ಸಾವಿರದ ಅರುನೂರು ಮೈಲಿ ಹರಿವ ಭಾರತದ ಅತ್ಯಂತ ದೀರ್ಘನದಿಯಾಗಿದ್ದಾಳೆ ಇಂದು ಗಂಗೆ. ಋಗ್ವೇದ ನದಿಶ್ಲೋಕಗಳಲ್ಲಿ ವಿಪುಲವಾಗಿ ಸ್ತೋತ್ರಗೊಂಡಿರುವ ಸದಾ ಹರಿವ ನದಿಯಾಗಿದ್ದ ಸರಸ್ವತಿ, ಅನೇಕ ಕವಲುಗಳುಳ್ಳ ನದಿಯಾಗಿ ಹರಿದು ಕ್ರಿ. ಪೂ. ೨೦೦೦ದ ವೇಳೆಗೆ ಒಣಗಿದಳು. ಈ ಕವಲುಗಳ ಪಥವನ್ನು ಋಗ್ವೇದದಲ್ಲಿ ಒಮ್ಮೆ ಮಾತ್ರ ಉಲ್ಲೇಖಿತಳಾಗಿರುವ ಗಂಗೆ ಆಕ್ರಮಿಸಿ (River Capture)

23 K. K. Subbaiah, op. cit., p. 19

(I)
ಕೊಡಗಿನ ಕಾವೇರಿ, ಬರಹೊಳೆ, ಮಹಾಂದೋಡುಗಳ ನದೀಪಥಗಳು

ದಕ್ಷಿಣಕನ್ನಡ ಜಿಲ್ಲೆ
ತಲಕಾವೇರಿ
ಮಡಿಕೇರಿ
ಭಾಗಮಂಡಲ
ನಂಜರಾಯಪಟ್ಟಣ
ನಾಪೋರ್ಕ್ಲು
ಸಿದ್ದಾಪುರ
ಗುಹ್ಯ
ಮೈಸೂರು ಜಿಲ್ಲೆ
ಕಾವೇರಿಯ ಒಂದು ಕಾಲದ ಪಶ್ಚಿಮ ಕವಲಿನ ಪಥ
ಮಹಾಂದೋಡು
ಕೇರಳ ರಾಜ್ಯ
ಅರವತ್ತೊಕ್ಕಲು
ಮಾಕುಟ್ಟ ಬರಪೊಳೆ
ಮಹಾಂದೋಡು ಹೊಳೆಯ ಮೊದಲಿನ ಪಥ
ಬಲ್ಯಪತೇಮಿ
ಚರಕಲ್
ಕಣ್ಣಾನೂರು
ಬಾಡಗರಕೇರಿ
ಅರಬ್ಬಿ ಸಮುದ್ರ
(ಮಾನಂತೋಡಿ) ಮಾನಂದವಾಡಿಗೆ

(II)
ಕರ್ನಾಟಕ, ಕೇರಳ, ತಮಿಳುನಾಡುಗಳಲ್ಲಿ ಕಾವೇರಿ, ಬರಪೊಳೆ ಪಥಗಳು

ತಲಕಾವೇರಿ
ಕರ್ನಾಟಕ ರಾಜ್ಯ
ಕಾವೇರಿ
ಕೃಷ್ಣರಾಜಸಾಗರ
ಬರಪೊಳೆ
ಕಬಿನಿ ಜಲಾಶಯ
ಮೆಟ್ಟೂರು ಜಲಾಶಯ
ಚರಕಲ್
ಬಲ್ಯಪತೇಮಿ
ಮಾನಂತೋಡಿ
ತಮಿಳುನಾಡು
ಭವಾನಿ ಸಾಗರ
ಬಂಗಾಳಕೊಲ್ಲಿ
ಕಾವೇರಿನದಿ
ಕೊಯಮತ್ತೂರು
ಪಾಲ್ಘಾಟ್
ಕಾವೇರಿ ಪೂಂಪುಹಾರ್
ಶ್ರೀರಂಗಂ
ತಿರುಚಿನಾಪಳ್ಳಿ
ತಂಜಾವೂರು
ಅರಬ್ಬಿಸಮುದ್ರ
ಕೇರಳ
ತಮಿಳುನಾಡು

ಲೇಖನದ ಸಂಖ್ಯೆ : ೩೦

ಹರಿಯುತ್ತ ಬಂದಿದ್ದಾಳೆ.[24] ಈಕೆ ಕ್ರಿ. ಪೂ. ಒಂದನೆಯ ಶತಮಾನದಿಂದ ಭಾರತದ ಕಾವ್ಯ ಹಾಗೂ ಶಿಲ್ಪಗಳಲ್ಲಿ ಬಹಳ ಪ್ರಚಾರ, ಮಹತ್ವವನ್ನು ಪಡೆದುಕೊಂಡವಳಾಗಿದ್ದಾಳೆ. ಆಕೆ ಹುಟ್ಟುವುದು ಹಿಮಾಲಯದ ೧೦,೩೦೦ ಅಡಿ ಎತ್ತರದ ಗಂಗೋತ್ರಿಯಲ್ಲಿ ಎಂಬ ಪ್ರಚಾರವಿದೆ. ನಂಬಿಕೆ ಹಾಗಿದೆ. ವಾಸ್ತವವಾಗಿ ಹಿಮಾಲಯ ಪರ್ವತ ಶಿಖರಗಳಲ್ಲಿ ಒಂದಾದ ೨೧,೪೦೦ ಅಡಿ ಎತ್ತರದ ಶಿವಲಿಂಗ ಶಿಖರವಿರುವ ಶಿವಲಿಂಗ ಪರ್ವತದ ತಪ್ಪಲಿನಲ್ಲಿರುವ (೧೨,೭೭೦ ಅಡಿ ಎತ್ತರ) ಗೋಮುಖ ಎಂಬ ನೆಲೆಯಲ್ಲಿ ಗಂಗೆಯ ಉಗಮವಿದೆ. ಶಿವಲಿಂಗ ಪರ್ವತದ ತಪ್ಪಲಿನ ನೀರ್ಗಲ್ಲುಗಳ ನಿವಾಸ (ಗಂಗೋತ್ರಿ ಗ್ಲೇಷಿಯರ್ಸ್)ದಿಂದ ಕರಗಿ ಕರಗಿ ಇಳಿದು ಗೋಮುಖದ ಬಳಿ ಮೊದಲು ಕಾಣಿಸಿಕೊಳ್ಳುವ ಪ್ರವಾಹಕ್ಕೆ ಭಾಗೀರಥಿ ಎಂದು ಕರೆಯಲಾಗಿದೆ.[25] ಅಲ್ಲದೆ ಮಾನಸ ಸರೋವರ ಬೇರೆ, ಗಂಗೋತ್ರಿ ಬೇರೆ ಬೇರೆ ನೆಲೆಯಲ್ಲಿವೆ. ಕೈಲಾಸ ಪರ್ವತದ ಬುಡದಲ್ಲಿ ಮಾನಸ ಸರೋವರವಿದೆ.[26]

ದ. ಭಾರತದ ನದಿಗಳು ಉತ್ತರ ಭಾರತದ ನದಿಗಳಿಗಿಂತ ಪ್ರಾಚೀನ ಎಂಬ ಭೂವೈಜ್ಞಾನಿಕ ಹಿನ್ನೆಲೆಯಲ್ಲಿ ಕಾವೇರಿ ಗಂಗೆಗಿಂತ ಹೆಚ್ಚು ಪ್ರಾಚೀನತೆ ಪಡೆದವಳು ಎನ್ನಬೇಕು. ಹಿಮಾಲಯ ಹುಟ್ಟುವ ಮುನ್ನವೂ ಕಾವೇರಿ ಇದ್ದಳಲ್ಲ. ಜೊತೆಗೆ ಸ್ಕಾಂದಪುರಾಣದ ಕತೆಯೂ ಪೌರಾಣಿಕ ಸಾಕ್ಷಿಯನ್ನು ಇದಕ್ಕೆ ಒದಗಿಸುವಂತಿದೆ.

ತ್ರಿಗುಣಿ ಎಂಬ ಬ್ರಾಹ್ಮಣನಿಗೆ ಕಾವೇರಿಯ ಬಗ್ಗೆ ಗಂಗೆಯು ಹೇಳುತ್ತಾಳೆ–ಕಾವೇರಿ ಪವಿತ್ರಳು, ದಿವ್ಯಳು. ಅವಳ ದರ್ಶನದಿಂದ ಪಾಪ ಪರಿಹಾರ. ಆವಳಲ್ಲಿ ಮಿಂದು ಬಾ ಎಂದು.

ಯಮುನೆಯು ಗಂಗೆಯ ಬಳಿಬಂದು ಆಕೆಯ ಒದ್ದೆಯಾದ ವಸ್ತ್ರ ಮತ್ತು ಕೂದಲನ್ನು ನೋಡಿ, ಏಕೆ ನೆನೆದಿವೆ ? ಎಂದು ಕೇಳಿದಳಂತೆ. ಆಗ ಗಂಗೆ ನುಡಿದಳಂತೆ:

> ಸರಿದ್ಭಿರಹ ಮಾರ್ಮಾಯಾ : ಕಾವೇರ್ಯಾ–
> ಸ್ತೀರ್ಥ ಮಾದರಾತ್
> ದೃಷ್ಟ್ವಾ ಪುಣ್ಯಾಂಭಸಿ ಸ್ನಾತ್ವಾ ಪುನರತ್ವಾಗತಾ
> ವಯಮ್ ।

–ಶ್ರೇಷ್ಠವಾದ ಕಾವೇರಿ ತೀರ್ಥವನ್ನು ನದಿಗಳೊಡನೆ ದರ್ಶನಮಾಡಿ ಪವಿತ್ರವಾದ ಆ ಕಾವೇರಿಯಲ್ಲಿ ಮಿಂದು ಪುನಃ ಇಲ್ಲಿಗೆ ಎಲ್ಲರೂ ಬಂದೆವು. ಅದು ಕಾರಣ ವಸ್ತ್ರ ಮತ್ತು ಕೂದಲು ಒದ್ದೆ ಆಗಿವೆ.[27]

ಗಂಗೆಯಿಂದ ಹಿರಿಯಳೆಂದು ಹೀಗೆ ಮಾನಿತಳಾದ ಕಾವೇರಿಯ ಪೌರಾಣಿಕ ಸಂಬಂಧ, ಸಿಬಿ ದೇಶವನ್ನು ಈ ಮೊದಲೇ ಹೇಳಿರುವಂತೆ ಗಂಗೆ ಹರಿಯುವ ಪ್ರದೇಶವಾಗಿ ಗುರುತಿಸಿರುವುದು, ಸಿಬಿ ಜನತೆಯನ್ನು ಕಾವೇರಿ ದಂಡೆಯ ಮೇಲೆ ಚೋಳರೊಡನೆ ಗುರುತಿಸಿದರೂ, ಮತ್ಸ್ಯರೆಂದು ಕರೆದಿರುವುದು, ಇವೆಲ್ಲಾ 'ಕಾವೇರಿ–ಗಂಗಾ' ಎಂಬ ಸಾಂಸ್ಕೃತಿಕ ಮಿಲನಕ್ಕೆ ಸಾಕ್ಷಿಯಾಗಿವೆ. ಪ್ರಕೃತಿಯ ವರವಾಗಿ ಕಾವೇರಿ ವರುಣ ವರ್ಷದಿಂದ ತುಂಬಿ ತುಂಬಿ ಹರಿಯುವವರೆವಿಗೂ ಕರ್ನಾಟಕ–ತಮಿಳುನಾಡುಗಳಲ್ಲಿ ನೀರಿನ ಪಾಲುದಾರಿಕೆಯ ಸಮಸ್ಯೆ ಅಷ್ಟಾಗಿ ಕಾಣದಿದ್ದರೂ ಪರಸ್ಪರ ಅರಿವಿನ ಬಾಳ್ವೆಯ ಇತಿಹಾಸದ ಬೆಳಸನ್ನು ಬೆಳೆಯಬೇಕಾದವರು ಈ ದ್ವಯನಾಡಿನವರಷ್ಟೆ ಅಲ್ಲ, ಸಂಬಂಧಿಸಿದವರೆಲ್ಲರ ಮನಸ್ಸು ಕಾರ್ಯೋನ್ಮುಖವಾಗಬೇಕು. ಕಾವೇರಿ–ಗಂಗೆಯರ ಭೌತಿಕ ಮಿಲನವೂ ಈ ದಿಸೆಯಲ್ಲಿ ಒಂದು ಸಾಂಸ್ಕೃತಿಕ ಪರಿಹಾರವಾಗಿ ಎಲ್ಲ ಪಕ್ಷಗಳಿಗೂ ಒದಗಿದರೆ, ಅದು ಐತಿಹಾಸಿಕವಾಗುತ್ತದೆ.

---

24 Paramananda Gupta : *op. cit.*, p. 213 and Dr. N. S. Rajaram's Lecture on 'History of Sarswathi River, on 8-3-1994 at Mythic Society, Bangalore

25 ಜಿ. ಎಸ್. ಶಿವರುದ್ರಪ್ಪ : ಗಂಗೆಯ ಶಿಖರಗಳಲ್ಲಿ ಬೆಂಗಳೂರು, ೧೯೮೭, ಪು. ೫೩-೫೪

26 ಎಸ್. ಶಂಕರನಾರಾಯಣಭಟ್ಟ : ಕೈಲಾಸ ಮಾನಸ ಸರೋವರ, ಬಾಳಿಲೆ, ದ. ಕೊಡಗು. ೧೯೮೮, ಪು. ೧೦

27 ಎದುರ್ಕಳ ಶಂಕರನಾರಾಯಣಭಟ್ಟ : ಶ್ರೀ ಕಾವೇರಿ ವೈಭವ, ಭಾಗಮಂಡಲ, ೧೯೮೭, ಪು. ೪೫೨

ಪಿ. ವಿ. ಕೃಷ್ಣಮೂರ್ತಿ*

# ಕೋಳಾಲನಾಡು - ಒಂದು ಚಾರಿತ್ರಿಕ ಪರಿಶೀಲನೆ

ದಕ್ಷಿಣ ಭಾರತದ ಇತಿಹಾಸದಲ್ಲಿ 'ಕೋಲಾರ'ಕ್ಕೆ ಮಹತ್ವದ ಸ್ಥಾನವಿದೆ. ಕದಂಬರ ಸಮಕಾಲೀನರಾದ ಗಂಗರು, ತಮ್ಮನ್ನು 'ಕುವಲಾಲ ಪುರವರಾಧೀಶ್ವರ'ರೆಂದೇ ಕರೆದುಕೊಂಡಿದ್ದಾರೆ. ಕುವಲಾಲ, ಕುವಳಾಲ, ಕೊವಳಾಲ, ಕೋಳಾಲ, ಕೋಲಹಾರ ಮುಂತಾಗಿ ಈ ಸ್ಥಳವನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ. ಐದನೆಯ ಶತಮಾನದ ಪ್ರಾರಂಭಕ್ಕಾಗಲೇ ಇದು ಕುವಲಾಲ ವಿಷಯ,[1] ಕುವಲಾಲ ರಾಷ್ಟ್ರ[2] ಎಂಬ ಅಭಿದಾನವನ್ನು ಪಡೆದ ಒಂದು ಮುಖ್ಯ ಆಡಳಿತ ಘಟಕವಾಗಿದ್ದುದಕ್ಕೆ ಸ್ಪಷ್ಟ ಆಧಾರಗಳು ದೊರೆಯುತ್ತವೆ. ಕುವಳಾಲನಾಡು, ಕುವಳಾಲ ಮೂನೂಱು, ಕೋಳಾಲನಾಡು, ಕುವಳಾಲ ನಾಟ್ಟು, ಗೋಳಾಲನಾಡು, ಕೋಳಾಲಸೀಮೆ, ಕೋಳಾಲ ದೇಶ, ಕೋಳಾಲ ರಾಜಧಾನಿ ಎಂದು ಮುಂತಾಗಿ ಐದನೇ ಶತಮಾನದ ಪ್ರಾರಂಭದಿಂದ ಅವಿಚ್ಛಿನ್ನವಾಗಿ ಒಂದು ಆಡಳಿತ ಕೇಂದ್ರವಾಗಿ ಮುಂದುವರೆದಿರುವ ಹಿರಿಮೆ ಪ್ರಾಯಶಃ ಈ 'ಕೋಳಾಲ' ಅಂದರೆ ಇಂದಿನ 'ಕೋಲಾರ'ಕ್ಕೆ ಮಾತ್ರವೇ ಸಲ್ಲುತ್ತದೆಯೆಂದು ತೋರುತ್ತದೆ. ಪ್ರಸ್ತುತ, ಶಾಸನೋಕ್ತ ವಿವರಗಳ ಹಿನ್ನೆಲೆಯಲ್ಲಿ ಈ ನಾಡಿನ ಭೌಗೋಳಿಕ ವ್ಯಾಪ್ತಿ, ರಾಜಕೀಯ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಪರಿಶೀಲಿಸಿ ದಾಖಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕುವಳಾಲನಾಡು ಪ್ರಾರಂಭದಲ್ಲಿ ಗಂಗವಾಡಿಯ ಭಾಗವೆಂದು ಮಾತ್ರ ಉಲ್ಲೇಖವಾಗಿದ್ದು ನಂತರದಲ್ಲಿ 'ಗಂಗಸಾಯಿರ'ದ ಭಾಗವಾಗಿದ್ದ ಸೂಚನೆ ಒಂದೆರಡು ಶಾಸನಗಳಿಂದ ತಿಳಿದು ಬರುತ್ತದೆ. ಅಲ್ಲದೆ ಪ್ರಸಿದ್ಧ 'ಗಂಗ ಅಱುಸಾಸಿರ' ಪ್ರದೇಶಕ್ಕೆ ಈ ನಾಡು ಸೇರಿದ್ದಿತೇ ? ಇಲ್ಲವೆ ? ಎಂಬುದು ಶಾಸನೋಕ್ತ ಉಲ್ಲೇಖಗಳಿಂದ ಗ್ರಹಿಸಲು ಅಸಾಧ್ಯವಾಗಿದೆ. ಚೋಳರ ಪ್ರವೇಶಕ್ಕೆ ಮುನ್ನ, ಕೋಳಾಲನಾಡು ನೊಳಂಬರ ಆಳ್ವಿಕೆಗೆ ಒಳಪಟ್ಟಿದ್ದಿತು. ಆಗ ಸಹಜವಾಗಿಯೇ 'ಗಂಗಸಾಯಿರ' ಹಾಗೂ 'ಗಂಗಅಱುಸಾಸಿರ' ಪ್ರದೇಶಗಳು ನೊಳಂಬವಾಡಿಯ ಉಪವಿಭಾಗಗಳಾಗಿದ್ದವು. ಆ ಕಾರಣದಿಂದಲೇ ಚೋಳರು ತಮ್ಮ ಮೊದ ಮೊದಲ ಶಾಸನಗಳಲ್ಲಿ 'ನುಳಂಬಪ್ಪಾಡಿಯಾನ ವಿಕ್ರಮ ಚೋಳ ಮಂಡಲತ್ತು ಕುವಳಾಲ ನಾಟ್ಟು'[3] 'ನುಳಂಬಪ್ಪಾಡಿಯಾನ ನಿಗರಿಲಿ ಚೋಳ ಮಂಡಲತ್ತು ಕುವಳಾಲನಾಟ್ಟು'[4] 'ನಿಗರಿಲಿ ಚೋಳ ಮಂಡಲತ್ತು ಗಂಗಸಾಯಿರತ್ತು ಕುವಳಾಲನಾಟ್ಟು'[5]

---

* ಜಿ.ಬಿ.ಜೆ. ೫೭೦, ೧೨ನೇ ಕ್ರಾಸ್, ಜವಾಹರ್‌ನಗರ್ ೩ನೇ ಸೆಕ್ಟಾರ್, ಮಾರತ್ತಹಳ್ಳಿ. ಬೆಂಗಳೂರು-೫೬೦೦೩೭

1 *Inscriptions of Western Gangas*, (Ed) K.V. Ramesh, New Delhi, 1984, No. 156

2 ಅದೇ., No. 157

3 ಎಪಿಗ್ರಾಫಿಯ ಕರ್ನಾಟಿಕ X, ಕೋಲಾರ ೧೦೬ಎ, ಕ್ರಿ.ಶ. ೧೦೦೯

4 ಅದೇ., ೨೬೬, ಕ್ರಿ.ಶ. ೧೦೦೯

5 ಅದೇ., ೧೦೯ಎ, ಕ್ರಿ.ಶ. ೧೦೩೩

ಎಂದು ವಿಧ ವಿಧವಾಗಿ ಕರೆದಿರುವುದು ಕಂಡುಬರುತ್ತದೆ. ಇಲ್ಲಿ ಉಕ್ತವಾಗಿರುವ ವಿಕ್ರಮಚೋಳಮಂಡಲ ಎಂಬುದು 'ದಡಿಗಾವಟಿ'ಯ ಪ್ರದೇಶಕ್ಕೆ ಚೋಳರು ನೀಡಿದ್ದ ಹೆಸರು. 'ಗಂಗಸಾಯಿರ' ಎಂಬ ಉಲ್ಲೇಖ ಸಮಕಾಲೀನ ಗಂಗರ ಶಾಸನಗಳಲ್ಲಿ ಕಂಡುಬಂದಿಲ್ಲ. ಆದರೆ ಚೋಳರ ಆರಂಭದ ಶಾಸನಗಳಲ್ಲಿ ಅದರ ಪ್ರಯೋಗ ಕಂಡುಬಂದಿದೆ. ಗಂಗಸಾಯಿರ ಎಂಬುದು ಗಂಗರ ಆಳ್ವಿಕೆಯ ಪ್ರಾರಂಭದ ಪ್ರದೇಶ. ನೊಳಂಬಳಿಗೆ ಸಾವಿರ, ಕದಂಬಳಿಗೆ ಸಾಯಿರ ಮುಂತಾದವುಗಳು ಹೇಗೆ ಆಯಾ ವಂಶೀಯರ ಆಳ್ವಿಕೆಯ ಪ್ರಾರಂಭದ ಪ್ರದೇಶಗಳಾಗಿದ್ದವೋ ಹಾಗೆಯೇ 'ಗಂಗ ಸಾಯಿರ' ಎಂಬುದು, ಗಂಗರ ಪ್ರಾರಂಭದ ಆಳ್ವಿಕೆಗೆ ಸಂಬಂಧಿಸಿದ ಪ್ರದೇಶವೆಂಬುದರ ಸ್ಪಷ್ಟ ಸೂಚನೆ ಇದಾಗಿದೆ.

ಭೌಗೋಳಿಕವಾಗಿ, ಮೂಲತಃ ಬಯಲುಸೀಮೆಯ ಭಾಗವಾಗಿರುವ ಕೋಳಾಲ(ನಾಡು) ಪ್ರದೇಶದಲ್ಲಿ ಅಲ್ಲಲ್ಲೇ ಚದರಿದಂತೆ ಬೆಟ್ಟಗುಡ್ಡಗಳಿದ್ದು, ಅವುಗಳಲ್ಲಿ ಶತಶೃಂಗ, ವಕ್ಕಲೇರಿ ಬೆಟ್ಟಗಳೇ ಮುಂತಾದವು ಮುಖ್ಯ ವಾದುವಾಗಿವೆ. ಮೊದಲಿಗೆ ಪಾಲಾರ್ ನದಿಯು ಈ ನಾಡಿನ ಉತ್ತರ ಮತ್ತು ಪೂರ್ವದ ಗಡಿಯಾಗಿದ್ದಿತು. ಪಶ್ಚಿಮ ಮತ್ತು ದಕ್ಷಿಣಕ್ಕೆ, ವಕ್ಕಲೇರಿ ಬೆಟ್ಟದ ಸಾಲುಗಳ ವರೆಗೂ ಈ ನಾಡಿನ ವ್ಯಾಪ್ತಿ ಇದ್ದಿತು. ಅನಂತರದ ಕಾಲ ದಲ್ಲಿ ಈ ನಾಡಿನ ವ್ಯಾಪ್ತಿ ತುಸು ವಿಸ್ತಾರಗೊಂಡಿರುವುದು ಶಾಸನಗಳಿಂದ ಮನಗಾಣಬಹುದಾಗಿದೆ. ಹುಸ್ಕೂಂದ, ಮುರುಗಮಲೆ, ಗರುಡನಹಳ್ಳಿ, ಹರಾಬಿಕೊತ್ತನೂರು, ಹರಳಕುಂಟೆ ಮುಂತಾದವು ಈ ನಾಡಿನ ಮುಖ್ಯವಾದ ಪ್ರಾಗೈತಿಹಾಸಿಕ ನೆಲೆಗಳೆಂದು ಗುರುತಿಸಲಾಗಿದೆ. ಈ ಪ್ರದೇಶದ ಒಂದು ಪ್ರಮುಖ ಪಟ್ಟಣವಾಗಿ ಕುವಳಾಲ ಪುರವು ಪ್ರಾಚೀನ ಕಾಲದಿಂದಲೇ ಪ್ರಸಿದ್ಧಿಯನ್ನು ಪಡೆದಿದ್ದಿತು.

ಕುವಲಾಲ, ಕುವಳಾಲ ಮತ್ತು ಕೊವಳಾಲ ಎಂಬುವು ಶಾಸನೋಕ್ತ ಪ್ರಾಚೀನ ರೂಪಗಳು. ಇದು ಕುವಲ್ ಅಥವಾ ಕೊವಳ್+ಆಲ ಎಂಬ ಎರಡು ಪದ ಗಳಿಂದ ರೂಪ ತಾಳಿದ್ದಾಗಿದೆಯೆಂದು ತೋರುತ್ತದೆ. ಕುವಲ್ (DED. 1894)=ಕನ್ನೈದಿಲೆ ಎಂಬ ಅರ್ಥ ವಿದೆ. ಕೊವಳ್, ಕೋಹಳ್ ಎಂಬ ಸಾಧಿತ ಪದಗಳಿಗೂ ಅದೇ ಅರ್ಥವಿರುವುದು ತಿಳಿಯುತ್ತದೆ. ಆಲ ಎಂಬುದು ಜಲಸೂಚಿ ಪದವೆಂದು ಪ್ರಖ್ಯಾತವಾಗಿದೆ. ಹೀಗಾಗಿ ಕನ್ನೈದಿಲೆ ಕೊಳದ ಸಾನಿಧ್ಯದ ಹಿನ್ನೆಲೆಯಲ್ಲಿ 'ಕುವಲಾಲ-ಕುವಳಾಲ' ಎಂಬ ಹೆಸರು ರೂಪುಗೊಂಡಿರುವ ಸಾಧ್ಯತೆ ಗಳಿವೆ. 'ಕುವಲ' ಎಂಬುದಕ್ಕೆ ಎಲಚಿಗಿಡ, ಬೋರೆಗಿಡ ಎಂಬ ಅರ್ಥಗಳು ಇರುವುದು ಕಂಡುಬರುತ್ತದೆ. ಆದರೆ ಶಾಸನವೊಂದರಲ್ಲಿ[6] "ನಿಗರಿಲಿ ಚೋಳಮಂಡಲದ ದಕ್ಷಿಣ ದ್ವಾರಾವತಿ ವಟವೃಕ್ಷಾಶ್ರಯ ಸೇವಿತಮಪ್ಪ ಕೋಳಾಲ ನಾಡು" ಎಂಬ ಉಲ್ಲೇಖ ಬಂದಿದೆ. ಇಲ್ಲಿ ಉಕ್ತವಾಗಿರುವ 'ವಟವೃಕ್ಷಾಶ್ರಯ' ಎಂಬುದು ಮುಖ್ಯವಾಗುತ್ತದೆ. ವಟವೃಕ್ಷವೆಂದರೆ ಆಲದ ಮರವೆಂದು ಅರ್ಥ. ಪ್ರಾಯಶಃ ಈ ನಾಡಿನಲ್ಲಿ ಆಲದ ಮರಗಳು ವಿಶೇಷವಾಗಿದ್ದಿರಬೇಕು.

ವಿಕ್ರಮ ಚೋಳನಾದ ರಾಜರಾಜಚೋಳನ ಪ್ರವೇಶದೊಂದಿಗೆ ಹಿಂದೆ ದಡಿಗಾವಟಿ ಎನಿಸಿಕೊಂಡಿದ್ದ ಭಾಗವು ವಿಕ್ರಮ ಚೋಳಮಂಡಲ ಎನಿಸಿಕೊಂಡಿತು. ರಾಜೇಂದ್ರ ಚೋಳದೇವನ ಪ್ರವೇಶದೊಂದಿಗೆ ಅದೇ ಭಾಗ ನಿಗರಿಲಿಚೋಳಮಂಡಲವೆನಿಸಿಕೊಂಡಿತು. ಕ್ರಿ.ಶ. ೧೦೫೪ರ ಶಾಸನವೊಂದರಲ್ಲಿ 'ವಿಜಯ ರಾಜೇಂದ್ರ ಮಂಡಲ'ವೆಂದು ರಾಜೇಂದ್ರ ಚೋಳನ ಕಾಲದಲ್ಲೇ ಪುನರ್‌ನಾಮಗೊಂಡಿರುವುದು ಕಂಡುಬರುತ್ತದೆ. ಆದರೆ ನಿಗರಿಲಿ ಚೋಳಮಂಡಲವೆಂಬುದು ಮುಂದೆ ಹೊಯ್ಸಳ, ನಂತರದಲ್ಲಿ ವಿಜಯನಗರದ ಅರಸರ ಕಾಲದವರೆಗೂ ಪ್ರಾದೇಶಿಕ ನಾಮವಾಗಿ ಮುಂದುವರೆದಿರುವುದು ಕಂಡು ಬರುತ್ತದೆ.

ಕೋಳಾಲವು ಗಂಗವಳನಾಡಿನ ಭಾಗವೆಂದು ಕ್ರಿ.ಶ. ೧೨೮೭ರ ಶಾಸನವೊಂದು[7] ತಿಳಿಸುತ್ತದೆ. ಮುಂದೆ ವಿಜಯನಗರ ಅರಸರ ಆಳ್ವಿಕೆಯ ಕಾಲದಲ್ಲಿ ಕೋಳಾಲ ನಾಡು ನಾಗಣನಗಡಿಚಾವಡಿಯ ಭಾಗವಾಯಿತು. ಕ್ರಿ.ಶ. ೧೫೦೦ರ ನಂತರದಲ್ಲಿ ಇದು ಬೇಲೂರು ಚಾವಡಿಗೆ

6 ಅದೇ., ೧೦೫, ಕ್ರಿ.ಶ. ೧೩೬೦

7 ಅದೇ., ೧೪೦

ಸೇರಿದ ಸೀಮೆ ಆಗಿದ್ದಿತು. ಮುಂದೆ ಕ್ರಿ.ಶ. ಹದಿನೇಳನೆಯ ಶತಮಾನದ ಅವಧಿಯಲ್ಲಿ ಕೋಳಾಲ ಚಾವಡಿಯು ಕೋಳಾಲ ಸೀಮೆಯೆಂದು ತನ್ನ ಸ್ಥಾನವನ್ನು ಹೆಚ್ಚಿಸಿ ಕೊಂಡಿತು. ಮರಾಠರ ಆಳ್ವಿಕೆಯ ಕಾಲದಲ್ಲಿ ಕೋಳಾಲ 'ರಾಜಧಾನಿ' ಎನಿಸಿಕೊಂಡಿತು. ಇಂದಿಗೂ ಒಂದು ಜಿಲ್ಲೆಯ 'ರಾಜಧಾನಿ'ಯಾಗಿಯೇ ಮುಂದುವರೆದಿರುವುದು 'ಕೋಲಾರ'ದ ವಿಶಿಷ್ಟತೆಯಾಗಿದೆ.

ರಾಜಕೀಯವಾಗಿ ಕೋಳಾಲ ಪ್ರದೇಶವು ಮೊದಲು ಬಾಣರ ಆಳ್ವಿಕೆಗೆ ಒಳಪಟ್ಟಿದ್ದಿತು. ನಂತರದಲ್ಲಿ ಗಂಗರ ಆಳ್ವಿಕೆಗೆ ಒಳಪಟ್ಟು, ಆ ರಾಜ್ಯದ ಸ್ಥಾಪನೆಯ ತಾಣವೂ ಹಾಗೂ ಅವರ ಮೊದಲ ರಾಜಧಾನಿಯನ್ನೊಳಗೊಂಡ ಪ್ರದೇಶವೂ ಆಗಿ ಆ ರಾಜ್ಯದ ಅಳಿವು ಉಳಿವುಗಳಲ್ಲಿ ಗಮನಾರ್ಹ ಪಾತ್ರ ವಹಿಸಿದ್ದಿತು. ಗಂಗ ಅರಸರಾದ ಸಿಂಹವರ್ಮ, ಇಮ್ಮಡಿ ಮಾಧವ, ಮುಮ್ಮಡಿ ಮಾಧವ, ತಡಂಗಾಲಮಾಧವ, ದುರ್ವಿನೀತ, ಭೂವಿಕ್ರಮ, ಶಿವಮಾರ, ಶ್ರೀಪುರುಷ ಮತ್ತು ದುಗ್ಗಮಾರ ಎಱೆಯಪ್ಪ, ನೀತಿಮಾರ್ಗ ಕೊಂಗುಣಿವರ್ಮ ಪೆರ್ಮನಡಿ (ರಾಚಮಲ್ಲ ೨) ಇವರುಗಳ ಆಳ್ವಿಕೆ ಈ ನಾಡಿನ ಮೇಲೆ ನಡೆದಿದೆ. ವಿಶೇಷತಃ ಶ್ರೀ ಪುರುಷನ ಕಾಲದಲ್ಲಿ ಅವನ ಓರ್ವ ಮಗನಾದ ದುಗ್ಗಮಾರ ಎಱೆಯಪ್ಪನ ನೇರ ಆಳ್ವಿಕೆ ಈ ನಾಡಿನ ಮೇಲಿತ್ತು, ಅಲ್ಲದೆ ಆತನ ಮಹಾದೇವಿಯಾದ ಕಾಂಚಿಯಬ್ಬೆ ಎಂಬುವವಳು ಕೋಳಾಲ ನಾಡಿನ ಆಗಳಿ ಎಂಬ ಸ್ಥಳವನ್ನು ಆಳುತ್ತಿದ್ದಳು.

ಕ್ರಿ.ಶ. ೧೦೦೦ದ ಸುಮಾರಿನಲ್ಲಿ ಈ ನಾಡು ಚೋಳರ ವಶವಾಯಿತು. ರಾಜರಾಜಚೋಳ, ರಾಜೇಂದ್ರ ಚೋಳ, ಕುಲೋತ್ತುಂಗ ಚೋಳರ ಆಳ್ವಿಕೆಯ ಕುರುಹುಗಳಾಗಿ ಅವರ ಅನೇಕ ಶಾಸನಗಳು ಈ ನಾಡಿನಲ್ಲಿ ತಲೆಯೆತ್ತಿವೆ. ಕ್ರಿ.ಶ. ೧೧೧೬ರ ನಂತರದಲ್ಲಿ ಹೊಯ್ಸಳರ ಆಳ್ವಿಕೆ ಈ ಪ್ರದೇಶದ ಮೇಲೆ ಪ್ರಾರಂಭವಾದ ಸೂಚನೆಗಳು ದೊರೆಯುತ್ತವೆಯಾದರೂ ಚೋಳರ ಅಧಿಕಾರಿಗಳಾಗಿ ಆಗಮಿಸಿದ್ದ ಮೂಲತಃ ಗಂಗವಂಶೀಯರೇ ಆದ ಕುವಳಾಲ ಪುರವರೇಶ್ವರನ್, ಗಂಗಕುಲೋದ್ಭವನ್, ಕಾವೇರಿವಲ್ಲಭನ್, ನಂದಿಗಿರಿನಾಥನ್ ಎಂಬ ಗಂಗರ ಸಾಂಪ್ರದಾಯಿಕ ಬಿರುದುಗಳನ್ನು ಧರಿಸಿದ್ದ ವೀರಗಂಗನ ಸಂತತಿಯವರಾದ ಉತ್ತಮಚೋಳಗಂಗ ಮತ್ತು ಅವನ ವಂಶೀಯನೇ ಆದ ವೆಟ್ಟುಮಾರ ಬಾಣನೆಂಬುವವನ ಆಳ್ವಿಕೆ ಹೆಚ್ಚು ಪ್ರಸಿದ್ಧವಾಗಿದ್ದಂತೆ ಶಾಸನಗಳಿಂದ ಮನಗಾಣಬಹುದಾಗಿದೆ. ಸು. ಕ್ರಿ.ಶ. ೧೨೮೦ ರಿಂದ ಇವರ ಶಾಸನಗಳು ಕಂಡುಬರುತ್ತವೆ. ಕ್ರಿ.ಶ. ೧೩೨೧ರ ಶಾಸನವೊಂದರಲ್ಲಿ ಈ ವಂಶದ ವಿಕ್ರಮಗಂಗ ಮತ್ತು ಆತನ ಪ್ರಧಾನಿಯಾದ ಶನನಾಡಾಳ್ವಾನ್ ಗೋಮತ್ತನ್ ಎಂಬ ತಟ್ಟೈಶಿರಾಯ ಮತ್ತು ಅವನ ತಮ್ಮನಾದ ವೀಮನನ್ ಎಂಬ ಗಂಗಾದಿರಾಯನ ಉಲ್ಲೇಖ ಬಂದಿದೆ.

ಕ್ರಿ.ಶ. ೧೩೦೦ರ ಸುಮಾರಿಗೆ ಹೊಯ್ಸಳ ವೀರ ಬಲ್ಲಾಳನ ಆಳ್ವಿಕೆಯ ಕುರುಹಾಗಿ ಅನೇಕ ಶಾಸನಗಳು ಈ ನಾಡಿನಲ್ಲಿ ಕಾಣಿಸಿಕೊಳ್ಳುತ್ತವೆ. ಆಗ ಕುವಳಾಲನಾಡು ಕುಂದಾಣಿ ರಾಜ್ಯದ ಭಾಗವಾಗಿದ್ದ ಅಂಶ ಗೋಚರವಾಗುತ್ತದೆ. ಕ್ರಿ.ಶ. ೧೩೨೦ರ ಸುಮಾರಿನಲ್ಲಿ ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಕೊವಳಾಲ ನಾಡಿನಲ್ಲಿ ನಾಡಪ್ರಭುಗಳು ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ. ಕುವಳಾಲನಾಡಿನ ನಾಡಪ್ರಭುಗಳಲ್ಲಿ ಇರುಗಿಸೆಟ್ಟಿ ಎಂಬ ಪಟ್ಟಣಸೆಟ್ಟಿ ಮತ್ತು ಅವನ ವಂಶೀಯರು ಎದ್ದು ಕಾಣುತ್ತಾರೆ. ಕ್ರಿ.ಶ. ೧೩೩೦ರ ಶಾಸನವು[8] ವೀರಬಲ್ಲಾಳನ ಪ್ರಧಾನಿ ಸಿಂಗೆಯ ದಂಡನಾಯಕನ ಮಕ್ಕಳಾದ ಮಹಾಪಸಾಯಿತ ಪೆಮ್ಮಸೆಟ್ಟಿಯ ಉಲ್ಲೇಖ ಬಂದಿದೆ. ಈತನು ಇರುಗಿಸೆಟ್ಟಿಯ ತಮ್ಮ ಹಾಗೂ ಕುವಳಾಲನಾಡಿನ ಅಧಿಕಾರಿಯೂ ಆಗಿರುತ್ತಾನೆ. ಈ ನಾಡಿನ ಇರುಗಸಂದ್ರ ಹಾಗೂ ಪೆಮ್ಮಿಸೆಟ್ಟಿ ಹಳ್ಳಿಗಳೆಂಬ ಸ್ಥಳನಾಮಗಳು ಇವರ ಪ್ರಾಬಲ್ಯದ ಕುಹುಗಳಾಗಿವೆ.

ಹೊಯ್ಸಳರ ಕಾಲದಲ್ಲೇ ಇದ್ದ ಸೊಣ್ಣಯನಾಯಕ ಅಥವಾ ಸೊಂಣಗೌಂಡರ, ಮುತ್ತಣ್ಣಜೀಯರೆಂಬ ಪ್ರಮುಖ ನಾಡಪ್ರಭುಗಳೇ ವಿಜಯನಗರ ಕಾಲದಲ್ಲೂ ಕೋಳಾಲನಾಡ ನಾಡಪ್ರಭುಗಳಾಗಿ ಮುಂದುವರೆದಿರುವುದು ಗಮನ ಸೆಳೆಯುತ್ತದೆ. ವಿಜಯನಗರದ ಇಮ್ಮಡಿ ಹರಿಹರನ ಒಬ್ಬ ಸೇನಾನಿಯಾಗಿದ್ದ ನಾಗಣ್ಣ ಒಡೆಯನ ಮಗ ದೀಪಂಣ ಅಥವಾ ದೇವಣ್ಣ ಒಡೆಯನ ಆಳ್ವಿಕೆ ಈ ಪ್ರದೇಶದ ಮೇಲೆ ನಡೆದಿರುತ್ತದೆ.[9]

8 ಅದೇ., ೭೦

9 ಈತನೇ ಸುಗಟೂರು ಅರಸರ ಮೂಲಪುರುಷನೆಂದು ತೋರುತ್ತದೆ

ಖಂಡಿಕಾಜಿ ರಾಯರ ಗಂಡ' ಎಂಬ ಬಿರುದನ್ನು ಈತನು ಹೊಂದಿದ್ದನು. ಈತನ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿ ಮತ್ತು ಇಷ್ಟಕಾಮ್ಯಾರ್ಥಗಳ ಸಿದ್ಧಿಗಾಗಿ ಕೋಳಾಲದ ನಾಡಪ್ರಭುಗಳಾದ ಸೋಂಣಜೀಯ, ಮುಕ್ಕಣಜೀಯ, ಇರುಗಿಸೆಟ್ಟಿ ಹಾಗೂ ಮನೆಯ ಅಧಿಕಾರಿ ಸಾದಲಿಯ ಲಕ್ಕಪ್ಪರಸರೇ ಮುಂತಾದವರು, ಕೋಲಾರದ ಕೋಲಾರಮ್ಮ, ಮಡಿವಾಳದ ಮೂಲೇಶ್ವರ ದೇವರುಗಳಿಗೂ, ಕೊತ್ತನೂರು, ಗರುಡನಪಾಳ್ಯ ಮುಂತಾದ ಸ್ಥಳಗಳಲ್ಲೂ ದಾನದತ್ತಿಗಳನ್ನು ಬಿಟ್ಟಿರುತ್ತಾರೆ.

ಕ್ರಿ.ಶ. ಸು. ೧೪೨೦ರ ನಂತರದ ಶಾಸನಗಳಲ್ಲಿ ಕೋಳಾಲನಾಡಿನ ಸ್ಥಳೀಯ ಆಡಳಿತಗಾರರ ಸ್ಪಷ್ಟ ಚಿತ್ರ ದೊರೆಯುವುದಿಲ್ಲ. ಕ್ರಿ.ಶ. ೧೪೭೯ರ ಶಾಸನವು ಹುಲಿಹಲಿ ರಾಮಯ ಅರಸನನ್ನು ಪ್ರಸ್ತಾಪಿಸುತ್ತದೆ. ಮಹಾಮಂಡಳೇಶ್ವರ ತಿಮ್ಮಯ್ಯದೇವ ಮಹಾ ಅರಸುಗಳ ಕುಮಾರ ನರಸಯ್ಯದೇವ ಮಹಾರಾಯ, ರಾಮರಾಜಯ್ಯನ ಕಾರ್ಯಕ್ಕೆ ಕರ್ತರಾದ ದಿಲುಪರುಖಾನ, ಮುಂತಾದವರ ಪ್ರಸ್ತಾಪ ಶಾಸನಗಳಲ್ಲಿ ಬಂದಿದೆ. ಕ್ರಿ.ಶ. ೧೫೬೫ರ ಕೆಂದಟ್ಟಿ ಗ್ರಾಮದ ಶಾಸನವು[10] ಸುಗುಟೂರು ತಮ್ಮಪ್ಪಗೌಡನನ್ನು ಉಲ್ಲೇಖಿಸುತ್ತದೆ. ಕೋಟೂರು ಬಸವಾಪುರದ ಶಾಸನದಲ್ಲಿ ಸುಗುಟೂರು ಮುಮ್ಮಡಿ ತಮ್ಮೇಗೌಡನ ಉಲ್ಲೇಖ ಬಂದಿದೆ. ಕ್ರಿ.ಶ. ೧೬೯೯ರ ಗುಮ್ಮರೆಡ್ಡಿಪುರ ಶಾಸನ,[11] ಕ್ರಿ.ಶ. ೧೬೩೧ರ ಹರಡಿ ಚಾವಡಿ ಶಾಸನಗಳು[12] ಸುಗುಟೂರು ಅರಸರ ಕಾಲದವಾಗಿವೆ. ಮೇಲಿನ ಉಲ್ಲೇಖಗಳನ್ನು ಗಮನಿಸಿದರೆ, ಸುಗುಟೂರು ಅರಸರ ಆಳ್ವಿಕೆ ಈ ಪ್ರದೇಶದ ಮೇಲೆ ದೃಢವಾಗಿ ನೆಲೆಗೊಳ್ಳುವವರೆಗೂ ಒಂದು ರೀತಿಯ ಅನಾಯಕತ್ವ ಉಂಟಾಗಿದ್ದಿತೆನ್ನಬಹುದು. ಕ್ರಿ.ಶ. ೧೫೫೦–೭೦ರ ಅವಧಿಯಲ್ಲಿ ಸುಗುಟೂರು ಅರಸರು ಕೋಳಾಲನಾಡಿನ ಮೇಲೆ ತಮ್ಮ ಆಡಳಿತವನ್ನು ದೃಢವಾಗಿ ಸ್ಥಾಪಿಸಿದರೆಂದು ತೋರುತ್ತದೆ.

ಶ್ರೀರಂಗರಾಯನ ಕ್ರಿ.ಶ. ೧೬೪೨[13] ಹಾಗೂ ೧೬೪೫ರ[14] ಶಾಸನಗಳು ಈ ನಾಡಿನಲ್ಲಿ ಕಂಡುಬಂದಿವೆಯಾದರೂ ಆ ವೇಳೆಗಾಗಲೇ ಕೋಳಾಲನಾಡು ಬಿಜಾಪುರದ ಸುಲ್ತಾನನ ಪಾದಾಕ್ರಾಂತವಾಗಿ (ರಣದುಲ್ಲಾಖಾನ್ ಮತ್ತು) ಮರಾಠರ ಷಹಜಿಯ ಜಹಗೀರಾಗಿ ಹೋಗಿದ್ದಿತು. ಹೀಗಾಗಿ ಈ ನಾಡಿನಲ್ಲಿ ಮರಾಠರ ಶಾಸನಗಳೂ ಕಾಣಿಸಿಕೊಂಡಿವೆ. ಕ್ರಿ.ಶ. ೧೬೫೪ರ ಮುದವಾಡಿಯ ಶಾಸನವು[15] ಶ್ರೀ ಮದ್ರಾಜಾಧಿರಾಜ ರಾಜಮಾನ್ಯ ಶ್ರೀ ಶಂಭೋಜಿರಾಜಮಹಾರಾಜನನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೬೬೦ರ ಉತ್ತನೂರು ಶಾಸನವು[16] ಈತನನ್ನು ಚಕ್ರವರ್ತಿ ಎಂದು ವರ್ಣಿಸಿದೆ. ಕ್ರಿ.ಶ. ೧೬೬೨ರ ತಿಪ್ಪೇನಹಳ್ಳಿ ಗ್ರಾಮದ ಶಾಸನ[17] ಏಕೋಜಿರಾಜನ ಆಳ್ವಿಕೆಯನ್ನು ಸೂಚಿಸುತ್ತದೆ. ಕ್ರಿ.ಶ. ೧೬೬೩ರ ಹೋಳೂರು ಗ್ರಾಮದ ಶಾಸನವೂ[18] ಶಂಭಾಜಿ ರಾಜನನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೬೬೭ರ ಹುತ್ತೂರು ಶಾಸನ[19] ಶಂಭಾಜಿರಾಜನ ಕುಲಸ್ತ್ರೀಯಾದ ಜಯತಾಬಾಯಿಯ ಉಲ್ಲೇಖವನ್ನು ಮಾಡುತ್ತದೆ. ಕ್ರಿ.ಶ. ೧೬೮೫ರ ಶಾಸನವೊಂದು[20] ಶಂಭೋಜಿರಾಜರಪುತ್ರ ಮಾಲುಕೋಜಿರಾಜ

---

10 ಎಪಿಗ್ರಾಫಿಯ ಕರ್ನಾಟಿಕ, XVII, ಕೋಲಾರ ३೦४

11 ಅದೇ, X, ಕೋಲಾರ ೨೦೪

12 ಅದೇ, ೨೫೧

13 ಅದೇ, ೧೬೩

14 ಅದೇ, ಮುಳಬಾಗಲು ೬೦

15 ಅದೇ, ಕೋಲಾರ ೧೯೩

16 ಅದೇ, ಮುಳಬಾಗಲು ೧೧೭

17 ಅದೇ, ಶಿಡ್ಲಘಟ್ಟ ೪೭

18 ಅದೇ, ಕೋಲಾರ ೨೧೯

19 ಅದೇ, ೨೨೭

20 ಅದೇ, ಚಿಂತಾಮಣಿ ೫೪

ರಾದ ರಾಜಶ್ರೀ ಶಿವಾಜಿರಾಜಮಹಾರಾಜರ ಆಳ್ವಿಕೆಯನ್ನು ಪ್ರಸ್ತಾಪಿಸುತ್ತದೆ.

ಕ್ರಿ.ಶ. ೧೭೧೨ರ ನಂತರದ ಶಾಸನಗಳಲ್ಲಿ[21] ಮೊಗಲರ ಆಳ್ವಿಕೆಯ ಕುರುಹುಗಳಾಗಿ ವಕ್ಕಲೇರಿ ಮತ್ತು ಪೆಮ್ಮಶೆಟ್ಟಿಹಳ್ಳಿ ಶಾಸನಗಳು ದಾಖಲಾಗಿವೆ. ಅವನ್ನು ಗಮನಿಸಿದರೆ, ಮೊಗಲರ ಆಳ್ವಿಕೆಯಲ್ಲಿ ಸ್ಥಳೀಯರ ಕೈವಾಡವೂ ಇರುವುದು ಮನಗಾಣಬಹುದಾಗಿದೆ.

ಮೈಸೂರು ಅರಸರ ಅಂದರೆ ಹೈದರಾಲಿಯ ಆಳ್ವಿಕೆಯ ಕಾಲಕ್ಕೆ ಸೇರಿದ ಕ್ರಿ.ಶ.೧೭೪೩ ಹಾಗೂ ಕ್ರಿ.ಶ. ೧೭೪೮ರ ಶಾಸನಗಳು[22] ಲಭ್ಯವಿದ್ದು ಅವುಗಳಲ್ಲಿ ಅಧಿರಾಜನ ಉಲ್ಲೇಖವಿಲ್ಲ. ಆನಂತರ ಅಂದರೆ ಟಿಪ್ಪುವಿನ ಪತನದ ನಂತರ ಕೋಳಾಲನಾಡು ಪ್ರದೇಶವು ಮೈಸೂರು ರಾಜವಂಶೀಯರ ಸಂಸ್ಥಾನದ ವ್ಯಾಪ್ತಿಗೆ ಒಳಪಟ್ಟಿತು. ಹೀಗೆ ರಾಜಕೀಯವಾಗಿ ಅನೇಕ ಸ್ಥಿತ್ಯಂತರಗಳನ್ನು ಕಂಡರೂ, ಕೋಳಾಲನಾಡಿನ ಕೇಂದ್ರ ಸ್ಥಳವಾದ 'ಕೋಳಾಲ' ಅಂದರೆ ಇಂದಿನ 'ಕೋಲಾರ'ವು ಒಂದು ಪ್ರಮುಖ ಆಡಳಿತ ಕೇಂದ್ರವಾಗಿಯೇ ಮುಂದುವರೆಯುತ್ತಾ ಬಂದಿರುವುದು ಒಂದು ವೈಶಿಷ್ಟ್ಯವೆನಿಸಿದೆ.

ಈ ನಾಡಿನ ಕೇಂದ್ರ ಸ್ಥಳವಾದ ಕೋಲಾಳ ಅಂದರೆ ಕೋಲಾರದ ಮುಖ್ಯ ದೇವತೆಯಾದ ಕೋಲಾರಮ್ಮನು, ಈ ಊರಿನ, ಈ ನಾಡಿನ ಸಾಂಸ್ಕೃತಿಕ ಬದುಕಿನಲ್ಲಿ ಬಹು ಮುಖ್ಯ ಪಾತ್ರವಹಿಸಿರುವುದು ಶಾಸನಗಳಿಂದ ಮನಗಾಣ




21 ಎಪಿಗ್ರಾಫಿಯ ಕರ್ನಾಟಿಕ, ಕೋಲಾರ ೭೪
22 ಅದೇ, ಬೌರಿಂಗ್‌ಪೇಟೆ ೬೪, ಕೋಲಾರ ೩

ಬಹುದಾಗಿದೆ. ಈಕೆಯ ಪ್ರಸ್ತಾಪ ಹತ್ತನೆಯ ಶತಮಾನದ ನಂತರವಷ್ಟೇ ಶಾಸನಗಳಲ್ಲಿ ಕಂಡುಬಂದರೂ, ಗಂಗರ ಕಾಲಕ್ಕಾಗಲೇ ಈ ದೇವಿಯ ಆರಾಧನೆ ಈ ಸ್ಥಳದಲ್ಲಿ ನಡೆಯುತ್ತಾ ಇದ್ದಿರಬೇಕೆನಿಸುತ್ತದೆ. ಹಿಂದೆ ಇಟ್ಟಿಗೆಯ ರಚನೆಯಾಗಿದ್ದ ದೇವಾಲಯವು ಚೋಳರ ಕಾಲದಲ್ಲಿ ಶಿಲಾಮಯವಾಗಿ ಜೀರ್ಣೋದ್ಧಾರವಾದ ವಿವರ ಶಾಸನಗಳಲ್ಲಿ[23] ದಾಖಲಾಗಿದೆ. ಈ ದೇವಾಲಯವು ವಾಸ್ತವವಾಗಿ ಸಪ್ತಮಾತೃಕಾ ದೇವಾಲಯವಾಗಿದ್ದು ಮೃಣ್ಮಯ ಮೂರ್ತಿಗಳು ಹಾಗೂ ಶಿಲಾಮೂರ್ತಿಗಳನ್ನೂ ಒಳಗೊಂಡ ದೇವಾಲಯವಾಗಿದೆ. ಸಪ್ತಮಾತೃಕೆಯರ ಸಾಲಿನಲ್ಲಿರುವ ಚಾಮುಂಡಿಯೇ ಕೋಲಾರಮ್ಮನೆಂದು ಪೂಜೆಗೊಳ್ಳುತ್ತಿರುವ ದೇವಿಯಾಗಿದ್ದಾಳೆ. ಈಕೆಯನ್ನು ಶಾಸನಗಳಲ್ಲಿ ಪಿಡಾರಿಯಾರ್[24] ಎಂದೂ, ಪಟ್ಟಾಲಿಕೀ (ಭಟ್ಟರಿಕಾ)[25] ಎಂದು ಕರೆಯಲಾಗಿದೆ. ಕ್ರಿ.ಶ. ೧೨೮೦ರ ಶಾಸನವು[26] ಈ ದೇವಿಯನ್ನು 'ಕುವಳಾಲ ನಾಚೀಯಾರ್' ಎಂದು ಕರೆದಿದೆ. ಕ್ರಿ.ಶ. ೧೫೩೮ರ ಶಾಸನವು[27] "... ಮುಚುಕುಂದಾ ಶ್ರೀಮತ್ ಕಾಲನೇಮಿ ದಹನ ಕೋಳಾಲಕೆ ಪ್ರತಿನಾಮವಾದ ಕೋಳಾಲ ಭಾರ್ಗವ ಪರುಶುರಾಮ ಪ್ರತಿಷ್ಠೆ ಕೋಳಾಲದೇವಿ ಚತುರ್ಯುಗ ಪೂಜಿತ ಪುಣ್ಯ ಕ್ಷೇತ್ರವಾದ ದೇವಸ್ಥಾನ" ಎಂದು ಕೀರ್ತಿಸಿದೆ. ಈ ದೇವಿಯ ಪೂಜಾ ಕೈಂಕರ್ಯಕ್ಕೆ ಚೋಳ, ಹೊಯ್ಸಳರ ಕಾಲದಲ್ಲಿ ಅನೇಕ ಗ್ರಾಮಗಳನ್ನು ದತ್ತಿ ಬಿಟ್ಟಿದ್ದ ವಿವರ ಶಾಸನಗಳಲ್ಲಿ ದಾಖಲಾಗಿದೆ. ಈ ದೇವಾಲಯದಲ್ಲಿ ನಡೆಯುತ್ತಿದ್ದ ಪೂಜಾ ಕೈಂಕರ್ಯ, ಆಚರಣೆ ಇತ್ಯಾದಿಗಳ ವಿವರವೇ ಪ್ರತ್ಯೇಕ ಅಧ್ಯಯನದ ವಿಷಯವಾಗುತ್ತದೆ. ಒಟ್ಟಾರೆ ಈ ನಾಡಿನ ಸಾಂಸ್ಕೃತಿಕ ಬದುಕಿನಲ್ಲಿ ಕೋಲಾರಮ್ಮ ದೇವಿಯ ಪಾತ್ರ ಅವಿಭಾಜ್ಯವಾಗಿದ್ದಿತೆಂದಷ್ಟೇ ಹೇಳಬೇಕಾಗಿದೆ.

ಕೋಳಾಲನಾಡು ಒಂದು ಆಯಕಟ್ಟಿನ ಸ್ಥಳದಲ್ಲಿರುವುದರಿಂದ ಮೊದಲಿನಿಂದಲೂ ವಾಣಿಜ್ಯ ಚಟುವಟಿಕೆಗಳ ತೊಟ್ಟಿಲು ಆಗಿದ್ದಿತೆನ್ನಬಹುದು. ಪಟ್ಟಣಶೆಟ್ಟಿ ಇರುಗಿಸೆಟ್ಟಿಯ ಪ್ರಸ್ತಾಪ ಈ ಹಿಂದೆಯೇ ಬಂದಿದೆ. ಕ್ರಿ.ಶ. ೧೩೧೯ರ ಶಾಸನವೊಂದು[28] ಆತನನ್ನು 'ನಿಗರಿಲಿ ಚೋಳ ಮಂಡಲದ ಕೋಳಾಲನಾಡಿನ ನಾಡನಾಯಕನಾಗಿರುವ ಇರುಗಿಸೆಟ್ಟಿಯಾರ್' ಎಂದು ಉಲ್ಲೇಖಿಸುತ್ತದೆ. ಅಲ್ಲದೆ ಅದೇ ಶಾಸನದಲ್ಲಿ ಆತನನ್ನು 'ವಡ್ಡವ್ಯವಹಾರಿ' ಉಭಯ ನಾನಾ ದೇಶಿಯರಿಗೂ ಮುಖ್ಯಸ್ಥ, ಕೊಲ್ಲಿಯ ಅಧಿಪತಿ, ಉಪ್ಪನೆಲ್ಲಿಯ ಪುರವರಾಧೀಶ್ವರ ಎಂದು ಕೂಡ ವರ್ಣಿಸಲಾಗಿದೆ. ಅಂದರೆ ಸಮಕಾಲೀನ ವಣಿಕ ಸಮಾಜದಲ್ಲಿ ಇರುಗಿಸೆಟ್ಟಿಗೆ ಇದ್ದ ಸ್ಥಾನಮಾನಗಳು ಇದರಿಂದ ವ್ಯಕ್ತವಾಗುತ್ತದೆ. ಈತನ ಸೋದರನಾದ ಪೆಮ್ಮಸೆಟ್ಟಿಯು ವೀರಬಲ್ಲಾಳನ ಪ್ರಧಾನಿ ಸಿಂಗಯದಂಡನಾಯಕನ ಮಗನಾಗಿದ್ದು ಮಹಾಪಸಾಯಿತ ಹುದ್ದೆಯನ್ನು ಅಲಂಕರಿಸಿದ್ದ. ಈತನು ತನ್ನ ಅಣ್ಣನಾದ ಇರುಗಿಸೆಟ್ಟಿಯ ಹೆಸರಿನಲ್ಲಿ ಇರುಗೇಶ್ವರ ದೇವಾಲಯವನ್ನು ಕೊತ್ತನೂರಿನಲ್ಲಿ ಕಟ್ಟಿಸಿ ಅದೇ ಊರಿನಲ್ಲಿ ಇರುಗಸಮುದ್ರ ಎಂಬ ಕೆರೆಯನ್ನೂ ನಿರ್ಮಾಣ ಮಾಡಿಸುತ್ತಾನೆ.[29] ಕ್ರಿ.ಶ. ೧೪೧೭ರ ಶಾಸನವೊಂದು[30] ಇರುಗಿಸೆಟ್ಟಿಯ ಮಗನಾದ ಬಯಿರಿಸೆಟ್ಟಿಯು ಮಡಿವಾಳದ ಮೂಲೇಶ್ವರ ದೇವರ ಪೂಜಾ ಕೈಂಕರ್ಯಗಳಿಗೆ ದತ್ತಿ ಬಿಟ್ಟಿರುವ ವಿವರವನ್ನು ನೀಡುತ್ತದೆ.

ಹೀಗೆ ಕುವಳಾಲನಾಡಿನಲ್ಲಿ ಇರುಗಿಸೆಟ್ಟಿ ಹಾಗೂ ಆತನ ವಂಶೀಯರು ಹೊಯ್ಸಳ ಹಾಗೂ ವಿಜಯನಗರ ಅರಸರ ಕಾಲದಲ್ಲೂ ಪ್ರಭಾವಶಾಲಿಗಳಾಗಿದ್ದ ವಿವರ ಗಮನಾರ್ಹವಾಗಿದೆ.

---

23 ಎಪಿಗ್ರಾಫಿಯ ಕರ್ನಾಟಿಕ, ಕೋಲಾರ ೧೦೯ಎ, ಕ್ರಿ.ಶ. ೧೦೩೩

24 ಅದೇ, ೧೧೧; ಕ್ರಿ.ಶ. ೧೦೨೭

25 ಅದೇ, ೨೬೨, ಕ್ರಿ.ಶ. ೧೦೫೯

26 ಅದೇ, ೧೧೦

27 ಅದೇ, ೧೧೪

28 ಅದೇ, ೮೨

29 ಅದೇ, ೭೦, ಕ್ರಿ.ಶ. ೧೩೩೦

30 ಅದೇ, ೮೩

ಒಂದು ನಾಡಿಗಷ್ಟೇ ಅಲ್ಲದೆ ದತ್ತಿ ಬಿಟ್ಟ ಅಗ್ರಹಾರ, ದೇವದಾನ, ಮಡಪುರ ದಾನಗಳ ಸಂದರ್ಭದಲ್ಲೂ ರಾಜನ ಹೆಸರು/ಬಿರುದುಗಳನ್ನೊಳಗೊಂಡ ಪ್ರತಿನಾಮವನ್ನು ನೀಡುತ್ತಿದ್ದುದು ಸರ್ವೇಸಾಮಾನ್ಯ. ಹಾಗೇ ಸ್ಥಳೀಯ ಅಧಿಕಾರಿಗಳಾದ ನಾಡಪ್ರಭು, ಗೌಡ ಮುಂತಾದವರ ಹೆಸರಿನೊಂದಿಗೆ ರಾಜನ ಹೆಸರು ಮತ್ತು ಬಿರುದಾವಳಿಗಳು ಕೂಡಿಕೊಂಡಿರುತ್ತವೆ. ಈ ಪ್ರವೃತ್ತಿ ಗಂಗರ ಕಾಲದಲ್ಲೂ ಪ್ರಚಲಿತವಿದ್ದಿತಾದರೂ ತಮಿಳು ಅರಸರಷ್ಟು ವಿಶಿಷ್ಟವಾಗಿ ಇತರರು ಇದನ್ನು ಅನುಸರಿಸಿದಂತೆ ಕಾಣುತ್ತಿಲ್ಲ. ಆದರೆ ಇದು ಅಂದಿನ ರಾಜಕೀಯ ವ್ಯವಸ್ಥೆಯ ಅವಿಭಾಜ್ಯ ಅಂಶವಾಗಿದ್ದಿತೆನ್ನಲು ಕೋಲಾಲ ನಾಡಿನ ಶಾಸನಗಳು ಆಧಾರವಾಗಿವೆ.

ಒಟ್ಟಾರೆ ಗಂಗರಾಜ್ಯದ ಸ್ಥಾಪನೆಯ ನೆಲೆವೀಡಾಗಿ, ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾಗಿ ತನ್ನದೇ ಆದ ವೈಶಿಷ್ಟ್ಯತೆಯನ್ನು 'ಕೋಳಾಲನಾಡು' ಪಡೆದು ಇದ್ದಿತೆಂಬುದನ್ನು ಈ ಪರಿಶೀಲನೆ ಸುವ್ಯಕ್ತಗೊಳಿಸಿದೆ.

ಡಾ॥ ಚನ್ನಬಸಪ್ಪ ಎಸ್. ಪಾಟೀಲ*

# ಹೊಯ್ಸಳರಿಗೆ "ಗಿರಿದುರ್ಗ ಮಲ್ಲ" ಮತ್ತು "ಶನಿವಾರ ಸಿದ್ಧಿ" ಬಿರುದುಗಳನ್ನಿತ್ತ ಉಚ್ಚಂಗಿದುರ್ಗ

ಉಚ್ಚಂಗಿದುರ್ಗ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನಲ್ಲಿ ಹರಪನಹಳ್ಳಿಯಿಂದ ದಕ್ಷಿಣಕ್ಕೆ ೨೮ ಕಿ.ಮೀ. ದೂರದಲ್ಲಿದೆ. ಇಲ್ಲಿರುವ ಎತ್ತರವಾದ ಬೆಟ್ಟದಿಂದ ಇದಕ್ಕೆ ಉಚ್ಚಶೃಂಗ ಎಂದು ಬಂದ ಹೆಸರು ಮುಂದೆ ಉಚ್ಚಂಗಿಯಾಯಿತು. ಬೆಟ್ಟದ ಮೇಲೆ ಕೋಟೆ ಇರುವುದರಿಂದ ಉಚ್ಚಂಗಿ ದುರ್ಗವೆಂದೂ ಕರೆಯುತ್ತಾರೆ. ಇದೊಂದು ಗಿರಿದುರ್ಗ.

ಉಚ್ಚಂಗಿ ದುರ್ಗಕ್ಕೆ ಕೃತಯುಗದಲ್ಲಿ ಮೇಘನಾದ, ತ್ರೇತಾಯುಗದಲ್ಲಿ ಕನಕಗಿರಿ, ದ್ವಾಪರಯುಗದಲ್ಲಿ ಉತ್ತುಂಗ ಪರ್ವತ ಮತ್ತು ಕಲಿಯುಗದಲ್ಲಿ ಉಚ್ಚಂಗಿ ಪರ್ವತವೆಂದು ಕರೆಯುತ್ತಿದ್ದ ಮಾಹಿತಿಯನ್ನು ಇಲ್ಲಿರುವ ಕ್ರಿ.ಶ. ೧೦೬೪ರ ಶಾಸನವೊಂದು ಕಾರಣ ಸಹಿತ ನೀಡುತ್ತದೆ. ಶಾಸನದ ಪಾಠ ಹೀಗಿದೆ : "ಕದಂಬವಾಡಿ ನಾಡ ಮಧ್ಯದೊಳ್ಮೇರುವಿಪ್ಪಂತಿರ್ಪ್ಪುದುಚ್ಚಂಗಿಯ ಪರ್ವತಂ ಅದಕ್ಕೆ ನಾಲ್ಕು ನಾಮವದೆಂತೆಂದೊಡೆ ಕೃತಯುಗದೊಳು ಮೇಘನಾದನೆಂಬ ರಾಕ್ಷಸಮುಪ್ಪುದರಿಂ ಮೇಘನಾದವೆಂಬುದು ತ್ರೇತಯೋಳ್ ಹಿರಣ್ಯಕನಿವಾಸಮಾತನ ನಾರಾಯಣಂ ವಧೆಗೆಯ್ದಂದಿನೊಸಗೆಯೋಳ್ ಸ್ವರ್ಣವೃಷ್ಟಿ ಕರೆದುದರಿಂ ವೀರಕನಕಗಿರಿಯೆಂಬುದು ದ್ವಾಪರದೊಳುತ್ತುಂಗ ಮಹರಿಷಿ ಆಶ್ರಮಮುಪ್ಪುದರಿಂ ಉತ್ತುಂಗ ಪರ್ವತವೆಂಬುದು ಕಲಿಯುಗದೊಳ್ ಉಚ್ಚಂಗಿಯಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕೆಯರು ತಪಂಗೆಯ್ದೀಶ್ವರ ವರಪ್ರಸಾದದಿಂ ದೇವತ್ವಮಂ ಪಡೆದರದರಿಂದುಚ್ಚಂಗಿಯಹಾ ಪರ್ವತಮೆಂಬುದು.[1]

ಐದನೇ ಶತಮಾನದಲ್ಲಿ ಉಚ್ಚಂಗಿದುರ್ಗವು ಕದಂಬರ ಎರಡನೇ ರಾಜಧಾನಿಯಾಗಿತ್ತು. ಕದಂಬ ರವಿವರ್ಮನ (ಕ್ರಿ.ಶ. ೪೮೫–೫೧೪) ಸಹೋದರ ಶಿವರಥನು ಪ್ರಾಂತ್ಯಾಧಿಕಾರಿಯಾಗಿ ಉಚ್ಚಂಗಿಯಿಂದ ಆಳುತ್ತಿದ್ದನು.[2]

ಕಾಡುವಟ್ಟಿ ಎಂಬುವನು ಈ ಕೋಟೆಯನ್ನು ದೀರ್ಘ ಕಾಲದವರೆಗೆ ಮುತ್ತಿ ಸ್ಥಳೀಯರನ್ನು ತನ್ನ ಶೌರ್ಯದಿಂದ ದಂಗುಬಡಿಸಿದರೂ ಅವನಿಂದ ಕೋಟೆಯನ್ನು ಗೆಲ್ಲಲಾಗದೆ ಹಿಂದುರುಗಿದನು. ಇಂತಹ ಅಭೇದ್ಯವಾದ ಕೋಟೆಯನ್ನು ಚಾಲುಕ್ಯರ ಚೂಡಾಮಣಿಯೆಂದು ಕರೆಯಿಸಿಕೊಂಡ ರಾಜಾದಿತ್ಯನು ಆಳುತ್ತಿದ್ದಾಗ ಗಂಗ ವಂಶದ ಎರಡನೇ ಮಾರಸಿಂಹನು ಕ್ರಿ.ಶ. ೯೭೧ರಲ್ಲಿ ಕೋಟೆಯನ್ನು ಮುತ್ತಿ ವಶಪಡಿಸಿಕೊಂಡನು.[3] ಈ

---

* ಉಪ ನಿರ್ದೇಶಕರು, ಪುರಾತತ್ತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಕರ್ನಾಟಕ ಸರ್ಕಾರ, ಮೈಸೂರು

1 ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಶನ್ಸ್, ಸಂ. IX, ಭಾಗ ೧, ಶಾಸನ ಸಂಖ್ಯೆ ೧೨೬.

2 ಪಿ. ಬಿ. ದೇಸಾಯಿ., ಎ ಹಿಸ್ಟರಿ ಆಫ್ ಕರ್ನಾಟಕ, ಪು. ೬೨

3 ಎಪಿಗ್ರಾಫಿಯ ಕರ್ನಾಟಕ, ಸಂ. II, ಶ್ರವಣಬೆಳ್ಗೊಳ ೫೯, ಎಂ.ಎ.ಆರ್., ೧೯೧೦-೧೧, ಪು. ೩೭

ಕೋಟೆಯನ್ನು ಜಯಿಸುವುದರಲ್ಲಿ ಚಾಮುಂಡರಾಯನ ಪಾತ್ರ ಮಹತ್ವದ್ದಾಗಿದ್ದುದರಿಂದ ಅವನಿಗೆ "ರಣರಂಗ ಸಿಂಹ" ಎಂಬ ಬಿರುದನ್ನು ಕೊಡಲಾಯಿತು.[4]

ಕ್ರಿ. ಶ. ೧೦೬೪ರಲ್ಲಿ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲನ ಮಗ ವಿಷ್ಣುವರ್ಧನ ವಿಜಯಾದಿತ್ಯ ದೇವ ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದಾಗ ದೇವಪಯ್ಯನು ಉಚ್ಚಂಗಿ ೩೦ನ್ನು ಆಳುತ್ತಿದ್ದನು.[5] ಹನ್ನೆರಡನೇ ಶತಮಾನದಲ್ಲಿ ನೊಳಂಬವಾಡಿ ೩೨೦೦೦ ವನ್ನು ಆಳುತ್ತಿದ್ದ ಪಾಂಡ್ಯರು ಉಚ್ಚಂಗಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ರಾಯಪಾಂಡ್ಯ, ವೀರಪಾಂಡ್ಯ ಮತ್ತು ವಿಜಯಪಾಂಡ್ಯ (ಕಾಮದೇವ) ಈ ವಂಶದ ಅರಸರು. ಹೊಯ್ಸಳ ವಿಷ್ಣುವರ್ಧನ ಕ್ರಿ.ಶ. ೧೧೩೧ರಲ್ಲಿ ಉಚ್ಚಂಗಿಯನ್ನು ಗೆದ್ದನಾದರೂ ಅದರ ಮೇಲೆ ತನ್ನ ಪ್ರಭುತ್ವವನ್ನು ಹೆಚ್ಚುಕಾಲ ಉಳಿಸಿ ಕೊಳ್ಳಲಾಗಲಿಲ್ಲ. ಕ್ರಿ.ಶ. ೧೧೭೭ರಲ್ಲಿ ಹೊಯ್ಸಳ ಎರಡನೇ ಬಲ್ಲಾಳ ಉಚ್ಚಂಗಿಯನ್ನು ಗೆದ್ದ ಘಟನೆಯ ಮಹತ್ವವನ್ನು ಹಲವು ಶಾಸನಗಳಲ್ಲಿ ಕೆಳಗಿನಂತೆ ಉಲ್ಲೇಖಿಸಲಾಗಿದೆ.[6]

ಉಚ್ಚಂಗಿಯ ಕಂದಕವು ಪಾತಾಳದಂತಿತ್ತು. ಉಚ್ಚಂಗಿಯು ಅಷ್ಟದಿಕ್ಕುಗಳಷ್ಟು ಅಗಲ ಮತ್ತು ಆಕಾಶದಷ್ಟು ಎತ್ತರವಿದ್ದು, ಮೂರು ಲೋಕಗಳಲ್ಲಿ ಖ್ಯಾತಿ ಪಡೆದಿತ್ತು. ಚೋಳ ಅರಸನು ಹನ್ನೆರಡು ವರ್ಷಗಳ ಕಾಲ ಈ ಕೋಟೆಗೆ ಮುತ್ತಿಗೆ ಹಾಕಿದರೂ ಗೆಲ್ಲಲಾರದೆ ಹಿಂತಿರುಗಿದನು. ಇಂತಹ ಅಭೇದ್ಯವಾದ ಕೋಟೆಯನ್ನು ಬಲ್ಲಾಳನು ಅಣೆಕಲ್ಲುಗಳನ್ನು ಆಡಿದಷ್ಟು ಸುಲಭವಾಗಿ ಗೆದ್ದನು. ಈ ಗಿರಿದುರ್ಗವನ್ನು ಗೆದ್ದುದರ ನೆನಪಿಗೆ "ಗಿರಿದುರ್ಗಮಲ್ಲ" ಎಂಬ ಬಿರುದನ್ನು ಪಡೆದನು. ಜಯವು ಶನಿವಾರ ಸಿದ್ಧಿಸಿದುದರಿಂದ "ಶನಿವಾರಸಿದ್ಧಿ" ಎಂಬ ಮತ್ತೊಂದು ಬಿರುದನ್ನು ಪಡೆದನು. ಯುದ್ಧದಲ್ಲಿ ಸೋತು ಸೆರೆಸಿಕ್ಕ ಪಾಂಡ್ಯ ಕಾಮದೇವನಿಗೆ ಅವನ ರಾಜ್ಯ ವನ್ನು ಬಿಟ್ಟುಕೊಟ್ಟು ಆಳಲು ಅನುಮತಿ ನೀಡಿದನು.

ಎರಡನೇ ಬಲ್ಲಾಳನ ನಂತರ ಆಳಿದ ಎರಡನೇ ನರಸಿಂಹ, ಸೋಮೇಶ್ವರ, ಮೂರನೇ ನರಸಿಂಹ, ಮೂರನೇ ಬಲ್ಲಾಳ ಮುಂತಾದ ಹೊಯ್ಸಳ ಅರಸರು ಎರಡನೇ ಬಲ್ಲಾಳ ಪಡೆದ "ಗಿರಿದುರ್ಗಮಲ್ಲ" ಮತ್ತು "ಶನಿವಾರಸಿದ್ಧಿ" ಬಿರುದುಗಳನ್ನು ತಮ್ಮ ಹೆಸರು ಗಳೊಂದಿಗೆ ಸೇರಿಸಿಕೊಳ್ಳುವ ಸಂಪ್ರದಾಯವನ್ನು ಮುಂದುವರಿಸಿದರು. ಹೀಗೆ ಉಚ್ಚಂಗಿ ದುರ್ಗದಿಂದ ಹೊಯ್ಸಳ ಅರಸರಿಗೆ ಈ ಎರಡು ಬಿರುದುಗಳು ಬಂದವು.

ವಿಜಯನಗರದ ಪತನದ ನಂತರ ಉಚ್ಚಂಗಿ ಹರಪನಹಳ್ಳಿ ಪಾಳೆಯಗಾರರ ವಶವಾಯಿತು. ಈ ವಂಶದ ಮೂಲಪುರುಷ ದಾದಯ್ಯನಾಯಕ. ಈತನು ಚಿತ್ರದುರ್ಗದ ಪಾಳೆಯಗಾರನಾದ ಜಕ್ಕಣ್ಣನಾಯಕನ ಸಂಬಂಧಿಯಾಗಿದ್ದ. ಜಕ್ಕಣ್ಣನಾಯಕ ತನ್ನ ಮೇಲೆ ಯುದ್ಧಕ್ಕೆ ಬಂದ ಕೆಂಗಣ್ಣನಾಯಕನನ್ನು ಸೋಲಿಸಲು ದಾದಯ್ಯನ ಸಹಾಯ ಕೇಳಿದ. ದಾದಯ್ಯನು ಕೆಂಗಣ್ಣ ನಾಯಕನನ್ನು ಸೋಲಿಸಿದ. ಆಗ ಜಕ್ಕಣ್ಣನಾಯಕ ತನ್ನ ಮಗಳು ಹೊನ್ನಾಯಿ ನಾಯಕಿಯನ್ನು ದಾದಯ್ಯನಿಗೆ ಕೊಟ್ಟು ಮದುವೆ ಮಾಡಿ ಚಿತ್ರದುರ್ಗ ಪ್ರಾಂತ್ಯದ ಸ್ವಲ್ಪ ಭಾಗವನ್ನು ಮತ್ತು ಉಚ್ಚಂಗಿದುರ್ಗವನ್ನು ಬಳುವಳಿ ಯಾಗಿ ಕೊಟ್ಟ. ಮುಂದೆ ದಾದಯ್ಯ ಮತ್ತು ಜಕ್ಕಣ್ಣರ ನಡುವೆ ವಿರಸವುಂಟಾಗಿ ಯುದ್ಧ ನಡೆದಾಗ ಹೊನ್ನಾಯಿ ತನ್ನ ತಂದೆಗೆ ಸಹಾಯ ಮಾಡಿದುದಕ್ಕೆ ದಾದಯ್ಯ ಅವಳನ್ನು ಉಚ್ಚಂಗಿದುರ್ಗದ ಮೇಲಿಂದ ತಳ್ಳಿ ಕೊಂದ ನೆಂದು ಪ್ರತೀತಿ.

ಉಚ್ಚಂಗಿದುರ್ಗದ ಬೆಟ್ಟ ಉತ್ತರ–ದಕ್ಷಿಣ ದಿಕ್ಕಿನಲ್ಲಿ ಉದ್ದವಾಗಿ ಹರಡಿದೆ. ಅತ್ಯಂತ ಎತ್ತರವಾದ ಉತ್ತರ ತುದಿಯಲ್ಲಿ ದುರ್ಗದ ಅಧಿದೇವತೆಯಾದ ಉಚ್ಚಂಗಿ ಯಮ್ಮನ ದೇವಾಲಯವಿದೆ. ದೇವಾಲಯವು ಇತ್ತೀಚಿನ ವರ್ಷಗಳಲ್ಲಿ ಸಂಪೂರ್ಣವಾಗಿ ಪುನರ್ ನಿರ್ಮಾಣ ಗೊಂಡಿದೆ: ದೇವಾಲಯದ ಮುಂದಿರುವ ಕಡಿದಾದ

---

4 ಬಿ. ಷೇಕ್ ಅಲಿ., ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್, ಪು. ೧೪೩.

5 ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಶನ್ಸ್, ಸಂ. IX, ಭಾಗ-೧, ಶಾಸನ ಸಂಖ್ಯೆ ೧೨೬

6 ಎಪಿಗ್ರಾಫಿಯ ಕರ್ನಾಟಿಕ, ಸಂ. II, ಶ್ರವಣಬೆಳ್ಗೊಳ ೩೨೭, ಸಂ. V, ಚನ್ನರಾಯಪಟ್ಟಣ ೨೦೯, ಬೇಲೂರು ೭೨, ೧೩೭ ಮತ್ತು ೧೭೫, ಅರಸೀಕೆರೆ ೧೭೪

ದಾರಿಯ ಇಕ್ಕೆಲಗಳಲ್ಲಿ ದೇವರ ಅರ್ಚಕರ ವಂಶದವರ ಮತ್ತು ದೇವರ ಸೇವೆಯಲ್ಲಿ ನಿರತರಾದವರ ಹಲವು ಮನೆಗಳಿವೆ. ಬೆಟ್ಟವು ಉತ್ತರ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಕಡಿದಾಗಿದ್ದು ದಕ್ಷಿಣ ದಿಕ್ಕಿಗೆ ಇಳಿಜಾರಾಗಿದೆ. ಪುನಃ ದಕ್ಷಿಣ ಭಾಗದಲ್ಲಿ ಎತ್ತರಕ್ಕೆ ಹೋಗಿ ಇನ್ನೊಂದು ಚಿಕ್ಕ ಬೆಟ್ಟ ನಿರ್ಮಾಣವಾಗಿದೆ. ಎರಡು ಬೆಟ್ಟಗಳ ನಡುವೆ ಚಿಕ್ಕ ಬಯಲು ಇದೆ. ಎರಡು ಬೆಟ್ಟಗಳ ಸುತ್ತಲೂ ಕೋಟೆ ಇದೆ. ಬೆಟ್ಟದ ತುದಿಯನ್ನು ತಲುಪಲು ಒಂದೇ ದಾರಿಯಿದೆ. ಈ ದಾರಿ ಊರಿನಿಂದ ಪಶ್ಚಿಮಕ್ಕೆ ಸಾಗಿ ಬೆಟ್ಟವನ್ನು ಹತ್ತುತ್ತ ಮೊದಲ ಎರಡು ಬಾಗಿಲುಗಳನ್ನು ದಾಟಿ ಪಶ್ಚಿಮಾಭಿಮುಖವಾಗಿ ಸಾಗಿ ಮೂರನೇ ಬಾಗಿಲನ್ನು ದಾಟಿ ಬೆಟ್ಟಗಳ ಮಧ್ಯದ ಬಯಲನ್ನು ಸೇರುತ್ತದೆ. ಇಲ್ಲಿಂದ ಮುಂದೆ ಉತ್ತರ ದಿಕ್ಕಿಗೆ ಸಾಗಿ ನಾಲ್ಕು ಬಾಗಿಲುಗಳನ್ನು ದಾಟಿ ಬೆಟ್ಟದ ತುದಿಯನ್ನು ತಲುಪುತ್ತದೆ. ಈ ದಾರಿಯು ಬಳಸುದಾರಿಯಾಗಿರುವುದರಿಂದ ದಕ್ಷಿಣ ದಿಕ್ಕಿನಲ್ಲಿ ಬೆಟ್ಟಕ್ಕೆ ನೇರವಾಗಿ ಹತ್ತಲು ಮೆಟ್ಟಿಲುಗಳನ್ನು ನಿರ್ಮಿಸಲಾಗುತ್ತಿದೆ. ಈ ದಾರಿಯು ಹಿಂದಿನಿಂದಲೂ ಬಳಕೆಯಲ್ಲಿದೆಯಾದರೂ ಮೇಲಿರುವ ಕೋಟೆಯಲ್ಲಿ ಯಾವುದೇ ಬಾಗಿಲು ಇರುವ ಗುರುತುಗಳಿಲ್ಲ. ಈ ದಾರಿ ಕೋಟೆ ಬಿದ್ದಿರುವ ಭಾಗದಲ್ಲಿ ಕೋಟೆಯನ್ನು ಹಾದು ಮುಂದೆ ಹೋಗುತ್ತದೆ.

ಹೊರಗಿನಿಂದ ಕೋಟೆಯನ್ನು ಪ್ರವೇಶಿಸುವಾಗ ಸಿಗುವ ಮೊದಲನೇ ಬಾಗಿಲನ್ನು ಮಳಿ ಬಾಗಿಲೆಂದು ಕರೆಯುತ್ತಾರೆ. ಚೌಕಾಕಾರದ ಎರಡು ದೊಡ್ಡ ಕೊತ್ತಳಗಳ ಮಧ್ಯದಲ್ಲಿರುವ ಈ ಬಾಗಿಲು ದೂರದಿಂದ ಬೇಗನೆ ಗೋಚರಿಸುವುದಿಲ್ಲ. ಉತ್ತರಾಭಿಮುಖವಾಗಿರುವ ದೊಡ್ಡ ಬಾಗಿಲಿನ ಮೇಲೆ ಲಿಂಗವನ್ನು ಕೆತ್ತಿದೆ. ಎರಡು ಆನೆಗಳು ಲಿಂಗದ ಮೇಲೆ ನೀರನ್ನು ಸುರಿಯುತ್ತಿವೆ. ಈ ಬಾಗಿಲಿನ ಹತ್ತಿರದಲ್ಲಿಯೇ ಎರಡನೇ ಬಾಗಿಲಿದೆ. ಇದೂ ಸಹ ಉತ್ತರಾಭಿಮುಖವಾಗಿರುವ ದೊಡ್ಡ ಬಾಗಿಲು. ಬಾಗಿಲಿನ ಮೇಲೆ ಗಣೇಶನ ಶಿಲ್ಪವಿದೆ. ದೊಡ್ಡ ಬಾಗಿಲಿನ ಪಕ್ಕದಲ್ಲಿ ಒಂದು ಚಿಕ್ಕ ಬಾಗಿಲಿದೆ. ದೊಡ್ಡ ಬಾಗಿಲನ್ನು ಮುಚ್ಚಿದಾಗ ಉಪಯೋಗಿಸಲು ಚಿಕ್ಕ ಬಾಗಿಲನ್ನು ನಿರ್ಮಿಸಲಾಗಿದೆ. ಈ ಬಾಗಿಲುಗಳಿರುವ ಗೋಡೆಯ ಮೇಲೆ ದೊಡ್ಡಗಾತ್ರದ ತೆನೆಗಳಿವೆ. ದಾರಿಯಲ್ಲಿ ಮುಂದೆ ಸಾಗುವಾಗ ದಾರಿಯ ಪೂರ್ವಕ್ಕೆ ಆಯುತಾಕಾರದ ದೊಡ್ಡ ಕಣಜವಿದೆ. ಇದರ ಗಾರೆ ಮಾಡಿದ ಗೋಡೆಗಳು ಮೇಲಕ್ಕೆ ಹೋದಂತೆ ಒಳಕ್ಕೆ ವಾಲುತ್ತವೆ. ಇದರ ಚಿಕ್ಕ ಬಾಗಿಲನ್ನು ನೆಲಮಟ್ಟದಲ್ಲಿ ನಿರ್ಮಿಸದೆ ಎತ್ತರದಲ್ಲಿ ನಿರ್ಮಿಸಲಾಗಿದೆ. ಇದರ ದಕ್ಷಿಣಕ್ಕೆ ವರ್ತುಲಾಕಾರದ ದೊಡ್ಡ ಬತೇರಿಯಿದೆ.

ಮುಂದೆ ಎರಡನೆಯ ಕೋಟೆ ಎದುರಾಗುತ್ತದೆ. ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿ ಇಂಗ್ಲಿಷ್ 'L' ಆಕಾರದಲ್ಲಿ ಮೊದಲು ದಕ್ಷಿಣಕ್ಕೆ ಆಮೇಲೆ ಪಶ್ಚಿಮಕ್ಕೆ ಹೋಗುವ ದಾರಿ ಪೂರ್ವಾಭಿಮುಖವಾಗಿರುವ ಮೂರನೇ ಬಾಗಿಲಿಗೆ ಕೊಂಡೊಯ್ಯುತ್ತದೆ. ದೊಡ್ಡದಾದ ಈ ಬಾಗಿಲು ಅನೇಕ ಕಂಬಗಳಿಂದ ಕೂಡಿದೆ. ಬಾಗಿಲಿನ ಮುಂದೆ ಉತ್ತರ ಗೋಡೆಗೆ ಹೊಂದಿಕೊಂಡು ಬಸವಣ್ಣನ ಚಿಕ್ಕ ದೇವಾಲಯವಿದೆ. ದೇವಾಲಯಕ್ಕೆ ಸುಂದರವಾಗಿ ಕೆತ್ತಲಾದ ೧೨–೧೩ನೇ ಶತಮಾನದ ಬಾಗಿಲನ್ನು ಅಳವಡಿಸಲಾಗಿದೆ. ಕೋಟೆ ಬಾಗಿಲಿನ ಮುಂದೆ ದಕ್ಷಿಣ ಗೋಡೆಯಲ್ಲಿ ಒಂದು ಚಿಕ್ಕ ದಿಡ್ಡಿ ಬಾಗಿಲಿದೆ.

ಮೂರನೇ ಬಾಗಿಲಿನಿಂದ ಮುಂದೆ ಪಶ್ಚಿಮಕ್ಕೆ ಹೋದಾಗ ಎರಡು ಬೆಟ್ಟಗಳ ಮಧ್ಯದ ಬಯಲು ಪ್ರದೇಶವಿದೆ. ಇಲ್ಲಿಯ ದಾರಿಯಲ್ಲಿ ಪಶ್ಚಿಮಾಭಿಮುಖವಾಗಿ ಸಾಗುವಾಗ ಬಲಕ್ಕೆ ಬಸವಣ್ಣನ ಗುಡಿ ಇದೆ. ಇದರ ಪಕ್ಕದಲ್ಲಿ ೧೦–೧೧ನೇ ಶತಮಾನದ ಅನೇಕ ಕಂಬಗಳು ಬಿದ್ದಿವೆ. ಇಲ್ಲಿಂದ ಮುಂದೆ ಸಾಗಿದರೆ ಎಡಕ್ಕೆ ಒಂದು ಬಾವಿ ಮತ್ತು ಆಯತಾಕಾರದ ಚಿಕ್ಕ ಕಣಜ ಮತ್ತು ಬಲಕ್ಕೆ ಮತ್ತೊಂದು ಬಾವಿ ಇದೆ. ಇಲ್ಲಿಂದ ಮುಂದೆ ಎರಡು ವಿಶಾಲವಾದ ಅಧಿಷ್ಠಾನಗಳಿವೆ. ಇವುಗಳ ಮೇಲೆ ಅರಮನೆಯಂತಹ ಕಟ್ಟಡಗಳಿದ್ದವೆಂದು ತೋರುತ್ತದೆ. ಇನ್ನೂ ಮುಂದೆ ಹೋದಾಗ ಗಣೇಶನ ದೇವಾಲಯವಿದೆ. ಇಲ್ಲಿಂದ ಒಂದು ದಾರಿ ಉತ್ತರಕ್ಕೆ ಬೆಟ್ಟದ ಮೇಲಿನ ಉಚ್ಚಂಗಿಯಮ್ಮನ ದೇವಾಲಯಕ್ಕೆ ಹೋಗುತ್ತದೆ, ದಕ್ಷಿಣಕ್ಕೆ ಹೋಗುವ ದಾರಿ ದಕ್ಷಿಣಕ್ಕಿರುವ ಚಿಕ್ಕ ಬೆಟ್ಟದ ಮೇಲೆ ಹೋಗುತ್ತದೆ. ಪಶ್ಚಿಮಕ್ಕೆ ಮುಂದೆ ಹೋಗುವ ದಾರಿ ಕೋಟೆಯ ಪಶ್ಚಿಮ ಬಾಗಿಲಿಗೆ ಹೋಗುತ್ತದೆ. ಈ ಬಾಗಿಲಿಗೆ ಹರಿಹರದ ಬಾಗಿಲೆಂದು ಹೆಸರು. ಬಾಗಿಲನ್ನು ವೈರಿಯ ಕಣ್ಣಿಗೆ ಕಾಣದಂತೆ ಮಾಡಲು ಮುಂದೆ 'L' ಆಕಾರದ ಗೋಡೆಯನ್ನು ಕಟ್ಟ

ಲಾಗಿದೆ. ದಕ್ಷಿಣ ಭಾಗದಲ್ಲಿರುವ ಚಿಕ್ಕ ಬೆಟ್ಟದ ಮೇಲೆ ಲಿಂಗವಿರುವ ಒಂದು ದೇವಾಲಯ ಮತ್ತು ಮೂರು ವರ್ತುಲಾಕಾರದ ಬತೇರಿಗಳಿವೆ.

ಎರಡು ಬೆಟ್ಟಗಳ ಮಧ್ಯದ ಬಯಲಿನಿಂದ ಉತ್ತರಾಭಿಮುಖವಾಗಿ ದೊಡ್ಡ ಬೆಟ್ಟವನ್ನು ಹತ್ತುವಾಗ ನಾಲ್ಕನೇ ಬಾಗಿಲು ಇದೆ. ಇದು ಶಿಥಿಲವಾಗಿದೆ. ಮುಂದೆ ಐದನೇ ಬಾಗಿಲು ಇದೆ. ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿರುವ ಬಾಗಿಲಿನ ಮೇಲೆ ಗಣೇಶನ ಶಿಲ್ಪವಿದೆ. ಆರು ಅಂಕಣಗಳ ಈ ಬಾಗಿಲಿನೊಳಗೆ ದಾರಿಯ ಇಕ್ಕೆಲಗಳಲ್ಲಿ ಕಟ್ಟೆಗಳಿವೆ. ಬಾಗಿಲಿನ ಒಳಗೆ ಪ್ರವೇಶಿಸುವಾಗ ಆಯತಾಕಾರದ ಬಾಗಿಲವಾಡದಲ್ಲಿ ಪ್ರವೇಶಿಸಿ ಮುಂದೆ ಹೊರ ಬರುವಾಗ ಕಮಾನಿನಿಂದ ಹೊರಬರುತ್ತೇವೆ. ಅಂದರೆ ಬಾಗಿಲಿನ ಒಳ ಮೈಯನ್ನು ಕಮಾನಿನಿಂದ ಅಲಂಕರಿಸಲಾಗಿದೆ. ಕಮಾನನ್ನು ಕಲ್ಲುಗಳನ್ನು ಕ್ರಮೇಣವಾಗಿ ಮುಂದೆ ಚಾಚಿ ಅವುಗಳ ಕೆಳಭಾಗವನ್ನು ಸ್ವಲ್ಪ ತುಂಡರಿಸಿ ಮಾಡಲಾಗಿದೆ. ಮುಂದೆ ಆರನೇ ಬಾಗಿಲು ಇದೆ. ಇದೂ ಸಹಾ ಶಿಥಿಲವಾಗಿದೆ. ಇಲ್ಲಿಂದ ಮುಂದೆ ಹೋದಾಗ ಏಳನೆಯ ಮತ್ತು ಕೊನೆಯ ಬಾಗಿಲು ಇದೆ. ಈ ಬಾಗಿಲು ಇರುವ ಕೋಟೆ ಬಿದ್ದು ಹೋಗಿರುವುದರಿಂದ ಎತ್ತರವಾಗಿಲ್ಲ.

ಏಳನೇ ಬಾಗಿಲು ದಾಟಿದ ಮೇಲೆ ಬೆಟ್ಟದ ಮೇಲಿನ ಬಯಲು ಪ್ರದೇಶವನ್ನು ತಲುಪುತ್ತೇವೆ. ಇಲ್ಲಿ ಉತ್ತರ ತುದಿಯಲ್ಲಿ ಉಚ್ಚಂಗಿಯಮ್ಮನ ದೇವಾಲಯವಿದೆ. ಇದರ ದಕ್ಷಿಣಕ್ಕೆ ಚೌಕಾಕಾರದ ಕಡೆಗಾಪು (Citadel) ಇದೆ. ಉತ್ತರ ದಿಕ್ಕಿನ ಗೋಡೆಯಲ್ಲಿ ಬಾಗಿಲಿರುವ ಈ ಕಟ್ಟಡದ ನಾಲ್ಕು ಮೂಲೆಗಳಲ್ಲಿ ಚೌಕಾಕಾರದ ಕೊತ್ತಳಗಳಿವೆ. ಮೇಲಿನ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಕೊತ್ತಳಗಳನ್ನು ತೆನೆಗಳು ಮತ್ತು ಗಾರೆಯಲ್ಲಿ ಮಾಡಿದ ಮನುಷ್ಯರ ಉಬ್ಬು ಶಿಲ್ಪಗಳಿಂದ ಅಲಂಕರಿಸಿದೆ. ಕಡೆಗಾಪಿನ ಪೂರ್ವಕ್ಕೆ ಅರಿಶಿಣಹೊಂಡವೆಂಬ ನೀರಿನ ಹೊಂಡ ಇದೆ. ಮೊದಲಿನ ಕಡೆಗಾಪಿನ ದಕ್ಷಿಣಕ್ಕೆ ಮತ್ತೊಂದು ಕಡೆಗಾಪು ಇದೆ. ಇದರ ಮೂಲೆಗಳಲ್ಲಿ ವರ್ತುಲಾಕಾರದ ಕೊತ್ತಳಗಳಿವೆ. ಇದರ ಪಕ್ಕದಲ್ಲಿ ವರ್ತುಲ ಮತ್ತು ಆಯತಾಕಾರದ ಕಣಜಗಳು, ನೀರಿನ ದೊಣೆಗಳು ಇವೆ. ಎರಡನೇ ಕಡೆಗಾಪಿನ ನೈರುತ್ಯಕ್ಕೆ ಒಂದು ಮತ್ತು ದಕ್ಷಿಣಕ್ಕೆ ಮತ್ತೊಂದು ಬತೇರಿಗಳಿವೆ. ಇವುಗಳ ಮೇಲೆ ತೋಪುಗಳಿದ್ದುದಕ್ಕೆ ಗುರುತುಗಳಿವೆ. ಬೆಟ್ಟದ ದಕ್ಷಿಣ ಭಾಗದಲ್ಲಿ ವಿರೂಪಾಕ್ಷ ದೇವಾಲಯ, ಬಟ್ಟಲ ಬಾವಿಯೆಂದು ಕರೆಯುವ ಒಂದು ಚಿಕ್ಕ ದೊಣೆ ಮತ್ತು ದೊಡ್ಡದಾಗಿರುವ ಆನೆಯ ಹೊಂಡ ಇವೆ.

ಉತ್ತರ-ದಕ್ಷಿಣವಾಗಿ ಹಬ್ಬಿರುವ ಎರಡು ಬೆಟ್ಟಗಳನ್ನೂ ಬಳಸಿ ಹೊರಕೋಟೆಯನ್ನು ಕಟ್ಟಲಾಗಿದೆ. ಬೆಟ್ಟದ ತುದಿಯನ್ನು ತಲುಪಲು ಸಾಧ್ಯವಾಗದಂತೆ ಅನೇಕ ಸುತ್ತು ಕೋಟೆಗಳನ್ನು ಅಲ್ಲಲ್ಲಿ ಕಟ್ಟಲಾಗಿದೆ. ಕೋಟೆಯನ್ನು ಮಧ್ಯಮಗಾತ್ರದ ಕಲ್ಲುಗಳಿಂದ ಕಟ್ಟಲಾಗಿದೆ. ಕೆಲವುಕಡೆ ಗಾರೆಯನ್ನು ಬಳಸಿದೆ ಮತ್ತು ಕೆಲವುಕಡೆ ಬಂದೂಕು ಕಿಂಡಿಗಳನ್ನು ಅಳವಡಿಸಲಾಗಿದೆ. ಕೋಟೆಯಲ್ಲಿನ ಕೊತ್ತಳಗಳು ಚೌಕಾಕಾರ ಮತ್ತು ವರ್ತುಲಾಕಾರದಲ್ಲಿವೆ. ಕೋಟೆಯನ್ನು ಹಲವಾರು ಬಾರಿ ದುರಸ್ತಿ ಮಾಡಿ ಕಟ್ಟಿರುವುದರಿಂದ ಈಗ ಕಾಣುವ ಕೋಟೆಯು ವಿಜಯನಗರ ಮತ್ತು ನಂತರದ ಕಾಲದ್ದು.

ಕೋಟೆಯ ಹೊರಗೂ ೧೧-೧೨ನೇ ಶತಮಾನದ ಅನೇಕ ದೇವಾಲಯಗಳು, ಶಾಸನಗಳು, ಶಿಲ್ಪಗಳು, ವೀರಗಲ್ಲುಗಳು ಮತ್ತು ನೀರಿನ ಹೊಂಡಗಳು ಇವೆ.

ಡಾ॥ ಮಹಾದೇವಿ*

# ಮೈಸೂರು ಒಡೆಯರ ಕಾಲದಲ್ಲಿ ಜೈನಧರ್ಮದ ಸ್ಥಿತಿ ಗತಿಗಳು-ಒಂದು ಅವಲೋಕನ

ಮೈಸೂರಿನ ಒಡೆಯರು ಕ್ರಿ.ಶ. ೧೬೧೦ರ ವೇಳೆಗೆ ರಾಜಕೀಯವಾಗಿ ಸುಭದ್ರವಾಗಿ ನೆಲೆಗೊಳ್ಳುವ ವೇಳೆಗೆ ಕ್ರಿ.ಪೂ. ಮೂರನೇ ಶತಮಾನದಲ್ಲಿ ಆಗಮಿಸಿದ ಜೈನ ಧರ್ಮವು ಕರ್ನಾಟಕದಲ್ಲಿ ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಮತ್ತು ವಿಜಯನಗರ ಅರಸರ ಆಶ್ರಯದಲ್ಲಿ ಅನೇಕ ಏರಿಳಿತಗಳನ್ನು ಅನುಭವಿಸಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿತ್ತು. ಪ್ರಸ್ತುತ ಈ ಪ್ರಬಂಧದಲ್ಲಿ ಕ್ರಿ.ಶ. ೧೬೧೦-೧೭೩೭ರ ಅವಧಿಯಲ್ಲಿ ಜೈನಧರ್ಮದ ಸ್ಥಿತಿಗತಿಗಳ ಒಂದು ಸ್ಥೂಲವಾದ ಅವಲೋಕನ ಮಾಡಲು ಪ್ರಯತ್ನಿಸಲಾಗಿದೆ.

ಕನ್ನಡನಾಡನ್ನು ಆಳಿದ ರಾಜರ ಪರಮತಸಹಿಷ್ಣುತೆ ಯನ್ನು ರಕ್ತಗತವಾಗಿ ರೂಢಿಸಿಕೊಂಡು ಬಂದ ಮೈಸೂರು ಒಡೆಯರು ಇತರ ಧರ್ಮಗಳ ಜೊತೆಗೆ ಜೈನಧರ್ಮದ ಹಿತೇಚ್ಛುಗಳಾಗಿದ್ದರು. ಒಡೆಯರ ವಂಶದಲ್ಲಿ ೧೬೧೭-೧೬೩೭ರ ಅವಧಿಯಲ್ಲಿ ಆಳುತ್ತಿದ್ದ ಚಾಮರಾಜ ಒಡೆಯರು ಜೈನಧರ್ಮದ ಮತ್ತು ಅದರ ಅನುಯಾಯಿಗಳ ಬಗೆಗೆ ಹೊಂದಿದ್ದ ಧೋರಣೆಯನ್ನು ಪ್ರಕಟಿಸುವ ಕೆಲವು ಆಧಾರಗಳು ದೊರೆಯುತ್ತವೆ. ಅವರು ಜೈನಧರ್ಮದ ವಿಚಾರದಲ್ಲಿ ವಿಶ್ವಾಸವನ್ನೂ ಸಜ್ಜನಿಕೆಯನ್ನೂ ಹೊಂದಿದ್ದರು. ಚಾಮರಾಜರು ಒಮ್ಮೆ ರಾಜ್ಯ ಪ್ರವಾಸದಲ್ಲಿದ್ದಾಗ ಕರ್ನಾಟಕದ ಪ್ರಮುಖ ಜೈನ ತೀರ್ಥಕ್ಷೇತ್ರ ವೆನಿಸಿದ್ದ ಶ್ರವಣಬೆಳಗೊಳದ ಜೈನಮಠಗಳ ಸ್ಥಿತಿ ಚಿಂತಾಜನಕವಾಗಿತ್ತು. ಅವುಗಳಿಗೆ ಸೇರಿದ ಜಮೀನುಗಳು ಸ್ಥಳೀಯ ವ್ಯಾಪಾರಿಗಳ ಬಳಿಯಲ್ಲಿ ಅಡಮಾನಗೊಂಡಿರಲಾಗಿ ಬಸದಿಯಲ್ಲಿ ಪೂಜಾದಿ ಸೇವೆಗಳು ನಿಂತುಹೋದವು. ಆಗ ಅಲ್ಲಿಯ ಜೈನ ಆಚಾರ್ಯರಾದ ಚಾರುಕೀರ್ತಿ ಪಂಡಿತರು ಚೆನ್ನಪಟ್ಟಣದ ಜಗದೇವರಾಯನ ದುರ್ವರ್ತನೆ ಯಿಂದ ನೊಂದು ಶ್ರವಣಬೆಳಗೊಳವನ್ನು ತೊರೆದು ಗೆರುಸೊಪ್ಪೆಯ ಭೈರವರಾಜನಲ್ಲಿ ಆಶ್ರಯ ಪಡೆದಿದ್ದರು.

ಕ್ರಿ. ಶ. ೧೬೩೧ರಲ್ಲಿ ಚಾಮರಾಜರು ತಮ್ಮ ರಾಜ್ಯ ಪ್ರವಾಸ ಮುಗಿಸಿ ಹಿಂದಿರುಗುತ್ತಿದ್ದಾಗ ಶ್ರವಣ ಬೆಳಗೊಳಕ್ಕೆ ಭೇಟಿ ನೀಡಿದರು. ಅಲ್ಲಿಯ ಸ್ಥಿತಿಯನ್ನು ಅರಿತು ನೊಂದುಕೊಂಡ ಚಾಮರಾಜರು ಕೂಡಲೇ ಅಡಮಾನಗೊಂಡಿದ್ದ ಜೈನಮಠದ ಜಮೀನುಗಳನ್ನು ಹಿಂದಕ್ಕೆ ಕೊಡಿಸಿಕೊಡುವ ವ್ಯವಸ್ಥೆಯನ್ನು ಮಾಡಿದುದರ ಬಗೆಗೆ ಆ ಕಾಲದ ಶಾಸನಗಳು ಹಾಗೂ ಸಾಹಿತ್ಯ ಕೃತಿಗಳು ಬೆಳಕನ್ನು ಚೆಲ್ಲುತ್ತವೆ. ಈ ಘಟನೆಯಿಂದ ದೇವಾಲಯ ಹಾಗೂ ಮಠಗಳಿಗೆ ಮುಂದೊದಗಬಹುದಾದ ಸಮಸ್ಯೆ ಗಳನ್ನು ಮುಂದಾಲೋಚಿಸಿದ ಚಾಮರಾಜರು ದೇವ ಸ್ಥಾನಗಳು ಹಾಗೂ ಮಠಗಳು ಮುಂದೆ ತಮಗೆ ಸೇರಿದ ಜಮೀನುಗಳನ್ನು ಯಾರಿಗೂ ಒತ್ತೆಯಿಡತಕ್ಕದ್ದಲ್ಲವೆಂಬ ಆದೇಶ ಹೊರಡಿಸಿದರು. ಅಷ್ಟೇ ಅಲ್ಲದೆ ಗೆರುಸೊಪ್ಪೆ ಯಿಂದ ಚಾರುಕೀರ್ತಿ ಪಂಡಿತರನ್ನು ಹಿಂದಕ್ಕೆ ಕರೆಯಿಸಿ

* ಸಂಶೋಧನಾ ಸಂಯೋಜಕಿ, ಇತಿಹಾಸ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ. ಮೈಸೂರು-೬.

ಕೊಂಡು ಶ್ರೀರಂಗಪಟ್ಟಣದಲ್ಲಿ ಅವರನ್ನು ಸನ್ಮಾನಿಸಿ ಶ್ರವಣಬೆಳಗೊಳದ ಬಳಿಯಲ್ಲೇ ಜಮೀನನ್ನು ಮಂಜೂರು ಮಾಡಿ ಆ ತೀರ್ಥಕ್ಷೇತ್ರದಲ್ಲಿ ಜೈನ ಧರ್ಮಾನುಯಾಯಿಗಳ ಧಾರ್ಮಿಕ ಚಟುವಟಿಕೆಗಳು ನೆಮ್ಮದಿಯಿಂದ ನಡೆಯಲು ಬೇಕಾದ ಅನುಕೂಲಗಳನ್ನೆಲ್ಲ ಒದಗಿಸಿಕೊಟ್ಟರು. ಚಾಮರಾಜ ಒಡೆಯರ ಆಸ್ಥಾನದಲ್ಲಿ ಧರ್ಮಕ್ಕೆ ಸಂಬಂಧಪಟ್ಟಂತೆ ಅನೇಕ ಚರ್ಚೆಗಳು, ವಾದ-ವಿವಾದಗಳು ಆಗಾಗ್ಗೆ ನಡೆಯುತ್ತಿದ್ದವು. ಈ ಬಗೆಯ ಒಂದು ಧಾರ್ಮಿಕ ಚರ್ಚಾಗೋಷ್ಠಿ ಅರಸರು ಶ್ರವಣಬೆಳಗೊಳದಿಂದ ಹಿಂದಿರುಗಿದ ಸ್ವಲ್ಪ ಕಾಲದಲ್ಲೇ ನಡೆಯಿತಲ್ಲದೆ, ಸ್ವತಃ ದೊಡ್ಡ ವಿದ್ವಾಂಸರಾಗಿದ್ದ ಚಾರುಕೀರ್ತಿ ಪಂಡಿತರು ಆ ಗೋಷ್ಠಿಯ ಅಧ್ಯಕ್ಷತೆ ವಹಿಸುವಂತೆ ಚಾಮರಾಜ ಒಡೆಯರು ಆಹ್ವಾನ ನೀಡಿದರು. ಚಾಮರಾಜ ಒಡೆಯರ ಅಪೇಕ್ಷೆಯ ಮೇರೆಗೆ ರತ್ನಾಕರವರ್ಣಿಯ 'ಭರತೇಶ ವೈಭವ' ಹಾಗೂ ಬೊಮ್ಮರಸನ 'ಹರಿವಂಶ', 'ಸನತ್ಕುಮಾರ ಷಟ್ಪದಿ' ಮತ್ತು ಪಿರಿಯಾಪಟ್ಟಣದ ದೊಡ್ಡಯ್ಯನ 'ಚಂದ್ರಪ್ರಭ ಚರಿತೆ'ಗಳಂತಹ ಕೃತಿಗಳ ವಾಚನ ಈ ಗೋಷ್ಠಿಯಲ್ಲಿ ನಡೆಯಿತು. ಅಲ್ಲದೆ ಜೈನ ಧರ್ಮವು ಲೋಕೋತ್ತರ ದೊಡ್ಡ ಧರ್ಮವೆಂದು ಸಭಾ ಮಧ್ಯದಲ್ಲಿ ಚಾಮರಾಜರು ಘೋಷಿಸಿದರು.

ಜೈನಧರ್ಮದ ಪರವಾಗಿ ಅರಸರಿಗಿದ್ದ ಈ ಉದಾರ ದೃಷ್ಟಿ ಅವರ ಅನಂತರ ಪಟ್ಟಕ್ಕೆ ಬಂದ ಕಂಠೀರವ ನರಸರಾಜ ಒಡೆಯರು ಹಾಗೂ ದೇವರಾಜ ಒಡೆಯರುಗಳಲ್ಲಿಯೂ ಮನೆ ಮಾಡಿತ್ತು. ಕಂಠೀರವ ನರಸರಾಜ ಒಡೆಯರು ೧೬೩೮ ರಿಂದ ೧೬೫೯ರ ವರೆಗೆ ರಾಜ್ಯವಾಳಿ ಶ್ರವಣಬೆಳಗೊಳದಲ್ಲಿ ಜೈನಬಸದಿಯನ್ನು ಮಾನ್ಯ ಮಾಡಿದುದಲ್ಲದೆ, ಜೈನ ಬ್ರಾಹ್ಮಣರಾದ ಬೊಮ್ಮರಸ ಪಂಡಿತ, ಶಾಂತಪಂಡಿತ, ಪದ್ಮಪಂಡಿತ ಮೊದಲಾದವರಿಗೆ ಜಮೀನುಗಳನ್ನು ದತ್ತಿ ನೀಡಿದರು. ದೇವರಾಜರು (೧೬೫೯–೧೬೭೩) ಶ್ರವಣಬೆಳಗೊಳದ ಪಂಡಿತಾಚಾರ್ಯರು ಜೈನಸಂನ್ಯಾಸಿಗಳಿಗಾಗಿ ನಡೆಸುತ್ತಿದ್ದ ಅನ್ನ ಛತ್ರದ ನಿರ್ವಹಣೆಗಾಗಿ ಮದನಿ ಎಂಬ ಗ್ರಾಮವನ್ನು ದತ್ತಿ ಬಿಟ್ಟರು. ಇವರಂತೆಯೇ ಚಿಕ್ಕದೇವರಾಜ ಒಡೆಯರು ಶ್ರೀವೈಷ್ಣವ ಮತಾವಲಂಬಿಯಾಗಿದ್ದರೂ ವಿಶಾಲವಾದ ಧಾರ್ಮಿಕ ದೃಷ್ಟಿಕೋನವನ್ನು ತಳೆದಿದ್ದರು. ಚಾಮರಾಜರಂತೆ ಇವರೂ ಜೈನಧರ್ಮದ ಬಗೆಗೆ ಗೌರವ ಭಾವವನ್ನು ಹೊಂದಿದ್ದರು. ಇವರ ಮಂತ್ರಿಮಂಡಲದಲ್ಲಿ ವಿಶಾಲಾಕ್ಷ ಪಂಡಿತ ಮತ್ತು ಚಿದಾನಂದರೆಂಬ ಜೈನ ಅಧಿಕಾರಿಗಳಿದ್ದರು. ಚಿಕ್ಕದೇವರಾಜ ಒಡೆಯರು ಪಟ್ಟಕ್ಕೆ ಬರಲು ಪ್ರಮುಖ ಕಾರಣ ಕರ್ತರಲ್ಲಿ ವಿಶಾಲಾಕ್ಷ ಪಂಡಿತನು ಓರ್ವನೆಂದು ಧಾರಾಳವಾಗಿ ಹೇಳಬಹುದು. ಇವರ ಪ್ರಭಾವದಿಂದಾಗಿ ಆಸ್ಥಾನದಲ್ಲಿ ಜೈನಧರ್ಮಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು. ಧರ್ಮಸಹಿಷ್ಣುಗಳಾದ ಚಿಕ್ಕದೇವರಾಜರು ಬೇರೆ ಬೇರೆ ಧರ್ಮ ಪಂಥಗಳ ಒಳ್ಳೆಯ ಅಂಶಗಳನ್ನು ಪುರಸ್ಕರಿಸುತ್ತಿದ್ದರು. ಆಗಾಗ್ಗೆ ಅವರು ವಿವಿಧ ಧರ್ಮಗಳ ವಿದ್ವಾಂಸರನ್ನು ಆಹ್ವಾನಿಸಿ ಧಾರ್ಮಿಕ ಚರ್ಚೆಯನ್ನೊಳಗೊಂಡ ಸಭೆಗಳನ್ನು ಏರ್ಪಡಿಸುತ್ತಿದ್ದರು. ಸಾಂಖ್ಯ, ಮೀಮಾಂಸಾ, ಜೈನ, ಶೈವ, ವೈಷ್ಣವ, ಮುಂತಾದ ಧರ್ಮ ಹಾಗೂ ದರ್ಶನಗಳಿಗೆ ಸಂಬಂಧಪಟ್ಟ ಚರ್ಚೆಗಳನ್ನೊಳಗೊಂಡ ಸಭೆಗಳಲ್ಲಿ ಪಾಲುಗೊಳ್ಳುತ್ತಿದ್ದುದರ ಕಾರಣದಿಂದಾಗಿ ಆಯಾ ಧರ್ಮಗಳ ನೈಜ ಸ್ವರೂಪವನ್ನು ಅರಿತುಕೊಳ್ಳಲು ತನಗೆ ಸಾಧ್ಯವಾಯಿತೆಂದು ಚಿದಾನಂದ ಕವಿ ಹೇಳುತ್ತಾನೆ.

ಚಿಕ್ಕದೇವರಾಜ ಒಡೆಯರು ತಮ್ಮ ಆಡಳಿತದ ಮೊದಲ ವರ್ಷಗಳಲ್ಲಿ ಜೈನ ಧರ್ಮದಿಂದ ಪ್ರಭಾವಿತರಾಗಿದ್ದರು. ಅದರ ಪ್ರಭಾವ ಅವರ ಮೇಲೆ ಎಷ್ಟರ ಮಟ್ಟಿಗೆ ಆಗಿತ್ತೆಂದರೆ ಕೆಲವು ನಿಷಿದ್ಧ ಪದಾರ್ಥಗಳನ್ನು ಅವರು ತ್ಯಜಿಸಿ ತಮ್ಮ ಉಪಯೋಗಕ್ಕಾಗಿ ಶುದ್ಧವಾದ ನೀರನ್ನಷ್ಟೆ ಒದಗಿಸುವಂತೆ ಅರಮನೆಯ ಸಿಬ್ಬಂದಿಗೆ ಅಪ್ಪಣೆ ಮಾಡಿದ್ದರೆಂದು ತಿಳಿದುಬರುತ್ತದೆ. ಅವರು ಅಹಿಂಸಾ ತತ್ವವನ್ನು ಆಚರಿಸುತ್ತಿದ್ದುದಲ್ಲದೆ ಜನರು ಪ್ರಾಣಿ ಬಲಿಯನ್ನು ತೊರೆದು ಕೇವಲ ತೆಂಗಿನಕಾಯಿಗಳನ್ನು ಮಾತ್ರ ದೇವರಿಗೆ ಅರ್ಪಿಸುವಂತೆ ತಿಳಿಯ ಹೇಳುತ್ತಿದ್ದರೆಂದು ಕವಿ ದೇವೇಂದ್ರನು ಹೇಳುತ್ತಾನೆ. ಶ್ರವಣಬೆಳಗೊಳದ ಚಾರುಕೀರ್ತಿ ಪಂಡಿತರು ನಿಧನರಾದಾಗ ಅಲ್ಲಿಯ ಜೈನ ಮಠಕ್ಕೆ ಯಾರು ಮುಖ್ಯಸ್ಥರಾಗಬೇಕು ಎಂಬ ವಿಚಾರದಲ್ಲಿ ವಿವಾದ ಉಂಟಾದಾಗ ಚಿಕ್ಕದೇವರಾಜರು ಮಧ್ಯ ಪ್ರವೇಶ ಮಾಡಿ ಚಿದಾನಂದರಿಗೆ ಆ ಸ್ಥಾನವನ್ನು ವಹಿಸಿಕೊಳ್ಳುವಂತೆ ಅವಕಾಶ ಮಾಡಿಕೊಟ್ಟು ಸಮಸ್ಯೆಯನ್ನು ಬಗೆಹರಿಸಿದರು. ಈ ರೀತಿಯಾಗಿ

ವಿವಾದಕ್ಕೊಳಗಾಗಿದ್ದ ಜೈನಮಠದ ಸಮಸ್ಯೆಯನ್ನು ಬಗೆ ಹರಿಸಿ ಅದರ ಘನತೆಯನ್ನು ಗೌರವವನ್ನು ಚಿಕ್ಕದೇವ ರಾಜ ಒಡೆಯರು ಎತ್ತಿ ಹಿಡಿದರು.

ಬಾಲ್ಯದಿಂದಲೂ ವಿಶಾಲಾಕ್ಷ ಪಂಡಿತನ ಜೊತೆಯಲ್ಲಿ ಚಿಕ್ಕದೇವರಾಜ ಒಡೆಯರು ಹೊಂದಿದ್ದ ಸ್ನೇಹದ ಕಾರಣದಿಂದಾಗಿಯೇ ಅವರು ಜೈನ ಮತದ ಬಗೆಗೆ ಅಕ್ಕರೆಯನ್ನು ಸಹಿಷ್ಣುತೆಯನ್ನು ಬೆಳೆಸಿಕೊಂಡರೆನಿಸುತ್ತದೆ. ಹಂಗಳ ಎಂಬಲ್ಲಿ ಅಂಕೆಯಲ್ಲಿದ್ದು ವಿದ್ಯಾಭ್ಯಾಸ ಮಾಡುತ್ತಿದ್ದ ಸಮಯದಲ್ಲಿ ವಿಶಾಲಾಕ್ಷ ಪಂಡಿತನ ಜೊತೆಯಲ್ಲಿ ಅವರಿಗೆ ಸಂಪರ್ಕ ಉಂಟಾಗಿತ್ತು. ಈ ಜೈನ ಪಂಡಿತನ ಸಂಪರ್ಕದಿಂದಾಗಿ ಚಿಕ್ಕದೇವರಾಜರಲ್ಲಿ ಒಂದು ವಿಶಿಷ್ಟ ಧಾರ್ಮಿಕ ದೃಷ್ಟಿ ಒಡಮೂಡಿತು. ಅನಂತರ ಅವರು ಸಿಂಹಾಸನವನ್ನೇರಿದಾಗ ವಿಶಾಲಾಕ್ಷ ಪಂಡಿತನನ್ನು ತಮ್ಮ ಪ್ರಧಾನಾಮಾತ್ಯನನ್ನಾಗಿ ನೇಮಕ ಮಾಡಿಕೊಂಡರು. ಜೈನಧರ್ಮ ಮತ್ತು ದರ್ಶನಗಳಲ್ಲಿ ನಿಷ್ಣಾತನೆನಿಸಿದ್ದ ವಿಶಾಲಾಕ್ಷ ಪಂಡಿತನು ಚಿಕ್ಕದೇವರಾಜನ ಮಂತ್ರಿಗಳ ಪೈಕಿ ಅತಿ ಮುಖ್ಯನಾಗಿದ್ದು ಅರಸರ ಆಸ್ಥಾನದಲ್ಲಿ ತುಂಬ ಪ್ರಭಾವಶಾಲಿಯೆನಿಸಿಕೊಂಡಿದ್ದನು. ಕ್ರಿ.ಶ. ೧೬೮೫ಕ್ಕೆ ಸೇರಿದ ಚಿಕ್ಕದೇವರಾಜರ ದತ್ತಿ ಶಾಸನವೊಂದರಲ್ಲಿ ಅವನನ್ನು 'ಯಳಂದೂರಿನ ದೊಡ್ಡ ಪಂಡಿತರು' ಎಂದು ಉಲ್ಲೇಖಿಸಲಾಗಿದೆ. ಪ್ರಧಾನಾಮಾತ್ಯನಾಗಿ ಸೇವೆ ಸಲ್ಲಿಸುತ್ತಿದ್ದಾಗ ವಿಶಾಲಾಕ್ಷ ಪಂಡಿತನು ಜೈನ ಧರ್ಮದ ಹಿತಾಸಕ್ತಿಗಳ ರಕ್ಷಣೆಯ ವಿಚಾರದಲ್ಲಿ ತುಂಬ ಆಸಕ್ತಿವಹಿಸಿ ಕೆಲಸ ಮಾಡಿದನು. ಮೈಸೂರು ಸಂಸ್ಥಾನದ ರಾಜಧಾನಿ ಶ್ರೀರಂಗಪಟ್ಟಣದಲ್ಲಿ ತೀರ್ಥಂಕರ ವರ್ಧಮಾನ ಮಹಾವೀರನಿಗಾಗಿ ಅವನು ಒಂದು ಜಿನಾಲಯವನ್ನು ಕಟ್ಟಿಸಿದನು. ಸಂಸ್ಥಾನಾದ್ಯಂತ ಜೈನ ಬಸದಿಗಳ ಸಂರಕ್ಷಣೆ ಹಾಗೂ ಪುನರುದ್ಧಾರ ಮಾಡುವ ನಿಟ್ಟಿನಲ್ಲಿ ಅವನ ಪ್ರಯತ್ನಗಳು ಸ್ತುತ್ಯವಾಗಿದ್ದವು. ಶ್ರವಣಬೆಳಗೊಳದ ಗೊಮ್ಮಟೇಶ್ವರನಿಗೆ ಅವನು ರಥವೊಂದನ್ನು ಸಮರ್ಪಿಸಿದುದಲ್ಲದೆ ಅರಸರ ಅನುಮತಿಯನ್ನು ಪಡೆದು ಕ್ರಿ.ಶ. ೧೬೭೭ರಲ್ಲಿ ಮಹಾಮಸ್ತಕಾಭಿಷೇಕವನ್ನು ನೆರವೇರಿಸಿದನು. ಜೈನಧರ್ಮದ ಒಳಿತಿಗಾಗಿ ಸಲ್ಲಿಸಿದ ಅಮೂಲ್ಯ ಸೇವೆಗಾಗಿ ವಿಶಾಲಾಕ್ಷ ಪಂಡಿತನಿಗೆ 'ಜೈನಕುಲರತ್ನ ಭೂಷಣ' ಎಂಬ ಬಿರುದನ್ನಿತ್ತು ಸನ್ಮಾನಿಸಲಾಯಿತೆಂದು 'ಅನಂತಕವಿ'ಯು ಹೇಳುತ್ತಾನೆ. ಮೈಸೂರು ಒಡೆಯರ ಕಾಲದ ಜೈನಧರ್ಮದ ಬೆಳವಣಿಗೆಯನ್ನು ಗಮನಿಸಿದಾಗ ವಿಶಾಲಾಕ್ಷ ಪಂಡಿತನ ಹೆಸರು ಪ್ರಧಾನವಾಗಿ ಎದ್ದು ಕಾಣುತ್ತದೆ.

ದುರದೃಷ್ಟವಶಾತ್ ಚಿಕ್ಕದೇವರಾಜರ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ವಿಶಾಲಾಕ್ಷ ಪಂಡಿತನನ್ನು ಕ್ರಿ.ಶ. ೧೬೮೬ರಲ್ಲಿ ಕೊಲೆ ಮಾಡಲಾಯಿತು. ಅರಮನೆಯಿಂದ ಸಂಜೆ ಮನೆಗೆ ಹಿಂದಿರುಗುತ್ತಿದ್ದಾಗ ಪಂಡಿತನ ಮೇಲೆ ಕೆಲವು ದುಷ್ಕರ್ಮಿಗಳು ದಾಳಿ ಮಾಡಿ ಅವನನ್ನು ಕೊಂದರೆಂದು ಅಭಿಪ್ರಾಯವಿದೆ. ವಿಲ್ಕ್ಸ್‌ರವರು ರಾಜನ ಗಮನ ಮತ್ತು ಆಸಕ್ತಿಗಳನ್ನು ವೀರಶೈವ ಧರ್ಮದ ಕಡೆಯಿಂದ ಬೇರೆಡೆಗೆ ಹರಿಸಿದರೆಂಬ ಆಪಾದನೆಯ ಹಿನ್ನೆಲೆಯಲ್ಲಿ ಜಂಗಮರು ಕುತಂತ್ರ ಹೂಡಿ ವಿಶಾಲಾಕ್ಷ ಪಂಡಿತನನ್ನು ಕೊಲೆ ಮಾಡಿಸಿದರೆಂದು ಅಭಿಪ್ರಾಯಪಡುತ್ತಾರೆ. ಇದನ್ನು ಪುಷ್ಟೀಕರಿಸಲು ಯಾವುದೇ ಸ್ಪಷ್ಟವಾದ ಆಧಾರ ಇಲ್ಲಿಯವರೆಗೆ ದೊರೆತಿಲ್ಲ. ಸರ್ವಧರ್ಮ ಸಹಿಷ್ಣುತೆಗೆ ಹೆಸರಾಗಿದ್ದ ಚಿಕ್ಕದೇವರಾಜ ಒಡೆಯರು ಈ ಘಟನೆಯಿಂದ ಬಹುನೊಂದುಕೊಂಡವರಾಗಿ ಈ ಹೀನಕೃತ್ಯಕ್ಕೆ ಕಾರಣರಾದವರನ್ನು ಶಿಕ್ಷಿಸದೆ ಬಿಡಲಿಲ್ಲ. ಇಂತಹ ಯಾವುದೇ ಕೃತ್ಯಗಳಿಂದ ಧೃತಿಗೆಡಬಾರದೆಂದು ಜೈನರಿಗೆ ಧೈರ್ಯ ತುಂಬಿದ ಅವರು ಆ ಧರ್ಮಕ್ಕೆ ಎಂದಿನಂತೆ ತಮ್ಮ ಪ್ರೋತ್ಸಾಹವನ್ನು ಮುಂದುವರಿಸಿದರು. ಶ್ರವಣಬೆಳಗೊಳದಲ್ಲಿ ಯಾತ್ರಿಕರ ಸೌಕರ್ಯಗಳಿಗಾಗಿ ತಟಾಕವೊಂದನ್ನು ನಿರ್ಮಿಸಿದರು. ಹೀಗೆ ಜೈನ ಧರ್ಮದ ವಿಚಾರದಲ್ಲಿ ಉದಾರವಾಗಿ ನಡೆದುಕೊಂಡ ಚಿಕ್ಕದೇವರಾಜರಿಗೆ 'ಜೈನಕುಲರತ್ನಭೂಷಣ' ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿತ್ತು.

ಚಿಕ್ಕದೇವರಾಜರ ಆಳ್ವಿಕೆಯಲ್ಲೊಮ್ಮೆ ಹಾಸನದಲ್ಲಿ 'ಜೈನೋತ್ಸವ'ದ ಮೆರವಣಿಗೆ ಊರಿನ ಮುಖ್ಯ ದಾರಿಯಲ್ಲಿ ಸಾಗುತ್ತಿದ್ದಾಗ ಅನ್ಯ ಧರ್ಮೀಯರು ಅಡಚಣೆ ಉಂಟುಮಾಡಿ ಅದನ್ನು ನಿಲ್ಲಿಸಿದರೆನ್ನಲಾಗಿದೆ. ಆ ಸಂದರ್ಭದಲ್ಲಿ ಸ್ಥಳೀಯ ಅಧಿಕಾರಿಯಾಗಿದ್ದ ಪುಟ್ಟಯ್ಯ ಎಂಬುವವನು ಸಲ್ಲಿಸಿದ ದೂರಿನ ಮೇರೆಗೆ ಚಿಕ್ಕದೇವರಾಜ ಒಡೆಯರು ತಕ್ಷಣ ವಿಚಾರಣೆ ನಡೆಸಿ ವಿವಾದವನ್ನು ಬಗೆಹರಿಸಿ ಜೈನರ ಪರವಾಗಿ ತೀರ್ಪಿತ್ತರು. ಅಷ್ಟೇ ಅಲ್ಲದೆ

ಈ ಘಟನೆಯನ್ನು ಖಂಡಿಸಿ ಎಂದಿನಂತೆ ಜೈನೋತ್ಸವವು ನಡೆಯುಕೊಂಡು ಹೋಗುವಂತೆ ಎಲ್ಲ ಸೌಕರ್ಯಗಳನ್ನು ಒದಗಿಸಿಕೊಟ್ಟರು. ಈ ಎಲ್ಲಾ ಅಂಶಗಳೂ ಚಿಕ್ಕದೇವ ರಾಜ ಒಡೆಯರಿಗೆ ಜೈನಧರ್ಮದಲ್ಲಿದ್ದ ಆಸಕ್ತಿಯನ್ನೂ, ಆತನ ಕಾಲದಲ್ಲಿ ಆ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದುದನ್ನು ತೋರಿಸುತ್ತವೆ.

ಚಿಕ್ಕದೇವರಾಜ ಒಡೆಯರ ನಂತರ ಆಳ್ವಿಕೆ ನಡೆಸಿದ ಇಮ್ಮಡಿ ಕಂಠೀರವ ನರಸರಾಜ ಒಡೆಯರು (೧೭೦೪-೧೭೧೪) ತಂದೆಯಂತೆಯೇ ಜೈನಧರ್ಮದ ಬಗೆಗೆ ಭಕ್ತಿ ನಿಷ್ಠೆಗಳನ್ನು ಇರಿಸಿಕೊಂಡಿದ್ದರು. ಇವರ ಕಾಲದಲ್ಲಿ ಅನೇಕ ಜೈನಾಧಿಕಾರಿಗಳಿದ್ದು ರಾಜ್ಯದ ಆಯಕಟ್ಟಿನ ಅಧಿಕಾರಿಯಾಗಿ ಪದುಮಣ್ಣಯ್ಯನೂ ಮೈಸೂರಿನ ಕರಣಿಕ ನಾಗಿ ದೇವರಸನೂ ಸೇವೆ ಸಲ್ಲಿಸುತ್ತಿದ್ದರು. ಸೂರ ಪಂಡಿತ, ಧರಣಿಪಂಡಿತ, ಕುದೇರು ದೇವಚಂದ್ರ ಪಂಡಿತ, ಉಗ್ರಾಣದ ಚಲುವಯ್ಯ ಮುಂತಾದ ಜೈನ ಬ್ರಾಹ್ಮಣರಿಗೆ ಕಂಠೀರವರು ಪೂರ್ವ ನಿಬಂಧನೆಯ ಮೇರೆಗೆ ಸಂಬಳ ಉಂಬಳಿಗಳನ್ನು ನೀಡಿ ಗೌರವಿಸಿದರೆಂದು ದೇವಚಂದ್ರನ ರಾಜಾವಳಿ ಕಥಾಸಾರದಲ್ಲಿ ಹೇಳಿದೆ. ಅಲ್ಲದೆ ಕನಕಗಿರಿಯ ಸುತ್ತಮುತ್ತಲಿರುವ ಜೈನ ಬಸದಿಗಳನ್ನು ಪುನರ್ ನಿರ್ಮಾಣ ಗೊಳಿಸಿ, ಅವುಗಳಿಗೆ ಗ್ರಾಮಭೂಮಿಗಳನ್ನು ದತ್ತಿ ನೀಡಿ ದರು. ಅಲ್ಲಿ ವಾಸಿಸುವ ಜೈನ ಬ್ರಾಹ್ಮಣರುಗಳಿಗೆ ಅಗ್ರ ಹಾರಗಳನ್ನು ಮಾಡಿಸಿಕೊಟ್ಟರು. ಇದು ಇಮ್ಮಡಿ ಕಂಠೀರವ ನರಸರಾಜ ಒಡೆಯರ ಜೈನ ಮತಾಭಿಮಾನಕ್ಕೆ ದ್ಯೋತಕವಾಗಿದೆ.

ಇವರಂತೆಯೇ ದೊಡ್ಡ ಕೃಷ್ಣರಾಜ ಒಡೆಯರು (೧೭೧೪-೧೭೩೨) ಜೈನಧರ್ಮಾಭಿವೃದ್ಧಿಗೆ ಅವರು ಸಲ್ಲಿಸಿದ ಸೇವೆ ಅಪಾರ. ಇತರ ಧರ್ಮಗಳಂತೆಯೇ ಜೈನ ಧರ್ಮವನ್ನು ಸಹ ಸಮಾನವಾಗಿ ನೋಡಿದರು. ಶ್ರವಣಬೆಳಗೊಳದಲ್ಲಿ ನಡೆಯುತ್ತಿದ್ದ ಧಾರ್ಮಿಕ ಉತ್ಸವ ದಿಂದ ಪ್ರೇರಿತರಾಗಿ ಒಮ್ಮೆ ತಮ್ಮ ರಾಣಿ ಮತ್ತು ದೊಡ್ಡಮ್ಮನವರೊಡನೆ ಶ್ರವಣಬೆಳಗೊಳವನ್ನು ಸಂದ ರ್ಶಿಸಿ ಗೊಮ್ಮಟೇಶ್ವರನಿಗೆ ಪುಸ್ತಕ ಪೂಜೆಯನ್ನು ಸಲ್ಲಿಸಿ ದರು. ಈ ಸಂದರ್ಭದಲ್ಲಿ ಅಲ್ಲಿಯ ಗೊಮ್ಮಟ ಸ್ವಾಮಿಯ ಆರಾಧನೆ ಮತ್ತು ಉತ್ಸವಗಳಿಗಾಗಿ ಕಸಬ ಮತ್ತು ಬೆಳಗೊಳ ಗ್ರಾಮಗಳೊಂದಿಗೆ ಎಂಟು ಕರಮುಕ್ತ ಗ್ರಾಮಗಳನ್ನು ದಾನ ನೀಡಿದರು. ಹಾಗೂ ಚಿಕ್ಕದೇವ ರಾಜ ಒಡೆಯರು ಕಟ್ಟಿಸಿದ್ದ ಕಲ್ಯಾಣಿಯ ಸಮೀಪದಲ್ಲಿ ಉಚಿತ ಭೋಜನ ಶಾಲೆಯೊಂದನ್ನು ತೆರೆದು ಅದರ ಉಸ್ತು ವಾರಿಯನ್ನು ಅಣ್ಣಯ್ಯನೆಂಬ ಅಧಿಕಾರಿಗೆ ವಹಿಸಿದರು. ಆ ಭೋಜನಶಾಲೆಯ ನಿರ್ವಹಣೆಗಾಗಿ ಸಾವಿರ ವರಹ ಆದಾಯವುಳ್ಳ ಗ್ರಾಮವೊಂದನ್ನು ದತ್ತಿ ನೀಡಿದರು. ಗೊಮ್ಮಟೇಶ್ವರನ ಮಹಿಮೆಯನ್ನು ಕೇಳಿ ಆಶ್ಚರ್ಯ ಗೊಂಡ ಕೃಷ್ಣರಾಜ ಒಡೆಯರ ದೊಡ್ಡಮ್ಮನವರು 'ಕಡ್ಡಿಗೆ ಸಮ ಮಿಕ್ಕ ದೇವರು' ಎಂದು ಗೊಮ್ಮಟೇಶ್ವರನ ಮಹಿಮೆಯನ್ನು ಪ್ರಶಂಸಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಆಳ್ವಿಕೆಯಲ್ಲಿ ನಡೆದಂತೆ ದೊಡ್ಡ ಕೃಷ್ಣರಾಜ ಒಡೆಯರ (೧೭೧೪-೧೭೩೨) ಆಳ್ವಿಕೆಯಲ್ಲೂ ಮತೀಯ ಗಲಭೆಯೊಂದು ನಡೆಯಿತು. ಶ್ರವಣಬೆಳಗೊಳದ ಬೀದಿ ಯಲ್ಲಿ ಜೈನರ ಮೆರವಣಿಗೆ ಸಾಗುತ್ತಿದ್ದಾಗ ಅಲ್ಲಿಯ ವೀರಶೈವರು ಅದನ್ನು ಅಡ್ಡಿಪಡಿಸಿದರೆಂಬ ದೂರನ್ನು ಸ್ವೀಕರಿಸಿದ ಒಡೆಯರು ತಕ್ಷಣ ವಿಚಾರಣೆ ಮಾಡಿ ಜೈನರು ಉತ್ಸವ ನಡೆಸಲು ಅನುಕೂಲ ಮಾಡಿಕೊಟ್ಟರು. ಒಡೆಯರ ಪ್ರಜಾಹಿತಚಿಂತನೆಗೂ ದೈವಭಕ್ತಿಗೂ ಅವರಲ್ಲಿದ್ದ ಸರ್ವಧರ್ಮ ಸಹಿಷ್ಣುತೆಗೆ ಇದೊಂದು ಶ್ರೇಷ್ಠ ನಿದರ್ಶನ. ಹೀಗೆ ಒಡೆಯರ ಕಾಲದಲ್ಲಿ ಅನೇಕ ಅಡ್ಡಿ ಆತಂಕ ಗಳಿದ್ದರೂ ಜೈನಧರ್ಮ ಅರಸರ ಹಾಗೂ ಅಧಿಕಾರಿಗಳ ಪೋಷಣೆಯನ್ನು ಗಳಿಸಿಕೊಂಡು ಬೆಳವಣಿಗೆಯ ಹಾದಿಯಲ್ಲಿ ಇತ್ತು.

ಈ ರೀತಿಯಾಗಿ ಒಡೆಯರ ಆಡಳಿತ ಕಾಲದಲ್ಲಿ ಜೈನಧರ್ಮಕ್ಕೆ ಸಾಕಷ್ಟು ಬೆಂಬಲ, ಪ್ರೋತ್ಸಾಹಗಳು ದೊರೆತವು. ತಮ್ಮ ಆಸ್ಥಾನದಲ್ಲಿದ್ದ ಜೈನ ವಿದ್ವಾಂ ಸರುಗಳ ಮತ್ತು ಅಧಿಕಾರಿಗಳೊಡನೆ ಒಡೆಯರುಗಳು ಇಟ್ಟುಕೊಂಡಿದ್ದ ವಿಶ್ವಾಸಪೂರ್ವಕವಾದ ಸಂಪರ್ಕ ಆ ಧರ್ಮದ ರಕ್ಷಣೆಗೆ ನೆರವಾಗಿತ್ತು. ಹಾಗಿಲ್ಲದಿದ್ದಲ್ಲಿ ಜೈನ ಧರ್ಮವು ಇಂದು ಇರುವ ಸ್ಥಿತಿಯಲ್ಲಿ ದಕ್ಷಿಣ ಕರ್ನಾಟಕದಲ್ಲಿ ಇರದೆ ಸಂಪೂರ್ಣವಾಗಿ ಅಳಿಸಿ ಹೋಗುತ್ತಿತ್ತೇನೊ.

ಅ. ಸುಂದರ*

# ಶ್ರೀಮದ್ರಾಮಾಯಣದ 'ಕಾರ್ತಿಕೇಯ ವನ'ವು ಸೊಂಡೂರಿನ ಕುಮಾರಸ್ವಾಮಿ ಬೆಟ್ಟವೆ ?

ಉತ್ತರ ಕರ್ನಾಟಕದಲ್ಲಿ ಸೊಂಡೂರಿನ ಕುಮಾರ ಸ್ವಾಮಿ ಬೆಟ್ಟವು ಒಂದು ಕ್ಷೇತ್ರ.[1] ಶ್ರೀಮದ್ರಾಮಾಯಣದ ಕಿಷ್ಕಿಂಧಾ ಕಾಂಡದಲ್ಲಿ ಉಲ್ಲೇಖಿತವಾದ 'ಕಾರ್ತಿಕೇಯ ವನ'ವೂ[2] ಈ ಕ್ಷೇತ್ರವೇ ಎಂದು ನಂಬಿಕೆ. ಇಲ್ಲಿಯ ಬೆಟ್ಟದ ಮೇಲಿರುವ ಶ್ರೀ ಪಾರ್ವತೀ ಮತ್ತು ಶ್ರೀ ಕಾರ್ತಿಕೇಯ ದೇವಾಲಯಗಳು ಈ ಭಾಗದಲ್ಲೆಲ್ಲ ಸುಪ್ರಸಿದ್ಧ, ಗರ್ಭ ಗುಡಿಯೊಳಗಿನ ಪೂಜೆಗೊಳ್ಳುತ್ತಿರುವ ಪಾರ್ವತೀದೇವಿ ಮತ್ತು ಕಾರ್ತಿಕೇಯ ಪ್ರತಿಮೆಗಳು ದೇವಾಲಯಗಳೊಳ ಗಿನ ಮತ್ತು ಹೊರಗಿನ ಬೇರೆ ಬೇರೆ ಕಾಲದ ಅಪರೂಪ ಮಾದರಿಯ ಇತರ ಬಿಡಿ ಶಿಲ್ಪಗಳು ಮತ್ತು ಕ್ಷೇತ್ರ ಮಹಿಮೆಯ ಬೆಳವಣಿಗೆ ಬಗ್ಗೆ ಕೆಲವು ಐತಿಹಾಸಿಕ ಅಂಶ ಗಳನ್ನು ಸೂಚಿಸುತ್ತವೆ.

ಶ್ರೀ ಕುಮಾರಸ್ವಾಮಿ ದೇವಾಲಯದ ಹತ್ತಿರದಲ್ಲಿ ಶಿವನು ಒಂದು ತಗ್ಗಿನಲ್ಲಿ, ಬಲಬದಿಗೆ ತಾಯಿ ಪಾರ್ವತೀ ದೇವಿ ನೆಲೆಸಿದರಂತೆ. ತಗ್ಗಿನಲ್ಲಿ ನೆಲಮಾಳಿಗೆಯಂಥ ಗುಡಿಯಲ್ಲಿ ಶಿವಲಿಂಗವಿದ್ದು ಇದಕ್ಕೆ 'ನಾಗನಾಥೇಶ್ವರ' ಎಂದು ಹೆಸರು. ಅಲ್ಲದೆ 'ಪಾತಾಳೇಶ್ವರ' ಎಂದೂ ಹೆಸರಿದೆ. ಈ ನೆಲಮಾಳಿಗೆಯು ಚೌಕೋನದ ಒಂದು ಗರ್ಭಗುಡಿ. ಇದರ ಮೂಲೆಗಂಬಗಳ ಶೈಲಿಯನ್ನು ಗಮನಿಸಿದರೆ, ಇದು ಸು. ೧೧-೧೨ನೇ ಶತಮಾನದ್ದೆಂದು ಹೇಳಬಹುದು. ಗರ್ಭಗುಡಿಯೊಳಗೆ ಶಿವಲಿಂಗದ ಬದಿಯ ಲ್ಲಿಯೇ ಬಾದಾಮಿ ಚಾಲುಕ್ಯ ಶೈಲಿಯ ಜನಾರ್ಧನ ಶಿಲ್ಪವಿದೆ. ಈ ದೇವಾಲಯದ ಬಾಗಿಲಲ್ಲೇ ಸು. ೭-೮ನೇ ಶತಮಾನದ ಒಂದು ಬಿಡಿ ನಾಗರಾಜ ಶಿಲ್ಪವಿದೆ. ಇದನ್ನು ಗೋಡೆಯಲ್ಲಿ ಸೇರಿಸಲಾಗಿದೆ. ಪಂಚಪಾಂಡವರು ಕೂಡ ತಮ್ಮ ಅರಣ್ಯವಾಸದಲ್ಲಿ ಇಲ್ಲಿಯ ಕಾರ್ತಿಕೇಯನ ದರ್ಶನ ಮಾಡಿ ತಮ್ಮ ಹೆಸರಿನಲ್ಲಿ ಒಟ್ಟು ಆರು ಶಿವಲಿಂಗಗಳನ್ನು ಸ್ಥಾಪಿಸಿದರಂತೆ. ಪಾತಾಳೇಶ್ವರ ಗುಡಿಯ ಮೇಲೆ ಒಂದು ಕಟ್ಟೆಯೊಳಗೆ ಸು. ೫ನೇ ಶತಮಾನದ ಹಾಗೂ ಅನಂತರ ಕಾಲದ ವಿಷ್ಣು (ತ್ರಿವಿಕ್ರಮ)ವಿನ ಮೂರ್ತಿಯ ಸು. ೫ನೇ ಶತಮಾನದ ಶಿವಲಿಂಗಗಳು, ಸು. ೧೦ನೇ ಶತಮಾನದ ಸೂರ್ಯ ಶಿಲ್ಪಗಳಿವೆ. ಈ ನಾಗನಾಥೇಶ್ವರ-ಪಾತಾಳೇಶ್ವರ ಗುಡಿಯ ನೈಋತ್ಯಕ್ಕೆ ಸುಪ್ರಸಿದ್ಧ ಸು. ೯ನೇ ಶತಮಾನದ ಅಂತ್ಯದ ೧೦ನೇ ಶತಮಾನದ ಆದಿ ಭಾಗದ ಕಾರ್ತಿಕೇಯ ದೇವಾಲಯವು ಮತ್ತು ಇದರ ಬಲಬದಿಗೆ ೮ನೇ ಶತಮಾನದ ಪಾರ್ವತೀ ದೇವಾಲಯವು ಇವೆ. ಇವುಗಳೆಲ್ಲವನ್ನು ಒಳಗೊಂಡು ಸುತ್ತಲೂ ವಿಜಯ

* ಪ್ರಾಧ್ಯಾಪಕ ಹಾಗೂ ಮುಖ್ಯಸ್ಥರು, ಸ್ನಾತಕೋತ್ತರ ಕೇಂದ್ರ, ವಿಜಾಪುರ

1 ರಾಮರಾವ್ ಕೆ., ೧೯೪೮, ಶ್ರೀ ಕುಮಾರಸ್ವಾಮಿಯ ಸಿಕ್ಕದ್ದು, ಬಳಗಟ್ಟಿ ಕೊಟ್ರಪ್ಪ, ನಿಂಬಳಗೇರಿ
ಬ್ರಹ್ಮಶ್ರೀ ಬಾಲಚಂದ್ರಶಾಸ್ತ್ರಿ, ೧೯೫೫, ಶ್ರೀ ಸ್ಕಂದ ಕ್ಷೇತ್ರ ಮಹಾತ್ಮೆ, ಶ್ರೀ ಕುಮಾರಸ್ವಾಮಿ ದೇವಸ್ಥಾನ, ಸೊಂಡೂರು

2 ಪಂ. ಚಿನ್ನಸ್ವಾಮಿಶಾಸ್ತ್ರಿ ಕೆ., ಮತ್ತು ಸುಬ್ರಮಣ್ಯಶಾಸ್ತ್ರಿ, ವ್ಹಿ. ಎಚ್., (ಸಂ) ೧೯೫೮, ಶ್ರೀ ಮದ್ವಾಲ್ಮೀಕಿ ರಾಮಾಯಣಮ್, (೨ನೇ ಸಂಪುಟ) ಮದ್ರಾಸ್, ಪುಟ ೪೨೯

ನಗರ ಕಾಲದ ಕೊನೆಯ ಹಂತದ ಮಹಾದ್ವಾರ, ಚಂದ್ರಶಾಲೆ ಮೊದಲಾದವುಗಳಿಂದ ಕೂಡಿದ ಪ್ರಾಕಾರವಿದೆ.

ದೇವಾಲಯ ಸಂಕೀರ್ಣದ ಹೊರಗೆ ಸಮೀಪದಲ್ಲಿರುವ ಕೊಳವನ್ನು "ಅಗಸ್ತ್ಯ ತೀರ್ಥ"ವೆಂದು ಕರೆಯಲಾಗುತ್ತಿದೆ. ಇದರ ನೈಋತ್ಯ ಮೂಲೆಯ ಕಟ್ಟೆಯಲ್ಲಿ ಸು. ೧೦ನೇ ಶತಮಾನದ ಒಂದು ಸುಂದರವಾದ ಅನಂತಶಯನ ಮೂರ್ತಿಯಿದೆ. ಕೊಳದ ಕಟ್ಟೆಯ ಹೊರಬದಿಯಲ್ಲಿಯ ಒಂದು ಸಣ್ಣ ಗುಡಿಯಲ್ಲಿ ಸು. ೨ನೇ ಶತಮಾನದ ಡೊಳ್ಳು ಹೊಟ್ಟೆಯ ದಂಡಧಾರಿ ಕುಬ್ಜ ಯಕ್ಷನ ಒಂದು ಶಿಲ್ಪವಿದೆ. ಕಥೆಯ ಪ್ರಕಾರ ಇದು 'ಅಗಸ್ತ್ಯ ಋಷಿ' ಶಿಲ್ಪ. ಆದರೆ ಇದರಲ್ಲಿ ಜಟೆ, ಗಡ್ಡ, ರುದ್ರಾಕ್ಷಿಮಾಲೆ ಮೊದಲಾದ ಯಾವುದೇ ಯತಿ ಲಕ್ಷಣಗಳಿಲ್ಲ.

ಇಲ್ಲಿಯ ಕುಬ್ಜಯಕ್ಷ, ನಾಗ, ಚತುರ್ಮುಖ (ಬ್ರಹ್ಮ). ಸ್ಕಂದ (?), ವಿಷ್ಣು (ತ್ರಿವಿಕ್ರಮ), ಸೂರ್ಯ ಮೊದಲಾದ ಮುಖ್ಯ ಶಿಲ್ಪಗಳ ಬಗ್ಗೆ ನನ್ನ ಇತರ ಮೂರು ಲೇಖನ[3]ಗಳಲ್ಲಿ ವಿವೇಚಿಸಿದ್ದೇನೆ. ಪ್ರಸ್ತುತ ಲೇಖನದಲ್ಲಿ ಶ್ರೀಮದ್ರಾಮಾಯಣದ 'ಕಾರ್ತಿಕೇಯ ವನ'ವು ಈ ಕುಮಾರಸ್ವಾಮಿ ಬೆಟ್ಟವಾಗಿರಬಹುದೆ ? ಎಂಬುದನ್ನು ಮತ್ತು ತತ್ಸಂಬಂಧ ಕೆಲವು ಸಾಂಸ್ಕೃತಿಕ ಹಾಗೂ ಐತಿಹಾಸಿಕ ಅಂಶಗಳನ್ನು ವಿವೇಚಿಸಲಾಗಿದೆ.

**ಸ್ಥಳಿಯ ಕಥೆ :** ಸ್ಥಳಿಯ ಕಥೆಯ[4] ಪ್ರಕಾರ ದೇವತೆಗಳ ಮಹಾ ಸೇನಾನಿ ಕಾರ್ತಿಕೇಯನು ತಾರಕಾಸುರ ಮೊದಲಾದ ಅಸುರರನ್ನು ಸಂಹಾರ ಮಾಡಿದ ಮೇಲೆ ಇಲ್ಲಿಯ 'ಲೋಹಾಚಲ'ಕ್ಕೆ ಬಂದು ನೆಲೆಸಿದನಂತೆ. ಆದ್ದರಿಂದ ಈ ಸ್ಥಳವು 'ಸ್ಕಂದ ಕ್ಷೇತ್ರ'ವೆಂದು ಕ್ರಮೇಣ ಪ್ರಸಿದ್ಧವಾಯಿತು. ಸ್ಕಂದನು ನೆಲೆಸಿದ ಸ್ಥಳದಲ್ಲಿಯೇ ತರುವಾಯ ಶ್ರೀ ಕಾರ್ತಿಕೇಯ ದೇವಾಲಯವು ನಿರ್ಮಾಣವಾಯಿತು. ಈ ದೇವಾಲಯದ ಅನತಿ ದೂರದಲ್ಲಿ ಮತ್ತೊಂದೆಡೆಯಲ್ಲಿ ವಿಷ್ಣುವು ಸ್ಥಾಪಿಸಿ ಪೂಜಿಸಿದನೆಂದು ನಂಬಲಾದ "ಶ್ರೀಹರಿ ಶಂಕರ" ಲಿಂಗವಿದೆ. ಬೆಟ್ಟದ ಕಣಿವೆಯಲ್ಲಿರುವ ಈ ದೇವಾಲಯವು ಚಿಕ್ಕದಾಗಿದ್ದರೂ ಅಚ್ಚುಕಟ್ಟಾಗಿದ್ದು, ಸು. ೯ನೇ ಶತಮಾನ ಉತ್ತರ ಭಾಗದ ಶೈಲಿಯ ಇದರ ವಾಸ್ತುಶಿಲ್ಪವು ಮನಸ್ಸಿಗೆ ಹಿಡಿಯುವಂತಿದೆ.

ಕಾರ್ತಿಕೇಯನು ಇಲ್ಲಿ ನೆಲೆ ನಿಂತ ಮೇಲೆ ಸಕಲ ತೀರ್ಥಾಭಿಮಾನಿ ದೇವತೆಗಳು ಅಣಿಮಾದಿ ಅಷ್ಟಸಿದ್ಧಿ ದೇವತೆಗಳು, ಚೌಷಷ್ಠಿ ಯೋಗಿನಿಯರು, ಸಪ್ತಮಾತೃಕೆಯರು ಮೊದಲಾದ ದೇವತೆಗಳು, ಋಷಿವರ್ಯರು ಇಲ್ಲಿ ನೆಲೆಸಿದರಂತೆ. ಕ್ರಮೇಣ ಇದು ಒಂದು ಸಿದ್ಧಕ್ಷೇತ್ರವೆಂಬ ನಂಬುಗೆ ಬೆಳೆದು ಅದು ಬಲವಾಯಿತು. ಇಲ್ಲಿಯೇ ಮಹರ್ಷಿಯು ಕಾರ್ತಿಕೇಯನನ್ನು ಸ್ತುತಿಸಿ ಈ ದೇವರಿಂದ 'ಷಡದ್ವ' ತತ್ವದ ರಹಸ್ಯವನ್ನು ತಿಳಿದುಕೊಂಡನಂತೆ. ಮತ್ತು ತೀರ್ಥವನ್ನು ನಿರ್ಮಿಸಿ ಇದರ ಪ್ರಾಶಸ್ತ್ಯವನ್ನು ಹೆಚ್ಚಿಸಲು ಮತ್ತು ರಕ್ಷಣೆಗೋಸ್ಕರ ಇದರಲ್ಲಿ ಶ್ರೀ ಅನಂತಶಯನ ಮೂರ್ತಿಯನ್ನು ಸ್ಥಾಪಿಸಿದನಂತೆ.

ಶ್ರೀರಾಮ-ಲಕ್ಷ್ಮಣರು ಪಂಚವಟಿಯಿಂದ ಕಿಷ್ಕಿಂಧೆಗೆ ಹೋಗುವಾಗ ಇಲ್ಲಿ ಶ್ರೀ ಕಾರ್ತಿಕೇಯ ದರ್ಶನ ಮಾಡಿ, ಈ ದೇವರ ಸೂಚನೆಯಂತೆ ಇಲ್ಲಿ 'ಲೋಹಾಚಲ'ದ ಲೋಹದಿಂದ ವಾಲಿ, ರಾವಣಾದಿಗಳನ್ನು ಸಂಹರಿಸಲು ಪ್ರಬಲವಾದ ಬಾಣಗಳನ್ನು ಮಾಡಿಸಿಕೊಂಡನಂತೆ. ಈ ವಿಷಯವು ಶ್ರೀ ರಾಮಾಯಣದಲ್ಲಿಯೂ ಇರುವುದು ಕುತೂಹಲಕಾರಿ ಸಂಗತಿ. ಕಿಷ್ಕಿಂಧಾ ಕಾಂಡದ ಅಷ್ಟಮ ಸರ್ಗದಲ್ಲಿ ೨೨ ಮತ್ತು ೨೩ನೇ ಶ್ಲೋಕಗಳು[5] ಹೀಗಿವೆ.

---

3 ಸುಂದರ ಅ., ೧೯೮೩, "ದಿ ಟೆಂಪಲ್ಸ್ ಆ್ಯಂಡ್ ನೋಟ್‌ವರ್ದಿ ಸ್ಕಲ್ಪ್‌ಚರ್ಸ್ ಇನ್ ಸೊಂಡೂರ್ : ದೆಯರ್ ಇಂಪ್ಲಿಕೇಶನ್", ಜರ್ನಲ್ ಆಫ್ ದಿ ಕರ್ನಾಟಕ ಯುನಿವರ್ಸಿಟಿ (ಸೋಷಿಯಲ್ ಸೈನ್ಸಸ್), ಸಂ. ೧೯, ಧಾರವಾಡ, ಪುಟಗಳು ೪೨-೪೭
೧೯೮೭, "ಟೂ ರೇರ್ ಸ್ಕಲ್ಪ್‌ಚರ್ಸ್ ಫ್ರಂ ಸೊಂಡೂರ್, ಬಳ್ಳಾರಿ ಡಿಸ್ಟ್ರಿಕ್ಟ್" ಸ್ಟಡೀಸ್ ಇನ್ ಇಂಡಿಯನ್ ಕಲ್ಚರ್ (ಪ್ರೊ॥ ಎಸ್. ರಾಮಚಂದ್ರರಾವ್ ಫೆಲಿಸಿಟೇಶನ್ ಸಂಪುಟ), ಮೈಸೂರು, ಪುಟಗಳು ೨೭೯-೨೮೪
"ದಿ ಅರ್ಲಿ ನಾಗ ಸ್ಕಲ್ಪ್‌ಚರ್ಸ್ : ಟೈಪ್ಸ್ ಆ್ಯಂಡ್ ಫಾರ್ಮ್ಸ್ ಇನ್ ಕರ್ನಾಟಕ" ಪ್ರೊ॥ ಎಚ್. ವಿ. ತ್ರಿವೇದಿ ಫೆಲಿಸಿಟೇಶನ್ ವಾಲ್ಯೂಂ. ಭೋಪಾಲ್ (ಅಚ್ಚಿನಲ್ಲಿ)

4 ರಾಮರಾವ್ ಕೆ., ಪೂರ್ವೋಕ್ತ

5 ಪಂ. ಚಿನ್ನಸ್ವಾಮಿಶಾಸ್ತ್ರಿ ಮತ್ತು ಸುಬ್ರಮಣ್ಯಶಾಸ್ತ್ರಿ, ಪೂರ್ವೋಕ್ತ

"ಇಮೇಹಿ ಮೇ ಮಹಾ ವೇಗಾಃ ಪತ್ರಿಣಸ್ತಿಗ್ಮ ತೇಜಸಃ
ಕಾರ್ತಿಕೇಯ ವನೋದ್ಭೂತಾಃ ಶರಾ ಹೇಮ
ವಿಭೂಷಿತಾಃ (೨೨)
ಕಂಕಪತ್ರ ಪ್ರತಿಚ್ಛನ್ನಾ ಮಹೇಂದ್ರಾಶನಿಸಂನಿಭಾಃ ।
ಸುಪರ್ವಣಃ ಸುತೀಕ್ಷ್ಣಾಗ್ರಾಃ ಸರೋಷ ಇವ
ಪನ್ನಗಾಃ ॥ (೨೩)

ಈ ಶ್ಲೋಕಗಳಲ್ಲಿಯ ಕಾರ್ತಿಕೇಯವನ ಎಂಬ ಪದ ಸಮುಚ್ಚಯ ಗಮನಾರ್ಹ.

ಮೊದಲು ರಾಮಾಯಣದಲ್ಲಿಯ ಉಲ್ಲೇಖ ವನ್ನು ಗಮನಿಸೋಣ. ಕುಮಾರಸ್ವಾಮಿ ಬೆಟ್ಟದಿಂದ ಸು. ೩೦ ಕಿ.ಮಿ. ಈಶಾನ್ಯಕ್ಕಿರುವ ಕುಡುತಿನಿ (ಬಳ್ಳಾರಿ ತಾ. ಮತ್ತು ಜಿಲ್ಲೆ)ಯಲ್ಲಿಯೂ 'ಕಾರ್ತಿಕೇಯ ತಪೋವನ' ಎಂಬ ಉಲ್ಲೇಖವು ಅಲ್ಲಿಯ ೧೦ ರಿಂದ ೧೩ನೇ ಶತಮಾನದ ಒಂಭತ್ತು ಶಾಸನಗಳಲ್ಲಿವೆ. ಮತ್ತು ಇಲ್ಲಿ ೧೦ನೇ ಶತಮಾನದ ಕುಮಾರಸ್ವಾಮಿ ದೇವಾಲಯವೂ ಇದೆ. ಕೋಳೂರಿನಲ್ಲಿಯೂ ಒಂದು ಕುಮಾರಸ್ವಾಮಿ ದೇವಾಲಯವಿದೆಯೆಂದಷ್ಟೆ ಕೇಳಿದ್ದೇನೆ. ಹೀಗೆ ಈ ಪ್ರದೇಶದಲ್ಲಿ ಒಂದಕ್ಕಿಂತ ಹೆಚ್ಚು ಕಾರ್ತಿಕೇಯ ಸ್ಥಾನ ಗಳಲ್ಲಿ ರಾಮಾಯಣದ 'ಕಾರ್ತಿಕೇಯ ವನ' ಯಾವುದು ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ.

ಸ್ಥಳಿಯ ಕಥೆಯ ಪ್ರಕಾರ ಕಾರ್ತಿಕೇಯನು ನೆಲೆಸಿದ ಸ್ಥಳ 'ಲೋಹಾಚಲ'ವೆಂದು ಹೇಳಿವೆ. ಈ ಲೋಹಾಚಲವೇ ಕುಮಾರಸ್ವಾಮಿ ಬೆಟ್ಟವೆಂದು ಗುರುತಿಸ ಬಹುದು. ಇಲ್ಲಿ ಅತ್ಯುತ್ತಮ ದರ್ಜೆಯ ಕಬ್ಬಿಣದ ಅದಿರು ಅತಿ ಹೇರಳವಾಗಿ ಇದೆ. ಇಲ್ಲಿ ಈಗ ದೊಡ್ಡ ಪ್ರಮಾಣ ದಲ್ಲಿ ಕಬ್ಬಿಣ ಅದಿರಿನ ಸಂಗ್ರಹ ಕಾರ್ಯ ನಡೆಯುತ್ತಿದೆ. ಈ ಬೆಟ್ಟದ ಮೇಲೆಯೇ ಕುಮಾರಸ್ವಾಮಿ, ಪಾರ್ವತೀ, ಶಿವ ದೇವಾಲಯಗಳಿವೆ. ಇವೂ ಕೂಡ ೮–೧೦ನೇ ಶತಮಾನದವು. ಪ್ರಚಲಿತ ಸ್ಥಳಿಯ ಪರಂಪರೆಗಳಿಗನು ಗುಣವಾಗಿ ಈ ದೇವಾಲಯಗಳು, ಮೂರ್ತಿಶಿಲ್ಪಗಳು ನಿರ್ಮಾಣವಾಗಿರುವುದರಿಂದ ಆಯಾಯ ಕಾಲದಲ್ಲಿ ಜನರು ಈ ಸ್ಥಳವನ್ನು ಲೋಹಾಚಲವೆಂದು ನಂಬಿದ್ದ ರೆಂಬುದು ಸ್ಪಷ್ಟವಾಗುತ್ತದೆ. ಈ ಲೋಹಾಚಲವೇ ಒಂದು ದೊಡ್ಡ ವನವಾಗಿದ್ದು, ಈ ಗಿರಿವನದಲ್ಲಿ ಕಾರ್ತಿಕೇಯ ದೇವಾಲಯವಿರುವುದರಿಂದ ಇದೇ ರಾಮಾಯಣದ 'ಕಾರ್ತಿಕೇಯ ವನ'ವೆಂದು ತರ್ಕಿಸ ಬಹುದು. ಆದರೆ ಈ ತರ್ಕವನ್ನು ಪುಷ್ಟೀಕರಿಸುವ ಪುರಾವೆಗಳೇನಾದರೂ ಇವೆಯೆ ?

'ಕಾರ್ತಿಕೇಯದೇವ ತಪೋವನ' ಎಂಬ ಸ್ಥಳವನ್ನು ಗುರುತಿಸುವಲ್ಲಿ ಕುಡುತಿನಿಯ ಎಂಟು ಶಾಸನಗಳಲ್ಲಿಯ ಕೆಲವೊಂದು ಅಂಶಗಳು ಗಮನಾರ್ಹ. ಏಕೆಂದರೆ ಇವು ಗಳಲ್ಲಿ ಕಾರ್ತಿಕೇಯ ತಪೋವನದ ಉಲ್ಲೇಖವಿದೆ.

"ಕಾರ್ತಿಕೇಯ ತಪೋವನ" ಉಲ್ಲೇಖವಿರುವ ಕುಡುತಿನಿಯಲ್ಲಿಯ ಶಾಸನಗಳು[6]

| | | | | | |
|---|---|---|---|---|---|
| ೧. | ೯೪೭ | ರಾಷ್ಟ್ರಕೂಟ (ರಾ) ಮುಮ್ಮಡಿ ಕೃಷ್ಣ | ಶಾಸನದ ಎರಡನೇ ಭಾಗದಲ್ಲಿಯ ಉಲ್ಲೇಖ ಕಾರ್ತಿಕೇಯ ತಪೋವನ | ಸಮಧಿಗತ ಪಂಚಮಹಾ ಶಬ್ದ ವ್ರತ ಜಪ ನಿಯಮ ಹೋಮ ಸಂಯುಕ್ತ ತಪೋವನಾಧಿಪತಿ | ಲೋಕಯ್ಯ ಗಾವುಣ್ಡ |
| ೨. | ೯೭೧ | ರಾ. ಕೊಟ್ಟಿಗ | ಉಲ್ಲೇಖವಿಲ್ಲ | ಉಲ್ಲೇಖವಿಲ್ಲ | ಸ್ಕಂದ ದೇವ ಪ್ರತಿಷ್ಠೆ |
| ೩. | ೯೯೬ | ಕಲ್ಯಾಣ ಚಾಲುಕ್ಯ (ಕ. ಚಾ) ಆಹವ ಮಲ್ಲಿದೇವ (೨ ತೈಲ) | ಕಾರ್ತಿಕೇಯ ತಪೋವನ | ಅಧಿಪತಿ ಸಮಧಿಗತ.... ಸಂಯುಕ್ತ | ಶಾಸನದ ಈ ಭಾಗ ಹಾಳಾಗಿದೆ |

6 ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಶನ್ಸ್, ಸಂ. ೯, ಭಾಗ ೧,

| | | | | | |
|---|---|---|---|---|---|
| ೪. | ೧೦೯೮ ನವೆಂಬರ್ | ಕ. ಚಾ. ತ್ರಿಭುವನ ಮಲ್ಲ (೬ನೇ ವಿಕ್ರಮಾದಿತ್ಯ) | ೧) ಕಾರ್ತಿಕೇಯ ದೇವ ತಪೋವನ<br>೨) ಶ್ರೀ ಕಾರ್ತಿಕೇಯ ಪಾದ ಪದ್ಮೋಪಜೀತ | ೧) " "<br>೨) ಕೊಟ್ಟಿ ತೊಡೆಯ ಸ್ಥಾನ ಐದು ವರ್ಗ | ದಣ್ಣಾಸನಿ ವಿಶ್ವರೂಪ ಬ್ರಹ್ಮಚಾರಿ |
| ೫. | ೧೦೯೯ ಜುಲೈ | " | ೧) "<br>೨) " | ೧) "<br>೨) " | " |
| ೬. | ೧೧೧೯ | " | ೧) "<br>೨) " | ೧) "<br>೨) " | ದಣ್ಣಾಸನಿ ಯಶೋಧರ ಬ್ರಹ್ಮಚಾರಿ |
| ೭. | ೧೧೨೦ | " | ೧) "<br>೨) " | ೧) "<br>೨) " | ದಣ್ಣಾಸನಿ ಮಾಧವ ಬ್ರಹ್ಮಚಾರಿ |
| ೮. | ೧೧೪೮ | ಇಮ್ಮಡಿ ಜಗದೇಕ ಮಲ್ಲ | ೧) "<br>೨) " | ೧) "<br>೨) " | ದಂಡಸಾನಿ ಲೋಹಸಾನಿ ಮಾಧವ ಬ್ರಹ್ಮಚಾರಿ |
| ೯. | ೧೨೦೭ | ಹೊಯ್ಸಳ ಇಮ್ಮಡಿ ವೀರ ಬಲ್ಲಾಳ | ೧) "<br>೨) " | ೧) "<br>೨) | ವಿಷ್ಣುಕರ ಬ್ರಹ್ಮಚಾರಿ |
| ೧೦. | ೧೨೧೯ | " | ೧) "<br>೨) " | ೧) "<br>೨) " | ದಂಡಸಾನಿ ಲೋಹಸಾನಿ ಉದಯಾಕರ ಬ್ರಹ್ಮಚಾರಿ |

೧) ಕುಡುತಿನಿಯಲ್ಲಿಯ ರಾಷ್ಟ್ರಕೂಟ ದೊರೆ ಕೊಟ್ಟಿಗನ ಕಾಲದ ಸ್ಕಂದದೇವನ ಪ್ರತಿಷ್ಠಾಪನೆಯನ್ನು ತಿಳಿಸುವ ಶಾಸನದಲ್ಲಿ ಕಾರ್ತಿಕೇಯ ತಪೋವನ ಮತ್ತು ಅದರ ಅಧಿಪತಿಯ ಉಲ್ಲೇಖವಿಲ್ಲ. ಕುಡುತಿನಿಯ ವಲಯದಲ್ಲಿ ಕಾರ್ತಿಕೇಯ ತಪೋವನವಿದ್ದಲ್ಲಿ ತರುವಾಯದ ಕಾಲದಲ್ಲಿ ಇಂಥ ಸಂದರ್ಭಗಳಲ್ಲಿ ಉಲ್ಲೇಖಿಸಿದಂತೆ ಸ್ಕಂದ ಮೂರ್ತಿ ಪ್ರತಿಷ್ಠಾಪನೆ ಕಾಲದಲ್ಲಿ ಈ ತಪೋವನದ ಹಾಗೂ ಅದರ ಅಧಿಪತಿಗಳ ಉಲ್ಲೇಖವು ಸಮಂಜಸವಾಗುತ್ತಿತ್ತು. ಆದರೆ ಇದಿಲ್ಲದಿರುವುದು ಕುತೂಹಲಕಾರಿಯಾಗಿದೆ.

೨) ಕುಡುತಿನಿ ಅಗಸೆ ಬಾಗಿಲಿನಲ್ಲಿರುವ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕಾಲದ ಶಾಸನ (ಕ್ರಿ.ಶ. ೯೪೭)ದಲ್ಲಿ 'ಕಾರ್ತಿಕೇಯ ತಪೋವನ' ಮತ್ತು ಅದರ ಅಧಿಪತಿ ಲೋಕಯ್ಯ ಗಾವುಣ್ಡ ಉಲ್ಲೇಖವೇನೋ ಇದೆ. ಆದರೆ ಈ ಲಿಪಿಕಲ್ಲಿನಲ್ಲಿ ಎರಡು ಶಾಸನಗಳಿವೆ. ಮೊದಲನೇ ಶಾಸನವು ರಾಷ್ಟ್ರಕೂಟ ಅರಸನ ಕಾಲದ್ದು. ಇದರಲ್ಲಿ ಈ ಅರಸನ ಕಾಲದಲ್ಲಿ ಕುರುಗೋಡಿನ ಮಹಾಜನರು ದೇಕಮ್ಮ ದೇವಾಲಯಕ್ಕೆ ಭೂಮಿದಾನ ಮಾಡಿದುದನ್ನು ತಿಳಿಸಲಾಗಿದೆ. ಕಾಲ ಮತ್ತು ಅರಸನ ನಿರ್ದೇಶನವಿಲ್ಲದೆ ಎರಡನೇ ಶಾಸನದಲ್ಲಿ ಕಾರ್ತಿಕೇಯ ತಪೋವನಾಧಿಪತಿ ಮಹಿಮಾನ ಲೋಕಯ್ಯ ಗಾವುಣ್ಡನೆಂಬ ಬ್ರಾಹ್ಮಣನು ಅದೇ ದೇವಾಲಯಕ್ಕೆ ಎಣ್ಣೆಗಾಣವನ್ನು ದಾನ ಮಾಡಿದ ವಿಷಯವಷ್ಟೆ ಇದೆ. ಇವನನ್ನು "ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ವ್ರತ ಜಪ ನಿಯಮ ಹೋಮ ಸಂಯುಕ್ತನೆಂದು ವರ್ಣಿಸಲಾಗಿದೆ. ಇದೇ ಪದ ಸಮುಚ್ಚಯವನ್ನು ಕ್ರಿ.ಶ. ೯೭೬ ರಿಂದ ೧೧೨೦ರ ವರೆಗಿನ ಕಲ್ಯಾಣ ಚಾಲುಕ್ಯ ಅರಸರು ಇಮ್ಮಡಿ

ತೈಲ ಮತ್ತು ಆರನೇ ವಿಕ್ರಮಾದಿತ್ಯನ ಕಾಲದ ಐದು ಶಾಸನಗಳಲ್ಲಿ ಕಾರ್ತಿಕೇಯ(ದೇವ) ತಪೋವನಾಧಿಪತಿಗಳಾದ ವಿಶ್ವರೂಪ, ಯಶೋಧರ ಮತ್ತು ಮಾಧವ ಬ್ರಹ್ಮಚಾರಿಗಳ ಶಿಷ್ಟಾಚಾರದ ವರ್ಣನೆಯಲ್ಲಿ ಬಳಸಲಾಗಿದೆ. ಆದ ಕಾರಣ ಮತ್ತು ಭಾಷೆ ದೃಷ್ಟಿಯಿಂದಲೂ ಮೇಲೆ ಉಲ್ಲೇಖಿಸಿದ ಲಿಪಿಕಲ್ಲಿನ ೨ನೇ ಶಾಸನವು ಕಲ್ಯಾಣ ಚಾಲುಕ್ಯ ಕಾಲದ ೧೧–೧೨ನೇ ಶತಮಾನದ್ದೆಂದು ಮತ್ತು ರಾಷ್ಟ್ರಕೂಟ ಕೊಟ್ಟಿಗ ಕಾಲದ್ದಲ್ಲವೆಂದು ತರ್ಕಿಸಬಹುದು. ಇದರಲ್ಲಿ ಕಾರ್ತಿಕೇಯ ವನ ಹೊರತಾಗಿ ತತ್ಸಂಬಂಧದ ಬೇರೆ ಸ್ಥಳದ ನಿರ್ದೇಶನವಿಲ್ಲವೆಂಬುದನ್ನು ಈ ಸಂದರ್ಭದಲ್ಲಿ ಗಮನಾರ್ಹ. ಉಳಿದ ಐದು ಶಾಸನಗಳಲ್ಲಿ ಆಯಾಯ ಕಾಲದ ನಿರ್ಮಾಣ ಮಾಡಿದ ಮಾರ್ತಂಡೇಶ್ವರ, ಸರಸ್ವತೀ ಮತ್ತು ವಿನಾಯಕ (ಕ್ರಿ.ಶ. ೧೧೧೯), ದುರ್ಗೇಶ್ವರ (೧೧೨೦) ದೇವಾಲಯಗಳಿಗೆ ಭೂಮಿದಾನಗಳನ್ನು ಹಾಗೂ ಮೊದಲಿದ್ದ ಭಗವತೀ ದೇವಾಲಯಕ್ಕೆ ಹಿಂದಿದ್ದ "ಪರಮೇಶ್ವರದತ್ತಿ" ವರ್ಗಾವಣೆಯನ್ನು 'ಕಾರ್ತಿಕೇಯ (ದೇವ) ತಪೋವನ' ಆಯಾಯ ಕಾಲದ ಅಧಿಪತಿಗಳ ಮತ್ತು ಕೊಟ್ಟಿತೊಣೆ (ಕುಡುತಿನಿ)ಯ ಶ್ರೀ ಕಾರ್ತಿಕೇಯ ಪಾದಪದ್ಮೋಪಜೀವಿಗಳಾದ ಐದು ವರ್ಗಗಳ ಸಮ್ಮುಖದಲ್ಲಿ ಮಾಡಲಾಯಿತೆಂಬುದೇ ಪ್ರಧಾನ ವಿಷಯ. ಇವುಗಳಲ್ಲಿ 'ಕಾರ್ತಿಕೇಯ ವನ'ವನ್ನು, ಕೊಟ್ಟಿತೊಣೆಯನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ. ಎಲ್ಲಿಯೂ ಇವೆರಡು ಒಂದರ ಭಾಗ ಮತ್ತೊಂದಾಗಿದೆ ಎಂಬ ಅನುಮಾನಕ್ಕೆ ಕಿಂಚಿತ್ತು ಅವಕಾಶವಿಲ್ಲ. ಕೊಟ್ಟಿತೊಣೆ ಸ್ಥಾನದ ಪಂಚವರ್ಗದವರು ಅಲ್ಲಿಯ ಸಮಾಜದ ಗಣ್ಯವರ್ಗದವರಾಗಿದ್ದರು. ಮತ್ತು ಕಾರ್ತಿಕೇಯ ಸ್ವಾಮಿ ಆರಾಧಕರಾಗಿದ್ದರು. ಆದ್ದರಿಂದ ಕಾರ್ತಿಕೇಯವನದ ಅಧಿಪತಿಗಳ ಪ್ರಭಾವವೂ ಈ ಪ್ರದೇಶದಲ್ಲಿದ್ದು, ಇಲ್ಲಿ ದಾನ ಧರ್ಮಗಳು ಇವರೆಲ್ಲರ ಸಮ್ಮುಖದಲ್ಲಿ ನಡೆಯುತ್ತಿತ್ತು. ಕಲ್ಯಾಣ ಚಾಲುಕ್ಯ ಅರಸು ಇಮ್ಮಡಿ ಆಹವಮಲ್ಲ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಇತರ ಗಣ್ಯವ್ಯಕ್ತಿಗಳ ಸಮ್ಮುಖದಲ್ಲಿ ಲೊಕ್ಕಿಗದ್ಯಾಣ ಕಾರ್ತಿಕೇಯ ದೇವರ ಮೇಲಿನ ಭಕ್ತಿಯಿಂದ ಅಷ್ಟೆ ತೂಕದಲ್ಲಿ ನವಿಲುಪೊನ್ನಾಗಿ ಪರಿವರ್ತಿಸಲ್ಪಟ್ಟಿತು. ಇದೆಲ್ಲದರಿಂದ ಈ ಪ್ರದೇಶದಲ್ಲಿ ಕಾರ್ತಿಕೇಯ ತಪೋವನದ ಪ್ರಭಾವ ಎಷ್ಟು ಗಂಭೀರವಾಗಿತ್ತೆಂಬುದನ್ನು ಸೂಚಿಸುತ್ತದೆ.

ಕುಡುತಿನಿ ಗ್ರಾಮವು ಒಂದು ಬಯಲು ಪ್ರದೇಶ. ಇದರ ದಕ್ಷಿಣಕ್ಕೆ ಸುಮಾರು ೨ ಕಿ.ಮೀ. ದೂರದಲ್ಲಿ ಬೋಳುಗುಡ್ಡದ ಸಾಲು ಇದೆ. ಈ ಪ್ರದೇಶದಲ್ಲಿ ಕಬ್ಬಿಣದ ಅದಿರಿನ ಹೇರಳ ನಿಕ್ಷೇಪವಿದ್ದು, ಇದನ್ನು ತೆಗೆಯುವ ಕಾರ್ಯದ ಬಗ್ಗೆ ನನಗೆ ತಿಳುವಳಿಕೆಯಿಲ್ಲ. ಆದರೆ ಇಲ್ಲಿಯ ಬೆಟ್ಟದ ಭಾಗಕ್ಕೆ 'ಲೋಹಾಚಲ'ವೆಂದಾಗಲಿ ಹೆಸರಿಲ್ಲ. ಇಲ್ಲಿ ಹಿಂದೆ ಕಾರ್ತಿಕೇಯ ತಪೋವನ ಇದ್ದ ಬಗ್ಗೆ ಸ್ಥಳಿಯ ಕಥೆಯಿಲ್ಲ. ಈ ಗ್ರಾಮದಲ್ಲಿ ಶ್ರೀ ಕುಮಾರಸ್ವಾಮಿ, ಈಶ್ವರ, ಸಂಗಮೇಶ್ವರ, ವೆಂಕಟೇಶ್ವರ ದೇವಾಲಯಗಳು, ಒಂದು ರಾಮಲಿಂಗೇಶ್ವರ ಮಠ (ಜೈನ ?), ದಿಬ್ಬದ ಮೇಲೆ ದರಗಾ (ಮೂಲತಃ ದೇವಾಲಯ ದುರ್ಗೇಶ್ವರ ?) ಮತ್ತು ಒಂದು ಚಿಕ್ಕ ಮೆಟ್ಟಲಿನ ಕೊಳ ಇವೆ.[7] ಶ್ರೀ ಕುಮಾರಸ್ವಾಮಿ ಎಂದು ಕರೆಯಲಾದ ದೇವಾಲಯದ ತಳವಿನ್ಯಾಸ, ಅಧಿಷ್ಠಾನದಲ್ಲಿ ಉದ್ದಕ್ಕೂ ಆನೆಗಳ ಉಬ್ಬುಶಿಲ್ಪಗಳ ಸಾಲು, ೨೪ ಕಂಬಗಳಿಂದ ಕೂಡಿದ ವಿಶಾಲ ಸಭಾಮಂಟಪ, ಕಂಬಗಳ ಮಾದರಿ, ದ್ವಾರಬಂಧದಲ್ಲಿಯ ಮಯೂರ ಶಾಖೆ, ಗೋಡೆಯ ಹೊರಮೈಯಲ್ಲಿಯ ಸ್ತಂಭ ಪಂಜರಗಳ ಮಾದರಿಗಳ ಶೈಲಿಯನ್ನು ಗಮನಿಸಿದಾಗ ಈ ದೇವಾಲಯವು ೧೦ನೇ ಶತಮಾನದ ಉತ್ತರಾರ್ಧ ಕಾಲದ್ದೆಂದು, ರಾಷ್ಟ್ರಕೂಟ ಕೊಟ್ಟಿಗನ ಕಾಲದಲ್ಲಿ ಕಟ್ಟಿಸಿದ ಸ್ಕಂದ ದೇವಾಲಯವು ಇದೇ ಆಗಿರಬಹುದೆಂದು ತರ್ಕಿಸಬಹುದು. ಇದರಲ್ಲಿ ಒಂದರ ಪಕ್ಕದಲ್ಲೊಂದು ಒಟ್ಟು ಮೂರು ಗರ್ಭಗುಡಿಗಳಿವೆ. ಒಂದರಲ್ಲಿ ಗಣೇಶನ ಮೂರ್ತಿ, ಉಳಿದೆರಡರಲ್ಲಿ ಶಿವಲಿಂಗಗಳಿವೆ. ಸ್ಕಂದ ಮೂರ್ತಿಯಿಲ್ಲ, ಇದನ್ನು ಶೋಧಿಸಬೇಕಾಗಿದೆ. ಇಲ್ಲಿಯ ವೆಂಕಟೇಶ್ವರ ದೇವಾಲಯವು ಒಂದು ತ್ರಿಕೂಟಾಚಲವಾಗಿದ್ದು, ಬಹುಶಃ ಇದೇ ಮಾರ್ತಂಡೇಶ್ವರ, ಸರಸ್ವತೀ

---

7 ನನ್ನ ಕೋರಿಕೆಯಂತೆ ಶ್ರೀ ವಾಸುದೇವ ಎಸ್. ಬಡಿಗೇರ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ ಇವರು ಒದಗಿಸಿ ಕೊಟ್ಟ ಕುಡುತಿನಿ ಗ್ರಾಮದಲ್ಲಿಯ ಎಲ್ಲ ದೇವಾಲಯಗಳ ಹಾಗೂ ಸ್ಥಳಿಕರಿಂದ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ

ವಿನಾಯಕ ದೇವಾಲಯ (ಕ್ರಿ.ಶ. ೧೧೯೯)ವಿರಬಹುದೇನೊ ? ಒಟ್ಟಿನಲ್ಲಿ ಹೀಗೆ ಸ್ಥಳೀಯ ಶಾಸನಗಳ ಮತ್ತು ದೇವಾಲಯಗಳ ವಿಶ್ಲೇಷಣೆಯಿಂದ ಕುಡುತಿನಿ ಪ್ರದೇಶದಲ್ಲಿ ಕಾರ್ತಿಕೇಯ ತಪೋವನ ಇದ್ದುದಕ್ಕೆ ತಕ್ಕ ಆಧಾರಗಳಿಲ್ಲ. ಹಾಗಾದರೆ ಇದು ಎಲ್ಲಿ ಇತ್ತು ? ಈ ದಿಶೆಯಲ್ಲಿ ಸೊಂಡೂರಿನ ಕುಮಾರಸ್ವಾಮಿ ದೇವಾಲಯದಲ್ಲಿಯ, ಹೊಯ್ಸಳ ಇಮ್ಮಡಿ ವೀರಬಲ್ಲಾಳನ ಕಾಲದ ಶಾಸನ[8] (ಕ್ರಿ.ಶ. ೧೨೦೬)ವು ಸಹಾಯಕಾರಿಯಾಗಿದೆ. ಈ ಅರಸನ ದಂಡನಾಯಕ ಮಹಾದೇವನು ಹಿಂದೆ ರಾಷ್ಟ್ರಕೂಟ ಅರಸು ಮುಮ್ಮಡಿ ಕೃಷ್ಣನು ಇಲ್ಲಿಯ ಷಣ್ಮುಖ ದೇವಾಲಯಕ್ಕೆ ದೇವರ ನೈವೇದ್ಯಕ್ಕೆ ಕೊಟ್ಟ ಕೆರೆಯಪಲ್ಲಿ ಗ್ರಾಮವನ್ನು ತನ್ನ ಅರಸನ ಅಣತಿಯಂತೆ "ಗುಹಂಗೆ ನೈವೇದ್ಯಾರ್ತ್ಥಂ" ಮತ್ತೆ ದಾನ ಕೊಟ್ಟನು. ಈ ದಾನವನ್ನು ಸ್ಥಾನಾಧಿಪತಿಯಾದ "ಜಷ್ಣು ಪ್ರಮುಖಂ ಸುರಾರ್ಚಿತ ವಿಷ್ಣು ಪದಾಂಭೋಜ ಮಧುಕರಂ ಸರಳ ಕಳಾನಿಷ್ಣಾತಂ ಪೆಸರ್ವೆತ್ತ್ರಂ" ವಿಷ್ಣುಕರ ಬ್ರಹ್ಮಚಾರಿಯು ಪಡೆದನು. ಆದರೆ ಈ ಶಾಸನದಲ್ಲಿ ಈ ಸ್ಥಳವನ್ನು ಕಾರ್ತಿಕೇಯ ವನವೆಂದು ವರ್ಣಿಸಿಲ್ಲ. ಆದರೆ ಕುಡುತಿನಿಯ ಸ್ವಲ್ಪ ಹೆಚ್ಚು ಕಡಿಮೆ ಇದೇ ಕಾಲದ ಒಂದು ಶಾಸನ[9]ದಲ್ಲಿ (ಕ್ರಿ.ಶ. ೧೨೦೭), ವಿಷ್ಣುಕರ ಬ್ರಹ್ಮಚಾರಿಯನ್ನು 'ಕಾರ್ತಿಕೇಯ ತಪೋವನಾಧಿಪತಿ'ಯೆಂದು ಹೇಳಿದೆ. ಈ ಅಧಿಪತಿಯ ಹೆಸರಿನಲ್ಲಿಯ : 'ಬ್ರಹ್ಮಚಾರಿ' ಪದವು ಕುಡುತಿನಿಯಲ್ಲಿಯ ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳ ಕಾಲದ ಒಟ್ಟು ಎಂಟು ಶಾಸನಗಳಲ್ಲಿ ಉಲ್ಲೇಖಿತವಾದ 'ಕಾರ್ತಿಕೇಯ ತಪೋವನ'ದ ಹಿಂದಿನ ಅಧಿಪತಿಗಳ ಹೆಸರುಗಳಲ್ಲಿಯೂ ಇರುವುದರಿಂದ ವಿಷ್ಣುಕರ ಬ್ರಹ್ಮಚಾರಿಯು ಈ ಶಾಸನಗಳ ಕಾರ್ತಿಕೇಯ ತಪೋವನಾಧಿಪತಿಗಳ ಪರಂಪರೆಗೆ ಸೇರಿದವನು, ಕುಮಾರ ಸ್ವಾಮಿ ದೇವಾಲಯ ಸ್ಥಾನಪತಿ ವಿಷ್ಣುಕರ ಬ್ರಹ್ಮಚಾರಿಯಾದುದರಿಂದ ಕುಡುತಿನಿಯ ಶಾಸನಗಳ ಬ್ರಹ್ಮಚಾರಿಗಳೂ ಈ ದೇವಾಲಯದ ಸ್ಥಾನಾಧಿಪತಿಗಳೆ. ಇದಲ್ಲದೆ, ಈ ಪ್ರದೇಶದ ಭೌಗೋಳಿಕ ಸನ್ನಿವೇಶವು ಕುಮಾರಸ್ವಾಮಿ ಬೆಟ್ಟದ ಶಾಸನದಲ್ಲಿದೆ. ಇದರಲ್ಲಿ ಉಲ್ಲೇಖಿಸಿದ ಕೆರೆಯಪಳ್ಳಿ, ಹೊನ್ನೊರಾಯಪಳ್ಳಿ, ಬೆಳ್ಗುಪ್ಪೆ, ಲಚ್ಚಿಯನಕಟ್ಟೆ, ಸಂಡೊರು, ಒರವಿನಕುಪ್ಪೆ, ಕಡವಿನಬೆಂಚೆ ಮತ್ತು ದೇವಗಿರಿ ಮೊದಲಾದ ಗ್ರಾಮಗಳು ಈಗಿನ ಸೊಂಡೂರಿನ ಕುಮಾರಸ್ವಾಮಿಬೆಟ್ಟ ಹಾಗೂ ಸುತ್ತಮುತ್ತಲಿನ ಪ್ರದೇಶವೇ ಆಗಿದೆ. ಕುಡುತಿನಿಯ ಪ್ರದೇಶದ ಸೂಚನೆಯೇ ಇಲ್ಲ. ಕುಡುತಿನಿಯ ಇಮ್ಮಡಿ ಜಗದೇಕಮಲ್ಲನ ಶಾಸನದಲ್ಲಿ (ಕ್ರಿ.ಶ. ೧೧೪೮) ಕ್ಷೇತ್ರವೆಂಬಂತೆ 'ಶ್ರೀ ಸ್ವಾಮಿ ಶತಕೋಟಿ ತೀರ್ಥ'ದ ಉಲ್ಲೇಖ ಎರಡು ಕಡೆಗಳಲ್ಲಿವೆ. ಈ ಪದ ಪ್ರಯೋಗ ಸಂದರ್ಭವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಇದು 'ಕುಮಾರಸ್ವಾಮಿ ಬೆಟ್ಟ'ದ ಮೇಲಿನ ಪಾರ್ವತೀ–ಕುಮಾರಸ್ವಾಮಿ ದೇವಾಲಯ ಸಂಕೀರ್ಣದ ಹೊರವಲಯದಲ್ಲಿರುವ ಅಗಸ್ತ್ಯ ತೀರ್ಥವೆಂದು ಹೇಳಬಹುದು. ಇದು ಹೆಸರಿಗೆ ತಕ್ಕಂತೆ ನೂರಾರು ಯಾತ್ರಿಕರು ಸ್ನಾನ ಮಾಡಲು ಅನುಕೂಲವಾಗಿದೆ. ಈ ಶಾಸನದಲ್ಲಿ ಈ ತೀರ್ಥಕ್ಷೇತ್ರಕ್ಕೆ ಕಪ್ಪಡಿ ಯಾತ್ರಿಗಳು ಬರುತ್ತಿದ್ದರೆಂದೂ ಸೂಚಿತವಾಗಿದೆ. ಆದ್ದರಿಂದ ಪರಸ್ಪರ ಪೂರಕವಾದ ಕುಡುತಿನಿ ಸೊಂಡೂರಿನ ಶಾಸನಗಳ ಆಧಾರದ ಮೇಲೆ ರಾಮಾಯಣದ ಹಾಗೂ ಶಾಸನಗಳ "ಕಾರ್ತಿಕೇಯ ತಪೋವನ"ವು ಲೋಹಾಚಲ ಕುಮಾರಸ್ವಾಮಿ ಬೆಟ್ಟವೆಂದು ನಿಸ್ಸಂಶಯವಾಗಿ ಗುರುತಿಸಬಹುದು, ಮತ್ತು ಒಟ್ಟು ೧೦೯೮ ರಿಂದ ೧೨೯೯ರವರೆಗೆ ನಿರಂತರವಾಗಿ ಈ ಸ್ಥಾನಾಧಿಪತಿಗಳ ಒಂದು ಮುಖ್ಯ ಪರಂಪರೆಯನ್ನು ತಿಳಿಯಲೂ ಸಾಧ್ಯವಾಗಿದೆ.

ಇನ್ನು ಕಾರ್ತಿಕೇಯದೇವ ಪಾದಪದ್ಮೋಪಜೀವಿಗಳಾದ ಪಂಚವರ್ಗದವರನ್ನು ಗುರುತಿಸಬೇಕು. ಬಹುಶಃ ವಿಶ್ವಕರ್ಮ ಪರಂಪರೆಯ ಪಂಚವಾಳರು (ಕಲ್ಕುಟಿಗ, ಕಮ್ಮಾರ, ಅಕ್ಕಸಾಲಿಗ, ಕಂಚುಗಾರ ಮತ್ತು ಬಡಿಗ) ಆಗಿರಬಹುದು.

ಈ ಶಾಸನಗಳಲ್ಲಿ ಮತ್ತೊಂದು ಗಮನಾರ್ಹ ಅಂಶವೆಂದರೆ, ಕಾರ್ತಿಕೇಯ ತಪೋವನಾಧಿಪತಿಗಳನ್ನು ಮೊದಮೊದಲು ದಂಡಸಾನಿಯೆಂದು, ಆಮೇಲೆ ಕೆಲವರನ್ನು ಲೋಹಸಾನಿ[10]ಗಳೆಂಬ ವರ್ಣನೆ. ಲೋಹಸಾನಿ

8 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್. ಸಂ. ೯, ಭಾಗ ೧, ಶಾಸನ ಸಂಖ್ಯೆಗಳು : ೬೫, ೭೦, ೭೮, ೧೬೪, ೧೬೬, ೧೯೭, ೧೯೯, ೨೫೨, ೩೨೭ ಮತ್ತು ೩೨೬

9 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್, ಸಂ. ೯, ಭಾಗ ೧,

ಎಂಬ ಪದವು ಇವರು ಇಲ್ಲಿ ಬಹುಶಃ ನಡೆಯುತ್ತಿದ್ದ ಲೋಹ ತಂತ್ರಗಾರಿಕೆಗೆ ಮುಖ್ಯಸ್ಥರಾಗಿದ್ದರೆಂಬ ಅನುಮಾನಕ್ಕೆ ಆಸ್ಪದ ಮಾಡಿಕೊಡುತ್ತದೆ. ಇದು ಸರಿಯಾಗಿದ್ದಲ್ಲಿ ಶಾಸನಗಳ ಆಧಾರದಿಂದ ಇಲ್ಲಿ ಹಿಂದಿನಿಂದಲೂ ವಿಶೇಷವಾಗಿ ಕಮ್ಮಾರಿಕೆ ಇದ್ದುದುದಕ್ಕೆ ಇದು ಐತಿಹಾಸಿಕ ಪುರಾವೆಯಾಗುತ್ತದೆ.

ಇನ್ನು ಕಥಾಭಾಗವನ್ನು ನೋಡೋಣ. ಶ್ರೀರಾಮ ಲಕ್ಷ್ಮಣರು ಕಿಷ್ಕಿಂಧೆಗೆ ಹೋಗಿ ಅಲ್ಲಿ ಸುಗ್ರೀವಾದಿ ವಾನರರ ಸಖ್ಯವನ್ನು ಬೆಳೆಸಿದ ನಂತರ ಸುಗ್ರೀವನು ತನ್ನ ರಾಜ್ಯವನ್ನು ತನ್ನ ಅಣ್ಣ ವಾಲಿಯಿಂದ ಪಡೆಯುವುದರಲ್ಲಿ ಶ್ರೀರಾಮನು ತನಗೆ ಸಹಾಯ ಮಾಡಬಹುದು, ಆದರೆ ಆ ಮಹಾ ಬಲಿಷ್ಠ ವಾಲಿಯನ್ನು ಎದುರಿಸಿ ಗೆಲ್ಲಲು ಶ್ರೀರಾಮನ ಬಾಣಗಳಿಂದ ಸಾಧ್ಯವೇ ಎಂಬ ಸಂಶಯ ಪಟ್ಟು ತನ್ನ ಹಾಗೂ ತನ್ನಲ್ಲಿರುವ ಶಸ್ತ್ರಗಳ ಗರಿಷ್ಠ ಶಕ್ತಿಯನ್ನು, ಸಾಮರ್ಥ್ಯವನ್ನು ಮನವರಿಕೆ ಮಾಡಿಕೊಡುವ ಸಂದರ್ಭದಲ್ಲಿ ಹೇಳಿದ ಮಾತು ಮೇಲೆ ಉದ್ಧರಿಸಿದ ಶ್ಲೋಕದಲ್ಲಿದೆ. ತನ್ನ ಬಾಣಗಳು ಬೇರೆ ಎಲ್ಲಿಯೂ ಅಲ್ಲ 'ಕಾರ್ತಿಕೇಯ ವನ'ದಲ್ಲಿ ಸಿದ್ಧವಾದವು. ಅವು "ಹೇಮ ವಿಭೂಷಿತಾಃ...ಮಹೇಂದ್ರಾಶನಿ ಸನ್ನಿಭಾಃ..,ಸುಪರ್ವಣಃ ಸುತೀಕ್ಷ್ಣಾಗ್ರಾಃ" ಎಂದು ವರ್ಣಿಸಿ, ಅವು ಅಪ್ರತಿಮ ಪ್ರಬಲ ಶಸ್ತ್ರಗಳೆಂದು ಹೇಳುತ್ತಾನೆ. ತರುವಾಯ ಸುಗ್ರೀವನನ್ನು ನಂಬಿಸಲು ಈ ಬಾಣಗಳಲ್ಲಿ ಒಂದರಿಂದಲೇ ಒಂದೇ ಸಾಲಿನಲ್ಲಿದ್ದ ಏಳು ತಾಳೆ ಮರಗಳನ್ನು ಕತ್ತರಿಸುತ್ತಾನೆ.

ಇಲ್ಲಿ ಮೂರು ಅಂಶಗಳು ಗಮನಾರ್ಹ. ಸುಗ್ರೀವಾದಿಗಳು ಇದ್ದ ಕಿಷ್ಕಿಂಧೆ ಅಂದರೆ ಈಗಿನ ಹಂಪಿ–ಆನೆಗೊಂದಿ ಪ್ರದೇಶ, ಮತ್ತು ಈ ಕಾರ್ತಿಕೇಯ ವನ ಒಂದಕ್ಕೊಂದು ಹತ್ತಿರವೇ ಇವೆ. ಕಿಷ್ಕಿಂಧೆ ಎಂಬ ಹೆಸರು ಕನಿಷ್ಠ ೨೦೦೦ ವರ್ಷಗಳಿಗಿಂತಲೂ ಪೂರ್ವದಿಂದ ಆನೆಗೊಂದಿ–ಹಂಪಿ ಪ್ರದೇಶಕ್ಕೆ ಇತ್ತು ಎಂಬುದನ್ನು ಶಾಸನ ಮತ್ತು ಪುರಾತತ್ವ ಆಧಾರಗಳ ಮೇಲೆ ಬೇರೆಡೆ ಚರ್ಚಿಸಿದ್ದೇನೆ.[10]

ಎರಡನೆಯದು, ಈ ಪ್ರದೇಶಕ್ಕೆ ಹೊಂದಿಕೊಂಡಂತೆ ಇರುವ ಲೋಹಗಿರಿ ಪ್ರದೇಶಕ್ಕೆ 'ಕಾರ್ತಿಕೇಯ ವನ' ಎಂಬ ಹೆಸರೂ ಕೂಡ ಅಷ್ಟೇ ಪ್ರಾಚೀನವಾಗಿರಬಹುದು ಎಂಬ ಅನುಮಾನ ಬರುತ್ತದೆ. ಇಲ್ಲಿ ಮೂಲ ಕಾರ್ತಿಕೇಯ ದೇವಾಲಯವು ಕನಿಷ್ಟ ಶಾತವಾಹನ ಕಾಲದ್ದಾಗಿರಬಹುದೆಂದು ಬೇರೆಡೆಯಲ್ಲಿ ಚರ್ಚಿಸಿ[11]ದ್ದೇನೆ. ಈ ದಿಶೆಯಲ್ಲಿ ರಾಮಾಯಣದ ಅವರಲ್ಲೂ ಗಮನಾರ್ಹವಾಗಿ 'ಕಿಷ್ಕಿಂಧಾಕಾಂಡ'ದಲ್ಲಿ 'ಕಾರ್ತಿಕೇಯ ವನ'ದ ಉಲ್ಲೇಖ ಹಾಗೂ ಈ ಉಲ್ಲೇಖದ ಸಂದರ್ಭ ಮತ್ತು ಸ್ಥಳ ಅರ್ಥಗರ್ಭಿತವಾಗಿ ಒಂದಕ್ಕೊಂದು ಸಮಂಜಸವಾಗಿವೆ. ಈ ಶ್ಲೋಕ ಗುಚ್ಛವೂ ಸೇರಿದಂತೆ ೨೫,೦೦೦ ಶ್ಲೋಕಗಳುಳ್ಳ ರಾಮಾಯಣ ಮಹಾಕಾವ್ಯವು ಗುಪ್ತ ಕಾಲದ ಸು. ೫ನೇ ಶತಮಾನದ ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಆದ್ದರಿಂದ ಈ ಸ್ಥಳಕ್ಕೆ 'ಕಾರ್ತಿಕೇಯ ವನ' ಎಂಬ ಹೆಸರು ಸುಮಾರು ೪–೫ ಶತಮಾನದ ಹೊತ್ತಿಗೆ ಪ್ರಸಿದ್ಧವಾಗಿರಬೇಕು. ಇದಕ್ಕೂ ಮೊದಲು ಈ ಮಹಾಕಾವ್ಯದ ಕರ್ತೃ ವಾಲ್ಮೀಕಿಮಹರ್ಷಿಗಳಿಗೆ ಈ 'ಕಾರ್ತಿಕೇಯ ವನ'ದ ಮಹಾತ್ಮೆಯು ಬಗ್ಗೆ ಗೊತ್ತಿದ್ದಿರಬೇಕು. ಆದ್ದರಿಂದಲೇ ತಮ್ಮ ಕಾವ್ಯದಲ್ಲಿ ಶ್ರೀರಾಮ–ಲಕ್ಷ್ಮಣರು ಈ ಕ್ಷೇತ್ರ ದರ್ಶನ ತೆಗೆದುಕೊಳ್ಳುವಂತೆ ಮಾಡಿದ್ದಾರೆ.

ಮೂರನೆಯದಾಗಿ, ಈ 'ಕಾರ್ತಿಕೇಯ ವನ' ಪ್ರದೇಶದಲ್ಲಿ ಲೋಹಶಸ್ತ್ರಗಳು ಸಿದ್ಧವಾಗುತ್ತಿದ್ದು, ಇಲ್ಲಿಯ ಶಸ್ತ್ರಗಳು ಗುಣಮಟ್ಟದಿಂದ ಅತ್ಯುತ್ತಮವಾಗಿದ್ದು, ಇಲ್ಲಿಯ ಶಸ್ತ್ರ ಕಾರ್ಖಾನೆಗಾರವು ಪ್ರಸಿದ್ಧವಾಗಿರಬೇಕು. ದೇವತೆಗಳ ಮಹಾಸೇನಾನಿ ಕಾರ್ತಿಕೇಯನು ಇದ್ದಲ್ಲಿ ಶ್ರೇಷ್ಠ ಶಸ್ತ್ರ ಕಾರ್ಖಾಗಾರವೂ ಇರುವುದು ಸಮಂಜಸ. ಈ ಸಂದರ್ಭದಲ್ಲಿ ಇನ್ನೊಂದು ಸಮಯೋಚಿತ ವಿಷಯವನ್ನು ನೆನಪು ಮಾಡಿಕೊಳ್ಳ

10 ಸುಂದರ ಅ., ೧೯೯೪, "ಹಂಪಿ : ದಿ ಏನ್ಸಿಯಂಟ್ ಕಿಷ್ಕಿಂಧಾ", ಡಾ॥ ವಿ.ಎಸ್. ಪಾಠಕ ಫೆಲಿಸಿಟೇಶನ್ ಸಂಪುಟ, ಹರ್ಮನ್ ಪಬ್ಲಿಷರ್, ದೆಹಲಿ

11 ಸುಂದರ ಅ., ೧೯೮೭, ಪೂರ್ವೋಕ್ತ

ಬಹುದು. ಸೊಂಡೂರಿನ ದಕ್ಷಿಣಕ್ಕೆ ಸುಮಾರು ೫೦ ಕಿ.ಮೀ. ದೂರದಲ್ಲಿಯ ಬ್ರಹ್ಮಗಿರಿ[12] (ಮೊಳಕಾಲ್ಮೂರು ತಾ. ಚಿತ್ರದುರ್ಗ ಜಿ.)ಯಲ್ಲಿಯ ಬೃಹತ್ ಶಿಲಾ ಸಂಸ್ಕೃತಿ (ಸು. ಕ್ರಿ.ಪೂ. ೬೦೦-೨೦೦)ಯ ಹತ್ತು ಕಲ್ಗೋರಿಗಳ ಉತ್ಖನನದಲ್ಲಿ ವಿಶೇಷವಾಗಿ ಈಟಿ, ಭರ್ಜಿ, ಕತ್ತಿ ಬಾಣದ ಮೊನೆಗಳು ಗಣನೀಯ ಸಂಖ್ಯೆಯಲ್ಲಿ ಕಂಡುಬಂದವು. ಮಸ್ಕಿಯ[13] ೫ನೇ ಪ್ರಕಾರದ ಒಂದು ಕಲ್ಗೋರಿಯಲ್ಲಿ ಒಂದು ಈಟಿ ಸಿಕ್ಕಿದೆ. ಕ್ರಿ.ಶ. ೧-೨ನೇ ಶತಮಾನದ ಸಮಯದಲ್ಲಿ ರೋಮ್ ದೇಶದ ವರ್ತಕರು ನಮ್ಮ ದೇಶದಿಂದ ವಿಶೇಷವಾಗಿ ಆರಿಸಿಕೊಂಡು ಕೊಂಡವಸ್ತುಗಳಲ್ಲಿ ಉಕ್ಕು ಪ್ರಮುಖವಾದುದು. ರೋಮ್ ದೇಶದ ಸೈನ್ಯ ಸಮಕಾಲಿನ ಪ್ರಪಂಚದಲ್ಲಿ ಅತ್ಯಂತ ಬಲಾಢ್ಯವಾದುದು. ತಮ್ಮ ಶಸ್ತ್ರಗಳಿಗೆ ಭಾರತದ ಉಕ್ಕನ್ನು ಉಪಯೋಗಿಸಿದ್ದಿರಬಹುದು. ಇನ್ನು ಸೊಂಡೂರು-ಹೊಸಪೇಟೆ ಪ್ರದೇಶದ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಅತ್ಯುತ್ತಮ ದರ್ಜೆಯದು. ಈಗಲೂ ಇಲ್ಲಿ, ಕರ್ನಾಟಕದಲ್ಲಿಯೇ ದೊಡ್ಡ ಹಾಗೂ ವ್ಯಾಪಕ ಪ್ರಮಾಣದಲ್ಲಿ ಕಬ್ಬಿಣದ ಅದಿರಿನ ಸಂಗ್ರಹ ಕಾರ್ಯ ನಡೆಯುತ್ತಿದೆ. ಇವೆಲ್ಲವನ್ನು ಗಣನೆಗೆ ತೆಗೆದುಕೊಂಡಾಗ 'ಕಾರ್ತಿಕೇಯ ವನ' ಪ್ರದೇಶದಲ್ಲಿ ಒಂದು ಶಸ್ತ್ರ ಕಾರ್ಖಾನೆ/ಕಾರ್ಯಾಗಾರವಿದ್ದು, ಅದು ತನ್ನ ಸಿದ್ಧ ವಸ್ತುಗಳಿಗೆ ಉತ್ತರ ಭಾರತ ಹಾಗೂ ಇತರ ಪ್ರದೇಶಗಳಲ್ಲಿಯೂ ಕ್ರಿಸ್ತ ಶಕೆಯ ಆರಂಭದ ಪೂರ್ವದಲ್ಲಿಯೇ ಪ್ರಸಿದ್ಧವಾಗಿರುವ ಸಾಧ್ಯತೆ ಇದೆ.

ದಕ್ಷಿಣ ಭಾರತದಲ್ಲಿ ಪ್ರಪ್ರಥಮ ಉಕ್ಕು ಕಾಣಿಸಿಕೊಳ್ಳುವುದು ಈ ಭಾಗದ ಬೃಹತ್ ಶಿಲಾ ಸಂಸ್ಕೃತಿ ಹಂತದಲ್ಲಿ. ಉತ್ತರ ಕರ್ನಾಟಕದಲ್ಲಿ ಈ ಸಂಸ್ಕೃತಿಯು ಸು. ಕ್ರಿ.ಪೂ. ೧೨೦೦ ರಿಂದ ೨೦೦ರ ವರೆಗೆ ಅಸ್ತಿತ್ವದಲ್ಲಿತ್ತು. ಸೊಂಡೂರಿನ ಸಮೀಪ ಹಿರೇಬೆನಕಲ್ (ಗಂಗಾವತಿ ತಾ.) ಹಂಪಿ ಪ್ರದೇಶದಲ್ಲಿ ಹೇರಳವಾಗಿ ಈ ಸಂಸ್ಕೃತಿಯ ನೆಲೆಗಳ ಕುರುಹುಗಳು[14] ಇವೆ. ಈ ಸಂಸ್ಕೃತಿಯ ಕಬ್ಬಿಣದ ಉಪಕರಣಗಳ ವೈಜ್ಞಾನಿಕ ಅಧ್ಯಯನದಿಂದ ಇವು ಈ ಪ್ರದೇಶದ ಕಬ್ಬಿಣದ ಅದಿರನ್ನು ಸಂಗ್ರಹಿಸಿ ಸಂಸ್ಕರಿಸಿ ಮಾಡಿದ ಕಬ್ಬಿಣದ ಲೋಹದಿಂದ ಸಿದ್ಧವಾಗಿವೆಯೆಂಬ ಸತ್ಯಾಂಶ[15] ತಿಳಿದಿದೆ. ಇವೆಲ್ಲವನ್ನು ಗಮನಿಸಿದಾಗ 'ಕಾರ್ತಿಕೇಯ ವನ' ಪ್ರದೇಶದಲ್ಲಿ ಕಬ್ಬಿಣದ ಕಾರ್ಯಾಗಾರವು ಸು. ಕ್ರಿ.ಪೂ. ೮೦೦-೫೦೦ರ ಹೊತ್ತಿಗೆ ಪ್ರಾರಂಭವಾಗಿದ್ದಿರಬಹುದು. ಈ ಪ್ರದೇಶದ ಮುಖ್ಯವಾಗಿ ಸು. ಕ್ರಿ.ಪೂ. ೬೦೦-೫೦೦ ಅವಧಿಯ ಕಬ್ಬಿಣಯುಗದ ಬೃಹತ್‌ಶಿಲಾ ಸಂಸ್ಕೃತಿಯ ಕುರುಹುಗಳನ್ನು ವಿಮರ್ಶಿಸಿದಾಗ ಕುಮಾರಸ್ವಾಮಿ ಬೆಟ್ಟ ಸೊಂಡೂರು-ಗಂಗಾವತಿ ಪ್ರದೇಶವು ಕೇಂದ್ರವಾಗಿದ್ದು, ಉತ್ತರಕ್ಕೆ ಮಸ್ಕಿ ದಕ್ಷಿಣದಲ್ಲಿ ಬ್ರಹ್ಮಗಿರಿಯವರೆಗೆ ಈ ಜನವರ್ಗದವರು ದೊಡ್ಡ ಪ್ರಮಾಣದಲ್ಲಿ ನೆಲೆಸಿದ್ದರೆಂದು ಸ್ಪಷ್ಟವಾಗುತ್ತದೆ. ಈ ಜನರಲ್ಲಿ ಒಂದು ಗುಂಪಿನವರು ಕುಮಾರಸ್ವಾಮಿಬೆಟ್ಟ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕಬ್ಬಿಣ ಅದಿರಿನ ನಿಕ್ಷೇಪವನ್ನು ಗುರುತಿಸಿ, ಸಂಗ್ರಹಿಸಿ ಈ ಲೋಹದ ನಾನಾ ಪ್ರಕಾರದ ಉಪಕರಣಗಳನ್ನು ಶಸ್ತ್ರಗಳನ್ನು ತಯಾರಿಸುವಲ್ಲಿ ಸಿದ್ಧಹಸ್ತರಾಗಿದ್ದರೆಂದು ಹೇಳಲು ಈ ಪ್ರದೇಶದಲ್ಲಿ ಗವಿ ವರ್ಣಚಿತ್ರಗಳು[16] ಸಾಕ್ಷಿಯಾಗಿವೆ. ಹಿರೆಬೆನಕಲ್ಲಿನ ವಿಶೇಷವಾಗಿ ೧ ಮತ್ತು ೪ನೇ ಗವಿ ವರ್ಣಚಿತ್ರಗಳಲ್ಲಿ ಕತ್ತಿ, ಈಟಿ, ಬಿಲ್ಲು-ಬಾಣ ಮೊದಲಾದ ಶಸ್ತ್ರಗಳನ್ನು ಹಿಡಿದ ಕುದುರೆ ಸವಾರರ ಚಿತ್ರಗಳು ಗಣನೀಯ ಸಂಖ್ಯೆಯಲ್ಲಿವೆ. ಇಲ್ಲಿಯೇ ಇವುಗಳ ಸುತ್ತಮುತ್ತ ೪೦೦ಕ್ಕೂ ಹೆಚ್ಚು ಬೃಹತ್‌ಶಿಲಾ ಗೋರಿಗಳು, ಒಂದು ಅಪರೂಪವಾದರಿಯ ದೊಡ್ಡ ಶಿಲಾ ಮನುಷ್ಯಾಕೃತಿಯು, ಈ

12 ಏನ್ಷಿಯಂಟ್ ಇಂಡಿಯಾ (ಬುಲೆಟಿನ್ ಆಫ್ ದಿ ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ, ದೆಹಲಿ), ಸಂಪುಟ ೪

13 ಅದೇ, ಸಂಪುಟ ೧೩

14 ಸುಂದರ ಅ., ೧೯೭೫ : "ದಿ ಅರ್ಲಿ ಟೂಂಬ್ಸ್ ಆಫ್ ಸೌತ್ ಇಂಡಿಯಾ" (ಯುನಿವರ್ಸಿಟಿ ಪಬ್ಲಿಷರ್ಸ್ ಇಂಡಿಯಾ), ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ, ದೆಹಲಿ

15 ಮುಧೋಳ, ಎಂ. ಎಸ್., ೧೯೮೯, ಎ ಟೆಕ್ನಿಕಲ್ ಸ್ಟಡಿ ಆಫ್ ಮೆಟಲ್ ಆಬ್ಜೆಕ್ಟ್ಸ್ ಫ್ರಂ ಸೌತ್ ಇಂಡಿಯನ್ ಮೆಗಲಿತ್ಸ್ ಪಿಎಚ್.ಡಿ, ಮಹಾಪ್ರಬಂಧ (ಎಂ.ಎಸ್. ಯುನಿವರ್ಸಿಟಿ, ಬರೋಡ)

16 ಸುಂದರ ಅ., ೧೯೭೪, "ಫರ್ದರ್ ನೋಟಿಸಸ್ ಆಫ್ ರಾಕ್ ಪೇಂಟಿಂಗ್ಸ್ ಇನ್ ಹಿರೇಬೆನಕಲ್", ಜರ್ನಲ್ ಆಫ್ ಇಂಡಿಯನ್ ಹಿಸ್ಟ್ರಿ. ಸಂ. ೩, ಭಾಗ ೧, ಯುನಿವರ್ಸಿಟಿ ಆಫ್ ಕೇರಳ, ತಿರುವನಂತಪುರಂ, ಪುಟಗಳು ೨೧-೩೨

ಜನರ ವಾಸ್ತವ್ಯದ ನೆಲೆಯು ಇವೆ. ಇವಲ್ಲದೆ ಸಮೀಪ ದಲ್ಲಿ ಈ ಸಂಸ್ಕೃತಿಗೂ ಪೂರ್ವದ ಹಾಗೂ ಅನಂತರ ಕಾಲದ ಶಿಲಾ ತಾಮ್ರಯುಗ ಹಂತದ ನೂತನ ಶಿಲಾ ಯುಗ ಜನರ ವಾಸ್ತವ್ಯದ ಬೂದಿಗುಡ್ಡೆಯ ಅವಶೇಷವೂ ಮತ್ತು ಆದಿ ಇತಿಹಾಸ ಕಾಲದ ಜನವಾಸ್ತವ್ಯದ ನೆಲೆ ಗಳಿವೆ. ಕಲ್ಲೂರಿನಲ್ಲಿ (ರಾಯಚೂರು ತಾ. ಮತ್ತು ಜಿ.) ಆಕಸ್ಮಿಕವಾಗಿ ಶೋಧವಾದ ದಕ್ಷಿಣ ಭಾರತ ದಖನ್ನಿ ನಲ್ಲಿಯೇ ಶಿಲಾ–ತಾಮ್ರಯುಗ (ಸು. ಕ್ರಿ.ಪೂ. ೧೬೦೦–೮೦೦)ದ ಅಪರೂಪದ ತಾಮ್ರ (ಕಂಚು) ನೀಳ್ಗತ್ತಿಗಳು[17] ತೆಕ್ಕಲಕೋಟೆಯ ಇದೇ ಜನವರ್ಗದವರ ಚಪ್ಪಟೆ ಕೊಡಲಿಗಳನ್ನು[18] ಹಾಗೂ ತಿಂಥಿಣಿ (ಸುರಪುರ ತಾ. ಗುಲ್ಬರ್ಗಾ ಜಿ.), ಮಸ್ಕಿ ಪ್ರದೇಶದಲ್ಲಿಯ ತಾಮ್ರ ಅದಿರಿನ ನಿಕ್ಷೇಪವನ್ನು ಗಮನಿಸಿದಾಗ ಈ ಲೋಹ ತಂತ್ರಗಾರಿಕೆಯು ಆಗಲೇ ತಕ್ಕಮಟ್ಟಿಗೆ ಶಿಲಾ–ತಾಮ್ರ ಯುಗದಿಂದ ಬೆಳೆದಿದ್ದು ತರುವಾಯದ ಬೃಹತ್‌ಶಿಲಾ ಸಂಸ್ಕೃತಿಯ ಹಂತದಲ್ಲಿ ಹೇರಳವಾಗಿದ್ದ ಕಬ್ಬಿಣದ ಅದಿರನ್ನು ಸಂಗ್ರಹಿಸಿ ಸಂಸ್ಕರಿಸಿ ಲೋಹ ತಯಾರಿಕೆಗೆ ಹೆಚ್ಚು ಅನುಕೂಲವಾಯಿತೆಂದು ಕಾಣುತ್ತದೆ. ಕಬ್ಬಿಣ ಲೋಹ ತಂತ್ರಗಾರಿಕೆಯು ಈ ಶಿಲಾ–ತಾಮ್ರಯುಗ ಜನರಿಂದಲೇ ಅಥವಾ ಬೃಹತ್‌ಶಿಲಾ ಸಂಸ್ಕೃತಿಯ ಜನವರ್ಗದಿಂದ ಪ್ರಾರಂಭವಾಯಿತೆ ಎಂಬುದು ನೇರವಾಗಿ ಸ್ಪಷ್ಟವಾಗಿಲ್ಲ. ಆದರೆ ಈ ಕಲ್ಗೋರಿಗಳಲ್ಲಿ ಹೇರಳ ಸಂಖ್ಯೆಗಳಲ್ಲಿ ಕಬ್ಬಿಣದ ಶಸ್ತ್ರಗಳೂ ಉಪಕರಣಗಳೂ ಇರುವುದನ್ನು ನೋಡಿದರೆ ಈ ಜನರು ಕಬ್ಬಿಣದ ಉಪಯೋಗದ ಹಂತಕ್ಕೆ ಬಂದಿದ್ದ ಶಿಲಾ ತಾಮ್ರಯುಗ ಜನರಿಂದ ಕೊಂಡು ಹೀಗೆ ಧಾರಾಳವಾಗಿ ಉಪಯೋಗ ಮಾಡುವುದಕ್ಕೆ ಸಾಧ್ಯವೇ ? ಎಂಬ ಪ್ರಶ್ನೆಯು ಏಳು ತ್ತದೆ. ಈ ಜನರೆ ಇಂಥ ವಸ್ತುಗಳನ್ನು ಸಿದ್ಧ ಮಾಡು ತ್ತಿದ್ದಲ್ಲಿ ತಮಗೆ ಬೇಕಾದ ರೀತಿಯಲ್ಲಿ ಹೀಗೆ ಉಪಯೋಗ ಮಾಡಿಕೊಳ್ಳಲು ಸಾಧ್ಯ. ಈ ಪ್ರಶ್ನೆ ಹೇಗೇ ಇರಲಿ, ಈ ಪ್ರದೇಶದಲ್ಲಿ ಲೋಹ ತಂತ್ರಗಾರಿಕೆ ಬಹಳ ಪುರಾತನ ಕಾಲದಿಂದ ಅಂದರೆ ಸು. ಕ್ರಿ.ಪೂ. ೧೫೦೦ರ ಹೊತ್ತಿಗೆ ಬೆಳೆದಿದ್ದು ಕ್ರಮೇಣ ಅಭಿವೃದ್ಧಿಯಾಗುತ್ತಾ ಬಂದಿದೆಯೆಂದು ಕಾಣುತ್ತದೆ. ಕ್ರಮೇಣ ಇಲ್ಲಿ ಸಿದ್ಧವಾದ ಉಪಕರಣಗಳ ಮತ್ತು ಶಸ್ತ್ರಗಳ ಗುಣಮಟ್ಟವು ಎಲ್ಲೆಡೆ ಗಳಲ್ಲಿಯೂ ಮನೆಮಾತಾಗಿತ್ತೆಂದು ಕಾಣುತ್ತದೆ. ಆದ್ದರಿಂದಲೇ ಬಹುಶಃ ಮೌರ್ಯ ಚಕ್ರವರ್ತಿ ಅಶೋಕನು ಈ ಪ್ರದೇಶಧ ಜನರು ಹಾಗೂ ಅವರ ಲೋಹ ತಂತ್ರಜ್ಞಾನವನ್ನು ಗಮನಿಸಿ ಈ ಪ್ರದೇಶದ ಮೇಲೆ ಬಲವಾದ ನಿಯಂತ್ರಣವನ್ನು ಇಟ್ಟುಕೊಂಡಂತೆ ಕಾಣುತ್ತದೆ. ಇವನ ವಿಶಾಲ ಸಾಮ್ರಾಜ್ಯದಲ್ಲಿ ಬೇರೆ ಎಲ್ಲಿಯೂ ಕಾಣದಷ್ಟು ಇವನ ಬೃಹತ್ ಬಂಡೆ ಹಾಗೂ ಇತರ ಶಾಸನಗಳು ಈ ಪ್ರದೇಶದಲ್ಲಿ ಅಲ್ಲಲ್ಲಿ ಒತ್ತೊತ್ತಾಗಿದೆ. ಸುವರ್ಣಗಿರಿಯಲ್ಲಿ ಮಹಾಮಾತ್ರರಲ್ಲದೆ ಈ ಸಾಮ್ರಾಜ್ಯದ ದಕ್ಷಿಣ ಗಡಿಯ 'ಇಸಿಲಾ'ವನ್ನು (ಬ್ರಹ್ಮಗಿರಿ) ತಮ್ಮ ಆಡಳಿತ ಕೇಂದ್ರವನ್ನಾಗಿ ಮಾಡಿ ಕೊಂಡು ತನ್ನ ಹಿರಿಯ ಅಧಿಕಾರಿಗಳಾದ ಮಹಾಮಾತ್ರ ರನ್ನು ಅಲ್ಲಿರಿಸಿದ್ದನು. ಇದುವರೆಗೆ ಸನ್ನತಿಯಿಂದ ಬ್ರಹ್ಮಗಿರಿಯವರೆಗೆ (ಅರ್ಥಪೂರ್ಣವಾಗಿ ಬೃಹತ್ ಶಿಲಾ ಸಂಸ್ಕೃತಿ ಜನರಿದ್ದ ಜೇಪರಿಗಿಯಿಂದ ಬ್ರಹ್ಮಗಿರಿಯವರೆಗೆ ಒಟ್ಟು ೮ ಸ್ಥಳಗಳು 'ಸನ್ನತಿ, ಕೊಪ್ಪಳ, ಮಸ್ಕಿ, ಉದೆಗೊಳಂ, ನಿಟ್ಟೂರು, ಜಟ್ಟಿಂಗರಾಮೇಶ್ವರ, ಸಿದ್ದಾಪುರ ಮತ್ತು ಬ್ರಹ್ಮಗಿರಿ) ಈ ಚಕ್ರವರ್ತಿಯ ಶಾಸನಗಳು ಇವೆ.

ಈ ರೀತಿ ಕಾರ್ತಿಕೇಯ ವನದ ಪರಂಪರಾನುಗತ ಕಥೆಯಲ್ಲಿ ಕೆಲವೊಂದು ಐತಿಹಾಸಿಕ ಅಂಶಗಳಿವೆ ಎಂಬು ದನ್ನು ಈ ಪ್ರದೇಶದ ಮುಖ್ಯವಾಗಿ ಬೃಹತ್ ಶಿಲಾ ಸಂಸ್ಕೃತಿಯ ಅವಶೇಷಗಳು, ಗವಿವರ್ಣಚಿತ್ರಗಳು ಮತ್ತು ಆದಿ ಇತಿಹಾಸ ಕಾಲದ ಮೌರ್ಯ ಶಾಸನಗಳು ಗಟ್ಟಿ ಯಾಗಿ ಪೋಷಿಸುತ್ತವೆ.

ದಕ್ಷಿಣ ಭಾರತದ ಇತರೆಡೆಗಳಲ್ಲಿ ವಿದರ್ಭ ಪ್ರದೇಶ ಬಿಟ್ಟು ಉತ್ಖನನ ಮಾಡಿದ ಕಲ್ಗೋರಿಗಳಲ್ಲಿ ಈ ರೀತಿ

---

17 ಇವು ಆಂಧ್ರ ಪ್ರದೇಶ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಹೈದರಾಬಾದ್ ವಸ್ತು ಸಂಗ್ರಹಾಲಯದಲ್ಲಿವೆ.

18 ನಾಗರಾಜ್‌ರಾವ್ ಎಂ.ಎಸ್., ೧೯೬೫. ದಿ ಸ್ಟೋನ್ ಏಜ್ ಹಿಲ್ ಡ್ವೆಲರ್ಸ್ ಆಫ್ ತೆಕ್ಕಲಕೋಟ, ಡೆಕ್ಕನ್ ಕಾಲೇಜ್ ಪೋಸ್ಟ್ ಗ್ರಾಜುಯೇಟ್ ಆ್ಯಂಡ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಪುಣೆ

ಹೆಚ್ಚಿನ ಸಂಖ್ಯೆಯಲ್ಲಿ ಖಡ್ಗ ಮತ್ತು ಈಟಿಗಳು ದೊರೆತಿಲ್ಲ. ಆದ್ದರಿಂದ ಖಡ್ಗ, ಈಟಿ ಆಯುಧೋಪಕರಣಗಳು ದೇವಗಿರಿ–ಬ್ರಹ್ಮಗಿರಿ ಪ್ರದೇಶದ ಕಲ್ಗೋರಿಗಳ ವೈಶಿಷ್ಟ್ಯವೆಂದೇ ಕಾಣುತ್ತದೆ. ಸೊಂಡೂರು ದೇವಗಿರಿ ಹಳ್ಳಿಯು ಈ ಪ್ರದೇಶದ ಮಧ್ಯದಲ್ಲಿದೆ, ಮತ್ತು ಈ ಭಾಗದಲ್ಲಿಯೇ ಅತ್ಯುತ್ತಮ ಗುಣಮಟ್ಟದ ಕಬ್ಬಿಣದ ಅದಿರು ಹೇರಳ ಪ್ರಮಾಣದಲ್ಲಿರುವದರಿಂದ ಈ ಪ್ರದೇಶದ ಕಲ್ಗೋರಿಗಳಲ್ಲಿ ಕಂಡುಬಂದ ಈಟಿ, ಖಡ್ಗಗಳು ಕಬ್ಬಿಣದ ಅದಿರು ದೊರೆಯುವ ಸ್ಥಳದ ಸಮೀಪದಲ್ಲಿ ಸಿದ್ಧವಾಗಿರುವ ಸಾಧ್ಯತೆ ಹೆಚ್ಚು, ಮತ್ತು ಕನಿಷ್ಟ ಕ್ರಿ.ಪೂ. ಮೊದಲನೇ ಸಹಸ್ರಮಾನದ ಮಧ್ಯದ ಹೊತ್ತಿಗೆ ಇದು ಒಂದು ಅತ್ಯುತ್ತಮ ದರ್ಜೆಯ ಶಸ್ತ್ರ ಕಾರ್ಖಾನೆಯಾಗಿತ್ತೆಂದು ತೋರುತ್ತದೆ. ಮೇಲೆ ಉದ್ಧರಿಸಿದ ರಾಮಾಯಣದ ಶ್ಲೋಕಗಳು ಪುರಾತತ್ವ ಅವಶೇಷಗಳ ಈ ಅಸ್ಪಷ್ಟ ಸೂಚನೆಯು ಪುಷ್ಟಿಕರಿಸುವಂತಿದೆ. ಆದರೂ ಈ ಅಭಿಪ್ರಾಯದ ಸತ್ಯಾಸತ್ಯತೆಯನ್ನು ತಿಳಿಯಲು ಈ ದಿಶೆಯಲ್ಲಿ ಇಲ್ಲಿಯ ಕಬ್ಬಿಣದ ಅದಿರಿನ ಮತ್ತು ಬ್ರಹ್ಮಗಿರಿ–ಮಸ್ಕಿ ಕಲ್ಗೋರಿಗಳ ಕಬ್ಬಿಣ ಆಯುಧಗಳ ವೈಜ್ಞಾನಿಕ ಪರೀಕ್ಷೆಯನ್ನು ಮಾಡಬೇಕಾಗಿದೆ. ಮತ್ತು ಈ ಭಾಗದಲ್ಲಿ ಕಲ್ಗೋರಿಗಳ ನೆಲೆಗಳನ್ನು ಪತ್ತೆ ಮತ್ತು ಉತ್ಖನನ ಮಾಡಿ ಅವುಗಳಲ್ಲಿಯ ಕಬ್ಬಿಣದ ಉಪಕರಣಗಳ ವೈಜ್ಞಾನಿಕ ಪರೀಕ್ಷೆಯಾಗಬೇಕು.

ಕರ್ನಲ್ ಮೆಡೋಸ್ ಟೇಲರ್‌ನ[19] ಜೇವರಗಿ ಮತ್ತು ಇದರ ಸಮೀಪದ ಅಂಡೋಲಾದಲ್ಲಿಯ ಬೃಹತ್ ಶಿಲಾಗೋರಿಗಳ ಅಗೆತದಲ್ಲಿ ದೊರೆತ ಕಬ್ಬಿಣದ ಮೂರು ಕಾಲಿನ ಮಣೆ, ಹಿಡಿಕೆಯ ಹಣತೆ, ಮತ್ತು ಗಜಪೃಷ್ಠಾಕೃತಿಯ ಗಂಟೆ ಹಾಗೂ ಈ ಪ್ರದೇಶಕ್ಕೆ ಹೊಂದಿಕೊಂಡು ಆಂಧ್ರಪ್ರದೇಶದ ಭಾಗದಲ್ಲಿ ತ್ರಿಶೂಲವೂ ದೊರೆತಿರುವುದು ಈ ಸಂದರ್ಭದಲ್ಲಿ ಗಮನಾರ್ಹ. ಇವುಗಳ ಕಾಲಮಾನವು ಸು. ಕ್ರಿ.ಪೂ. ೧೦೦೦–೬೦೦ ಈ ಕಾಲದಲ್ಲಿ ತ್ರಿಶೂಲವು ಶೈವ ಸಂಪ್ರದಾಯದ ವಿಶಿಷ್ಟ ಗುರುತಾಗಿದ್ದರೆ, ಈ ಜನರು ಇವರ ಆರಾಧನೆಯ ದೇವ ಸಮುದಾಯದಲ್ಲಿ ಕಾರ್ತಿಕೇಯನ ಆರಾಧಕರಾಗಿರಬಹುದು. ಅವರು ಕಬ್ಬಿಣ–ಮ್ಯಾಂಗನೀಸ್ ಅಪರಿಮಿತ ನಿಕ್ಷೇಪವಿರುವ ಈ 'ಲೋಹಾಚಲ'ದಲ್ಲಿ ಈ ದೇವರ ಗುಡಿಯನ್ನು ಕಟ್ಟಿದ್ದಲ್ಲಿ ಅದು ಸಹಜವೇ.

ಸ್ಥಳೀಯ ಕಥೆಯಂತೆ ಕಾರ್ತಿಕೇಯನು ತಾರಕಾಸುರನ ವಧೆ ಮಾಡಿದ ನಂತರ ಇಲ್ಲಿ ಲೋಹಾಚಲಕ್ಕೆ ಬಂದು ನೆಲೆಸಿದ್ದನಂತೆ. ಪ್ರಾಯಶಃ ಈ ದೇವತೆಯನ್ನು ತಮ್ಮ ಆರಾಧ್ಯ ದೇವರನ್ನಾಗಿ ಮಾಡಿಕೊಂಡ ಜನವರ್ಗದವರು ಲೋಹ ಆಯುಧೋಪಕರಣಗಳನ್ನು ತಯಾರಿಸುವುದರಲ್ಲಿ ಸಿದ್ಧಹಸ್ತರಾಗಿದ್ದು, ಕ್ರಮೇಣ ತಮ್ಮ ಆರಾಧ್ಯ ದೈವದೊಡನೆ ತಮ್ಮ ಕುಶಲಕರ್ಮಕ್ಕೆ ಯೋಗ್ಯವಾದ ಈ ಲೋಹಾಚಲಕ್ಕೆ ಬಂದು ನೆಲೆಸಿದರೆಂದು ತೋರುತ್ತದೆ. ಈ ಸೂಚನೆಯು ಕಥೆಯಲ್ಲಿದ್ದಂತಿದೆ.

ಲೋಹಾಚಲದಲ್ಲಿ ಕಾರ್ತಿಕೇಯನ ಆರಾಧನೆಯು ಕೊನೆಯ ಪಕ್ಷ ಕ್ರಿ.ಪೂ. ೫೦೦–೨೦೦ರಷ್ಟು ಪ್ರಾಚೀನವಾಗಿರಬಹುದೆಂದು ಅನುಮಾನ ಪಡಲು ಸ್ವಲ್ಪ ಗಟ್ಟಿ ಪುರಾವೆಗಳಿವೆಯೆಂದು ಹೇಳಬಹುದು. ಈ ಸಹಸ್ರಮಾನದ ಕೊನೆಯ ಹೊತ್ತಿಗಾದರೂ "ಕಾರ್ತಿಕೇಯ ವನ" ಕ್ಷೇತ್ರವಾಗಿಯೂ ಪರಿಣಮಿಸಿ ವಾಲ್ಮೀಕಿ ಮಹರ್ಷಿಯಂಥ ಮಹಾಕವಿಗಳ ಗಮನವನ್ನು ಸೆಳೆದಿತ್ತು.

ಉತ್ತರ ಕರ್ನಾಟಕದಲ್ಲಿ ಮಹತ್ವದ ಶೈವ ಪುಣ್ಯ ಕ್ಷೇತ್ರ ಗೋಕರ್ಣವನ್ನು ಬಿಟ್ಟರೆ, ಎರಡನೆಯ ಮಹತ್ವದ ಶೈವ ಕ್ಷೇತ್ರವೆಂದರೆ ಸು. ೨೫೦೦ ವರ್ಷಗಳಷ್ಟು ಇತಿಹಾಸವನ್ನು ಹೊಂದಿದ ಈ ಸೊಂಡೂರಿನ "ಕಾರ್ತಿಕೇಯ ವನ".

ಈ ಅಧ್ಯಯನದಲ್ಲಿ ಪರೋಕ್ಷವಾಗಿ ಸೂಚಿತವಾಗುವ ಇನ್ನೊಂದು ಮಹತ್ವದ ಸಾಂಸ್ಕೃತಿಕ ಅಂಶವಿದೆ. ದಕ್ಷಿಣ ಭಾರತದ ಬೃಹತ್‌ಶಿಲಾ ಸಂಸ್ಕೃತಿಯ ಜನರ ಧಾರ್ಮಿಕ ವಿಷಯಗಳು ಸ್ಪಷ್ಟವಾಗಿ ಇದುವರೆಗೆ ಏನೂ ತಿಳಿದಿಲ್ಲ. ಈ ಸಂಸ್ಕೃತಿಯ ಒಂದು ವರ್ಗದವರು

---

19 ಮೆಡೋಸ್ ಟೇಲರ್ : ೧೯೪೧. (ಪುನರ್ಮುದ್ರಣ), ಮೆಗಲಿಥಿಕ್ ಟೂಂಬ್ಸ್ ಆ್ಯಂಡ್ ಅದರ್ ಏನ್ಷಿಯೆಂಟ್ ರಿಮೈನ್ಸ್ ಇನ್ ದಿ ಡೆಕ್ಕನ್, ಡಿಪಾರ್ಟ್‌ಮೆಂಟ್ ಆಫ್ ಆರ್ಕಿಯೂಲಜಿ ಆ್ಯಂಡ್ ಮ್ಯೂಸಿಯಮ್ಸ್, ಆಂಧ್ರ ಪ್ರದೇಶ ಸರ್ಕಾರ, ಹೈದರಬಾದ್, (ಇವರ ೧೮೫೧. ೧೮೫೩ ಮತ್ತು ೧೮೬೭ರ ಮೂರು ಲೇಖನಗಳ ಸಂಕಲನ)

ಕಾರ್ತಿಕೇಯನ ಆರಾಧಕರಾಗಿದ್ದು, ಉತ್ತಮ ಉಕ್ಕನ್ನು ಮತ್ತು ಈ ಲೋಹದ ಆಯುಧೋಪಕರಣಗಳನ್ನು ಸಿದ್ಧ ಮಾಡುವ ಕುಶಲಕರ್ಮಿಗಳಾಗಿದ್ದರೆಂದು ತೋರುವುದು. ಕಲ್ಗೋರಿಗಳಲ್ಲಿ ದೊರೆತ ಶೂಲವಲ್ಲದೆ, ತ್ರಿಶೂಲ, ಗಜಪೃಷ್ಠಾಕೃತಿಯ ಗಂಟೆ, ಶಂಖ, ವಿಶಿಷ್ಟ ಮಾದರಿಯ ಪೂಜಾ (?) ಹಣತೆ ಇವೆಲ್ಲವೂ ಅವರ ಒಂದು ವ್ಯವಸ್ಥಿತ ಧಾರ್ಮಿಕ ಪೂಜಾ ಕ್ರಮವನ್ನು ಸೂಚಿಸುತ್ತವೆ. ತರುವಾಯ ಇತಿಹಾಸ ಕಾಲದ ಕುಡುತಿನಿಯ ಕಾರ್ತಿಕೇಯ ಪಾದಪದ್ಮೋಪಜೀವಿಗಳಾದ ಐದು ವರ್ಗದವರು ಈ ಜನವರ್ಗದವರ ಪೀಳಿಗೆಯವರೆಂದು ಅನುಮಾನವೂ ಬರುತ್ತದೆ.

ಎನ್. ಎಂ. ನಾಗಭೂಷಣ*

# ಸೊಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ

"ಸೊಂಡೂರು" ಬಳ್ಳಾರಿ ಜಿಲ್ಲೆಯ ಒಂದು ತಾಲೂಕು ಕೇಂದ್ರ. ಬಳ್ಳಾರಿಯಿಂದ ನೈರುತ್ಯದಲ್ಲಿ 48 ಕಿ. ಮೀ. ಹಾಗೂ ಬೆಂಗಳೂರಿನಿಂದ ವಾಯುವ್ಯ ದಿಕ್ಕಿನಲ್ಲಿ ೩೫೪ ಕಿ. ಮೀ. ದೂರದಲ್ಲಿದೆ. ಕೆಲವೇ ವರ್ಷಗಳ ಹಿಂದೆ ಸೊಂಡೂರು ೨೦ ಹಳ್ಳಿಗಳ ೧೧,೦೦೦ ಜನ ಸಂಖ್ಯೆಯ ೧೬೦ ಚದುರ ಕಿ. ಮೀ. ಭೂವಿಸ್ತಾರದ ಒಂದು ಸ್ವತಂತ್ರ ಪುಟ್ಟ ರಾಜ್ಯವಾಗಿತ್ತೆಂದರೆ ನಿಮಗೆ ಆಶ್ಚರ್ಯವೆನಿಸಬಹುದು. ಕ್ರಿ. ಶ. ೧೬೨೮ ರಿಂದ ೧೯೪೬ರ ವರೆಗೆ ಘೋರ್ಪಡೆ ವಂಶದವರು ಸೊಂಡೂರು ರಾಜ್ಯವನ್ನು ಆಳಿದರು. ಕರ್ನಾಟಕ ಏಕೀಕರಣದ ಕಾಲಕ್ಕೆ ೧೯೪೬ರಲ್ಲಿ ಸೊಂಡೂರು ರಾಜ್ಯ ಮೈಸೂರು ರಾಜ್ಯಕ್ಕೆ ಸೇರಿ, ಬಳ್ಳಾರಿ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿ ರೂಪುಗೊಂಡಿತು. ಇತಿಹಾಸ ಪೂರ್ವಕಾಲ ಹಾಗೂ ಪುರಾಣಗಳ ಕಾಲದಿಂದ ಸೊಂಡೂರು ತನ್ನದೇ ಆದ ಸಾಂಸ್ಕೃತಿಕ ಇತಿಹಾಸ ಪರಂಪರೆಯನ್ನು ಹೊಂದಿದೆಯಲ್ಲದೆ, ವಿಶೇಷ ಭೌಗೋಳಿಕ ಖನಿಜ ಸಂಪತ್ತು, ಪ್ರಾಕೃತಿಕ ಸೌಂದರ್ಯ ಸಂಪತ್ತು ಹಿತಕರ ಹವಾಗುಣವನ್ನು ಹೊಂದಿ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ.

"ಸೊಂಡೂರು" ಅಥವಾ "ಸಂಡೂರು" ಸ್ಥಳನಾಮ ಶಬ್ದದ ಮೂಲರೂಪ ಭೂಗೋಳಶಾಸ್ತ್ರಜ್ಞ ಮೆಕಾಲೆ ಹೇಳುವಂತೆ ಈ ಪಟ್ಟಣ ಪರ್ವತಗಳ ಸಂದಿಯಲ್ಲಿ ಇರುವುದರಿಂದ ಸಂದಿಯಲ್ಲಿ ಇರುವ ಊರು ಸಂದು+ಊರು=ಸಂದೂರು. ಸಂಡೂರು, ಸ್ವಂಡೂರು, ಸೊಂಡೂರು ಎಂದು ತಲೆತಲಾಂತರಗಳ ಜನಾಂಗಗಳ ಬಾಯಿಯಲ್ಲಿ ಶಬ್ದ ಸವೆದು ಈಗ "ಸೊಂಡೂರು" ಎಂದು ಪ್ರಚಲಿತದಲ್ಲಿದೆ. ಇಲ್ಲಿನ ಕುಮಾರಸ್ವಾಮಿಬೆಟ್ಟದಲ್ಲಿನ ಕ್ರಿ. ಶ. ೧೨೦೬ರ ಹೊಯ್ಸಳ ಎರಡನೇಯ ವೀರ ಬಲ್ಲಾಳನ ಶಿಲಾಶಾಸನದಲ್ಲಿ ಮೊಟ್ಟಮೊದಲು "ಸಂಡೂರು" ಎಂಬ ಉಲ್ಲೇಖವಿರುವುದು ಕಂಡುಬರುತ್ತದೆ. ನಂತರದ ಅನೇಕ ಶಾಸನಗಳಲ್ಲಿ ವಿಜಯನಗರದ ಅನೇಕ ಶಾಸನಗಳಲ್ಲಿ ಸೊಂಡೂರು ಸ್ಥಳನಾಮ ಉಲ್ಲೇಖಗಳು ಕಾಣಸಿಗುತ್ತವೆ. ಇದರಿಂದ ಕ್ರಿ. ಶ. ೧೨೦೬ಕ್ಕಿಂತ ಹಿಂದಿನಿಂದಲೇ ಸೊಂಡೂರು ಸ್ಥಳನಾಮ ಪಟ್ಟಣ ಇತ್ತೆಂದು ತಿಳಿದುಬರುತ್ತದೆ.

ಪುರಾಣಗಳ ಕಾಲದಲ್ಲಿ ಈ ಪಟ್ಟಣವನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಸ್ಕಂದಪುರಾಣದಲ್ಲಿ ಈ ಪಟ್ಟಣವನ್ನು ಸ್ಕಂದಪುರವೆಂದು ವರ್ಣಿಸಲಾಗಿದೆ. ಇಲ್ಲಿ ಸ್ಕಂದ ಅಥವಾ ಕುಮಾರಸ್ವಾಮಿ ವಾಸವಾಗಿದ್ದರಿಂದ ಸ್ಕಂದಪುರವೆಂದು ಕರೆಯಲಾಗಿದೆ. ಕೃತಯುಗದಲ್ಲಿ "ದೇವಗಿರಿ" ಎಂದೂ, ತ್ರೇತಾಯುಗದಲ್ಲಿ "ಸುವರ್ಣಗಿರಿ" ಎಂದೂ, ದ್ವಾಪರದಲ್ಲಿ "ದಿವ್ಯಾಚಲ"ವೆಂದೂ ಕಲಿಯುಗದಲ್ಲಿ ಲೋಹಗಿರಿ ಎಂದೂ ಪುರಾಣ ಪುರಾವೆಗಳಿವೆ. ಸೋಂಡೂರು ಸುತ್ತಲಿರುವ ಗ್ರಾಮ

* ಇತಿಹಾಸ ಉಪನ್ಯಾಸಕರು, ಮಹಾಲಕ್ಷ್ಮೀ ಮಹಾವಿದ್ಯಾಲಯ, ಮುರುಘಾಮಠ, ಧಾರವಾಡ ೫೮೦ ೦೦೩

ಗಳಿಗೆ, ಕ್ಷೇತ್ರಗಳಿಗೆ ತನ್ನದೇ ಆದ ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆಗಳಿವೆ.

ಇತಿಹಾಸ

ಇತಿಹಾಸದ ಪೂರ್ವಕಾಲದಲ್ಲಿ ಸೊಂಡೂರು ಸುತ್ತ ಮುತ್ತಲಿನ ಸ್ಥಳಗಳಾದ ಕೊಪ್ಪಳ, ಕುರುಗೋಡು, ಕಲ್ಕಂಬ, ತೆಕ್ಕಲಕೋಟೆ, ಸಂಗನಕಲ್ಲು, ಕಪ್ಪಗಲ್ಲು, ತೋರಣಗಲ್ಲು, ರಾಂಪುರ, ಅಶೋಕ ಸಿದ್ಧಾಪುರ, ಜಟಿಂಗ ರಾಮೇಶ್ವರ, ಮೊಣಕಾಲ್ಮೂರು, ಗುಡೇಕೋಟೆಗಳು ಆದಿಮಾನವನ ನಿವಾಸಗಳಾಗಿದ್ದವು. ಇದರಿಂದ ಸೊಂಡೂರು ಸುತ್ತಮುತ್ತ ಆದಿಮಾನವನ ನಿವಾಸವಾಗಿರುವುದರಲ್ಲಿ ಸಂದೇಹವಿಲ್ಲ. ಸಿಡೇಗಲ್ಲು, ವಿಭೂತಿಗುಡ್ಡ, ತೋರಣಗಲ್ಲುಗಳು ಕಬ್ಬಿಣಯುಗದ ತಾಣಗಳಾಗಿವೆ.

ಮೌರ್ಯರ ಕಾಲದ ಅಶೋಕನ ಶಾಸನಗಳು ಸೊಂಡೂರು ನೆರೆಯ ಸೀಮೆಗಳಾದ ಕೊಪ್ಪಳ ಗವಿಮಠ, ಮಸ್ಕಿ, ನಿಟ್ಟೂರು, ಅಶೋಕಸಿದ್ಧಾಪುರ ಜಟ್ಟಿಂಗ ರಾಮೇಶ್ವರ, ಬ್ರಹ್ಮಗಿರಿಗಳಲ್ಲಿ ದೊರಕಿರುವುದರಿಂದ ಸೊಂಡೂರು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಶಾತವಾಹನರ ಕಾಲದಲ್ಲಿ ಇದೊಂದು ಒಳನಾಡಿನ ಒಂದು ಮುಖ್ಯ ಕೇಂದ್ರವಾಗಿತ್ತು, ಕುಮಾರಸ್ವಾಮಿಬೆಟ್ಟ ಶಕ್ತಿಕೇಂದ್ರವಾಗಿತ್ತು. ಶಾತವಾಹನರ ಕಾಲಕ್ಕೆ ಸೇರಬಹುದಾದ ದೇವಗಿರಿ, ಚೊರನೂರು, ಅಗ್ರಹಾರ (ಗಣಿತಿಕಟ್ಟೆ), ಕೂಡ್ಲಿಗಿ, ಹಾಳುದೇವಾಲಪುರ, ಕೊಟ್ಟೂರು, ಹೆಗ್ಗಡಾಳು, ಶಿವಪುರ, ಹಂಪಿ, ಕುರುಗೋಡು, ಎಮ್ಮಿಗನೂರು, ಕಂಪ್ಲಿ ಕುಡಿತಿನಿ, ಬಳ್ಳಾರಿ, ಅಶೋಕಸಿದ್ಧಾಪುರ, ಮೊಣಕಾಲ್ಮೂರು ಮುಂತಾದ ಗ್ರಾಮಗಳಲ್ಲಿ ಶಾತವಾಹನರ ಕಾಲದ ಅವಶೇಷಗಳು ದೊರೆಯುತ್ತವೆ. ಸೊಂಡೂರು ಸಹ ಶಾತವಾಹನ ಕಾಲದ ಪ್ರಮುಖವಾದ ಪಟ್ಟಣವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಬನವಾಸಿ ಕದಂಬರ ಕಾಲದಲ್ಲಿ ಕದಂಬರ ಸಾಮಂತರಾದ ಉಚ್ಚಂಗಿ ದುರ್ಗದ ನೊಳಂಬರ ಆಡಳಿತಕ್ಕೊಳಪಟ್ಟು ಒಂದು ಪ್ರಮುಖ ಕೇಂದ್ರವಾಗಿತ್ತು. ಇವರ ಕಾಲದಲ್ಲಿ ಕುಮಾರಸ್ವಾಮಿ ಬೆಟ್ಟದಲ್ಲಿ ಕೆಲ ದೇವಾಲಯಗಳನ್ನು ನಿರ್ಮಿಸಿದ ಕೆಲ ಅವಶೇಷಗಳಿವೆ. ಅಲ್ಲದೆ ಕೆಲವು ಮೂರ್ತಿ ಶಿಲ್ಪಗಳಿವೆ.

ಬಾದಾಮಿ ಚಾಲುಕ್ಯರ ಕಾಲದ ಕೊನೆಯ ಕಾಲದಲ್ಲಿ ಕಟ್ಟಿರಬಹುದಾದ ಪಾರ್ವತಿ ದೇವಸ್ಥಾನ ಕುಮಾರಸ್ವಾಮಿ ಬೆಟ್ಟದ ಕುಮಾರಸ್ವಾಮಿ ದೇವಾಲಯದ ಪಕ್ಕದಲ್ಲಿದೆ. ಇದು ಬಾದಾಮಿ ಚಾಲುಕ್ಯರ ಶೈಲಿಯ ವಾಸ್ತುಶಿಲ್ಪ ವಿಮಾನ ಶೈಲಿಯಲ್ಲಿದೆ. ದ್ವಾರಬಾಗಿಲು ಇಕ್ಕೆಲಗಳಲ್ಲಿ ಶಂಖಲಿಪಿಯ ಶಿಲಾಶಾಸನಗಳಿವೆ. ಬಳ್ಳಾರಿ ಜಿಲ್ಲೆಯಲ್ಲಿಯೇ ಪ್ರಾಚೀನವಾದ ಸುಂದರ ವಾಸ್ತುಶಿಲ್ಪವುಳ್ಳ ದೇವಾಲಯ ಇದಾಗಿದೆ. ಸುತ್ತಮುತ್ತಲಿನ ಸೀಮೆಗಳು, ನೊಳಂಬವಾಡಿಯ ಭಾಗಗಳಾಗಿ ಬಾದಾಮಿ ಚಾಲುಕ್ಯರ ಆಡಳಿತಕ್ಕೊಳಪಟ್ಟಿದ್ದವು.

ರಾಷ್ಟ್ರಕೂಟರು ಈ ಪ್ರದೇಶದ ಮೇಲೆ ವಿಶೇಷ ಗಮನ ಹರಿಸಿ ಇಲ್ಲಿನ ಪಾರ್ವತಿ ದೇವಸ್ಥಾನಕ್ಕೆ ಹಾಗೂ ಪಕ್ಕದ ಕುಮಾರಸ್ವಾಮಿ ದೇವಾಲಯಗಳಿಗೆ ಹಳ್ಳಿಯೊಂದನ್ನು ದತ್ತಿಬಿಟ್ಟು, ದೇವಕಾರ್ಯಗಳಿಗೆ ದತ್ತಿ ದಾನಗಳನ್ನು ಮಾಡಿದರೆಂದು ಶಾಸನದಿಂದ ತಿಳಿದುಬರುತ್ತದೆ. ಇದರಿಂದ ರಾಷ್ಟ್ರಕೂಟರು ಈ ಪ್ರದೇಶವನ್ನು ಆಳಿದರಲ್ಲದೆ ಧರ್ಮಕಾರ್ಯಗಳಿಗೆ ಸಾಹಿತ್ಯ ಕಲೆಗೆ ವಿಶೇಷ ಗಮನ ಕೊಟ್ಟಿದ್ದಾರೆ.

ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಈ ಪ್ರದೇಶ ಸಂಪೂರ್ಣವಾಗಿ ಸೇರಿತ್ತು. ಇವರ ಸಾಮಂತರಾದ ಪಾಂಡ್ಯರು ಮಹಾಮಂಡಲೇಶ್ವರರಾಗಿ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದಿಂದ ನೊಳಂಬವಾಡಿ ೩೨,೦೦೦ವನ್ನು ಆಳಿದರು. ಸೊಂಡೂರು ನೊಳಂಬವಾಡಿ ೩೨,೦೦೦ದಲ್ಲಿ ಸೇರಲಾಗಿತ್ತು. ತುಂಗಭದ್ರ ನದಿಯ ಉತ್ತರಕ್ಕೆ ಕುರುಗೋಡ ಸಿಂದರು ಆಡಳಿತ ಮಾಡುತ್ತಿದ್ದರು. ಇವರ ಕಾಲದಲ್ಲಿ ಕುಮಾರಸ್ವಾಮಿ ದೇವಾಲಯವನ್ನು ವೇಸರ ಶೈಲಿಯಲ್ಲಿ ಕಟ್ಟಲಾಗಿದೆ. ಕುಮಾರಸ್ವಾಮಿ ದೇವಾಲಯ ಕಲ್ಯಾಣ ಚಾಲುಕ್ಯರ ಶೈಲಿಯ ೧೧ನೇ ಶತಮಾನದ ಶೈಲಿಯಲ್ಲಿದೆ. ಇದರಿಂದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಈ ದೇವಾಲಯವನ್ನು ಕಟ್ಟಲಾಗಿದೆ. ಅಲ್ಲದೆ ಕುಮಾರಸ್ವಾಮಿ ಮೂರ್ತಿಶಿಲ್ಪ ಸಹ ಕಲ್ಯಾಣ ಚಾಲುಕ್ಯರ ಕಾಲದ ಶೈಲಿಯಲ್ಲಿದೆ. ಇದರಿಂದ

ಈ ಪ್ರದೇಶ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಸೇರಿದ್ದು, ಇಲ್ಲಿನ ಕಲೆ, ಸಾಹಿತ್ಯ, ಧರ್ಮ, ಸಾಂಸ್ಕೃತಿಕ ಬೆಳವಣಿಗೆಗೆ ಕಲ್ಯಾಣ ಚಾಲುಕ್ಯರು ಪ್ರೋತ್ಸಾಹ ನೀಡಿದ್ದಾರೆ.

ಕಲ್ಯಾಣ ಚಾಲುಕ್ಯರ ನಂತರ ಈ ಭಾಗವನ್ನು ಹೊಯ್ಸಳರು ವಶಪಡಿಸಿಕೊಂಡರು. ಕ್ರಿ. ಶ. ೧೧೩೫ರಲ್ಲಿ ಉಚ್ಚಂಗಿದುರ್ಗವನ್ನು ಮುತ್ತಿ ನೊಳಂಬವಾಡಿ ೩೨೦೦೦ ವಶಪಡಿಸಿಕೊಂಡು ತುಂಗಭದ್ರಾ ನದಿ ದಂಡೆಯುವರೆಗೆ ಪೂರ್ಣ ಪ್ರದೇಶವನ್ನು ವಶಪಡಿಸಿಕೊಂಡರು. ಪಾರ್ವತಿ ದೇವಸ್ಥಾನದಲ್ಲಿನ ಕ್ರಿ. ಶ. ೧೨೦೬ರ ಶಿಲಾಶಾಸನ ಹೊಯ್ಸಳ ಎರಡನೇ ವೀರಬಲ್ಲಾಳ (ಕ್ರಿ. ಶ. ೧೧೭೩–೧೨೨೦)ನ ಶಿಲಾಶಾಸನ. ರಾಷ್ಟ್ರಕೂಟ ಕೃಷ್ಣನ ಕಾಲದಲ್ಲಿ ಕುಮಾರಸ್ವಾಮಿ ಹಾಗೂ ಪಾರ್ವತಿ ದೇವಸ್ಥಾನಗಳಿಗೆ ಬಿಟ್ಟ ದತ್ತಿದಾನಗಳು ಕಾಲಾಂತರದಲ್ಲಿ ನಿಂತು ಹೋಗಿದ್ದವು. ಹೊಯ್ಸಳ ಎರಡನೇ ವೀರಬಲ್ಲಾಳನ ಕಾಲದಲ್ಲಿ ರಾಷ್ಟ್ರಕೂಟರ ಕೃಷ್ಣನ ದತ್ತಿಗಳನ್ನು ನವೀಕರಿಸಿದನೆಂದು ಈ ಶಾಸನ ತಿಳಿಸುತ್ತದೆ. ಸಮೀಪದ ತಾಳೂರಿನಲ್ಲಿ ಎರಡನೇ ವೀರಬಲ್ಲಾಳನ ಮತ್ತೊಂದು ಶಾಸನ ಕ್ರಿ. ಶ. ೧೨೧೮ರಲ್ಲಿ ಇವನ ಆಡಳಿತಾಧಿಕಾರಿ ಬೊಮ್ಮಗಾವುಂಡನು ಈಶ್ವರ ದೇವಾಲಯವನ್ನು ಕಟ್ಟಿಸಿದನೆಂದು ದತ್ತಿದಾನಗಳನ್ನು ಉಲ್ಲೇಖಿಸುತ್ತದೆ. ಈ ಆಧಾರಗಳಿಂದ ಹೊಯ್ಸಳರು ಸೊಂಡೂರ ಪ್ರದೇಶದಲ್ಲಿ ಸಾಂಸ್ಕೃತಿಕ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ್ದಾರೆಂದು ತಿಳಿದುಬರುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸೊಂಡೂರು ವಿಶೇಷ ಪಾತ್ರ ವಹಿಸಿತ್ತು. ಸೊಂಡೂರು ಪಟ್ಟಣದ ಮಧ್ಯದಲ್ಲಿ ತಾರಕೇಶ್ವರ ದೇವಸ್ಥಾನದ ಸಮೀಪದಲ್ಲಿ ಕೃಷ್ಣದೇವರಾಯನ ಕ್ರಿ. ಶ. ೧೫೨೪ರ ಶಿಲಾಶಾಸನವಿದೆ. ಈ ಶಾಸನ ಇತ್ತೀಚೆಗೆ ಸಮೀಪದಲ್ಲಿ ಮನೆಯ ಪಾಯದಲ್ಲಿ ದೊರೆತಿದೆ. ರಾಮಗಡದಲ್ಲಿ ಕೃಷ್ಣದೇವರಾಯನ ಶಾಸನವಿದೆ. ಕುಮಾರರಾಮನ ಸ್ಮರಣೆಗಾಗಿ ಬೈಚಪ್ಪನಾಯಕ ಕಟ್ಟಿಸಿದ ಕುಮಾರರಾಮನ ದೇವಸ್ಥಾನವನ್ನು ಶ್ರೀಕೃಷ್ಣದೇವರಾಯ ದುರಸ್ತಿ ಮಾಡಿಸಿದನೆಂದು ತಿಳಿದುಬರುತ್ತದೆ. ಸುತ್ತಮುತ್ತಲಿನ ಗ್ರಾಮಗಳ ಅನೇಕ ಶಾಸನಗಳಲ್ಲಿ ಸೊಂಡೂರಿನ ಉಲ್ಲೇಖಗಳಿವೆ. ವಿಜಯನಗರ ಕಾಲದಲ್ಲಿ ಸೊಂಡೂರು ಒಂದು ಪ್ರಮುಖ ವ್ಯಾಪಾರ ಕೇಂದ್ರವೆಂದು ವರ್ಣಿಸಲಾಗಿದೆ. ಬಹುಶಃ ಯುದ್ಧ ಸಾಮಗ್ರಿಗಳಾದ ಆಯುಧಗಳ ತಯಾರಿಕೆ ಮತ್ತು ಮಾರಾಟವಿರಬಹುದು. ಏಕೆಂದರೆ ಇಲ್ಲಿನ ಅನೇಕ ಪ್ರದೇಶಗಳಲ್ಲಿ ಕುಲುಮೆಗಳಿದ್ದು, ಬೆಟ್ಟಗಳೋಪಾದಿಯಲ್ಲಿ ಬೂದಿ ತುಂಬಿದ ತಾಣಗಳಿವೆ. ಇವು ಕಬ್ಬಿಣ ತಯಾರಿಸುವ ಕೇಂದ್ರಗಳಾಗಿರಬಹುದು. ಈ ಪ್ರದೇಶ ವಿಜಯನಗರದ ರಾಜಧಾನಿಗೆ ಸಮೀಪದಲ್ಲಿದ್ದು ಭಯಾನಕ ಬೆಟ್ಟಗುಡ್ಡ, ಕಣಿವೆಗಳು ರಾಜಧಾನಿಗೆ ರಕ್ಷಣೆ ಒದಗಿಸಿತ್ತು. ಯುದ್ಧ ಸಾಮಗ್ರಿಗಳನ್ನು ತಯಾರಿಸುವ ರಹಸ್ಯ ಕೇಂದ್ರಗಳಾಗಿದ್ದವು. ಇಲ್ಲಿ ಹೆಚ್ಚು ಹುಲ್ಲುಗಾವಲಿದ್ದುದರಿಂದ ಕುದುರೆ, ಆನೆಗಳ ಸೈನ್ಯದ ವಿಶ್ರಾಂತಿ ತಾಣಗಳಿರಬಹುದು. ಅರಣ್ಯದಿಂದ ಕಟ್ಟಿಗೆ, ಗಣಿಗಳಲ್ಲಿ ಕಬ್ಬಿಣ ಸಿಗುತ್ತಿದ್ದರಿಂದ ಆಯುಧ ತಯಾರಿಕೆ ಕೇಂದ್ರಗಳು ಸೇನೆ ವಿಶ್ರಾಂತಿಗೆ ಯೋಗ್ಯ ಸ್ಥಳಗಳಾದವು. ಇದರ ಬಗ್ಗೆ ಹೆಚ್ಚಿನ ಶೋಧನೆಯಾಗಬೇಕಾಗಿದೆ. ಒಟ್ಟಿನಲ್ಲಿ ವಿಜಯನಗರ ಸಾಮ್ರಾಜ್ಯದ ಒಂದು ಪ್ರಮುಖ ಪಟ್ಟಣವಾಗಿ ವ್ಯಾಪಾರ ಕೇಂದ್ರವಾಗಿತ್ತು. ೧೩೩೬ ರಿಂದ ೧೫೬೫ರ ವರೆಗೆ ವಿಜಯನಗರ ಅರಸರ ಆಡಳಿತಕ್ಕೊಳಪಟ್ಟಿತ್ತು.

ಕ್ರಿ. ಶ. ೧೫೬೫ರ ತಾಳಿಕೋಟೆ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯ ಪತನಾನಂತರ ಸೇನಾನಿಗಳು ಸಾಮಂತರು ಬೇರೆ ಬೇರೆ ಭಾಗಗಳನ್ನು ಸ್ವತಂತ್ರವಾಗಿ ಆಳಲು ಪ್ರಾರಂಭಿಸಿದರು. ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ಪ್ರದೇಶ ಹಂಡೆ ಪಾಳೆಗಾರರು, ಹರಪನಹಳ್ಳಿ ಹಡಗಲಿ ಭಾಗವು ಹರಪನಹಳ್ಳಿ ಪಾಳೆಗಾರರು, ಗುಡೇಕೋಟೆ, ಚೊರನೂರು ಭಾಗವನ್ನು ಗುಡೇಕೋಟೆ ಪಾಳೆಗಾರರು ಕೂಡ್ಲಿಗಿ, ಉಜ್ಜನಿ, ಸೊಂಡೂರುಗಳನ್ನು ಜರಿಮಲೆ ಪಾಳೆಗಾರರು ಆಳುತ್ತಿದ್ದರು. "ಸೊಂಡೂರು" ಜರಿಮಲೆ ಪಾಳೆಗಾರರ ಆಡಳಿತಕ್ಕೆ ಸೇರಿತ್ತು.

ಜರಿಮಲೆ ಪಾಳೆಗಾರರು ಕೂಡ್ಲಿಗಿ ತಾಲೂಕು ಜರಿಮಲೆಯಿಂದ ಆಡಳಿತ ಮಾಡುತ್ತಿದ್ದರು. ೧೬೫೬ ರಿಂದ ಬಿಜಾಪುರ ಸುಲ್ತಾನರೊಡನೆ, ಮರಾಠರೊಡನೆ ಹೋರಾಡುತ್ತಾ ಆಡಳಿತ ಮಾಡಿದರು. ಕ್ರಿ. ಶ. ೧೬೭೮ರಲ್ಲಿ ಬಳ್ಳಾರಿ ಸುತ್ತಮುತ್ತಲ ಪ್ರದೇಶ ಬಿಜಾಪುರ ಸುಲ್ತಾನನಿಂದ ಶಿವಾಜಿ ವಶಪಡಿಸಿಕೊಂಡ ಮರಾಠ ಬೋಸ್ಲೆ ಮನೆತನದ ದಾಯಾದಿಗಳಾದ ಘೋರ್ಪಡೆ

ಯುವರು ೧೭೨೮ರಲ್ಲಿ ಜರಿಮಲೆ ಪಾಳೆಗಾರರಿಂದ ಸೊಂಡೂರನ್ನು ವಶಪಡಿಸಿಕೊಂಡು, ಸೊಂಡೂರಿಂದ ಆಡಳಿತ ಪ್ರಾರಂಭಿಸಿದರು. ೧೭೯೦ರಲ್ಲಿ ಬ್ರಿಟಿಷರೊಡನೆ ಒಪ್ಪಂದ ಮಾಡಿಕೊಂಡು ೧೯೪೮ರ ವರೆಗೆ ಸ್ವಾತಂತ್ರ್ಯ ರಾಜ ಪ್ರಭುತ್ವ ಆಡಳಿತ ಮಾಡಿದರು.

ಘೋರ್ಪಡೆ ವಂಶದ ಹಿನ್ನೆಲೆ : ಘೋರ್ಪಡೆ ಎಂದರೆ ಉಡ ಎಂದರ್ಥ. ಯುದ್ಧಗಳಲ್ಲಿ ಕೋಟೆಗಳ ಗೋಡೆ ಹತ್ತಲು ಉಡಗಳನ್ನು ಉಪಯೋಗಿಸುತ್ತಿದ್ದರು. ಸೈನ್ಯದಲ್ಲಿ ಉಡದ ಪಡೆಯೊಂದು ಇರಬೇಕು. ಘೋರ್ಪಡೆ ದುರ್ಗಮವಾದ ಕೋಟೆಯನ್ನು ಲಗ್ಗೆ ಹಾಕಿದಾಗ ದೊಡ್ಡದೊಂದು ಉಡವೊಂದನ್ನು ಉಪಯೋಗಿಸಿಕೊಂಡು ಸಹೋದರ ಸೇನಾನಿಗಳಿಬ್ಬರು ಕೋಟೆ ಗೋಡೆಯನ್ನು ಹತ್ತಿ ಧೈರ್ಯ ಸಾಹಸಗಳಿಂದ ಹೋರಾಡಿ ಕೋಟೆಯನ್ನು ವಶಪಡಿಸಿಕೊಂಡರು. ಇವರ ಧೈರ್ಯ ಸಾಹಸಕ್ಕೆ ಮೆಚ್ಚಿ ಶಿವಾಜಿ ಈ ಸಹೋದರರಿಗೆ "ಘೋರ್ಪಡೆ" ಎಂದು ಬಿರುದು ಕೊಟ್ಟು ಸನ್ಮಾನ ಮಾಡಿದನಂತೆ. ಅಂದಿನಿಂದ ಆ ವಂಶದವರಿಗೆ "ಘೋರ್ಪಡೆ" ಎಂಬ ಹೆಸರು ಬಂತು. ಅವರು ಬೋಸ್ಲೆ ಮನೆತನದ ದಾಯಾದಿಗಳು. (ಈ ಕತೆ ಬಹುಮನಿ ಅರಸರಿಗೂ ಸಂಬಂಧಿಸಿ ಹೇಳಿದೆ–ಸಂ॥).ಮುಂದೆ ಅದೇ ವಂಶದ "ಸಿದ್ದೋಜಿ ರಾವ್ ಘೋರ್ಪಡೆ" ಕ್ರಿ.ಶ. ೧೭೨೮ರಲ್ಲಿ ಜರಿಮಲೆ ಪಾಳೆಗಾರರಿಂದ ಸೊಂಡೂರನ್ನು ವಶಪಡಿಸಿಕೊಂಡರು.

ಇವರ ನಂತರ ಮುರಾರಿ ರಾವ್ ಘೋರ್ಪಡೆ ಅಧಿಕಾರಕ್ಕೆ ಬಂದನು. ಇವನ ಆಡಳಿತ ಕಾಲದಲ್ಲಿ ಕ್ರಿ.ಶ. ೧೭೭೬ರಲ್ಲಿ ಹೈದರನು ಸೊಂಡೂರನ್ನು ಮುತ್ತಿ ವಶಪಡಿಸಿಕೊಂಡು ಮುರಾರಿ ಘೋರ್ಪಡೆಯನ್ನು ಬಂಧಿಸಿ ಕಬ್ಬಾಳದ ಕೋಟೆಯಲ್ಲಿ ಇಡಲಾಗಿತ್ತು. ಕೆಲ ದಿನಗಳಲ್ಲಿ ಬಂಧನದಲ್ಲಿ ಮರಣ ಹೊಂದಿದ. ಆಗ ಹೈದರನು ಕೃಷ್ಣನಗರದಲ್ಲಿ ಕೋಟೆಯನ್ನು ಕಟ್ಟಿಸಲು ಪ್ರಾರಂಭಿಸಿದ. ಮುಂದೆ ಟೀಪು ಅದನ್ನು ಕ್ರಿ.ಶ. ೧೭೯೨ರಲ್ಲಿ ಪೂರ್ಣಗೊಳಿಸಿದ. ಶಿವರಾಯ್ ಘೋರ್ಪಡೆ ಬ್ರಿಟಿಷರ ಸಹಾಯದಿಂದ ಟೀಪುವನ್ನು ಸೋಲಿಸಿ ಪುನಃ ಸೊಂಡೂರಲ್ಲಿ ಆಡಳಿತ ಮುಂದುವರಿಸಿದ. ನಂತರ ವೆಂಕಟರಾವ್ ಘೋರ್ಪಡೆ, ಶಿವಷಣ್ಮುಖರಾವ್, ವಿಠಲರಾವ್ ಘೋರ್ಪಡೆ, ೨ನೇ ವೆಂಕಟರಾವ್ ಘೋರ್ಪಡೆ, ಇವರ ನಂತರ ಈಗಿನ ಶ್ರೀ ಯಶವಂತ ರಾವ್ ಹಿಂದೂರಾವ್ ಘೋರ್ಪಡೆ ೧೯೨೮ರಲ್ಲಿ ಅಧಿಕಾರಕ್ಕೆ ಬಂದರು. ಸೊಂಡೂರು ಬಳ್ಳಾರಿ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಯಿತು. ಅಂದಿನಿಂದ ಶ್ರೀ ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರು ಸೊಂಡೂರಿನಲ್ಲಿ ತಮ್ಮ ಅರಮನೆ "ಶ್ರೀ ಶಿವ ವಿಲಾಸ ರಾಜ್‌ಮಹಲ್"ನಲ್ಲಿ ವಿಶ್ರಾಂತಿ ಜೀವನ ನಡೆಸಿದ್ದಾರೆ ಇವರ ಹಿರಿಯ ಪುತ್ರರಾದ ಶ್ರೀ ಎಂ.ವೈ. ಘೋರ್ಪಡೆ, ಮಂತ್ರಿಗಳಾಗಿ, ಖ್ಯಾತ ಅರ್ಥ ಶಾಸ್ತ್ರಜ್ಞರಾಗಿ ಇತಿಹಾಸಕಾರರಾಗಿ ಜಗತ್ಪ್ರಸಿದ್ಧ ವನ್ಯಜೀವಿ ಛಾಯಾ ಚಿತ್ರಕಾರರಾಗಿ ಶಿಕ್ಷಣ ಪ್ರೇಮಿಗಳಾಗಿ, ಈ ಸೀಮೆಯ ಸಾಮಾಜಿಕ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮಹತ್ವದ ಪಾತ್ರ ವಹಿಸುತ್ತಾ ಬಂದಿದ್ದಾರೆ.

## ಸೊಂಡೂರು ಸೀಮೆಯ ಪ್ರೇಕ್ಷಣೀಯ ಸ್ಥಳಗಳು

ಶ್ರೀ ಸ್ಕಂದ ಪುರಾಣದಲ್ಲಿ ಉಕ್ತವಾದಂತೆ ಪೂರ್ವ ಕಾಲದಲ್ಲಿ ಸೊಂಡೂರು "ಸ್ಕಂದಪುರ" ಎಂಬ ಕ್ಷೇತ್ರವಾಗಿತ್ತು. ಈ ಸ್ಕಂದಪುರಕ್ಕೆ ಸುತ್ತಲೂ ಲೋಹಪರ್ವತಗಳ ಕೋಟೆ ಇದ್ದಿತು. ಈಗಲೂ ಈ ಪರ್ವತಗಳಿವೆ. ಇಲ್ಲಿ ದೇವಾಧಿದೇವತೆಗಳು ಕಿನ್ನರರು, ಕಿಂಪುರುಷರೂ, ಗಂಧರ್ವರೂ ನೆಲೆಸಿದ್ದರು. ಇದರಿಂದ ಇದನ್ನು ಸುವರ್ಣಗಿರಿ ಎಂದು ಸಹ ಕರೆಯಲಾಗುತ್ತಿತ್ತು. ಶಿವಸುತನಿಂದ ಮಾತ್ರ ಹತನಾಗಬೇಕೆಂದು ಶಿವನಿಂದ ವರ ಪಡೆದ ತಾರಕಾಸುರನು ಇಲ್ಲಿನ ದೇವಾನುದೇವತೆಗಳಿಗೆ ತೊಂದರೆ ಕೊಡಲು ಆರಂಭಿಸಿದ, ಈ ರಾಕ್ಷಸನ ಹಿಂಸೆ ತಾಳಲಾರದ ದೇವತೆಗಳು ಶಿವನ ಮೊರೆ ಹೋಗಲು ಶಿವನು ತನ್ನ ಸುತನಾದ ಷಣ್ಮುಖನಿಗೆ (ಕುಮಾರಸ್ವಾಮಿಗೆ) ಈ ಲೋಹಾಚಲದಲ್ಲಿಯೇ ದೇವಸೇನಾಧಿಪತಿ ಪಟ್ಟವನ್ನು ಕಟ್ಟಿ ತಾರಕಾಸುರನನ್ನು ಕೊಲ್ಲಲು ಆಜ್ಞೆ ಮಾಡಿದ. ಶಿವನ ಆಜ್ಞೆಯ ಮೇರೆಗೆ ಕುಮಾರಸ್ವಾಮಿ ತಾರಕಾಸುರನನ್ನು ಸಂಹಾರ ಮಾಡಿದ. ನಂತರ ಲೋಹಾದ್ರಿಯ ಪ್ರಾರ್ಥನೆಯಂತೆ ಹಾಗೂ ದೇವತೆಗಳ ಬೇಡಿಕೆಯಂತೆ ಕುಮಾರಸ್ವಾಮಿ ಲೋಹಾದ್ರಿಯಲ್ಲಿಯೇ ನೆಲೆನಿಂತು ಕುಮಾರಸ್ವಾಮಿ ಕ್ಷೇತ್ರವಾಯಿತು. ಬಲಭಾಗದಲ್ಲಿ ತನ್ನ ತಾಯಿ ಪಾರ್ವತಿ ದೇವಾಲಯವಿದೆ. ಎಡಭಾಗದಲ್ಲಿ ತಂದೆಯ (ಶಿವನ ದೇವಾಲಯ) ನಾಗನಾಥ ದೇವಾಲಯ

ವಿದೆ. ದೇವತೆಗಳು ಸಹ ತಮ್ಮ ತಮ್ಮ ಕ್ಷೇತ್ರಗಳು ನಿರ್ಮಿಸಿಕೊಂಡು ನೆಲೆನಿಂತರು.

ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರ ಲಕ್ಷ್ಮಣರು ಕಪಿವೀರರನ್ನು ಕೂಡಿಕೊಂಡು ಲಂಕೆಗೆ ಹೋಗುವಾಗ ಮಾರ್ಗದಲ್ಲಿ ಲೋಹಾಚಲಕ್ಕೆ ಬಂದು ಶ್ರೀ ಕುಮಾರ ಸ್ವಾಮಿಯ ದರ್ಶನ ಪಡೆದರು. ಇದಕ್ಕೆ ಸಾಕ್ಷಿಯಾಗಿ ಕುಮಾರಸ್ವಾಮಿ ಮೂರ್ತಿ ಶಿಲ್ಪದಲ್ಲಿ ಕೆಳಭಾಗದಲ್ಲಿ ರಾಮಲಕ್ಷ್ಮಣರ ಉಬ್ಬು ಶಿಲ್ಪಗಳಿವೆ. ಸ್ವಾಮಿಯ ಆಜ್ಞೆಯಂತೆ ಶ್ರೀರಾಮ ಇಲ್ಲಿನ ಬೆಟ್ಟದ ಉತ್ಕೃಷ್ಟವಾದ ಕಬ್ಬಿಣದಿಂದ ಶಸ್ತ್ರಾಸ್ತ್ರಗಳನ್ನು ತಯಾರಿಸಿಕೊಂಡು ಲಂಕೆಗೆ ಸಾಗಿದನೆಂದು ರಘುವಂಶದಲ್ಲಿ ವರ್ಣನೆ ಇದೆ. ದ್ವಾಪರ ಯುಗದಲ್ಲಿ ಪಾಂಡವರು ವನವಾಸದಲ್ಲಿದ್ದಾಗ ಲೋಹಾಚಲಕ್ಕೆ ಬಂದು ಸ್ವಾಮಿಯ ದರ್ಶನ ಮಾಡಿಕೊಂಡು ಆತನ ಆಶೀರ್ವಾದವನ್ನು ಪಡೆದು, ಕೆಲಕಾಲ ವಾಸವಾಗಿದ್ದು, ಪಂಚಲಿಂಗಗಳನ್ನು ನಿರ್ಮಿಸಿ ಪೂಜೆ ಮಾಡಿ ಧನ್ಯರಾದರು. ಇದೇ ಈಗಿನ ಪಂಚಲಿಂಗ ಕ್ಷೇತ್ರ.

ಕುಮಾರಸ್ವಾಮಿ ದೇವಾಲಯದ ಮುಂಭಾಗದಲ್ಲಿಯ ವಿಶಾಲವಾದ ಆಳವಾದ ಕೊಳವನ್ನು ಅಗಸ್ತ್ಯ ಮಹರ್ಷಿಗಳು ಸ್ಥಾಪಿಸಿದರೆಂದು ಪ್ರತೀತಿ. ಕುಮಾರ ಸ್ವಾಮಿ ಬ್ರಹ್ಮಚಾರಿಯಾಗಿದ್ದು, ಅಗಸ್ತ್ಯರಿಗೆ ಶಿವ ಸ್ವರೂಪ ಜ್ಞಾನವನ್ನು ಶಿವಪೂಜಾ ವಿಧಾನವನ್ನು ಹಾಗೂ ಷಡದ್ವವಿಚಾರಗಳನ್ನು ಬೋಧಿಸಿದನು. ಆಗ ಅಗಸ್ತ್ಯನು ಈ ತೀರ್ಥವನ್ನು ನಿರ್ಮಾಣ ಮಾಡಿದರಂತೆ. ಅಗಸ್ತ್ಯ ಮಹರ್ಷಿಗೆ ಬ್ರಹ್ಮಚಾರಿಯಾದ ಕುಮಾರ ಸ್ವಾಮಿ, ಷಡದ್ವವಿಚಾರಗಳನ್ನು ಶಿವಜ್ಞಾನವನ್ನು ಬೋಧಿಸುವ ಸನ್ನಿವೇಶದಲ್ಲಿ ಸ್ತ್ರೀಯರು ನೋಡಬಾರದೆಂದು ಇಂದಿಗೂ ಕುಮಾರಸ್ವಾಮಿಯ ದರ್ಶನ ಸ್ತ್ರೀಯರಿಗೆ ನಿಷಿದ್ಧವಾಗಿದೆ. ಒಂದು ವೇಳೆ ನೋಡಿದರೆ ಅಂತಹ ಸ್ತ್ರೀ "ಏಳು ಜನ್ಮಗಳಲ್ಲಿ ವಿಧವೆಯಾಗಿ ಬಾಳಲಿ" ಎಂದು ಶಾಪವನ್ನು ಕೊಟ್ಟಿರುವನಂತೆ. ಆದ್ದರಿಂದ ಇಂದಿಗೂ ಸಹ ಕುಮಾರಸ್ವಾಮಿಯ ದರ್ಶನ ಸ್ತ್ರೀಯರು ಪಡೆಯುವುದಿಲ್ಲ.

ಸೊಂಡೂರು ಸೀಮೆಯಲ್ಲಿ ಕುಮಾರಸ್ವಾಮಿ ಸ್ತ್ರೀದರ್ಶನ ನಿಷೇಧಕ್ಕೆ ಸಂಬಂಧಪಟ್ಟಂತೆ ಸ್ವಾರಸ್ಯಕರವಾದ ಮತ್ತೊಂದು ದಂತ ಕಥೆಯಿದೆ. ತಾರಕಾಸುರನ ಸಂಹಾರದ ನಂತರ ಲೋಹಾದ್ರಿಗಿರಿಯಲ್ಲಿಯೇ ನೆಲೆನಿಂತ ಬಳಿಕ ಪಾರ್ವತಿಯು ಪ್ರೀತಿಯ ಪುತ್ರನಾದ ಕುಮಾರ ಸ್ವಾಮಿಗೆ ಮದುವೆ ಮಾಡಲು ಕನ್ಯೆಯೊಬ್ಬಳನ್ನು ನೋಡಿಕೊಂಡು ಬಂದು "ಕುಮಾರ ನಿನಗೆ ಕನ್ಯೆಯೊಬ್ಬಳನ್ನು ಆಯ್ಕೆ ಮಾಡಿದ್ದೇನೆ. ಅವಳನ್ನು ನೀನು ಲಗ್ನವಾಗಬೇಕೆಂದು" ಹೇಳಿದಳು. ಅದಕ್ಕೆ ಕುಮಾರಸ್ವಾಮಿ ನನಗಾಗಿ ನೀವು ಆರಿಸಿದ ಕನ್ಯೆ ಹೇಗಿದ್ದಾಳೆ ?" ಎಂದು ಪ್ರಶ್ನಿಸಿದ. ಅದಕ್ಕೆ ಪಾರ್ವತಿ "ಹೇಗೆ ಅಂದರೆ ಏನು ? ಅವಳು ನನ್ನಂತೆಯೇ ಹೆಣ್ಣು ನನ್ನ ಹಾಗೆ ಇದ್ದಾಳೆ" ಎಂದು ಉತ್ತರಿಸಿದಳು. ಆಗ ಕುಮಾರಸ್ವಾಮಿ ತಾಯಿಯನ್ನು ಹೋಲುವ ಕನ್ಯೆಯನ್ನು ನಾನೆಂದು ಮದುವೆಯಾಗುವುದಿಲ್ಲ ಎಂದು ನಿಷ್ಠುರವಾಗಿ ತಾಯಿಗೆ ಹೇಳಿದ. ಪಾರ್ವತಿ ಮಗನನ್ನು ಒಪ್ಪಿಸಲು ಶತ ಪ್ರಯತ್ನ ಮಾಡಿದಳು. ಕುಮಾರ ಒಪ್ಪಲಿಲ್ಲ. ಕೊನೆಗೆ ಕೋಪದಿಂದ ಮಗನನ್ನು ಬೈದಾಡಿ ನನ್ನ ಮಾತಿಗೆ ಬೆಲೆ ಕೊಡದ ನೀನು ನನ್ನ ಮಗನಲ್ಲ ನನ್ನ ಎದೆ ಹಾಲನ್ನು ಕಕ್ಕು ಎಂದು ಕೋಪದಲ್ಲಿ ಕಠೋರವಾಗಿ ಹೇಳಿದಳು. ಅದಕ್ಕೆ ಪ್ರತಿಯಾಗಿ ಕುಮಾರಸ್ವಾಮಿಯು ತಕ್ಷಣದಲ್ಲಿ ತಾನು ಕುಡಿದ ತಾಯಿ ಮೊಲೆ ಹಾಲನ್ನು ಪೂರ್ಣವಾಗಿ ಕಕ್ಕಿದ. ಕಕ್ಕಿದ ಗಟ್ಟಿ ಹಾಲು ಪರ್ವತವಾಗಿ ಬಿದ್ದಿತು. ಇದೆ 'ವಿಭೂತಿ ಗುಡ್ಡ'ವಾಯಿತು. ಈಗಲೂ ಈ ಪರ್ವತವನ್ನು ನೋಡಬಹುದು. ಕುಮಾರನು ಕಕ್ಕುತ್ತಲೇ ಇದ್ದ, ಪಾರ್ವತಿ ಸಿಟ್ಟು ಹೆಚ್ಚುತ್ತಲೇ ಹೋಯಿತು. ಭಯಭೀತರಾದ ದೇವತೆಗಳು ಶಿವನಿಗೆ ತಿಳಿಸಲು ಶಿವನು ಮಧ್ಯೆ ಪ್ರವೇಶಿಸಿ ಕುಮಾರನನ್ನು ಪಾರ್ವತಿಯನ್ನು ತಾಯಿ ಮಕ್ಕಳನ್ನು ಸಮಾಧಾನ ಮಾಡಿದ. ಕುಮಾರನು ಕಕ್ಕುವದನ್ನು ನಿಲ್ಲಿಸಿ "ನಾನು ಯಾವ ಸ್ತ್ರೀಯರ ಮುಖವನ್ನು ನೋಡುವುದಿಲ್ಲ"ವೆಂದು ಪ್ರತಿಜ್ಞೆ ಮಾಡಿದ. ಅಂದಿನಿಂದ ಕುಮಾರ ಸ್ವಾಮಿಯ ದರ್ಶನ ಸ್ತ್ರೀಯರಿಗೆ ನಿಷೇಧವಾಯಿತು. ಪಾರ್ವತಿ ಮಗನನ್ನು ಮದುವೆಗೆ ಒಪ್ಪಿಸಲೇಬೇಕೆಂದು ಹಟ ಮಾಡಿ ಪಕ್ಕದಲ್ಲಿಯೇ ನೆಲೆ ನಿಂತವಳು. ಎಡಭಾಗದಲ್ಲಿ ನಾಗನಾಥ (ಶಿವನು) ನೆಲೆನಿಂತ. ಈಗ ಪಾರ್ವತಿ, ಕುಮಾರಸ್ವಾಮಿ, ನಾಗನಾಥ ದೇವಾಲಯಗಳು ಇಲ್ಲಿವೆ. ಕಾಲಾಂತರಗಳಲ್ಲಿ ರಾಜ ಮಹಾರಾಜರು ಈ ಮಹಾತ್ಮೆಗಳನ್ನು ತಿಳಿದು ಕಲಾತ್ಮಕ ದೇವಾಲಯಗಳನ್ನು ಕಟ್ಟಿಸಿದ್ದಾರೆ.

ಅಗಸ್ತ್ಯ ತೀರ್ಥ : ಕುಮಾರಸ್ವಾಮಿ ದೇವಾಲಯದ ಹೆಬ್ಬಾಗಿಲಿನ ಮುಂದೆಯೇ ಇದೆ. ಶಿವನ ಅಪ್ಪಣೆಯಂತೆ ಅಗಸ್ತ್ಯನು ಲೋಹಾಚಲಕ್ಕೆ ಬಂದು ಸ್ನಾನ ಪಾನಾದಿಗಳಿಗೆ ತೀರ್ಥವನ್ನು ನಿರ್ಮಾಣ ಮಾಡಿದ. ಪ್ರತಿ ನಿತ್ಯವೂ ತಾನು ಈ ತೀರ್ಥದಲ್ಲಿ ಸ್ನಾನ ಮಾಡಿ ಮಡಿಯಿಂದ ಕುಮಾರಸ್ವಾಮಿಯ ಸಾನಿಧ್ಯವನ್ನು ಸೇರಿ ಆತನಿಂದ ಶಿವಪೂಜಾ ವಿಧಿ, ಶಿವರೂಪಜ್ಞಾನ ಮತ್ತು ಷಡದ್ವವಿಚಾರ ಇವುಗಳನ್ನು ಉಪದೇಶದ ಮೂಲಕ ಅರಿತುಕೊಳ್ಳುತ್ತಿದ್ದ. ಅಂದಿನಿಂದ ಈ ತೀರ್ಥವು ಅಗಸ್ತ್ಯ ತೀರ್ಥವೆಂದು ಪ್ರಸಿದ್ಧವಾಗಿದೆ. ಇಲ್ಲಿ ಸ್ನಾನ ಮಾಡಿದರೆ ಪಾಪ ನಾಶವಾಗುವುದಲ್ಲದೆ ಈ ತೀರ್ಥದ ಸ್ನಾನ ಪಾನಾದಿಯಿಂದ ಕುಷ್ಠದಂತ ಭಯಾನಕ ರೋಗಗಳು ದೂರವಾಗುವವೆಂದು ಭಾವುಕರು ಹೇಳುತ್ತಾರೆ. ಗುಡೇಕೋಟೆ ಪಾಳೆಗಾರರು ಇದಕ್ಕೆ ಕಲಾತ್ಮಕ ಪುಷ್ಕರ್ಣಿ ಕಟ್ಟಿಸಿದರು.

ಹರಿ ಶಂಕರ : ಕುಮಾರಸ್ವಾಮಿ ದೇವಸ್ಥಾನದಿಂದ ಉತ್ತರದ ಬೆಟ್ಟಗಳ ಇಳಿಜಾರಿನಲ್ಲಿ ಸ್ವಲ್ಪ ದೂರದಲ್ಲಿದೆ. ಶಿವನ ಫಾಲನೇತ್ರದಿಂದ ಸುಟ್ಟು ಭಸ್ಮವಾದ ತನ್ನ ಮಗ ಮನ್ಮಥನನ್ನು ಪುನರುಜ್ಜೀವನಗೊಳಿಸಲೆಂದು ವಿಷ್ಣು ಇಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿದ. ಆಗ ತ್ರಿಕಾಲ ಸ್ನಾನಕ್ಕೆಂದು ತನ್ನ ಗದೆಯಿಂದ ಶ್ರೀ ವಿಷ್ಣುವು ಈ ತೀರ್ಥವನ್ನು ನಿರ್ಮಾಣ ಮಾಡಿದ. ಗೋಮುಖ ಶಿಲ್ಪಮೂರ್ತಿಯ ಬಾಯಿಯಿಂದ ನೀರು ಹೊರ ಬರುತ್ತದೆ. ಈ ನೀರು ಸಿಹಿ ಹಾಗೂ ಶೀತಲವಾಗಿ ಆರೋಗ್ಯಕರವಾಗಿದೆ. ಸುಂದರ ವನಶ್ರೀಯ ನಡುವೆ ಈ ತೀರ್ಥದ ತಟದಲ್ಲಿಯೇ ಶ್ರೀ ಹರಿ ಪೂಜಿಸಿದ ಶಿವಲಿಂಗ ವಿದೆ. ಈ ಲಿಂಗಕ್ಕೆ ಹರಿಶಂಕರ ಎಂದು ಕರೆಯುತ್ತಾರೆ.

ಉಡಚಲ ಪರಮೇಶ್ವರಿ : ಸೊಂಡೂರಿನ ದಕ್ಷಿಣಕ್ಕೆ ನಾರಾಯಣ ನದಿಯ ಬಲದಂಡೆಯಲ್ಲಿ ಈ ಶಕ್ತಿ ದೇವತೆಯ ಗುಡಿ ಇದೆ. ಸ್ಕಂದ ಕ್ಷೇತ್ರ ರಕ್ಷಣೆಗೆ ಶಿವನು ತನ್ನ ಹಣೆಗಣ್ಣಿನ ಕಿಡಿಯೊಂದರಿಂದ ಈ ಶಕ್ತಿ ದೇವತೆಯನ್ನು ಸೃಷ್ಟಿಸಿ ಕ್ಷೇತ್ರ ರಕ್ಷಣೆಗೆ ಅವಳನ್ನು ನೇಮಿಸಿದನಂತೆ. ಈ ಶಕ್ತಿ ದೇವತೆಯು ಸ್ಕಂದ ಕ್ಷೇತ್ರರಕ್ಷಣೆಗಾಗಿ ನೆಲಸಿದ್ದಾಳೆ ಎಂಬ ಪ್ರತೀತಿ ಇದೆ.

ಭೀಮತೀರ್ಥ : ದ್ವಾಪರ ಯುಗದಲ್ಲಿ ಪಾಂಡವರು ವನವಾಸದಲ್ಲಿದ್ದಾಗ ಸಂಚರಿಸುತ್ತಾ ಬಂದು ಕುಮಾರಸ್ವಾಮಿ ಕ್ಷೇತ್ರದಲ್ಲಿ ಸ್ವಾಮಿಯ ದರ್ಶನ ಮಾಡಿಕೊಂಡು ಕೆಲದಿನಗಳು ವಾಸವಾಗಿದ್ದರು. ಆಗ ಪಂಚ ಪಾಂಡವರು ಪಂಚಲಿಂಗಗಳನ್ನು ಸ್ಥಾಪಿಸಿ ಪೂಜಿಸಿದರು. ಆಗ ಭೀಮನು ಧರ್ಮರಾಯನ ಆಜ್ಞೆಯ ಮೇರೆಗೆ ತನ್ನ ಗದೆಯಿಂದ ಒಂದು ಜಲಾಶಯವನ್ನು ಮಾಡಿದನು. ಆದ್ದರಿಂದ ಇದಕ್ಕೆ ಭೀಮತೀರ್ಥವೆಂದು ಕರೆಯುವರು.

ಭೈರವ ತೀರ್ಥ : ಈ ಸ್ಥಳ ಸೊಂಡೂರಿನಿಂದ ಈಶಾನ್ಯಕ್ಕೆ ಹತ್ತು ಕಿ.ಮೀ. ದೂರದಲ್ಲಿದೆ. ತಾರಕಾಸುರನ ಮಗನಾದ ತಾರಕಾಕ್ಷನು ತಂದೆಯನ್ನು ಕೊಂದ ಕುಮಾರಸ್ವಾಮಿಯ ಮೇಲೆ ಸೇಡು ತೀರಿಸಿಕೊಳ್ಳಲು ಲೋಹಾದ್ರಿಯ ಮೇಲೆ ದಾಳಿ ಮಾಡಿದನು. ಕೂಡಲೇ ಕುಮಾರನ ಸಹೋದರನಾದ ಭೈರವನುಕುಮಾರನ ಅಪ್ಪಣೆಯಂತೆ ಆ ರಾಕ್ಷಸನನ್ನು ಕೊಂದು ಅಲ್ಲಿಯೇ ನೆಲೆನಿಂತ. "ಭೈರವವೇಶ್ವರ ಲಿಂಗ" ಹಾಗೂ ಭೈರವ ತೀರ್ಥಸ್ಕಂದ ಕ್ಷೇತ್ರ ರಕ್ಷಣೆಗೆ ಭೈರವನು ನೆಲೆನಿಂತನೆಂದು ಪ್ರತೀತಿ.

ನವಿಲು ಸ್ವಾಮಿ : ಕುಮಾರಸ್ವಾಮಿ ದೇವಸ್ಥಾನದಿಂದ ೨ ಕಿ.ಮೀ. ದಕ್ಷಿಣದಲ್ಲಿದೆ. ನವಿಲು ವಾಹನವೇರಿದ ಕುಮಾರಸ್ವಾಮಿಯ ಸುಂದರ ವಿಗ್ರಹವುಳ್ಳ ದೇವಾಲಯ ವಿದೆ. ದೇವಾಲಯದ ಪೂರ್ವಕ್ಕೆ ಒಂದು ಚಿಕ್ಕ ಪುಷ್ಕರಣಿ ಇದೆ.

ರಾಮಗಡ : ಹೊಸಪೇಟೆ ಮಾರ್ಗದಲ್ಲಿ ಎಡ ಭಾಗದ ಬೆಟ್ಟದಲ್ಲಿರುವ ರಾಮಗಡಕ್ಕೆ ಇತಿಹಾಸವಿದೆ. ಕಂಪಿಲರಾಯನ ಮೊದಲ ಹೆಂಡತಿಯ ಮಗನಾದ ಕುಮಾರರಾಮನನ್ನು ಆತನ ಮಲತಾಯಿ ರತ್ನಾಜಿಯು ಮೋಹಿಸಿದಾಗ ಅದನ್ನು ತಿರಸ್ಕರಿಸಿದ. ಅದರಿಂದ ಅತೃಪ್ತಳಾಗಿ ಮಲತಾಯಿ ರತ್ನಾಜಿ ತನ್ನ ಪತಿಗೆ ಸಲ್ಲದ ಮಾತನ್ನು ಹೇಳಿ ಕುಮಾರರಾಮನ ಶಿರಚ್ಛೇದವಾಗುವಂತೆ ಮಾಡುತ್ತಾಳೆ. ಆಗ ಸತ್ಯಸಂಗತಿ ತಿಳಿದ ಮಂತ್ರಿ ಭೈಚಪ್ಪ ನಾಯಕ ಕುಮಾರನನ್ನು ಕರೆತಂದು ಈ ಬೆಟ್ಟದಲ್ಲಿ ಜೀವಂತವಿಟ್ಟು, ಅವನ ಶಿರಚ್ಛೇದ ಮಾಡಿರುವುದಾಗಿ ಸುಳ್ಳು ಹೇಳುತ್ತಾನೆ. ಆದ್ದರಿಂದ ಈ ಗುಡ್ಡಕ್ಕೆ ರಾಮಗಡವೆಂದು ಹೆಸರು. ಕುಮಾರರಾಮನ ಸ್ಮರಣಾರ್ಥ ಮಂತ್ರಿ ಭೈಚಪ್ಪನಾಯಕ ರಾಮನ ಗುಡಿಯನ್ನು ಕಟ್ಟಿಸಿದ. ಕಾಲಾಂತರದಲ್ಲಿ ಪಾಳು ಬಿದ್ದಾಗ ವಿಜಯ

ನಗರದ ಅರಸ ಕೃಷ್ಣದೇವರಾಯ ದೇವಾಲಯವನ್ನು ದುರಸ್ತಿ ಮಾಡಿಸಿದ ಶಿಲಾಶಾಸನವಿದೆ.

**ಘೋರ್ಪಡೆ ಅರಮನೆ :** "ಶ್ರೀ ಶಿವವಿಲಾಸ ರಾಜ್‌ಮಹಲ್" ಎಂದು ಕರೆಯುವ ಘೋರ್ಪಡೆಯವರ ಈ ಅರಮನೆ ಸೊಂಡೂರಿನಿಂದ ಹೊಸಪೇಟೆಗೆ ಹೋಗುವ ರಸ್ತೆಯ ಎಡಭಾಗದಲ್ಲಿದೆ. ಕ್ರಿ.ಶ. ೧೯೪೦ರಲ್ಲಿ ಬ್ರಿಟಿಷ್ ಇಂಜಿನಿಯರ್ ಸಹಾಯದಿಂದ ಈ ಅರಮನೆಯನ್ನು ಶ್ರೀ ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರು ಕಟ್ಟಿಸಿದ್ದಾರೆ. ಸುಂದರ ಸಭಾಂಗಣ, ಪ್ರಾಕಾರ, ದೇವಸ್ಥಾನಗಳನ್ನು ಒಳಗೊಂಡಿದೆ.

**ಕೃಷ್ಣನಗರ ಕೋಟೆ :** ಮುರಾರಿರಾವ್ ಘೋರ್ಪಡೆಯನ್ನು ಸೋಲಿಸಿ ಬಂಧಿಸಿದ ನಂತರ ಹೈದರನು ಇಲ್ಲಿ ಕ್ರಿ.ಶ. ೧೭೭೬ರಲ್ಲಿ ಕೋಟೆ ಕಟ್ಟಿಸಲು ಆರಂಭಿಸಿದ, ಟಿಪ್ಪು ೧೭೯೨ರಲ್ಲಿ ಪೂರ್ಣಗೊಳಿಸಿದ ಅದೇ ಕಾಲಕ್ಕೆ ಬ್ರಿಟಿಷರ ಸಹಾಯದಿಂದ ಶಿವರಾಯ್ ಘೋರ್ಪಡೆ ಸೊಂಡೂರನ್ನು ವಶಪಡಿಸಿಕೊಂಡು ಆಡಳಿತ ಮುಂದುವರೆಸಿದರು. ಸುಮಾರು ೨ ಕಿ.ಮೀ. ಸುತ್ತಳತೆಯುಳ್ಳ ಕೋಟೆಗೆ ೩ ಮಹಾದ್ವಾರಗಳಿವೆ. ಕೋಟೆ ಗೋಡೆ ೨೦ ಅಡಿ ಎತ್ತರವಾಗಿದ್ದು, ಗೋಡೆ ಮೇಲೆ ಸುಮಾರು ೧೨ ಅಡಿ ಅಗಲವಾಗಿದೆ. ಕೋಟೆ ಒಳಗೆ ಕುದುರೆ ಲಾಯಗಳು, ಮದ್ದುಗುಂಡು ಸಂಗ್ರಹಾಲಯಗಳು ಇವೆ. ಇಲ್ಲಿ ಅನೇಕ ಕನ್ನಡ ಚಿತ್ರಗಳ ಚಿತ್ರೀಕರಣಗಳು ನಡೆದಿವೆ. ಈಗ ಕೋಟೆಯೊಳಗೆ ಕೃಷ್ಣನಗರವೆಂಬ ಗ್ರಾಮವಿದೆ. ಇತ್ತೀಚಿನ ದಿನಗಳಲ್ಲಿ ಕೋಟೆ ದಕ್ಷಿಣ ಭಾಗ ಬಿದ್ದು ಪಾಳು ಬೀಳುತ್ತಿದೆ.

**ಘೋರ್ಪಡೆ ವಂಶದವರ ಗ್ರಾಮಗಳು :** ಘೋರ್ಪಡೆ ರಾಜ ಮನೆತನದ ಆಡಳಿತ ಕಾಲಕ್ಕೆ ಈ ಎಲ್ಲ ಕ್ಷೇತ್ರಗಳನ್ನು ರಕ್ಷಿಸಿ ಬೆಳೆಸಿದರಲ್ಲದೆ ಅನೇಕ ಹೊಸ ಗ್ರಾಮಗಳನ್ನು, ಕ್ಷೇತ್ರಗಳನ್ನು ಕಟ್ಟಿದ್ದಾರೆ. ಯಶವಂತರಾಯ್ ಘೋರ್ಪಡೆ ಸ್ಮರಣಾರ್ಥ "ಯಶವಂತನಗರ", ಕೃಷ್ಣರಾಯ್ ಘೋರ್ಪಡೆಯವರ ಸ್ಮರಣಾರ್ಥ "ಕೃಷ್ಣನಗರ" ತಾರಾಬಾಯಿ ಸ್ಮರಣಾರ್ಥ "ತಾರಾನಗರ" ಸುಶೀಲಬಾಯಿ ಸ್ಮರಣಾರ್ಥ "ಸುಶೀಲನಗರ", ಹೀಗೆ ಅನೇಕ ಹಳ್ಳಿಗಳನ್ನು ನಿರ್ಮಿಸಿದ್ದಾರೆ.

ಗಾಂಧೀಜಿ ೧೯೩೨ರಲ್ಲಿ ಇಲ್ಲಿಗೆ ಭೇಟಿ ಕೊಟ್ಟಾಗ ಇಲ್ಲಿನ ಸೃಷ್ಟಿ ಸೌಂದರ್ಯ ನೋಡಿ "SEE SANDUR IN SEPTEMBER" ಎಂದು ಹೇಳಿದ್ದಾರೆ.

ಡಾ॥ ಜಿ. ಎಂ. ನಾಗಯ್ಯ*

# ವಡ್ಡಾರಾಧನೆ ಸೂಚಿಸುವ ಬಸದಿ ಮತ್ತು ಸೊಂಡೂರು

ಉಪಲಬ್ಧ ಪ್ರಥಮ ಕನ್ನಡ ಗದ್ಯಕೃತಿಯೆಂಬ ಖ್ಯಾತಿವೆತ್ತ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ' ಯಲ್ಲಿ ಕಾರ್ತಿಕ ಋಷಿಯ ಕಥೆ ಬರುತ್ತದೆ. ಲಾಳದೇಶದ ಅಗ್ನಿರಾಜನು ತನ್ನ ಪುತ್ರಿ ಕೃತ್ತಿಕೆಯನ್ನು ವಿವಾಹವಾಗಿ ಕಾರ್ತಿಕ ಮತ್ತು ವೀರಶ್ರೀಯೆಂಬ ಪುತ್ರ ಪುತ್ರಿಯರನ್ನು ಪಡೆಯುತ್ತಾನೆ. ವೀರಶ್ರೀಯನ್ನು ಕೋಗಳಿಯ ಅರಸು ಕ್ರೌಂಚನು ವಿವಾಹವಾಗುತ್ತಾನೆ. ಕಾರ್ತಿಕನಿಗೆ ತನ್ನ ತಂದೆ ಮತ್ತು ಅಜ್ಜ ಒಬ್ಬನೇ ಎಂದು ತಿಳಿದು ಜಿಗುಪ್ಸೆ ಗೊಂಡು ತಪಸ್ಸನ್ನಾಚರಿಸಲು ಹೋಗುತ್ತಾನೆ. ಕಿಷ್ಕಿಂದ ಪರ್ವತದಲ್ಲಿ ತಪಸ್ಸನ್ನಾಚರಿಸಿ ಸಂಚರಿಸುತ್ತಾ ಕೋಗಳಿಗೆ ಬರುತ್ತಾನೆ. ಅವನ ಸಹೋದರಿ ವೀರಶ್ರೀ ಕಾರ್ತಿಕನ ಕಾಲು ಹಿಡಿದು ಅರಮನೆಗೆ ಭಿಕ್ಷೆಗೆ ಬರಬೇಕೆಂದು ಕೇಳಿ ಕೊಳ್ಳುತ್ತಿರುತ್ತಾಳೆ. ಈ ದೃಶ್ಯವನ್ನು ನೋಡಿದ ಕ್ರೌಂಚನು ನಿತ್ಯವೂ ನನ್ನನ್ನು ಬಿಟ್ಟು ಈ ಸವಣನಲ್ಲಿಗೆ ಹೋಗುತ್ತಿದ್ದಾಳೆಂದು ತಪ್ಪಾಗಿ ಭಾವಿಸಿ ಸಿಟ್ಟಿನಿಂದ ಶಕ್ತಿ ಯೆಂಬ ಆಯುಧದಿಂದ ಕಾರ್ತಿಕ ಋಷಿಯನ್ನು ಇರಿದು ವೀರಶ್ರೀಯನ್ನು ಎಳೆದುಕೊಂಡು ಹೋಗುತ್ತಾನೆ. ಕಾರ್ತಿಕ ಋಷಿಯ ಅಜ್ಜಿ ವೀರಮತಿ ಮಹಾದೇವಿ 'ವ್ಯಂತರ ದೇವತೆ'ಯಾಗಿ ಹುಟ್ಟಿದ್ದು ಆಕೆ ನವಿಲು ರೂಪ ಧರಿಸಿ ತನ್ನ ಬೆನ್ನಮೇಲೆ ಕಾರ್ತಿಕ ಋಷಿಯನ್ನು ಕೂಡಿಸಿಕೊಂಡು "ಕೋಗಳಿಯ ಮೂಡಣದೆಸೆಯ ಪರ್ವತದ ಕೊಳದ ತಡಿಯೊಳ್ ಲತಾಮಂಟಪದೊಳಿರಿಸಿ" ಹೋಗುತ್ತಾಳೆ. "ಪೋದೊಡೆ ಬೆಟ್ಟದ ಮೇಗಣಿಂ ಪಾಯ್ತುರ್ಪ ನಿರ್ಝರ ಶೀಕರಂಗಳಿಂ ಮೆಯ್ಯಾಪ್ಯಾಯಮಾನಮಾಗಿ ಸಂನಸನಂ ಗೆಯ್ದು ಶುಭಪರಿಣಾಮದಿಂ ಮುಡಿಪಿ" ಅಲ್ಲಿಯೇ ತಪಸ್ಸ ನ್ನಾಚರಿಸಿ ಕಾರ್ತಿಕ ಋಷಿ ಮರಣವಪ್ಪುತ್ತಾನೆ. ಆ ಜಾಗದಲ್ಲಿಯೇ ವೀರಶ್ರೀ ಬಸದಿಯೊಂದನ್ನು ಮಾಡಿಸು ತ್ತಾಳೆ. "ಸ್ವಾಮಿ ಕಾರ್ತಿಕ ಋಷಿಯರ್ ಮುಡುಪಿದಲ್ಲಿ ಯವರ ತಂಗಿಯಪ್ಪ ವೀರಶ್ರೀ ಬಸದಿಯಂ ಮಾಡಿದೊಡಂ ದಿಂದಿತ್ತ ಸ್ವಾಮಿಯೆಂಬ ತೀರ್ಥಮಾಯ್ತು" ಆ ಬಸದಿಯ ಸ್ಥಳ ಯಾವುದೆಂದು ಇಲ್ಲಿಯ ಪ್ರಶ್ನೆ.

ಡಾ॥ ಡಿ. ಎಲ್. ನರಸಿಂಹಾಚಾರ್[1] ಅವರು "ಬಳ್ಳಾರಿ ಜಿಲ್ಲೆಯ ಸೊಂಡೂರಿನ ಬಳಿ ಬೆಟ್ಟಗಳಲ್ಲಿ ಈಗ ಕುಮಾರಸ್ವಾಮಿ ದೇವಾಲಯವಿರುವುದು ಪ್ರಸಿದ್ಧ ವಾಗಿದೆ....ಕಥೆಯಲ್ಲಿನ ಸ್ವಾಮಿ ಕಾರ್ತಿಕೇಯ ಯತಿ ಕುಮಾರಸ್ವಾಮಿಯೆಂಬ ದೇವರಾಗಿಯೂ ಆ ಬಸದಿಯೇ ಅನ್ಯ ದೇವಾಲಯವಾಗಿಯೂ ಪರಿವರ್ತನೆಗೊಂಡಿರ ಬಹುದು. ಈ ಭೂಸನ್ನಿವೇಶವೆಲ್ಲ ಕೋಗಳಿಯ ಪೂರ್ವಕ್ಕೆ ಇರುವ ಪರ್ವತಪ್ರಾಂತವಾಗಿದೆ" ಎಂದು ಹೇಳಿದ್ದಾರೆ. ಕುಮಾರಸ್ವಾಮಿ ದೇವಾಲಯ (ಕ್ರಿ. ಶ. ೭೯೯) ಹಿಂದೆ ಬಸದಿಯಾಗಿತ್ತೆಂಬುದಕ್ಕೆ ಯಾವುದೇ ಆಧಾರಗಳು ಇಲ್ಲ. ೮ನೆಯ ಶತಮಾನಕ್ಕಾಗಲೇ ಇದು ಶೈವ ಕ್ಷೇತ್ರವಾಗಿ ಪ್ರಸಿದ್ಧಿ ಪಡೆದಿತ್ತು. ಇದರ ಪಕ್ಕದಲ್ಲಿ

---

* ಸಹಾಯಕ ಗ್ರಂಥಪಾಲರು, ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ-೫೮೩ ೧೧೯, ತಾ ; ಸೊಂಡೂರು, ಜಿ : ಬಳ್ಳಾರಿ.

1 ನರಸಿಂಹಾಚಾರ್, ಡಿ. ಎಲ್., (ಸಂ.) ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಮೈಸೂರು, ೧೯೮೬, ಪೀಠಿಕೆ ಪು. ೩೫.

ಪಾರ್ವತಿ ದೇವಾಲಯು ಇನ್ನೂ ಪ್ರಾಚೀನ ; ಇಲ್ಲೆಲ್ಲ ಶೈವರ ಚಿಹ್ನೆಗಳೇ ಗೋಚರಿಸುತ್ತವೆ. ಜೈನಧರ್ಮದ ಕುರುಹುಗಳಾವುವೂ ಇಲ್ಲಿ ಇಲ್ಲ. ಅಲ್ಲದೆ ಕಥೆಯಲ್ಲಿ ಹೇಳುವ ಹಾಗೆ ಪರ್ವತದ ಕೊಳದ ತಡಿಯ ಪ್ರದೇಶವೂ ಅಲ್ಲ. ಡಾ. ಎಚ್. ದೇವೀರಪ್ಪನವರು[2] ವೀರಶ್ರೀ ಕಟ್ಟಿಸಿದ ಬಸದಿಯ ಸ್ಥಳವು ಈಗಿನ ಸುಬ್ಬರಾಯನಹಳ್ಳಿಗೆ ಸಮೀಪವಿರುವ ನವಿಲುಸ್ವಾಮಿ ದೇವಾಲಯವೆಂದು ಹೇಳುತ್ತಾರೆ. ಆದರೆ ಈ ದೇವಾಲಯ ವಿಜಯನಗರ ಅರಸರು ಕಟ್ಟಿಸಿರುವ ದೇವಾಲಯಗಳಂತೆ ಇದೆ. ಅಲ್ಲದೆ ಇದರ ಮುಂದಿರುವ ಹೊಂಡವನ್ನು ಬುಕ್ಕರಾಯನು ಮಾಡಿಸಿದನೆಂದೂ ಅಲ್ಲಿಯ ಶಾಸನ ಸ್ಪಷ್ಟವಾಗಿ ತಿಳಿಸುತ್ತದೆ. ಅಲ್ಲದೆ ಇಲ್ಲೂ ಜೈನಧರ್ಮದ ಚಿಹ್ನೆಗಳಾವುವೂ ಗೋಚರಿಸುವುದಿಲ್ಲ. ಹೀಗಾಗಿ ಈ ದೇವಾಲಯವೂ ಇತ್ತೀಚಿನದು.

ಇಷ್ಟು ಹಿನ್ನೆಲೆಯಲ್ಲಿ ಬಸದಿಯ ಕುರುಹುಗಳನ್ನು ಬೇರೆಡೆಗೆ ಹುಡುಕುತ್ತಿರುವಾಗ ನಂದಿಹಳ್ಳಿಯ ಹಿರಿಯರಿಂದ ಅಮೂಲ್ಯವಾದ ಮಾಹಿತಿ ದೊರೆಯಿತು. ಕುಮಾರಸ್ವಾಮಿ ಬೆಟ್ಟದ ಕೆಳಭಾಗದಲ್ಲಿ ನಂದಿಹಳ್ಳಿಗೆ ಪಶ್ಚಿಮಕ್ಕೆ ಇರುವ ಜೋಗಿಕೊಳ್ಳವನ್ನು ಜೋಗಪ್ಪನ ಕೊಳ್ಳವೆಂದೂ ಕರೆಯುತ್ತಿದ್ದರು. ಅಲ್ಲೊಂದು ಜೋಗಪ್ಪನ ಮೂರ್ತಿ ಇತ್ತು. ಆ ಮೂರ್ತಿಯನ್ನು ಮಳೆ ಬಾರದೆ ಇದ್ದಾಗ ಬೋರಲು ಮಲಗಿಸಿ ಮಳೆ ಬಂದ ತಕ್ಷಣ ಯಥಾಪ್ರಕಾರ ನಿಲ್ಲಿಸಿ ಪೂಜೆ ಸಲ್ಲಿಸುತ್ತಿದ್ದುದಾಗಿ ತಿಳಿಸಿದರು. ಆ ಮೂರ್ತಿ ಈಗ ಅಲ್ಲಿಲ್ಲ. ಸುಮಾರು ೨೦ ವರ್ಷಗಳ ಹಿಂದೆ ಅದನ್ನು ಯಾರೋ ಅಪಹರಿಸಿಕೊಂಡು ಹೋಗಿದ್ದಾರೆ. ಆ ಜೋಗಪ್ಪನ ಮೂರ್ತಿಯ ಗುಣಲಕ್ಷಣಗಳನ್ನು ವಿಚಾರಿಸಿದಾಗ ಅದು ಸುಮಾರು ಎರಡೂವರೆ ಅಡಿ ಎತ್ತರವಿದ್ದು ಪುರುಷ ವಿಗ್ರಹವಾಗಿದ್ದು ನಿಂತಿರುವ ದಿಗಂಬರಮೂರ್ತಿಯಾಗಿತ್ತೆಂಬ ಅಂಶಗಳು ತಿಳಿದು ಬಂದವು. ಈ ಅಂಶಗಳು ಜೈನ ವಿಗ್ರಹವನ್ನು ಹೋಲುತ್ತಿರುವುದರಿಂದ ನಿಂತ ಜೈನ ದಿಗಂಬರ ಮೂರ್ತಿಗಳ ಫೋಟೋವನ್ನು ತೋರಿಸಿದಾಗ ಜೋಗಪ್ಪನ ಮೂರ್ತಿ ಇದೇ ರೀತಿ ಇತ್ತೆಂದು ತಿಳಿಸಿ, ಮೂರ್ತಿಯ ಹಿಂದೆ ಯಾವುದೇ ರೀತಿಯ ಪ್ರಭಾವಳಿ ಇರಲಿಲ್ಲವೆಂದು ತಿಳಿಸಿದರು. ಹೀಗಾಗಿ ಇಂದು ಜೋಗಿಕೊಳ್ಳವೆಂದು ಕರೆಯುತ್ತಿರುವುದೇ ಕಥೆಯಲ್ಲಿ ಬರುವ ಬಸದಿಯ ಪ್ರದೇಶವಾಗಿರಬೇಕು. ಜೋಗಪ್ಪನ ಮೂರ್ತಿಯಿದ್ದ ಜೋಗಿಕೊಳ್ಳದ ಪ್ರದೇಶವು ಕಥೆಯಲ್ಲಿ ನಿರೂಪಿಸಿದಂತೆ ಕೋಗಳಿಯ ಪೂರ್ವಕ್ಕೆ ಬರುತ್ತದೆ. ಅಲ್ಲದೆ ಇದು ಪರ್ವತದ ಕೊಳದ ತಡಿಯ ಪ್ರದೇಶವೂ ಆಗಿದೆ. ಬೆಟ್ಟದ ಮೇಲಿನಿಂದ ಎಂಥ ಕಡು ಬೇಸಿಗೆಯಲ್ಲೂ ಸದಾ ನೀರು ಹರಿದು ಬರುವ ಕೊಳ್ಳದ ಪ್ರದೇಶವಾಗಿದ್ದು ಈಗಲೂ ಅತ್ಯಂತ ತಂಪಿನಿಂದ ಕೂಡಿದ ಸ್ಥಳವಾಗಿದೆ. ಕಾರ್ತಿಕ ಋಷಿಯ ಕಥೆಯಲ್ಲಿ ವರ್ಣಿಸಿರುವಂತೆಯೇ ಈ ಪ್ರದೇಶವಿದೆ. ಅಲ್ಲದೆ ಈ ಕೊಳ್ಳದ ನೀರು ಪವಿತ್ರವೆಂಬ ಭಾವನೆ ಇಂದಿಗೂ ಇದೆ. ಕುಷ್ಠರೋಗಿಗಳು ಈ ನೀರನ್ನು ದಿನಂಪ್ರತಿ ಸೇವಿಸಿದರೆ ರೋಗ ಪರಿಹಾರವಾಗುವುದೆಂಬ ನಂಬಿಕೆಯೂ ಇದೆ. ವಡ್ಡಾರಾಧನೆಯಲ್ಲಿಯೂ ಈ ಸ್ಥಳದ ನೀರಿನಿಂದ ರೋಗ ಪರಿಹಾರವಾಗುತ್ತದೆಯೆಂಬ ಉಲ್ಲೇಖವಿದ್ದುದನ್ನು ಇಲ್ಲಿ ನೆನೆಯಬೇಕು.

ಜೋಗಿಕೊಳ್ಳದ ಜೋಗಪ್ಪನ ಮೂರ್ತಿಯಿದ್ದ ಪ್ರದೇಶದಲ್ಲಿ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ದೇವಾಲಯದ ಅವಶೇಷಗಳು, ಕಲ್ಲಿನ ಕಂಬಗಳು ಇತ್ತೀಚೆಗೆ ಕಂಡು ಬಂದಿವೆ. ಇವೆಲ್ಲ ಹಿಂದೆ ಮಣ್ಣಿನಿಂದ ಮುಚ್ಚಿಹೋಗಿದ್ದು ಮಳೆಯನೀರು ರಭಸವಾಗಿ ಹರಿದು ಮಣ್ಣು ಕೊಚ್ಚಿಕೊಂಡು ಹೋಗಿದ್ದುದರಿಂದ ಈ ಅವಶೇಷಗಳು ಹೊರಬಿದ್ದಿವೆ. ಇಲ್ಲಿ ದೊರೆತ ಇಟ್ಟಿಗೆಗಳು ಪ್ರಾಚೀನ ಕಾಲದಲ್ಲಿ ಬಳಸುತ್ತಿದ್ದ ಇಟ್ಟಿಗೆಗಳನ್ನು ಹೋಲುತ್ತವೆ. ಇವುಗಳ ಅಳತೆ ಒಂದು ಅಡಿ ಎಂಟೂವರೆ ಇಂಚು ಉದ್ದ ಎಂಟೂವರೆ ಇಂಚು ಅಗಲ ಹಾಗೂ ನಾಲ್ಕು ಇಂಚು ದಪ್ಪಗಿವೆ. ಇಲ್ಲಿ ನಿರ್ಮಿಸಲ್ಪಟ್ಟಿದ್ದ ದೇವಾಲಯ ಕ್ರಿ.ಶ. ೧-೨ನೇ ಶತಮಾನಕ್ಕೆ ಸಂಬಂಧ ಪಟ್ಟಿರಬೇಕು. ಈ ಅವಶೇಷಗಳ ಅಡಿಯಲ್ಲಿ ಕಲ್ಲಿನಿಂದ ಕೆತ್ತಲ್ಪಟ್ಟ ಸ್ತ್ರೀ ದೇವತೆಯ ವಿಗ್ರಹ ದೊರೆತಿದೆ. ಇದು ವಡ್ಡಾರಾಧನೆಯಲ್ಲಿ ಬರುವ ವ್ಯಂತರ ದೇವತೆಯ ಮೂರ್ತಿಯಾಗಿರಬೇಕು. ಕಥೆಯಲ್ಲಿ ವೀರಮತಿ ಮಹಾದೇವಿ ವ್ಯಂತರ

---

2 ದೇವೀರಪ್ಪ ಎಚ್. : ಶಿವಕೊಟ್ಯಾಚಾರ್ಯನ ಕಾಲ ದೇಶ ಸಂ. : ಶ್ರೀಕಂಠತೀರ್ಥ,ಡಾ. ಎಂ. ಚಿದಾನಂದಮೂರ್ತಿ ಮತ್ತು ಇತರರು, ಬೆಂಗಳೂರು ; ೧೯೭೬, ಪು. ೨೯೧-೨೯೩.

ದೇವತೆಯಾಗಿ ಹುಟ್ಟಿ ಕಾರ್ತಿಕ ಋಷಿಯನ್ನು ರಕ್ಷಿಸಿದು ದನು ಇಲ್ಲಿ ಸ್ಮರಿಸಿಕೊಳ್ಳಬೇಕು. ಮೂರ್ತಿಯು ಕುಳಿತ ಭಂಗಿಯಲ್ಲಿದ್ದು ಎರಡು ಕೈಗಳು ಮಾತ್ರ ಇವೆ. ಬಲಗೈ ಯಲ್ಲಿ ಹೂವನ್ನು ಹಿಡಿದುಕೊಂಡಿರುವ ಹಾಗೆ ಕಾಣುತ್ತದೆ ಎಡಗೈಯಲ್ಲಿ ಹಿಡಿದಿರುವುದು ಅಸ್ಪಷ್ಟವಾಗಿದೆ.

ಅಲ್ಲದೆ ಜೋಗಿಕೊಳ್ಳವೆಂಬ ಶಬ್ದವೂ ಜಿನಧರ್ಮ ದತ್ತ ಬೆರಳು ತೋರುತ್ತಿದೆ. ಜೈನಧರ್ಮದ ಪಾರಿಭಾಷಿಕ ಪದವಾದ 'ಯಕ್ಷ' ಎಂಬುದು 'ಜಕ್ಕ' ಎಂದೂ 'ಯಕ್ಷಿ' ಎಂಬುದು 'ಜಕ್ಕಿ' ಎಂದು 'ಯಕ್ಷಿಣಿ' ಎಂಬುದು 'ಜಕ್ಕಿಣಿ' ಎಂದೂ ಪ್ರಾಕೃತದಲ್ಲೂ ತನ್ಮೂಲಕ ಕನ್ನಡದಲ್ಲೂ ವ್ಯತ್ಯಾಸ ಪಡೆದಿವೆ. ಕನ್ನಡದಲ್ಲಿ ಜಕ್ಕಲೆ, ಜಕ್ಕಿಯಬ್ಬೆ, ಜಕ್ಕಣಬ್ಬೆ ಎಂಬ ನಾಮವಾಚಕಗಳು ಪ್ರಚಾರದಲ್ಲಿವೆ. ಜೋ (ಕುಮಾರ) ಶಬ್ದಕ್ಕೂ ಇವುಗಳಿಗೂ ಸಂಬಂಧವೇನಾ ದರೂ ಇರಬಹುದೇ ಎಂಬುದು ಚಿಂತನೀಯ.[3] 'ಜೋಗಿ' ಮತ್ತು 'ಜೋಗಪ್ಪ' ಎಂಬಿವು (ಯಕ್ಷ> ಜಕ್ಕಿ> ಜೋಗಿ ಮತ್ತು ಯಕ್ಷ> ಜಕ್ಕ> ('ಜೋಗಪ್ಪ) ಜಕ್ಕಿ ಮತ್ತು ಜಕ್ಕ ಗಳನ್ನು ನಿರ್ದೇಶಿಸುತ್ತಿರಬೇಕು. ಕಲ್ಲಿನಿಂದ ಕಟ್ಟಲ್ಪಟ್ಟ ದೇವಾಲಯಗಳಿಗಿಂತ ಇಟ್ಟಿಗೆಯಿಂದ ಕಟ್ಟಲ್ಪಟ್ಟ ದೇವಾ ಲಯಗಳು ಪ್ರಾಚೀನ. ಪಾರ್ವತಿ ಮತ್ತು ಕುಮಾರ ಸ್ವಾಮಿ ದೇವಾಲಯಗಳಿಗೆ ಪೂರ್ವದಲ್ಲಿಯೇ ಈ ಬಸದಿ ನಿರ್ಮಾಣವಾಗಿರಬೇಕು. ಇಲ್ಲೊಂದು ದಿಗಂಬರ ಮೂರ್ತಿ ಇದ್ದುದನ್ನು ಸ್ಥಳೀಯರು ಹೇಳುತ್ತಿರು ವುದರಿಂದ ಇದು ಕಾರ್ತೀಕ ಋಷಿಯ ಕಥೆಯಲ್ಲಿ ಬರುವ ಬಸದಿ ಇದೇ ಆಗಿರಬೇಕು. ಈ ಲೇಖನದ ಮೂಲಕ 'ವಡ್ಡಾರಾಧನೆ' ಸೂಚಿಸುವ ಬಸದಿ ವಿಷಯವಾಗಿ ಹೊಸ ನಿವೇಶನದ ಕಡೆಗೆ ವಿದ್ವಾಂಸರ ಗಮನ ಸೆಳೆಯುತ್ತಿದ್ದೇನೆ. ಇಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ.

---

3 ನಾಗರಾಜಯ್ಯ, ಹಂಪ : ಯಕ್ಷ-ಯಕ್ಷಿಯರು, ಬೆಂಗಳೂರು, ಚಂದ್ರಸಾಗರವರ್ಣಿ ಗ್ರಂಥಮಾಲೆ, ೧೯೭೬

ಡಾ|| ಎ. ಕೆ. ಶಾಸ್ತ್ರಿ*

# ಉಪಾಧಿಗೆ ಸಂಬಂಧಿಸಿದ ಶೃಂಗೇರಿ ಮಠದ ದಾಖಲೆಗಳು

ಆದಿ ಶಂಕರರಿಂದ ಸ್ಥಾಪಿತಗೊಂಡ ಶೃಂಗೇರಿಯು ಅದ್ವೈತ ಮಠಕ್ಕೆ ಸುಮಾರು ಹನ್ನೆರಡುನೂರು ವರ್ಷಗಳ ಇತಿಹಾಸವಿದೆ. ಶೃಂಗೇರಿ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಕಾರಣರಾಗಿದ್ದರಿಂದ, ಸಂಗಮ ರಾಜಮನೆತನದವರು ಆ ಮಠದ ಯತಿಗಳ ಭಿಕ್ಷೆ, ಮಠದ ಪರಿಚರ್ಯ ಮುಂತಾದ ಕಾರ್ಯಗಳಿಗಾಗಿ ಭೂದಾನ ಮಾಡಿದರು. ಹೀಗಾಗಿ, ಶೃಂಗೇರಿಯು 'ಮೂರು ಸಾವಿರದ ಮೂರು ವರಹದ ಸೀಮೆ' ಯೆಂತಲೂ, 'ಶೃಂಗೇರಿ ಧರ್ಮ ಸಂಸ್ಥಾನ'ವೆಂತಲೂ ಪ್ರಸಿದ್ಧಿಗೆ ಬಂದಿತು.[1] ನಂತರದಲ್ಲಿ ಬಂದ ಕೆಳದಿ ನಾಯಕರು, ಮರಾಠರು, ಮುಸಲ್ಮಾನ ದೊರೆಗಳಾದ ಹೈದರ, ಟೀಪು ಮತ್ತು ನಿಝಾಮರು, ಮೈಸೂರಿನ ಒಡೆಯರು, ಬ್ರಿಟಿಷ್ ಕಮಿಷನರರು, ಮತ್ತಿನ್ನಿತರರು ಕಾಲ ಕಾಲಕ್ಕೆ ಶೃಂಗೇರಿ ಮಠಕ್ಕೆ ದಾನ ಮಾಡಿ ಅಲ್ಲಿಯ ಜಗದ್ಗುರುಗಳನ್ನು ಗೌರವಿಸಿದರು. ಅನಾದಿ ಕಾಲದಿಂದ ಶೃಂಗೇರಿ ಮಠದೊಂದಿಗೆ ಭಾರತದ ಅನೇಕ ರಾಜಮನೆತನಗಳು ಮತ್ತು ಪ್ರಜೆಗಳು ಸಂಪರ್ಕವಿರಿಸಿಕೊಂಡಿದ್ದರಿಂದ ಮಠದ ಪತ್ರಾಗಾರದಲ್ಲಿ ಸಹಸ್ರಾರು ಐತಿಹಾಸಿಕ ದಾಖಲೆಗಳು ಲಭ್ಯವಿರುವದು ಸ್ವಾಭಾವಿಕ. ಶಿಲಾ ಮತ್ತು ತಾಮ್ರ ಶಾಸನಗಳು, ಸನದುಗಳು ಮತ್ತು ಸಾಹಿತ್ಯಕ ಕೃತಿಗಳ ಹೊರತಾಗಿ, ಮಠದಲ್ಲಿ ಕಡತಗಳು[2] ಲಭ್ಯವಾಗಿವೆ. ಹದಿನಾಲ್ಕನೇ ಶತಮಾನದಿಂದ ಹತ್ತೊಂಬತ್ತನೇ ಶತಮಾನದ ಅಂತ್ಯದವರೆಗಿನ ಶೃಂಗೇರಿ ಧರ್ಮಸಂಸ್ಥಾನದ ಧಾರ್ಮಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳನ್ನರಿಯಲು ಈ ಕಡತಗಳು ಬಹಳೇ ಪ್ರಯೋಜನಕಾರಿಯಾಗಿವೆ.

ಕರ್ನಾಟಕವು ದೇವಾಲಯಗಳ ನೆಲೆವೀಡು. ಅನೇಕ ಶತಮಾನಗಳಿಂದ ದೇವಸ್ಥಾನಗಳ ನಿರ್ಮಾಣ ಕಾರ್ಯ ಸಾಗುತ್ತಲೇ ಬಂದಿದೆ. ಧಾರ್ಮಿಕ, ನೈತಿಕ ಮತ್ತು ಆಧ್ಯಾತ್ಮಿಕತೆಯ ಸಂಕೇತಗಳಾಗಿರುವ ದೇವಸ್ಥಾನಗಳನ್ನು ಅರಸರು, ಗುರುಗಳು ಮತ್ತು ಪ್ರಜೆಗಳು ಕಾಲಕಾಲಕ್ಕೆ ಕಟ್ಟಿಸುತ್ತ, ಜೀರ್ಣೋದ್ಧಾರ ಮಾಡುತ್ತ ಬಂದಿದ್ದಾರೆ. ದೇವಸ್ಥಾನಗಳಲ್ಲಿ ನಿತ್ಯಪೂಜೆ, ವಿಶೇಷ ಸಂದರ್ಭಗಳಲ್ಲಿ ವಿಶೇಷ ಪೂಜೆ ಮತ್ತು ಇತರ ಸೇವೆಗೆಂದು ದೇವಸ್ಥಾನಗಳಿಗೆ ಉಂಬಳಿ ಬಿಡಲಾಗುತ್ತಿತ್ತು. ಕೆಲವೊಮ್ಮೆ ದೇವಸ್ಥಾನಗಳಲ್ಲಿಯ ಪೂಜಾರಿಗಳಿಗೆ ವಾರ್ಷಿಕ ಸಂಬಳ ನೀಡಲಾಗುತ್ತಿತ್ತು. 'ಉಪಾಧಿ'ಗೆ ಅಥವಾ ದೇವಸ್ಥಾನ

* ಇತಿಹಾಸ ಪ್ರಾಧ್ಯಾಪಕರು, ಮೋಟಿನಸರ ಪದವಿ ಕಾಲೇಜು, ಶಿರಸಿ, ಉ. ಕ.

1 'Selections from the records of the Sringeri Matha', Vol. I. Govt. Branch Press, Mysore, 1927. ಮತ್ತು ಲೇಖಕರ 'A History of Sringeri', K.U.D. 1982 ಮತ್ತು 'ಶೃಂಗೇರಿ ಧರ್ಮ ಸಂಸ್ಥಾನ', ೧೯೮೩, ಓದಿರಿ

2 'ಕಡತ' ಇಲ್ಲವೆ 'ಕಡಿತ'ವು ಪುಸ್ತಕ ರೂಪದಲ್ಲಿ ಮಡಚಿದ ಉದ್ದನೆಯ ದಪ್ಪ ಕಪ್ಪು ಬಟ್ಟೆಯಾಗಿದ್ದು, ಇದರ ಮೇಲೆ ಸೀಸದಂಥ ಬಳಪದ ಕಲ್ಲಿನಿಂದ ಬರೆಯಲಾಗುತ್ತಿತ್ತು. ಈಗ ಲಭ್ಯವಿರುವ ಶೃಂಗೇರಿ ಮಠದ ಕಡತಗಳಲ್ಲಿಯ ಸುಮಾರು ೧೫,೦೦೦ ದಾಖಲೆಗಳ ಸೂಕ್ಷ್ಮ ಚಿತ್ರೀಕರಣ ಮಾಡಲಾಗಿದೆ.

ಗಳಲ್ಲಿ ಪೂಜಾರಿಯು ಸಲ್ಲಿಸಬೇಕಾದ ಸೇವೆಗೆ ಸಂಬಂಧಿಸಿ, ಶೃಂಗೇರಿ ಮಠದ ಕಡತಗಳಲ್ಲಿ ಸು. ಕ್ರಿ.ಶ. ೧೬೮೦ ಮತ್ತು ಕ್ರಿ.ಶ. ೧೭೯೦ರ ಅವಧಿಯ ದಾಖಲೆಗಳು ಲಭ್ಯವಾಗಿವೆ.[3] ಶೃಂಗೇರಿ ಧರ್ಮಸಂಸ್ಥಾನದಲ್ಲಿ ಈಗಿನಂತೆ ಹಿಂದೂ ಕೂಡ ಧಾರ್ಮಿಕ ಕಾರ್ಯಗಳಿಗೆ ವಿಶೇಷ ಮಹತ್ವ ನೀಡಲಾಗುತ್ತಿತ್ತು. ದೇವಸ್ಥಾನಗಳಲ್ಲಿ ನಿತ್ಯ ಪೂಜೆ ಮತ್ತಿನ್ನಿತರ ಸೇವೆಗಳು ಸದಾಕಾಲ ನಡೆಯಲೆಂದು ದೇವಸ್ಥಾನಗಳಲ್ಲಿ ಪೂಜಾರಿಗಳನ್ನು ನೇಮಿಸಲಾಗುತ್ತಿತ್ತು. ಶೃಂಗೇರಿ ಮಠಕ್ಕೆ ರಾಜಮಹಾರಾಜರು ಭೂದಾನ ಮಾಡುತ್ತಿದ್ದರೆಂಬುದನ್ನು ಮೊದಲೇ ಅರಿತಾಗಿದೆ. ಇಂಥ ಆಸ್ತಿಪಾಸ್ತಿಗಳ ಹಲವಾರು ಪಾಲುಗಳನ್ನು ದೇವಸ್ಥಾನಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ಜಗದ್ಗುರುಗಳು ದೇವಸ್ಥಾನಗಳಿಗೆ ಉಂಬಳಿಯಾಗಿ ಬಿಡುತ್ತಿದ್ದರು. ಅಲ್ಲಿಯ ಪೂಜಾರಿಗಳಿಗೆ ಜಗದ್ಗುರುಗಳು ವಾರ್ಷಿಕ ಸಂಬಳ ನೀಡುತ್ತಿದ್ದರು. ಹರಕೆರಿಯ ಶ್ರೀರಾಮೇಶ್ವರ, ಕೊಲ್ಲೂರಿನ ಶ್ರೀಮೂಕಾಂಬಿಕೆ ಮತ್ತು ಶ್ರೀ ಜನಾರ್ದನ, ವಿದ್ಯಾರಣ್ಯಪುರದ ಶ್ರೀ ನರಸಿಂಹ, ಶೃಂಗೇರಿಯ ಶ್ರೀ ಶಾರದಾಂಬಾ ಮತ್ತು ಶ್ರೀಮಲ್ಲಿಕಾರ್ಜುನ, ಮತ್ತಿನ್ನಿತರ ದೇವರ ಪೂಜೆ ಪುನಸ್ಕಾರಗಳಿಗೋಸುಗ ಜಗದ್ಗುರುಗಳು ಪೂಜಾರಿಗಳಿಗೆ ಉಪಾಧಿಗೆ ಸಂಬಂಧಿಸಿದ ನಿರೂಪಗಳನ್ನು ಹೊರಡಿಸುತ್ತಿದ್ದರೆಂದು ಕೆಳಗೆ ನಮೂದಿಸಲಾದ ಕೆಲವು ದೃಷ್ಟಾಂತಗಳಿಂದ ಅರಿಯಬಹುದಾಗಿದೆ. ಉಪಾಧಿಗೆ ಸಂಬಂಧಿಸಿದ ದಾಖಲೆಗಳು, ಮುಖ್ಯವಾಗಿ ಧಾರ್ಮಿಕ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತವೆಯಾದರೂ, ಕೆಲವೊಮ್ಮೆ, ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳ ಚಿತ್ರಣವನ್ನೂ ನೀಡುತ್ತವೆ.

ಶಾಲಿವಾಹನ ಶಕವರ್ಷ ೧೬೦೨ನೆಯ ರೌದ್ರಿ ಸಂವತ್ಸರದ ಭಾದ್ರಪದ ಬಹುಳ, ದಶಮಿ (೭-೯-೧೬೮೦)ಯಂದು ಶೃಂಗೇರಿಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳು[4] ಹರಕೆರಿ ರಾಮೇಶ್ವರ ದೇವರ ಪರಿಚಾರಕತನದ ಉಪಾಧಿಯನ್ನು ಹರಿತ್ಸ ಗೋತ್ರದ, ಆಪಸ್ತಂಭ ಸೂತ್ರದ, ಯಜುಃಶಾಖೆಯ ಸೂರಯನ ಮಗ ವೆಂಕಟಪತಿಗೆ ಪಾಲಿಸಿದರೆಂದು ಕಡತದಲ್ಲಿಯ ನಿರೂಪದಿಂದ ತಿಳಿದುಬರುತ್ತದೆ.[5] ರಾಮೇಶ್ವರ ದೇವರ ಪರಿಚಾರಕತನದ ಉಪಾಧಿಗೆ ಸಂಬಂಧಿಸಿ, ಅಮೃತಪಡಿ, ದಧ್ಯಾನ್ನ, ನಂದಾದೀಪ್ತಿ, ರಂಗಮಂಟಪ ದೀಪ್ತಿ, ಎಣ್ಣೆ ಮರ್ಜನ ಮೊದಲಾದ ಸೇವೆಗಳನ್ನು ನಡೆಸಬೇಕಾಗುತ್ತಿತ್ತು. ನಿತ್ಯಸೇವೆಯ ಹೊರತಾಗಿ, ಕಾರ್ತಿಕ, ಶಿವರಾತ್ರೆ, ಯುಗಾದಿ, ವಸಂತ, ಗೋಕುಲಾಷ್ಟಮಿ, ವಿನಾಯಕ ಚೌತಿ, ಅನಂತ ಚತುರ್ದಶಿ, ಮಹಾನವಮಿ, ಮೊದಲಾದ ವಿಶೇಷ ಉತ್ಸವಗಳನ್ನು ನೆರವೇರಿಸುವ ಜವಾಬ್ದಾರಿಯು ವೆಂಕಟಪತಿಯದಾಗಿತ್ತು. ಇಂಥ ವಿಶೇಷ ಸಂದರ್ಭಗಳಲ್ಲಿ. ಎಷ್ಟೆಷ್ಟು ಪ್ರಮಾಣದ ಅಕ್ಕಿ, ಎಣ್ಣೆ, ಉಪ್ಪು, ತುಪ್ಪ, ಅಡಕೆ, ವೀಳ್ಯದೆಲೆ, ಹಣ್ಣು, ಕಾಯಿ, ಬೆಲ್ಲ, ಬಿಲ್ವಪತ್ರೆ, ಮುಂತಾದ ಸಾಮಗ್ರಿಗಳನ್ನು ಉಪಯೋಗಿಸಲಾಗುತ್ತಿತ್ತು ಎಂಬುದರ ವಿವರವೂ ದೊರೆಯುತ್ತದೆ. ಬೇರೆ ಬೇರೆ ಸಾಮಗ್ರಿಗಳ ಪ್ರಮಾಣ ಮತ್ತು ಅವುಗಳ ನಿಗದಿತ ಬೆಲೆಯನ್ನೂ ನಿರೂಪವು ತಿಳಿಸುತ್ತದೆ. ಉದಾಹರಣೆಗಾಗಿ ಶಿವರಾತ್ರೆ ಉತ್ಸವಕ್ಕೆ ಸಂಬಂಧಿಸಿ, ಒಂದು ಬೇಳೆ ಬೆಲೆಯ ನಾಲ್ಕು ಪಡಿ ಅಕ್ಕಿಯನ್ನು ಉಪಯೋಗಿಸಲಾಗುತ್ತಿತ್ತು. ಅದರಂತೆ, ಯುಗಾದಿ ಉತ್ಸವದಂದು, ಒಂದು ಬೇಳೆ ಬೆಲೆಯ ನಾಲ್ಕು ಪಡಿ ಅಕ್ಕಿ ಮತ್ತು ಒಂದು ವಿಸ ಬೆಲೆಯ ಇಪ್ಪತ್ತುಬಾಳೆಹಣ್ಣುಗಳನ್ನುಉಪಯೋಗಿಸಲಾಗುತ್ತಿತ್ತು.

---

3 ಕ (ಕಡತ) ೧೩೪, ದಾ. (ದಾಖಲೆ) ೮೦ ;
ಕ. ೧೦೧, ದಾ. ೨೯ ;
ಕ. ೨೫, ದಾ. ೪, ೨೨ ;
ಕ. ೭೯, ದಾ. ೧೧ ;
ಕ. ೧೧, ದಾ. ೧೧೩, ೧೨೬ ;
ಕ. ೪೫, ದಾ. ೯೭ ;
ಕ. ೧೮೪, ದಾ. ೨೪, ಇತ್ಯಾದಿ

4 ಶೃಂಗೇರಿ ಜಗದ್ಗುರು ಪರಂಪರೆಯಲ್ಲಿ ೨೬ನೆಯವರಾದ ಆರನೆಯ ನರಸಿಂಹ ಭಾರತಿಗಳು (ಕ್ರಿ.ಶ. ೧೬೬೩-ಕ್ರಿ.ಶ. ೧೭೦೫)

5 ಕ. ೧೩೪, ದಾ. ೮೦

ಹರಕೆರಿ ರಾಮೇಶ್ವರ ದೇವರ ಪರಿಚಾರಕತನದ ಉಪಾಧಿಯನ್ನು ವಹಿಸಿಕೊಂಡಿದ್ದಕ್ಕಾಗಿ, ಹರಕೆರಿ ಗ್ರಾಮ ದಿಂದ ಪ್ರತಿವರ್ಷ ೧೨ ವರಹ, ೩ ಹಣ ಮತ್ತು ೧ ಮುಪಾಗವನ್ನು ಸಂಗ್ರಹಿಸುವ ಅಧಿಕಾರವನ್ನು ವೆಂಕಟ ಪತಿಗೆ ನೀಡಲಾಗಿತ್ತು.[6] ಪರಿಚಾರಕತನದ ಉಪಾಧಿ ಯನ್ನು ವಹಿಸಿಕೊಂಡಿದ್ದಕ್ಕಾಗಿ ವೆಂಕಟಪತಿಯು ಶೃಂಗೇರಿ ಮಠಕ್ಕೆ ೯ ಗದ್ಯಾಣ(ವರಹ)ಗಳನ್ನು ಕಾಣಿಕೆಯಾಗಿ ನೀಡಿದನು. ಶೃಂಗೇರಿಯ ಶ್ರೀ ಶಾರದಾಂಬೆಯ ಸನ್ನಿಧಿ ಯಲ್ಲಿ ಶಾರದಾ ಸಹಸ್ರನಾಮ ನಡೆಸುವದಕ್ಕೋಸ್ಕರ, ಶ್ರೀ ಮದಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳು[7] ವೈಕುಂಠಪುರದ ವಿಶ್ವೇಶ್ವರ ಭಟ್ಟರಿಗೆ ಶಕ ೧೬೭೦, ಪ್ರಭವ ಸಂವತ್ಸರ, ಕಾರ್ತಿಕ ಬಹುಳ, ೧೩ (೧೯–೧೧–೧೭೪೭)ರಂದು, ಕಿಕುಂದದಲ್ಲಿಯ ೧೨ ವರಹಗಳ ಗದ್ದೆ ಮತ್ತು ಅಡಕೆ ತೋಟದ ಸ್ವಾಸ್ತೆಯನ್ನು ಪಾಲಿಸಿದರು.[8] ೩೭॥ ಖಂಡುಗ ಭತ್ತದ ಗದ್ದೆಯ ಬೆಲೆ ೩॥೨॥ ಗದ್ಯಾಣ ಗಳೆಂದೂ, ೭೫೦ ಅಡಕೆ ಮರಗಳನ್ನೊಳಗೊಂಡ ತೋಟದ ಬೆಲೆ ೮-೨॥ ಎಂದೂ ತಿಳಿದು ಬರುತ್ತದೆ. ಈ ರೀತಿ ಯಾಗಿ ಒಟ್ಟೂ ಭೂಮಿಯ ಬೆಲೆ ೧೨ ಗದ್ಯಾಣಗಳು.

ಶಕ ೧೬೭೫, ಆಂಗಿರಸ ಸಂವತ್ಸರದ ಮಾಘ ಶುದ್ಧ, ಪಂಚಮಿ (೮–೨–೧೭೫೩)ಯಂದು ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತಿಗಳು ಕೊಲ್ಲೂರಿನ ಶ್ರೀ ಜನಾರ್ದನ ದೇವಸ್ಥಾನದ ಉಪಾಧಿಯನ್ನು ಬಿದ ರೂರಿನ ಕನ್ನಾನದ ಮರಿಭಟ್ಟರಿಗೆ ಪಾಲಿಸಿದರು.[9] ಮರಿಭಟ್ಟರು ಶೃಂಗೇರಿ ಮಠಕ್ಕೆ ೭೫ ವರಹಗಳನ್ನು ಕಾಣಿಕೆಯಾಗಿ ಸಲ್ಲಿಸಿದರು. ತಮಗೆ ದೊರೆತ ಭೂಮಿಯ ಉತ್ಪನ್ನದಿಂದ ಮರಿಭಟ್ಟರು ಜನಾರ್ದನ ದೇವರ ನಿತ್ಯ ಪೂಜೆ, ಅಮೃತಪಡಿ, ಮೊದಲಾದ ಧಾರ್ಮಿಕ ಕಾರ್ಯ ಗಳನ್ನು ವರ್ಷಪೂರ್ಣ ಸಾಗಿಸಿದರು. ಬೇರೆ ಬೇರೆ ಸಂದರ್ಭಗಳಲ್ಲಿ ಎಷ್ಟೆಷ್ಟು ಬೆಲೆಯ ಎಷ್ಟೆಷ್ಟು ಸಾಮಗ್ರಿ ಗಳನ್ನು ಬಳಸಲಾಗುತ್ತಿತ್ತೆಂಬುದರ ಮಾಹಿತಿಯೂ ನಿರೂಪದಲ್ಲಿ ಲಭಿಸುತ್ತದೆ.

ಶ್ರೀಮುಖ ಸಂವತ್ಸರದ ಕಾರ್ತೀಕ ಶು. ೨ (೨೮–೧೦–೧೭೫೩)ಯಂದು, ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತಿಗಳು ಕೊಲ್ಲೂರು ಮೂಕಾಂಬಿಕೆಯ ಸನ್ನಿಧಿಯಲ್ಲಿ ನಡೆಯುವ ರುದ್ರಾಭಿಷೇಕದ ಉಪಾಧಿ ಯನ್ನು ಕೆರಾಡಿಯ ಸಂಕಯ್ಯಗೆ ಪಾಲಿಸಿದರು. ಸಂಕಯ್ಯನು ಶೃಂಗೇರಿ ಮಠಕ್ಕೆ ಕಾಣಿಕೆಯಾಗಿ ೧೦ ವರಹ ಗಳನ್ನು ನೀಡಿದನು.[10]

ಉಪಾಧಿಗೆ ಸಂಬಂಧಿಸಿದ ಇನ್ನೊಂದು ನಿರೂಪ ವನ್ನು ಕೊನೆಯದಾಗಿ ಉದಾಹರಿಸಬಹುದು. ಶಕ ೧೭೧೨, ಸೌಮ್ಯ ಸಂವತ್ಸರ, ಶ್ರಾವಣ ಶುದ್ಧ ಪಂಚಮಿ (೨೭–೭–೧೭೮೯)ಯಂದು, ತೃತೀಯ ಶ್ರೀ ಸಚ್ಚಿದಾ ನಂದ ಭಾರತಿಗಳು, ಶೃಂಗೇರಿಯ ಶ್ರೀ ವಿದ್ಯಾಶಂಕರ ದೇವಾಲಯದಲ್ಲಿಯ ಶ್ರೀ ದುರ್ಗಾದೇವತೆಯ ಉಪಾಧಿ ಯನ್ನು, ಆದಿನಾರಾಯಣ ಭಟ್ಟರ ಪುತ್ರರಾದ ವೈದ್ಯ ನಾಥಭಟ್ಟರಿಗೆ ಪಾಲಿಸಿದರು. ವೈದ್ಯನಾಥಭಟ್ಟರು ಶೃಂಗೇರಿ ಮಠಕ್ಕೆ ೪ ವರಹಗಳನ್ನು ಕಾಣಿಕೆಯಾಗಿ ಸಲ್ಲಿಸಿ ದರು. ಅವರಿಗೆ ಮಠದಿಂದ, ಪ್ರತಿವರ್ಷ ೪ ವರಹ ಸಂಬಳವನ್ನು ನೀಡಲಾಗುತ್ತಿತ್ತು.[11]

ಈ ರೀತಿಯಾಗಿ, ದೇವಸ್ಥಾನಗಳಲ್ಲಿ ಪೂಜೆ ಪುನಸ್ಕಾರ, ಮತ್ತಿನ್ನಿತರ ಸೇವೆಗಳನ್ನು ಸಲ್ಲಿಸಲೆಂದು, ಪೂಜಾರಿಗಳಿಗೆ ಶೃಂಗೇರಿ ಜಗದ್ಗುರುಗಳು ಭೂದಾನ,

---

6 ವರಹ (ಗದ್ಯಾಣ), ಹೊನ್ನು, ಹಣ, ಮುಪಾಗ, ಅಡ್ಡ, ಹಾಗ, ಬೇಳೆ, ವಿಸ, ಅರೆವಿಸ ಮತ್ತು ಕಾಸು, ಇವು ಶೃಂಗೇರಿ ಧರ್ಮ ಸಂಸ್ಥಾನದ ನಾಣ್ಯಗಳು. ವಿಜಯನಗರ ಮತ್ತು ಕೆಳದಿ ರಾಜ್ಯದಲ್ಲಿಯ ನಾಣ್ಯಪದ್ಧತಿಯೇ ಶೃಂಗೇರಿ ಧರ್ಮಸಂಸ್ಥಾನದಲ್ಲಿಯೂ ಜಾರಿಯಲ್ಲಿತ್ತು

7 ಪ್ರಥಮ ಶ್ರೀಅಭಿನವಸಚ್ಚಿದಾನಂದಭಾರತಿಗಳು (ಕ್ರಿ.ಶ. ೧೭೪೧-ಕ್ರಿ.ಶ. ೧೭೬೭) ಜಗದ್ಗುರು ಪರಂಪರೆಯಲ್ಲಿ ೨೮ನೆಯವರು

8 ಕ. ೨೫, ದಾ. ೪

9 ಕ. ೧೧, ದಾ. ೧೧೩

10 ಕ. ೧೧, ದಾ. ೧೨೬

11 ಕ. ೧೮೪, ದಾ. ೨೪

ಇಲ್ಲವೆ ವಾರ್ಷಿಕ ಸಂಬಳ ನೀಡುತ್ತಿದ್ದರೆಂದೂ ಪೋಲ್ಕಾಣಿಸಿದ ಕೆಲವು ನಿರೂಪಗಳು ಖಚಿತಪಡಿಸುತ್ತವೆ. ನಿತ್ಯ ಪೂಜೆಯ ಹೊರತಾಗಿ, ವಿಶೇಷ ಸಂದರ್ಭಗಳಲ್ಲಿ ವಿಶೇಷ ಸೇವೆಗಳನ್ನು ಪೂಜಾರಿಗಳು ಸಲ್ಲಿಸುತ್ತಿದ್ದರೆಂದು ತಿಳಿದು ಬರುತ್ತದೆ. ಧರ್ಮಶಾಸ್ತ್ರದಲ್ಲಿ ನಮೂದಿಸಲಾದ ಸೂತ್ರಗಳಂತೆ ಧರ್ಮಕಾರ್ಯಗಳನ್ನು ಜರುಗಿಸಲಾಗುತ್ತಿತ್ತು. ಜನರಿಗೆ ದೇವರಲ್ಲಿ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ನಂಬುಗೆ ಇತ್ತು. ಒಟ್ಟಿನಲ್ಲಿ ಜಗದ್ಗುರುಗಳು ಧರ್ಮರಕ್ಷಕರಾಗಿದ್ದು, ಅದಕ್ಕೆ ಸಂಬಂಧಿಸಿದ ಕಾರ್ಯಗಳನ್ನು ವಿಧಿಪತ್ತಾಗಿ ನಡೆಸಿಕೊಂಡು ಹೋಗುವ ಜವಾಬ್ದಾರಿ ಹೊಂದಿದವರಾಗಿದ್ದರು.

ಉಪಾಧಿಗೆ ಸಂಬಂಧಿಸಿದ ಕಡತದಲ್ಲಿಯ ಒಂದು ದಾಖಲೆ :

ಕ. ೧೮೪, ದಾ. ೨೪

ಪು. ೫೫

ಸಾ.

೧ ವಯಿದ್ಯನಾಥ ಭಟ್ಟರಿಗೆ ಪಾಲಿಸ್ತ ಶಂಕರ ದೇವರ ।
೨ ಉಪಾಧಿ ನಿರೂಪ ಪ್ರತ್ತಿ ।
೩ ನಮಸ್ತುಂಗ ಬರದು ಶಾಲಿವಾಹನ ಶಕ ವರುಷ ೧೭೧೨ನೆಯ ವರ್ತ್ತ
೪ ಮಾನಕೆ ಸಲುವ । ಸಉಂಮ್ಯ ಸಂವತ್ಸರದ । ಶ್ರಾವಣ ಶು ೫ಲು । ಚಿಕ ಬಿ ।
೫ ರದಾವಳಿ ಬರದು । ಶ್ರಿಂಗೆರಿ ಶ್ರೀ ಸಚ್ಚಿದಾನಂದ ಭಾರತ್ತಿ ಸ್ವಾಮಿಗಳವರು ।
೬ ಕಾಶಿಪ ಗೊತ್ರದ । ಆಪಸ್ತಂಭ ಸೂತ್ರದ ಯಜುಃ ಶಾಖೆಯ । ಕ್ರುಷ್ಣ
೭ ಪಾಟಿ । ವೆಂಕಟಾವಧಾನಿ ಪಉತ್ರನಾದ । ಆದಿನಾರಾಯಣ ಭಟ್ಟನ ಪು ।
೮ ತ್ರನಾದ । ವೈದ್ಯನಾಥ ಭಟ್ಟಗೆ ಪಾಲಿಸ್ತ ಉಪಾಧಿ ನಿರೂಪದ ಕ್ರಮು ।
೯ ವೆಂತ್ತೆಂದರೆ । ಶ್ರೀ ವಿದ್ಯಾಶಂಕರ ದೇವರಲ್ಲು । ದುರ್ಗಾದೆವತ್ತೆ ಬಳೆಯಲ್ಲು
೧೦ ನಡವ ಉಪಾಧಿಯು ಉಳಕಲಾಗಿ । ಬಂದ ಸಂಮಂದ । ಯೊದೆವಿ ಮಹತ್ಮೆ ಉ ।
೧೧ ಪಾಧಿಯಂನ್ನು ನಿನಗೆ । ಪಾಲಿಸ್ತೆವಾಗಿ । ಯೀ ಉಪಾಧಿಗೆ ಸಲುವ । ಸಂಬಳ
೧೨ ಗ ೪ ನಾಲ್ಕು ವರಹಾನ್ನು ತ್ತೆಗೆದುಕೋಂಡು । ಯೀ ಉಪಾಧಿಯಂನ್ನು ಸಾಂಗವಾ
೧೩ ಗಿ । ಮಾಡ್ಡಿಕೊಂಡು ನಿನ್ನು ನಿಂನ ಸಂತ್ತಾನ ಪಾರಂಪರೆ । ಯಾಗಿ । ಅನ್ನುಭ ।
೧೪ ವಿಸಿಕೊಂಡು ಬಾಹದೆಂದು ನಿಂನ ಕೃಯ । ಶ್ರೀ ಮಠಕ್ಕೆ ಕಾಣಿಕ್ಕೆಯಾಗಿ ।

ಪು. ೫೬

ಸಾ.

೧ ಗ ೪ ನಾಲ್ಕು ವರಹಾನ್ನು ತೆಗೆದುಕೊಂಡು ಪಾಲಿಸ್ತ ಉಪಾಧಿ ನಿರೂಪ ।
೨ ನಾಗರದಲ್ಲು ಶ್ರೀಕಾರದ ವಪಾ ಹಾಕಿ ಅದೆ ।
೩ ಯೀ ನಿರೂಪ ಬರದಾತ್ತ ಸೆ । ರಾವುಚಂದ್ರ್ರಯ ।

ಡಾ॥ ಎಫ್. ಟಿ. ಹಳ್ಳಿಕೇರಿ*

# ಎಮ್ಮೆಯ ಬಸವ : ಕೆಲವು ಸಂಗತಿಗಳು

ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಶಿವ ಶರಣರ ಸಮಗ್ರ ಕ್ರಾಂತಿಯ ತರುವಾಯ ವೀರಶೈವ ಧರ್ಮ, ತತ್ವ, ಸಾಹಿತ್ಯ, ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದು ಅವುಗಳಿಗೆ ಪುನಶ್ಚೇತನ ನೀಡಿ, ಮುನ್ನಡೆಸುವ ಕಾರ್ಯ ವಿಜಯನಗರ ಅರಸರ ಕಾಲದಲ್ಲಿ ತುಂಬ ವ್ಯಾಪಕವಾಗಿ ನಡೆಯಿತು. ಈ ಸಮಯದಲ್ಲಿದ್ದ ನೂರೊಂದು ವಿರಕ್ತರು, ಏಳನೂರೊಂದು ವಿರಕ್ತರು ತಮ್ಮ ಶ್ರದ್ಧೆ, ನಿಷ್ಠೆ, ಅವಧಾನಗಳಿಂದ ವೀರಶೈವ ಸಾಹಿತ್ಯ ಸಂಪತ್ತನ್ನು ಸಂಗ್ರಹ, ಸಂಕಲನ, ಸಂಪಾದನ ಎಂಬ ಮೂರು ಹಂತಗಳಲ್ಲಿ ರಕ್ಷಿಸುವ ಜವಾಬ್ದಾರಿಯನ್ನು ಹೊತ್ತುಕೊಂಡರು. ಇದಕ್ಕೆ ಪೂರಕವಾಗಿ ವೀರಶೈವ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬರುವಲ್ಲಿ ಇನ್ನೂ ಒಂದು ಬಗೆಯ ಪ್ರಯತ್ನ ಕರ್ನಾಟಕದಲ್ಲಿ ನಡೆದು ಬಂದಿರುವುದನ್ನು ಕಾಣುತ್ತೇವೆ. ದೇಶಭಕ್ತರೂ, ತ್ರಿಕಾಲಜ್ಞಾನಿಗಳೂ ಆದ ಮಹಾತ್ಮರು, ಅನುಭಾವಿಗಳು ಈ ಪ್ರಯತ್ನವನ್ನು ತುಂಬಾ ಮುಕ್ತ ಮನಸ್ಸಿನಿಂದ ಸಾಧಿಸಿದ್ದಾರೆ. ಇವರು ತಮ್ಮ ಜ್ಞಾನಶಕ್ತಿಯ ಬಲದಿಂದ ಮುಂದೆ ದೇಶಕ್ಕೆ ಬರಬಹುದಾದ ಆಪತ್ತುಗಳನ್ನು ವಿವರಿಸುತ್ತಾ, ಅವುಗಳನ್ನು ನಿವಾರಿಸಲು ರಾಜರಿಗೆ, ಜನತೆಗೆ ಸೂಕ್ತ ಸಮಯದಲ್ಲಿ ಎಚ್ಚರ ಕೊಡುವರು. ಅಂದಿನ ಜನಸಮೂಹದ ಪ್ರತಿನಿಧಿಗಳಾದ ಈ ಅನುಭಾವಿಗಳು ಮುಸ್ಲಿಮರ ದಬ್ಬಾಳಿಕೆಯ ಕಾಲದಲ್ಲಿ ಜನತೆಯನ್ನು ಭಯದ ವಾತಾವರಣದಿಂದ ಮುಕ್ತಗೊಳಿಸಿ, ದೇಶದಲ್ಲಿ ಶಾಂತಿ, ನೆಮ್ಮದಿ ನೆಲಸುವಂತೆ ಹೋರಾಡಿದ್ದಾರೆ. ತಮ್ಮ ಆಚಾರ, ತತ್ವ, ಸಾಹಿತ್ಯಗಳಿಂದ ಜನಮನದ ಹೃದಯದಲ್ಲಿ ನಿತ್ಯಹಸಿರಾಗಿದ್ದಾರೆ.

ಇಂಥ ಮಹಾನುಭಾವಿಗಳ ಸಾಲಿನಲ್ಲಿ "ಎಮ್ಮೆಯ ಬಸವ" ಎಂಬ ಕಾಲಜ್ಞಾನಿ ಪ್ರಮುಖನಾಗಿದ್ದಾನೆ.[1] ೧೬ನೇಯ ಶತಮಾನದಲ್ಲಿ ಬಾಳಿದ ಹಂಪೆಯ ಸಮೀಪವಿರುವ ಜಂಬುಕೇಶ್ವರನ ಪರಮ ಭಕ್ತನಾದ ಈತ ತ್ರಿಕಾಲಜ್ಞಾನಿಯೂ, ವೀರಶೈವಾಗಮಜ್ಞನೂ, ಆಗಿ ಮೆರೆದಿದ್ದಾನೆ. ಕಾಲಜ್ಞಾನ ವಚನಗಳನ್ನು ಬರೆಯುವುದರ ಜೊತೆಗೆ 'ಬಿಲ್ಲಮರಾಯನ ಸಾಂಗತ್ಯ'ವೆಂಬ ಕೃತಿಯನ್ನೂ ರಚಿಸಿದ್ದಾನೆ.[2] ಪ್ರಸ್ತುತ ಸಂಪ್ರಬಂಧದಲ್ಲಿ ಈತನ ಹೆಸರು, ಕಾಲ, ಸ್ಥಳ ಮುಂತಾದ ಕೆಲವು ಸಂಗತಿಗಳನ್ನು ಕುರಿತು ಶಿಷ್ಟಪದ ಮತ್ತು ಜಾನಪದ ಆಕರಗಳ ನೆರವಿನಿಂದ ವಿವೇಚಿಸಲಾಗಿದೆ.

**ಹೆಸರು :** ಯಮ್ಮೆ ಬಸವೇಂದ್ರ,[3] ಎಮ್ಮೆಯ

---

* ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಕಮಲಾಪುರ, ಬಳ್ಳಾರಿ ಜಿ. ೫೮೩೨೧೧

1 ಈತನ ಬಗೆಗೆ ಅಧ್ಯಯನ ಮಾಡಲು ಸೂಚಿಸುವುದಲ್ಲದೆ, ಸೂಕ್ತ ಸಲಹೆಯನ್ನು ನೀಡಿದವರು ನನ್ನ ವಿದ್ಯಾ ಗುರುಗಳಾದ ಡಾ॥ ಎಂ. ಎಂ. ಕಲಬುರ್ಗಿಯವರು ಅವರಿಗೆ ನನ್ನ ಕೃತಜ್ಞತೆಗಳು

2 ಮೇಲ್ನೋಟಕ್ಕೆ 'ಸಾಂಗತ್ಯ'ವೆಂಬ ಹೆಸರಿದ್ದರೂ ಇದು ಷಟ್ಪದಿಯಲ್ಲಿದೆ. ಈ ಕೃತಿಯ 'ಬಿಲ್ಲಮರಾಯ'ನೆಂಬ ಶಿವಭಕ್ತನ ಚರಿತ್ರೆಯನ್ನು ನಿರೂಪಿಸುತ್ತದೆ

3 'ಎಪಿಗ್ರಾಫಿಯಾ ಕರ್ನಾಟಿಕ' ಸಂ. ೩, ಪು. ೨೧೪

ಬಸವರಾಜ,[4] ಎಮ್ಮೆಯ ಬಸವಣ್ಣಯ್ಯ,[5] ಎಮ್ಮೆ ಬಸಪ್ಪತಾತ[6] ಎಂದು ಕರೆಯಿಸಿಕೊಳ್ಳುವ ಈತನ ನಿಜ ನಾಮವೇನು ? ಎಂಬ ಪ್ರಶ್ನೆ ಇಲ್ಲಿ ಎದುರಾಗುತ್ತದೆ. ಶಿವಶರಣ ಸಂಪ್ರದಾಯದವನಾದ ಈತ ಎಮ್ಮೆಯ ಹಿಂಡುಗಳನ್ನು ಕಾಯುವ ಕಾಯಕದಲ್ಲಿರಬೇಕೆಂದು ಕಾಣುತ್ತದೆ. ಶಿವಶರಣರಲ್ಲಿ ಕೆಲವರು ತಾವು ಕೈಕೊಂಡ ಕಾಯಕವನ್ನೇ ತಮ್ಮ ಹೆಸರಿನೊಂದಿಗೆ ಸೇರಿಸಿ, ಕರೆದು ಕೊಂಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.[7] "ಎಮ್ಮೆಗಳ ಜಂಗುಳಿಯ ಕಾಯುತ್ತ ಬಸವಯ್ಯ" ಎಂದು ಸಿದ್ಧನಂಜೇಶನು ಈತನನ್ನು ಕುರಿತು ಹೇಳಿದ್ದಾನೆ.[8] ಆದ್ದರಿಂದ ಈತನ ಮೂಲ ಹೆಸರು 'ಬಸವ' ಎಂದಿದ್ದು, 'ಎಮ್ಮೆಯ' ಎಂಬ ಅಂಕಿತಪದ ಸೇರಿ 'ಎಮ್ಮೆಯ ಬಸವ'ನಾಗಿರಬೇಕು. ಈತನ ಹೆಸರಿನ ಬಗೆಗೆ ಜನಪದರ ಅಭಿಪ್ರಾಯವೊಂದು ಹೀಗಿದೆ.[9] ಒಬ್ಬ ಮುದುಕಿಯು ತನ್ನ ಎಮ್ಮೆಯ ಹಾಲನ್ನು ಈತನ ಮಠಕ್ಕೆ ದಿನಾಲು ಕೊಡುತ್ತಿದ್ದಳು. ಆದರೆ ಒಂದು ದಿನ ಇದ್ದಕ್ಕಿದ್ದಂತೆ ಎಮ್ಮೆಯು ಸಾವನ್ನಪ್ಪಿತು. ಎಮ್ಮೆ ಬಸವನು ಅದನ್ನು ಬದುಕಿಸಿದ. ಇದರಿಂದ ಈತನಿಗೆ 'ಎಮ್ಮೆಯ ಬಸವ'ನೆಂಬ ಹೆಸರು ಬಂದಿತು." ಈ ಹೇಳಿಕೆ ಆತನ ಬಗೆಗಿರುವ ಗೌರವ ಭಕ್ತಿಗಳ ದ್ಯೋತಕವೆನ್ನಬಹುದು.

ಕಾಲ : ಎಮ್ಮೆಯ ಬಸವನ ಕಾಲದ ಬಗೆಗೆ ಕೆಲವು ಆಧಾರಗಳು ಲಭಿಸುತ್ತಿದ್ದು, ಅವುಗಳನ್ನು ಹೀಗೆ ವಿವೇಚಿಸಬಹುದು.

೧. "ನರಸಿಂಗರಾಯನ ಹಿರಿಯ ಕುಮಾರನು ಹುಯ್ಯಲೆ ಡಂಗುರವ ಅರಸುತನಕೆ ಇನ್ನು ಕಡೆಗಾಲ ವಾದೀತು"

"ಮುಸಲ್ಮಾನರು ಅಚ್ಯುತರಾಯ ಕೃಷ್ಣರಾಯರ ಅರಮನೆಗಳನ್ನು ಸುಟ್ಟಾರು"

"ಅಚ್ಯುತನ ವಂಶವು ಮೊದಲೆದ್ದು ಹೋಯಿತು" ಎಂಬ ಹೇಳಿಕೆಗಳು ಈತನ ಕಾಲಜ್ಞಾನ ವಚನಗಳಲ್ಲಿ ಬಂದಿವೆ. ಅಂದರೆ ನರಸಿಂಗರಾಯನ ಹಿರಿಯ ಕುಮಾರ ವೀರನರಸಿಂಹ (೧೫೦೬–೧೫೦೯), ಕೃಷ್ಣದೇವರಾಯ (೧೫೦೯–೧೫೩೦), ಅಚ್ಯುತರಾಯ (೧೫೩೦–೧೫೪೨)ರ ಕಾಲದಲ್ಲಿ ಎಮ್ಮೆಯ ಬಸವನು ಇದ್ದನೆಂಬುದು ತಿಳಿದುಬರುತ್ತದೆ. ಈ ಹೇಳಿಕೆಗಳನ್ನು ಆಧರಿಸಿ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು "ಎಮ್ಮೆ ಬಸವಣ್ಣನು ಕ್ರಿ.ಶ. ೧೫೦೯ರಲ್ಲಿ ಪ್ರಾಪ್ತವಯಸ್ಕನಾಗಿದ್ದನು ಎಂದೂ, ಕೊನೆಯ ಪಕ್ಷ ೧–೨–೧೫೪೩ರವರೆಗೂ ಜೀವಿಸಿದ್ದನು" ಎಂದು ಅಭಿಪ್ರಾಯಪಟ್ಟಿದ್ದಾರೆ.[10]

೨. ನಂಜನಗೂಡಿನ ತಾಮ್ರಪಟ ಶಾಸನವೊಂದರಲ್ಲಿ ವಿಜಯನಗರ ಮಂಡಲೇಶ್ವರ ಸಕಲರಾಜನ ಪುತ್ರ ತಿರುಮಲರಾಯನು ಎಮ್ಮೆಬಸವನಿಗೆ ಕೊಮರಕೆರೆ ಎಂಬ ಗ್ರಾಮವನ್ನು ದತ್ತಿ ನೀಡಿದ ಉಲ್ಲೇಖವಿದೆ.[11] ಈ ಶಾಸನದ ಕಾಲ ಕ್ರಿ.ಶ. ೧೫೪೩. ಅಂದರೆ ವಿಜಯನಗರ ಅರಸ ಸದಾಶಿವರಾಯ (೧೫೪೩–೧೫೭೧)ನ ಕಾಲದಲ್ಲಿ ಈತ ಪ್ರಸಿದ್ಧಿಗೆ ಬಂದಿರಬಹುದು.

೩. ಗುರುರಾಜ ಚಾರಿತ್ರದಲ್ಲಿ ಸಿದ್ಧನಂಜೇಶನು ನೂತನ ಪುರಾತನರ ಕಥೆಗಳಲ್ಲದೆ 'ವರ್ತಮಾನದೊಳು ಮೆರೆವ ಭಕ್ತರ ಕಥೆ'ಯನ್ನು ನಿರೂಪಿಸಿದ್ದಾನೆ. ಈ ಭಕ್ತರ ಸಾಲಿನಲ್ಲಿ 'ಎಮ್ಮೆಯ ಬಸವ'ನೂ ಒಬ್ಬನಾಗಿ

---

4 'ಗುರುರಾಜ ಚಾರಿತ್ರ' ೧೩–೯೬

5 ಅದೇ, ೧೩–೯೯

6 ಬಳ್ಳಾರಿ ಜಿಲ್ಲೆಯ ಕುಡಿತಿನಿ ಗ್ರಾಮದಲ್ಲಿ ಈತನ ಹೆಸರಿನ ಮಠವೊಂದಿದ್ದು, ಅದನ್ನು ಎಮ್ಮೆ ಬಸಪ್ಪತಾತನ ಮಠವೆಂದು ಕರೆಯುತ್ತಾರೆ. ಶ್ರೀ ಎಸ್. ಶಿವಣ್ಣ ಅವರು 'ಕುಡಿತಿನಿ ಬಸವೇಶ ದಂಡಕ'ವೆಂಬ ಲಘು ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ (ಬಸವಪಥ ೩-೩)

7 ಹಡಪದ ಅಪ್ಪಣ್ಣ, ತುರುಗಾಹಿ ರಾಮಣ್ಣ, ಆಯ್ದಕ್ಕಿ ಮಾರಯ್ಯ ಮುಂತಾದವರನ್ನು ಇಲ್ಲಿ ಹೆಸರಿಸಬಹುದು

8 'ಗುರುರಾಜ ಚಾರಿತ್ರ' ೧೩–೯೭

9 ಕೊಂಚಿಗೇರಿ ಮತ್ತು ಕುಡಿತಿನಿ ಗ್ರಾಮಕ್ಕೆ ನಾನು ಭೇಟಿಯಿತ್ತಾಗ ಅಲ್ಲಿಯ ಜನರು ಈ ಅಭಿಪ್ರಾಯವನ್ನು ಹೇಳಿದರು

10 ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ಪು. ೮೫

11 'ಎಪಿಗ್ರಾಫಿಯಾ ಕರ್ನಾಟಿಕ' ಸಂ. ೩, ಪು. ೨೧೧

ದ್ದಾನೆ.[12] ಸಿದ್ಧನಂಜೇಶನ ಕಾಲ ೧೬ನೆಯ ಶತಮಾನದ ಉತ್ತರಾರ್ಧ. ಇದರಿಂದ ಎಮ್ಮೆಯ ಬಸವನು ಸಿದ್ಧನಂಜೇಶನ ಕಾಲದಲ್ಲಿದ್ದನೆಂಬ ಅಂಶ ಸ್ಪಷ್ಟವಾಗುತ್ತದೆ.

"ಎಮ್ಮೆ ಬಸವಣ್ಣ ತಪ್ಪು ಇಮ್ಮಡಿ ಬಸವಣ್ಣ ಡಂಗುರ ಸಾರಲು ಬಂದೀನಿ" ಎಂದು ತಿಂಥಿಣಿ ಮೋನಪ್ಪಯ್ಯ ತನ್ನ ವಚನವೊಂದರಲ್ಲಿ ಹೇಳಿಕೊಂಡಿದ್ದಾನೆ.[13] ತಿಂಥಿಣಿ ಮೋನಪ್ಪಯ್ಯನಕ್ಕಿಂತ ಪೂರ್ವದವನೆಂಬುದು ಇದರಿಂದ ವಿದಿತವಾಗುತ್ತದೆ.

೪. ಆರ್. ನರಸಿಂಹಾಚಾರ್,[14] ಡಾ॥ ಎಂ. ಎಂ. ಕಲಬುರ್ಗಿ,[15] ಡಾ॥ ವಿ. ಶಿವಾನಂದ,[16] ಡಾ॥ ಹಂಪನಾ[17] ಮೊದಲಾದ ವಿದ್ವಾಂಸರು, ಸಂಶೋಧಕರು ಎಮ್ಮೆಯ ಬಸವನ ಕಾಲ ಕ್ರಿ.ಶ. ೧೫೪೩ ಎಂದು ಅಭಿಪ್ರಾಯಪಟ್ಟಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈತನ ಕಾಲ ಕ್ರಿ.ಶ. ೧೫೪೩ ಎಂದು ಸೂಚಿಸಲಾಗಿದೆ.[18]

ಮೇಲಿನ ಎಲ್ಲ ಅಭಿಪ್ರಾಯಗಳನ್ನು ಅವಲೋಕಿಸಿದಾಗ ಎಮ್ಮೆಯ ಬಸವನು ವಿಜಯನಗರ ಅರಸರಾದ ವೀರನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರ ಆಳ್ವಿಕೆಯ ಸಮಯದಲ್ಲಿದ್ದು, ೧೬ನೆಯ ಶತಮಾನದ ಪ್ರಾರಂಭದಿಂದ ಕೊನೆಯ ಭಾಗದವರೆಗೂ ಇದ್ದನೆಂದು ಹೇಳಬೇಕಾಗುತ್ತದೆ.

**ಸ್ಥಳ :** ಈತನ ಜನ್ಮಸ್ಥಳದ ಬಗೆಗೆ ಎಲ್ಲಿಯೂ ಉಲ್ಲೇಖವಿಲ್ಲ. ಆದರೆ ತನ್ನ ಕಾಲಜ್ಞಾನ ವಚನಗಳ ಮುಖಾಂತರ ದೇಶಕ್ಕೆ ಮುಂದೊದಗಬಹುದಾದ ಆಪತ್ತುಗಳ ಬಗೆಗೆ ರಾಜರಿಗೆ ಸೂಚನೆ ಕೊಡುತ್ತ, ವಿಜಯನಗರ ಸಾಮ್ರಾಜ್ಯದಲ್ಲಿದ್ದು, ಜಂಬುಕೇಶ್ವರನ ಭಕ್ತನಾಗಿ ಇದ್ದದ್ದು ಮಾತ್ರ ನಮಗೆ ಕಂಡುಬರುತ್ತದೆ. ಕೊಮಾರಕೆರೆ ಎಂಬ ಗ್ರಾಮವನ್ನು ತಿರುಮಲರಾಯನಿಂದ ದತ್ತಿಯಾಗಿ ಪಡೆದುಕೊಂಡ ಮೇಲೆ, ಅಲ್ಲಿಯೇ ಬಹುಕಾಲ ನೆಲಸಿರಬಹುದು. ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲೂಕಿನ 'ಕೊಂಚಿಗೇರಿ' ಗ್ರಾಮವೇ[19] ಆಗಿನ ಕೊಮಾರಕೆರೆ. ಇಲ್ಲಿ ಎಮ್ಮೆಯಬಸವನ ಸಮಾಧಿಯಿದ್ದು, ಪಕ್ಕದಲ್ಲಿಯೇ ಗುರು ಜಂಬುಕೇಶ್ವರನ ದೇವಾಲಯವೂ ಇದೆ.[20] ಈಗಲೂ ಈ ಊರಿನಲ್ಲಿ ಮಕ್ಕಳಿಗೆ 'ಎಮ್ಮೆಯ ಬಸವ' ಎಂಬ ಹೆಸರನ್ನಿಡುವ ಪದ್ಧತಿ ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಆದ್ದರಿಂದ ಎಮ್ಮೆಯ ಬಸವನು ಕೊಂಚಿಗೇರಿಯಲ್ಲಿ ಬಹಳ ಕಾಲದವರೆಗೂ ಇದ್ದನೆಂದು ಹೇಳಬೇಕಾಗುತ್ತದೆ. ಬಳ್ಳಾರಿಯ ಸಮೀಪ 'ಕುಡಿತಿನಿ' ಗ್ರಾಮದಲ್ಲಿಯೂ ಈತನ ಹೆಸರಿನ ಮಠವೊಂದಿದ್ದು, ಅದಕ್ಕೆ 'ಎಮ್ಮೆಯಬಸಪ್ಪತಾತನವರ ಮಠ'ವೆಂದು ಕರೆಯಲಾಗುತ್ತಿದೆ. ರಾಯಚೂರು ಜಿಲ್ಲೆಯ ಯಲಬುರ್ಗಾ ತಾಲೂಕಿನ ಮಂಗಳೂರಿನಲ್ಲಿಯೂ ಈತನ ಹೆಸರಿನ ಮಠವಿದೆಯೆಂದು ತಿಳಿದುಬಂದಿದೆ. ಆಂಧ್ರ ಪ್ರದೇಶದ ರಾಯದುರ್ಗ, ಕಲವಳ್ಳಿ, ಆದೋನಿಗಳಲ್ಲಿಯೂ, ತಮಿಳುನಾಡಿನ ಕುಂಭಕೋಣಂದಲ್ಲಿಯೂ ಈತನ ಹೆಸರಿನ ಮಠಗಳಿವೆಯೆಂದು ತಿಳಿದುಬಂದಿದೆ.

---

12 'ಗುರುರಾಜ ಚಾರಿತ್ರ' ೧೩-೯೬ ರಿಂದ ೧೦೪

13 'ತಿಂಥಿಣಿ ಮೋನಪ್ಪಯ್ಯನ ವಚನಗಳು' ವ. ಸಂ. ೪೮

14 'ಕರ್ನಾಟಕ ಕವಿ ಚರಿತೆ' ಭಾಗ-೨, ಪು. ೧೮೩

15 'ಶಾಸನಗಳಲ್ಲಿ ಶಿವಶರಣರು' ಪು. ೧೪೩

16 'ಗೌರವ' (ಸಂ. ಶಿ. ಭೂಸನೂರಮಠ ಅಭಿನಂದನ ಗ್ರಂಥ) ಪು. ೧೭೬

17 'ಸಾಂಗತ್ಯ ಕವಿಗಳು' (ಸಾ. ಸಾ. ಚರಿತ್ರೆ ಸಂ. ೯) ಪು. ೨೧೩

18 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಸಂ. ೪-೨, ಪು. ೯೩೭

19 ನಂಜನಗೂಡಿನ ಶಾಸನ (E. C. Vol. III. ಪು. ೨೧೪) ದಲ್ಲಿ ಈ ಗ್ರಾಮದ ಸೀಮೆಯನ್ನು ಹೇಳಲಾಗಿದೆ. ದಕ್ಷಿಣ ಭಾಗಕ್ಕೆ ಹಗಲೂರು, ಸಿಂದಗೆರೆ, ಗಣಕೆಹಾಳು, ಉತ್ತರ ಭಾಗಕ್ಕೆ ಕುರುಬರ ಬೋರಹಳ್ಳಿ. ಪೂರ್ವಕ್ಕೆ ಬಸವಪುರ, ದರವೂರು, ಪಶ್ಚಿಮಕ್ಕೆ ಬೋರಹಳ್ಳಿ ಗ್ರಾಮಗಳಿಂದ ಸುತ್ತುವರಿಯಲ್ಪಟ್ಟಿದೆ ಕೊಂಚಿಗೇರಿ ಗ್ರಾಮ

20 ಈ ಊರಿನಲ್ಲಿ ಈತನ ಪ್ರಭಾವ ದಟ್ಟವಾಗಿ ಕಂಡುಬರುತ್ತಿದೆ. ಎಮ್ಮೆಗಳಿಗೆ ಕಾಯಿಲೆ ಬಂದರೆ. ಈತನ ದೇವಾಲಯಕ್ಕೆ ದೀಪ ಹಚ್ಚಿದರೆ, ಮತ್ತೆ ಆ ಎಮ್ಮೆಗಳು ಗುಣಮುಖ ಹೊಂದುತ್ತವೆಯೆಂದು ಅಲ್ಲಿಯ ಜನರ ನಂಬಿಕೆಯಾಗಿದೆ. ಅಲ್ಲಿಯ ಶ್ರೀ ಅರಳೇಕಲ್ಲ ಮಲ್ಲನಗೌಡರು ಶ್ರೀ ಎಮ್ಮೆಯ ಬಸವೇಶ್ವರನನ್ನು ಕುರಿತಂತೆ ಭಕ್ತಿಯ ಹಾಡುಗಳನ್ನು ರಚಿಸಿ ಪ್ರಕಟಿಸಿದ್ದಾರೆ

'ರಕ್ಕಸಿಯಲ್ಲವೆ ಕೊಕ್ಕಸಿ' ಎಂಬ ಆತನ ಕಾಲಜ್ಞಾನ ವಚನದ ಅಂತ್ಯದಲ್ಲಿ 'ಬಸವಣ್ಣನವರ ಮಠ' ಎಂದಿದೆ. ಇವೆಲ್ಲ ಅಂಶಗಳನ್ನು ಗಮನಿಸಿದಾಗ ಎಮ್ಮೆಯ ಬಸವನು ಮಠಾಧಿಪತಿಯೂ ಆಗಿರಬೇಕೆಂದು ಕಂಡುಬರುತ್ತದೆ. ಇದಕ್ಕೆ ಸಾಕ್ಷಿಯೆನ್ನುವಂತೆ ಕೊಂಚಿಗೇರಿ, ಕುಡಿತಿನಿ, ರಾಯದುರ್ಗ ಮುಂತಾದ ಕಡೆ ಮಠಗಳಿರುವುದನ್ನು ಇಲ್ಲಿ ಎತ್ತಿ ಹೇಳಬಹುದು. ಆರ್. ನರಸಿಂಹಾಚಾರ್ ಅವರು 'ಹಂಪೆ'ಯೇ ಈತನ ಸ್ಥಳವಾಗಿರಬೇಕೆಂದು ಹೇಳುವರಾದರೂ ಮೂಲತಃ ಹಂಪೆಯ ಸುತ್ತಮುತ್ತಲ ಪ್ರದೇಶದವನಾಗಿದ್ದ ಇವನು ವಿಜಯನಗರ ಅರಸನಿಂದ ಕೊಮರಕೆರೆ (ಕೊಂಚಿಗೇರಿ) ಗ್ರಾಮವನ್ನು ದತ್ತಿಯಾಗಿ ಸ್ವೀಕರಿಸಿ, ಅಲ್ಲಿಯೇ ಹಲವು ಕಾಲವಿದ್ದು, ದೇಶಸಂಚಾರ ಕೈಕೊಂಡು ಜನಜಾಗ್ರತಿಯುಂಟು ಮಾಡಿದವನು. ಕೊನೆಗೆ ಕೊಮರಕೆರೆಗೆ ಬಂದು ಐಕ್ಯನಾಗಿರಬಹುದು ಎಂಬ ತೀರ್ಮಾನಕ್ಕೆ ಬರಬಹುದು. ವ್ಯಾಪಕ ಕ್ಷೇತ್ರಕಾರ್ಯ, ಸಮಗ್ರ ಅಧ್ಯಯನ ನಡೆದಾಗ ಈತನ ಬಗೆಗೆ ಹೊಸ ಹೊಸ ಸಂಗತಿಗಳು ಹೊರಬರಬಹುದು.*

---

* ಈ ಸಂಪ್ರಬಂಧವನ್ನು ಸಿದ್ಧಪಡಿಸುವಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ಶ್ರೀ ಎಸ್. ಶಿವಣ್ಣ ಅವರು ತುಂಬ ನೆರವಾಗಿದ್ದಾರೆ ಅವರಿಗೆ ಕೃತಜ್ಞತೆಗಳು

ಡಾ॥ ಜಿ. ವಿ.ಕಲ್ಲಾಪುರ*

# ಕೆಳದಿ ಅರಸರ ಸಂಸ್ಕೃತ ಕೃತಿಗಳು

ಕೆಳದಿ ಸುಮಾರು ಇನ್ನೂರಐವತ್ತು ವರ್ಷಗಳ ಕಾಲ ಸ್ವತಂತ್ರವಾಗಿ ಮೆರೆದ ರಾಜ್ಯ. ಹಿರಿಯ ವೆಂಕಟಪ್ಪ ನಾಯಕನ ಕಾಲದಲ್ಲಿ (ಕ್ರಿ.ಶ. ೧೫೮೨) ಸಂಪೂರ್ಣ ಸ್ವತಂತ್ರ ರಾಜ್ಯವಾದ ನಂತರ ವಿಜಯನಗರ ಸಾಮ್ರಾಜ್ಯದ ಶೈಲಿಯಲ್ಲಿ ನಡೆದು ಬಂದಿರುವುದು ಇತಿಹಾಸ ಪ್ರಸಿದ್ಧವಾದ ವಿಚಾರ. ಸುಮಾರು ಹದಿನೇಳು ಜನ ಅರಸರು ಕೆಳದಿ ರಾಜ್ಯವನ್ನಾಳಿರುವರು. ಅವರೆಲ್ಲರೂ ವೀರರು, ಶೌರ್ಯವಂತರು, ದಾನಶೀಲರು, ಸರ್ವಧರ್ಮ ಸಮನ್ವಯಿಗಳು ಹಾಗೂ ಒಂದಿಲ್ಲೊಂದು ರೀತಿಯಲ್ಲಿ ಸಾಹಿತ್ಯ ಪೋಷಕರು, ಕವಿಜನಾಶ್ರಯರೂ ಆಗಿದ್ದರು. ಈ ಅರಸರ ಆಳ್ವಿಕೆಯಲ್ಲಿ ಆಶ್ರಯ ಪಡೆದ ಅನೇಕ ಮಂದಿ ವಿದ್ವಾಂಸರುಗಳು ಸಂಸ್ಕೃತ[1] ಮತ್ತು ಕನ್ನಡ[2] ಭಾಷೆಯಲ್ಲಿ ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಕೆಳದಿ ಅರಸರಲ್ಲಿ ಮೂರು ಜನರು ಸ್ವತಃ ಕವಿಗಳೂ ಆಗಿ ಸಂಸ್ಕೃತದಲ್ಲಿ ವಿಶ್ವಕೋಶದಂತಹ ಸಾಹಿತ್ಯ ಕೃತಿಗಳನ್ನು ರಚಿಸಿರುವುದು ಗಮನಾರ್ಹ. ಅವರುಗಳೆಂದರೆ ಕ್ರಿ.ಶ. ೧೫೮೨ ರಿಂದ ೧೬೨೯ ರವರೆಗೆ ಅರಸನಾಗಿದ್ದ ಹಿರಿಯ ವೆಂಕಟಪ್ಪನಾಯಕ, ಕ್ರಿ.ಶ. ೧೬೯೭ ರಿಂದ ೧೭೧೪ರವರೆಗೆ ನಾಯಕನಾಗಿದ್ದ ಹಿರಿಯ ಬಸವಪ್ಪನಾಯಕ, ಕ್ರಿ.ಶ. ೧೭೩೯ ರಿಂದ ೧೭೫೪ರವರೆಗೆ ಅಧಿಪತಿಯಾಗಿದ್ದ ಕಿರಿಯ ಬಸವಪ್ಪನಾಯಕ. ಈ ಮೂರು ಜನ ಅರಸರಿಂದ ರಚಿತವಾಗಿರುವ ಉಪಲಬ್ಧ ಸಂಸ್ಕೃತ ಸಾಹಿತ್ಯ ಕೃತಿಗಳ ಸಂಕ್ಷಿಪ್ತ ಪರಿಚಯವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಿ ಕೊಡಲಾಗಿದೆ.

**ಹಿರಿಯ ವೆಂಕಟಪ್ಪನಾಯಕ :** ಸ್ವಯಂ ಕವಿಯೂ, ಕವಿಜನಾಶ್ರಯನೂ ಆದ ಹಿರಿಯ ವೆಂಕಟಪ್ಪನು (ಕ್ರಿ.ಶ. ೧೫೮೨–೧೬೨೯) ಆಡಳಿತದಲ್ಲಿ ಎಷ್ಟು ದಕ್ಷನೊ, ಸಾಹಿತ್ಯವೇ ಮೊದಲಾದ ಕಲೆಗಳನ್ನು ಪ್ರೋತ್ಸಾಹಿಸುವಲ್ಲಿ ಅಷ್ಟೇ ಉತ್ಸಾಹಿ. ಈತನು ಕಲಿಯಾಗಿ ಖಡ್ಗ ಹಿಡಿದು ರಾಜ್ಯವಿಸ್ತರಣೆ ಮಾಡಿ ಸ್ವಾತಂತ್ರ್ಯ ಪಡೆದಿರುವುದರ ಜೊತೆ ಜೊತೆಗೆ ಕಂಠಹಿಡಿದು ಸಂಸ್ಕೃತದಲ್ಲಿ 'ಶಿವಗೀತಾವ್ಯಾಖ್ಯಾನ', 'ವೀರಮಾಹೇಶ್ವರಾಚಾರ ಸುಧಾವಾರ್ಧಿ', 'ತಂತ್ರಾಧಿಕಾರ ನಿರ್ಣಯಂ' ಮತ್ತು 'ಶಿವಾಷ್ಟಪದಿ' ಎಂಬ ಧರ್ಮಗ್ರಂಥಗಳನ್ನು ರಚಿಸಿದ್ದಾನೆ.

ವೆಂಕಟಾದ್ರಿಯು ಸಂಸ್ಕೃತದಲ್ಲಿ ಧರ್ಮಗ್ರಂಥಗಳನ್ನು ರಚಿಸಲ್ಕು ಈ ಒಂದು ಘಟನೆ ಪ್ರಮುಖ ಕಾರಣವಾಗಿದೆಯೆನ್ನಬಹುದು. ಇವನು ಸುಖದಿಂದ ರಾಜ್ಯವಾಳುತ್ತಿದ್ದ ಸಮಯದಲ್ಲಿ ತನ್ನ ಚಿಕ್ಕಪ್ಪನ ಮಗನಾದ ಸಿದ್ಧಪ್ಪನಾಯಕನು ಅಕಾಲಮೃತ್ಯು ಹೊಂದುತ್ತಾನೆ. ಇದರಿಂದ ಅತ್ಯಂತ ದುಃಖಿತನಾದ ಅರಸನಿಗೆ ಮಾನಸಿಕ ವೇದನೆಯುಂಟಾಗಿ ವೈರಾಗ್ಯ ಹುಟ್ಟಿತು. ನಂತರ ವೆಂಕಟಪ್ಪನು

* ಕೆಳದಿ ವಸ್ತುಸಂಗ್ರಹಾಲಯ, ಕೆಳದಿ ೫೭೭೪೦೧, ಶಿವಮೊಗ್ಗ ಜಿಲ್ಲೆ

1 ಜಿ. ವಿ. ಕಲ್ಲಾಪುರ, ಕೆಳದಿ ಅರಸರ ಆಳ್ವಿಕೆಯಲ್ಲಿ ಸಂಸ್ಕೃತ ಸಾಹಿತ್ಯ ಒಂದು ಸಮೀಕ್ಷೆ, ಮೈಸೂರು ವಿ.ವಿ.ಗೆ ಸಲ್ಲಿಸಿರುವ ಮಹಾಪ್ರಬಂಧ ಪು. ೩೪–೩೯ (ಅಪ್ರಕಟಿತ)

2 ಡಾ॥ ಸಾ.ಶಿ. ಮರುಳಯ್ಯ : ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಬೆಂಗಳೂರು ವಿ.ವಿ. ೧೯೮೦

ಆತ್ಮಜ್ಞಾನಕ್ಕೆ ಪ್ರಬೋಧಕವಾದ ಅಧ್ಯಾತ್ಮ ಶಾಸ್ತ್ರಗಳನ್ನು ಹಾಗೂ ಸಕಲ ನೀತಿಶಾಸ್ತ್ರಗಳನ್ನು ವಿದ್ವಾಂಸರಿಂದ ಕೇಳುತ್ತಾನೆ. ನಂತರ ತಿರುಮಲಭಟ್ಟರೆ ಮುಂತಾದ ವಿದ್ವಾಂಸರಿಂದ ಅನೇಕ ಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ.[3] ಈ ಘಟನೆಯೇ ಅವನಲ್ಲಿ ಧರ್ಮ ಗ್ರಂಥಗಳನ್ನು ರಚಿಸುವಲ್ಲಿ ಪ್ರೇರಣೆ ನೀಡಿದೆಯೆನ್ನ ಬಹುದು.

ಶಿವಗೀತಾವ್ಯಾಖ್ಯಾ :[4] 'ಸಾಹಿತ್ಯರತ್ನಾಕರ' ವೆಂಕಟಪ್ಪನಾಯಕನು ಪದ್ಮಪುರಾಣದಲ್ಲಿ ಬರುವ ಶಿವ ಗೀತೆಗೆ ವ್ಯಾಖ್ಯಾನವನ್ನು ಬರೆದಿರುವ ವಿಚಾರ ಕೆಳದಿ ಆಸ್ಥಾನ ಕವಿಗಳಾಗಿದ್ದ 'ಮರಿತೋಂಟದಾರ್ಯ'[5] ಮತ್ತು 'ಲಿಂಗಣ್ಣ'[6]ರ ಕೃತಿಗಳಿಂದ ತಿಳಿದುಬರುತ್ತದೆ. ಡಾ॥ ಸಾ.ಶಿ. ಮರುಳಯ್ಯನವರು 'ಶಿವಗೀತಾವ್ಯಾಖ್ಯಾನ' ಕೃತಿ ದೊರೆತಿಲ್ಲವೆಂದಿದ್ದಾರೆ.[7] ಅದರ ಅನೇಕ ಹಸ್ತಪ್ರತಿಗಳು ಉಪಲಬ್ಧವಿದ್ದು[8], ಲೇಖಕನ ಸ್ವಸಂಗ್ರಹದಲ್ಲಿಯೂ ಒಂದು ಹಸ್ತಪ್ರತಿಯಿದೆ. ಇದೊಂದು ಅಪ್ರಕಟಿತ ಕೃತಿ ಯಾಗಿದ್ದು, ವ್ಯಾಖ್ಯಾನ ಪ್ರೌಢವಾಗಿದೆ. ಈ ಮೇಲಿನ ಹಸ್ತಪ್ರತಿಯು ಕಾಗದದಲ್ಲಿದ್ದು ದೇವನಾಗರಿ ಲಿಪಿಯಲ್ಲಿ ಸ್ವಚ್ಛವಾಗಿ ಬರೆಯಲಾಗಿದೆ. ಇದರಲ್ಲಿ ೧೪೫ ಪಾನು ಗಳಿದ್ದು, ಪಾನಿನ ಒಂದು ಬದಿಯಲ್ಲಿ ೯ ಸಾಲುಗಳು, ಪ್ರತಿ ಸಾಲಿನಲ್ಲಿ ೪೩ ಅಕ್ಷರಗಳಿವೆ. ಅಳತೆ ೨೯.೨ × ೧೨.೫ ಸೆಂ.ಮೀ. ಗ್ರಂಥಾರಂಭದಲ್ಲಿ:

॥ ಶ್ರೀ ಗಣೇಶಾಯನಮಃ ॥
ಶುದ್ಧಾದ್ವೈತ ಸಮರ್ಥನೇ ಪಟುಮತೇಯಸ್ಯ ಪ್ರತಾಪಂ ಸತ್ಯ
ಚ್ಛೈತ್ವಾದ್ಯೈಕ್ಯಮಚಿಂ ಸದಾ ವಿದಧತೇ ತ್ಯಕ್ತೇಷಣಾ ಭೇದಿನಃ ॥
ಯದ್ದ್ರವ್ಯೇಷು ಗುಣೇಷು ಕರ್ಮಸು ತಥಾ ಜಾತೌ ವಿಶೇಷೇಷು ಚ
ಪೌಢಾಹಂಕೃತಯೋಥತ್ಯೈಃ ಸಹ ನಿಜಂ ಸಂಬಂಧಮು ದ್ವ್ಯಾಸ್ಯತೇ ॥ ೧ ॥

ಯತ್ಕೀರ್ತಿಂ ಕಲಹಂಸಕುಂದಧವಲಾಂ ಶ್ರುತ್ವಾ ಮಹೇಂದ್ರಾದಯೋ
ವಜ್ಞಾಮಾತ್ಮನಿ ಸಂತತಂ ವಿದಧತೇ ಲಜಾಭರ್ಯೈ-ಮಂಧರಾಃ ॥
ಶ್ರುತ್ವಾ ದೇವಗುರುರ್ಮಲೀಮಸಮನಾ ಯದ್ವೈಖರೀಂ ಜಾಯತೇ
ಸೋಯಂ ಶ್ರೀ ಕೆಲದೀಶ ವೆಂಕಟವಿಭುರ್ವವೇರ್ತಿ ಸರ್ವೋಪರಿ ॥ ೩. ॥

ಸೋಯಂ ಪದ್ಮಪುರಾಣಸ್ಥಾಂ ಷೋಡಷಾಧ್ಯಾಯ ನಿರ್ಮಿತಾಂ ।
ಶಿವಗೀತಾಂ ಶಿವಪ್ರೀತ್ಯೈ ವಿವೇಚಯತಿ ಸಾದರಂ ॥ ೪॥

ಪ್ರತಿ ಅಧ್ಯಾಯದ ಅಂತ್ಯದಲ್ಲಿ–"ಇತಿ ಶ್ರೀಮದ್ವಿ ಶುದ್ಧಾದ್ವೈತ ಸಿದ್ಧಾಂತ ಪ್ರತಿಷ್ಠಾಪನೈಕದುರಂಧರ ಶ್ರೀ ಕೆಲದೀಶ ವೆಂಕಟಾದ್ರಿನಾಯಕ ವಿರಚಿತಾಯಾಂ ಶ್ರೀ ಶಿವಗೀತವ್ಯಾಖ್ಯಾಯಾಂ...." ಎಂದಿದೆ.

ಶಿವಗೀತೆಯು ವ್ಯಾಸಪ್ರಣೀತವಾದ ಪದ್ಮ ಪುರಾಣದ ಒಂದು ಭಾಗ. ಕೃಷ್ಣಾರ್ಜುನರ ಸಂವಾದ ರೂಪದಲ್ಲಿರುವ ಭಗವದ್ಗೀತೆಯಂತೆ ಇದು ಅಗಸ್ತ್ಯ-ರಾಮರ ಸಂವಾದ ರೂಪವಾಗಿದೆ. ಭಗವದ್ಗೀತೆಯಂತೆ ಇದೂ ಮೋಕ್ಷಸಾಧಕವಾದ ಕೃತಿ. ರಾವಣನು ಸೀತೆ ಯನ್ನು ಅಪಹರಿಸಿದಾಗ ದುಃಖಿತಪ್ತನಾದ ಶ್ರೀರಾಮನು ಅಗಸ್ತ್ಯರ ಉಪದೇಶದಂತೆ ಈಶ್ವರನನ್ನು ಪೂಜಿಸಿ ಒಲಿಸಿ ಕೊಂಡು ಅವನ ಅನುಗ್ರಹದಿಂದ ಸೀತೆಯನು

3 ಕೆಳದಿ ಗುಂಡಾಜೋಯಿಸ್ : ಕೆಳದಿನೃಪವಿಜಯ, ಭಾವಾನುವಾದ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೭೭, ಪು. ೧೩೫

4 ಅನುಬಂಧ ೧ ನೋಡಿ

5 ವೀರಶೈವಾನಂದಚಂದ್ರಿಕಾ, ಕ್ರಿಯಾಕಾಂಡ, ಪ್ರಾಚ್ಯ ವಿದ್ಯಾ ಸಂಶೋಧನಾ ಸಂಸ್ಥೆ, ಮೈಸೂರು, ಹ.ಪು.ಸಂ. ಎ ೧೯೦, ಪು. ೬

6 ಗುರುವಂಶಕಾವ್ಯ, ವಾಣಿವಿಲಾಸ ಮುದ್ರಣ, ಶ್ರೀರಂಗಂ, ೧೯೬೬, ಪು. ೮೩

7 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಬೆಂಗಳೂರು ವಿ.ವಿ. ೧೯೮೦, ಪು. ೭೪, ಟಿಪ್ಪಣಿ ೧

8 ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ಹ.ಪು.ಸಂ. ೯೧ ರಿಂದ ೯೫ ; ಬಿ.ಒ.ಎಂ.ಎಲ್. ಮದ್ರಾಸ್, ಹ.ಪು. ಆರ್ ೧೮೭೯ ; ಭಂಡಾರಕರ್ ಸಂಸ್ಥೆ, ಪುಣೆ, ಹ.ಪು. ೨೫೩೪ ; ಮಂಜುನಾಥ ಸಂಸ್ಕೃತಿ ಸಂಶೋಧನಾಲಯದ ಹಸ್ತಪ್ರತಿ, ಧರ್ಮಸ್ಥಳ ; ಪ್ರಬಂಧ ಲೇಖಕನ ಬಳಿಯಿರುವ ಹಸ್ತಪ್ರತಿ

ಹೊಂದುವುದೇ ಶಿವಗೀತೆಯ ಪ್ರಮುಖ ವಿಷಯ. ಹದಿನಾರು ಅಧ್ಯಾಯಗಳಿಂದ ಕೂಡಿರುವ ಇದರಲ್ಲಿ ಭಕ್ತಿ, ವೈರಾಗ್ಯ, ಶಿವದೀಕ್ಷೆ, ಶಿವಾನುಗ್ರಹ, ವಿಶ್ವರೂಪದರ್ಶನ, ಪಿಂಡೋತ್ಪತ್ತಿ, ದೇಹಸ್ವರೂಪ, ಜೀವಸ್ವರೂಪ ಮತ್ತು ಗತಿ, ಉಪಸನಾವಿಧಿ, ಮುಕ್ತಿಲಕ್ಷಣ, ಸಗುಣ–ನಿರ್ಗುಣ ಉಪಾಸನೆ, ಭಕ್ತಿಯೋಗ, ಸರ್ವಸುಲಭ ಮೋಕ್ಷಮಾರ್ಗ ಮುಂತಾದ ವಿಷಯಗಳ ವಿವೇಚನೆಯಿದೆ. ಆಧ್ಯಾತ್ಮ ಭೂಯಿಷ್ಟವೂ, ನೀತಿಬೋಧಕವೂ, ಧರ್ಮಸ್ವರೂಪವೂ, ಇಹಪರ ಸಾಧಕವೂ ಪರಮೇಶ್ವರ ಪ್ರೋಕ್ತವೂ ಆದ ಶಿವಗೀತೆಗೆ ವೆಂಕಟಾದ್ರಿಯು ಅಮರಕೋಶ, ಉಪನಿಷತ್ತು ಇತ್ಯಾದಿ ಗ್ರಂಥಗಳ ವಾಕ್ಯಗಳೊಂದಿಗೆ ಪ್ರೌಢವಾದ ವ್ಯಾಖ್ಯಾನವನ್ನು ರಚಿಸಿದ್ದಾನೆ. ಅವನು ಯುದ್ಧಕಲೆ ಮತ್ತು ರಾಜನೀತಿಯಲ್ಲಿ ಕುಶಲನಾಗಿದ್ದಂತೆ. ಸಂಗೀತಾದಿ ಕಲಾನಿಪುಣನೂ, ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಪರಿಣತನೂ ಆಗಿದ್ದನು. ಕೆಳದಿ ಲಿಂಗಣ್ಣ ಕವಿಯ ಈ ಪ್ರಶಸ್ತಿ ಬರಿಯ ಮುಖಸ್ತುತಿಯಾಗಿರದು ಎನಿಸುತ್ತದೆ.

> ಸರಸ ಸಂಗೀತಲೋಲಂ
> ನಿರುಪಮ ಕೌಶಲ್ಯ ವಿವಿಧ ಸಾಹಿತ್ಯವಿದಂ ॥
> ಸುರುಚಿರ ಸಕಲ ಕಲಾ ಸ
> ತ್ಪರಿಣತನೆಂದೆನಿಸಿ ವೆಂಕಟೋರ್ವಿಪನೆಸೆವಂ ॥9

**ವೀರಮಾಹೇಶ್ವರಾಚಾರಸುಧಾವಾರ್ಧಿ :** ಈ ಕೃತಿ ದೊರೆತಿಲ್ಲ. ಆದರೆ ಕೆಳದಿ ಆಸ್ಥಾನ ವಿದ್ವಾಂಸರಾಗಿದ್ದ ಚರಮೂರ್ತಿ ಬಸವಲಿಂಗದೇವರು (ಕ್ರಿ.ಶ. ೧೬೫೦) ಈ ಕೃತಿಗೆ ಬರೆದಿರುವ ಕನ್ನಡ ಟೀಕು ಉಪಲಬ್ಧವಿದ್ದು, ಅದರಲ್ಲಿ ಮೂಲ ಪಾಠವನ್ನು ಕೊಡಲಾಗಿದೆ.[10] ಅದರಿಂದ ವಿಷಯವನ್ನು ಸಂಗ್ರಹಿಸಲಾಗಿದೆ. ಇದು ಹದಿಮೂರು ಸ್ಥಲಗಳಿಂದ ಕೂಡಿರುವ ಉದ್ಗ್ರಂಥ. ಈ ಕೃತಿಯನ್ನು ವೀರಶೈವರ ಆಚಾರ–ವಿಚಾರಗಳನ್ನು ಬೋಧಿಸುವ ಅನೇಕ ಗ್ರಂಥಗಳಿಂದ ಸಂಬಂಧಪಟ್ಟ ವಾಕ್ಯಗಳನ್ನು ಸಂಗ್ರಹಿಸಿ ಸಂಪಾದಿಸಿರುವ ಕೃತಿಯೆನ್ನಬಹುದು. ಕೃತಿಕಾರನು 'ಯಜುರ್ವೇದದ ಪುರುಷಸೂಕ್ತ, ಶಂಕರಸಂಹಿತೆ, ಪಶುಪತಿ, ವಾತುಲಾಗಮ, ಕೂರ್ಮಪುರಾಣ, ಆದಿತ್ಯ ಪುರಾಣ, ಶಿವರಹಸ್ಯ, ಪಾರಮೇಶ್ವರಾಗಮ, ಗರುಡ ಪುರಾಣ, ವಾಸಿಷ್ಠ ರಾಮಾಯಣ, ವೀರಭದ್ರೀಯಾಗಮ ಇತ್ಯಾದಿ ಅನೇಕ ಗ್ರಂಥಗಳಿಂದ ವಾಕ್ಯಗಳನ್ನು ಸಂಗ್ರಹಿಸಿರುವಂತೆ ಕಂಡುಬರುತ್ತದೆ.

ಇದರಲ್ಲಿ ಪ್ರತಿಪಾದಿತವಾಗಿರುವ ಹದಿಮೂರು ಸ್ಥಲಗಳೆಂದರೆ :–೧. ಶಿವಮಹತ್ವಸ್ಥಲ, ೨. ಗುರುಸ್ಥಲ, ೩. ಲಿಂಗಸ್ಥಲ, ೪. ಜಂಗಮಸ್ಥಲ, ೫. ಪಾದೋದಕ ಮಹತ್ವಸ್ಥಲ, ೬. ಪ್ರಸಾದ ಮಹತ್ವಸ್ಥಲ, ೭. ವಿಭೂತಿ ಮಹತ್ವಸ್ಥಲ, ೮. ರುದ್ರಾಕ್ಷಿಮಹತ್ವಸ್ಥಲ, ೯. ಪಂಚಾಕ್ಷರೀ ಮಹತ್ವಸ್ಥಲ, ೧೦. ಶಿವದೀಕ್ಷಾ ಮಹತ್ವ, ೧೧. ಭಕ್ತಿಮಹತ್ವ, ೧೨. ಶಿವಪೂಜಾಮಹತ್ವ, ೧೩. ಷಟ್‌ಸ್ಥಲ ಮಹತ್ವ ಇವುಗಳನ್ನು ಹೇಳಿದೆ. ಈ ಕೃತಿ ಪೂರ್ಣವಾಗಿದ್ದು ಅಪ್ರಕಟಿತ.

ಗ್ರಂಥಾರಂಭದಲ್ಲಿ "....ಸಕಲ ಕಲಾಪ್ರವೀಣ ಶ್ರೀಮತ್ಕೆಳದೀ ಪುರಾಧಿನಾಯಕ ದೀಮತ್ಕಾಮಿತ ಫಲ ಪ್ರದಾಯಕ ರಾಜಾಧಿರಾಜ ಶ್ರೀ ಶಿವಭುವನಾದಿಪತಿ ವೆಂಕಟಾದ್ರಿಭೂಪಾಲೋ ವೀರಮಾಹೇಶ್ವರಾಚಾರಸುಧಾ ವಾರ್ಧೇಃ ವಿದ್ವದ್ಭಿಃ ಸಹ ಟೀಕಾಕರ್ತುಂ ಷಟ್‌ಸ್ಥಲಾಚಾರ ಚಕ್ರಿಗೋ ಬಸವಲಿಂಗ ದೇವಾನ್ನಃ ಸದ್ವಿನಯಭಕ್ತಿ ಮನೋಸಮನಿಜಾಪ್ರವೃತ್ತ ಶಿವವೆಂಕಟಭೂಪಾದಿ ಶಿವ ಭಕ್ತಿ ಸಿದ್ಧಯಃ........"[11] ಎಂದು ಹೇಳಿರುವುದರಿಂದ ವೆಂಕಟಪ್ಪನಾಯಕನು ಈ ಕೃತಿ ರಚಿಸಿರುವುದು ಸಿದ್ಧವಾಗುತ್ತದೆ. ಕೃತಿಕಾರನು ಇದರಲ್ಲಿ ಪ್ರಮುಖವಾಗಿ ಶಿವ ಧರ್ಮವನ್ನು, ವೀರಮಾಹೇಶ್ವರನನ್ನು ಭಕ್ತ್ಯಾದರಗಳಿಂದ ಕಾಣಬೇಕೆಂಬ ಮಹತ್ತರವಾದ ವಿಷಯವನ್ನು ಸಾರಿ ಹೇಳಿದ್ದಾನೆ. ಈ ಕೃತಿಯ ಬಗ್ಗೆ ಅನೇಕ ವಿಷಯಗಳನ್ನು ಚರ್ಚಿಸಬಹುದಾದರೂ ಲೇಖನ ವಿಸ್ತಾರಭಯದಿಂದ ನಿಲ್ಲಿಸಲಾಗಿದೆ.

ವೆಂಕಟಾದ್ರಿಯ ಕೃತಿಗಳಾದ 'ತತ್ವಾಧಿಕಾರ ನಿರ್ಣಯಂ' ಮತ್ತು 'ಶಿವಾಷ್ಟಪದಿ'ಗಳು ದೊರಕದಿರುವುದು ಸಂಸ್ಕೃತ ಸಾಹಿತ್ಯಕ್ಕಾದ ಅಪಾರ ನಷ್ಟ. ಆಡಳಿತದ

---

9 ಕೆಳದಿ ನೃಪ ವಿಜಯ, ಕನ್ನಡ ಸಾಹಿತ್ಯ ಪರಿಷತ್, ೧೯೭೭, ಪು. ೧೩೫–೧೩೮

10 ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಹ.ಪ್ರ.ಸಂ.ಕೆ. ೩೨೯

11 ಅದೇ.

ಜಂಜಾಟದ ಮಧ್ಯದಲ್ಲಿಯೂ ಸಂಸ್ಕೃತ ಸಾಹಿತ್ಯ ಕೃತಿಗಳನ್ನು ರಚಿಸಿರುವ ವೆಂಕಟಾದ್ರಿಯು ಅಮರನಾಗಿದ್ದಾನೆ.

ಹಿರಿಯ ಬಸವಪ್ಪನಾಯಕ : 'ಭಾರತೀ ನರ್ತನಸ್ಥಲ'ನೇದೇ ಖ್ಯಾತನಾದ ಬಸವಪ್ಪನಾಯಕನು (೧೬೯೮–೧೭೧೪) 'ಶಿವತತ್ತ್ವ ರತ್ನಾಕರ', 'ಸುಭಾಷಿತ ಸುರದ್ರುಮಂ' ಎಂಬ ಎರಡು ಸಂಸ್ಕೃತ ಕೃತಿಗಳನ್ನು ಮತ್ತು 'ಸೂಕ್ತಿ ಸುಧಾಕರ' ಎಂಬ ಗೀರ್ವಾಣ ಕರ್ನಾಟಕ ಭಾಷೆಯಲ್ಲಿ ನೀತಿ ಗ್ರಂಥವನ್ನು ರಚಿಸಿರುವುದಾಗಿ ಕೆಳದಿ ಕವಿ ಲಿಂಗಣ್ಣ[12] ಮತ್ತು ಮರಿತೋಂಟದಾರ್ಯರ[13] ಕೃತಿಗಳಿಂದ ತಿಳಿದುಬರುತ್ತದೆ. ಇವುಗಳಲ್ಲಿ 'ಶಿವತತತ್ತ್ವ ರತ್ನಾಕರ[14] ಪ್ರಕಟವಾಗಿದ್ದರೆ, 'ಸುಭಾಷಿತ ಸುರ ದ್ರುಮಂ' ಪ್ರಕಟವಾಗಿಲ್ಲ. 'ಸೂಕ್ತಿ ಸುಧಾಕರ' ಉಪಲಬ್ದ ವಿಲ್ಲದಿರುವುದು ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳಿಗಾದ ನಷ್ಟವೆನ್ನಬಹುದು.

ಶಿವತತ್ತ್ವ ರತ್ನಾಕರ : 'ಸೂರಿನಿಕರ ಕಲ್ಪ ದ್ರುಮ'ನೆಂಬ ಬಿರುದಾಂಕಿತನಾದ ಶ್ರೀ ಮತ್ಕೆಳದೀ ಬಸವಕ್ಷಿತೀಂದ್ರನು ರಚಿಸಿರುವ ಈ ಕೃತಿಯು ಒಂದು 'ವಿಶ್ವಕೋಶ'. ಇದನ್ನು ರಚಿಸಲು ಕೃತಿಕಾರನಿಗೆ ಸಂಸ್ಕೃತ ದಲ್ಲಿ ವಿಶ್ವಕೋಶದಂತಿರುವ ವೇದಗಳು, ರಾಮಾಯಣ, ಮಹಾಭಾರತ, ಪುರಾಣಗಳು, ತಂತ್ರಗಳು, ಸಾಮ್ರಾಜ್ಯ ಲಕ್ಷ್ಮೀ ಪೀಠಿಕಾ, ಯುಕ್ತಿಕಲ್ಪತರು, ವೀರಮಿತ್ರೋದಯ, ಮಾನಸೋಲ್ಲಾಸ,ಶಾರ್ಙ್ಗಧರ ಪದ್ಧತಿ, ಬೃಹತ್ ಸಂಹಿತಾ, ತೋದರಾನಂದ ಮುಂತಾದ ಕೃತಿಗಳು ಪ್ರೇರಣೆಯನ್ನು ನೀಡಿರಬಹುದೆಂದು ತೋರುತ್ತದೆ. ಕವಿಯು ಈ ಕೃತಿಯನ್ನು ಕ್ರಿ.ಶ.೧೭೦೯-೧೦ರಲ್ಲಿ ರಚಿಸಿರುವಂತೆ ಕಂಡು ಬರುತ್ತದೆ.[15] ಇದರಲ್ಲಿ ಒಂಭತ್ತು ಕಲ್ಲೋಲಗಳು, ನೂರಾಎಂಟು ತರಂಗಗಳು, ಮೂವತ್ತೈದು ಸಾವಿರ ಶ್ಲೋಕಗಳಿವೆ ಇದೊಂದು ಮಹಾಕೃತಿ.

ವಿಚಿತ್ರ ನಾನಾ ವಿಷಯಗಳಿಂದ ಕೂಡಿರುವ ಈ ಕೃತಿಯನ್ನು ಕರ್ತೃವು ಸ್ವತಃ ಅನೇಕ ವಿದ್ಯೆಗಳನ್ನು ಅಭ್ಯಾಸ ಮಾಡಿ, ಲೋಕದ ಹಿತಕ್ಕಾಗಿ ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಇದನ್ನು ತನ್ನ ಮಗನಾದ ಎರಡನೇ ಸೋಮಶೇಖರನಾಯಕನಿಗೆ ಉಪದೇಶಿಸಿರುವಂತೆ ಕಂಡು ಬರುತ್ತದೆ.

"ಲೋಕಾನಾಂತು ಹಿತಾಯ ಸಾರಕೆಲದೀ ಸಿಂಹಾಸನಾ
ಧೀಶ್ವರೋ
ಗೌರೀನಾಥ ಕೃಪಾರ್ಚಿತೇಖಿಲ ಕಲಾಪಾಂಡಿತ್ಯ ವಿಭ್ರಾಜಿತಃ।
ಕೃರ್ವೇಽಹಂ ಬಸವೇಂದ್ರ ಭೂಮಿರಮಣೋ
ರತ್ನಾಕರಾಖ್ಯಾಂ ಕೃತಿಂ
ಸರ್ವಂ ಪ್ರೇಕ್ಷ್ಯ ಚ ವಾಕ್ಯಪಂಚಮುಸಕೃತ್ ಪುತ್ರತ್ವಮಾ
ಕರ್ಣಯ ॥16

ಗ್ರಂಥಾಂತ್ಯದಲ್ಲಿ :

"ಸ್ವಾಭಿಷ್ಟದಾಯಿ ಕೆಳದೀತಿ ಸ್ಥಿತ ವೀರಭದ್ರಃ
ಮುದ್ರಾಬಲೇನ ಪರಿಪಾಲಯತಾಧರಿತ್ರೀಂ ।
ರಾಜಾಧಿರಾಜ ಕೆಳದೀ ಬಸವ ಕ್ಷಿತೀಂದ್ರ ರತ್ನೇನ
ಸಂವಿರಚಿತೇತಿ ಕೃತಿಃ ಪ್ರಪೂರ್ಣಃ ॥17

ಎಂದಿರುವುದರಿಂದ ಬಸವಪ್ಪನಾಯಕನು ಈ ಕೃತಿ ರಚಿಸಿರುವುದು ಸಿದ್ಧವಾಗುತ್ತದೆ.

ಶಿವತತ್ತ್ವರತ್ನಾಕರದಲ್ಲಿ–'ಕೆಳದಿ ವಂಶದ ವಿಚಾರ, ರಾಜ್ಯಾಡಳಿತ ಮತ್ತು ಸರ್ಕಾರಕ್ಕೆ ಸಂಬಂಧಿಸಿದ ವಿಚಾರ, ಸಮಕಾಲೀನ ಅರಸರ ವಿಚಾರ, ರಾಜತ್ವ, ರಾಜನ ಗುಣಗಳು, ಪ್ರಜೆಗಳ ರಕ್ಷಣೆ, ರಾಜ್ಯದ ವಿಂಗಡಣೆ, ತೆರಿಗೆ ಹಾಗೂ ಖಜಾನೆ, ಕಾನೂನು ಮತ್ತು ನ್ಯಾಯಾಡಳಿತ, ಕಲೆ ಹಾಗೂ ಶಿಲ್ಪಕಲೆ, ಅಲಂಕಾರ ಲಕ್ಷಣ ಮತ್ತು ವಿಶೇಷ, ನಗರ ನಿರ್ಮಾಣ, ದೇವಾಲಯ ನಿರ್ಮಾಣ, ಕಾವ್ಯ, ನಾಟಕ, ಛಂದಶಾಸ್ತ್ರ, ಆಯುರ್ವೇದ, ಪಾದರಸ

12 ಕೆಳದಿ ನೃಪ ವಿಜಯ, ಕನ್ನಡ ಸಾಹಿತ್ಯ ಪರಿಷತ್, ೧೯೭೭,
13 ವೀರಶೈವಾನಂದ ಚಂದ್ರಿಕಾ, ಕ್ರಿಯಾಕಾಂಡ. ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ಹ.ಪ್ರ.ಸಂ. ಎ. ೧೯೦, ಪು.೬
14 B.M. Nath & Company, Madras, 1957, Oriental Research Institute, Mysore Three Volumes, Vol. I, 1965, Vol. II, 1969, Vol. III, 1985
15 ಶಿವತತ್ತ್ವರತ್ನಾಕರ : (ORI) ಸಂ. ೨, ಪು. ೧೩, (ಪ್ರಸ್ತಾವನೆ)
16 ಅದೇ. ಸಂ. ೧, ಪು. ೧೪, ಶ್ಲೋಕ ೧೮
17 ಅದೇ. ಸಂ. ೩, ಪು. ೨೦೯

ಮತ್ತು ಇತರ ಜೈವಿಕಗಳಿಗೆ ಸಂಬಂಧಿಸಿದ ವಿಚಾರಗಳು, ವಿಷಗಳು ಮತ್ತು ವಿಷಶಾಸ್ತ್ರ, ಅಶ್ವ-ಗಜಶಾಸ್ತ್ರ, ರತ್ನ ಶಾಸ್ತ್ರ, ತೋಟಗಾರಿಕೆ, ಧನುರ್ವೇದ ಏಳು ರೀತಿಯ ಯುದ್ಧಗಳು, ಕಾಮಶಾಸ್ತ್ರ, ಸಪರಾಜ ಮತ್ತು ರಂಜನೆ, ಶಿಶುಪಾಲನೆ ಮತ್ತು ಸಂಸ್ಕಾರಗಳು ವಿದ್ಯಾರ್ಥಿ ಲಕ್ಷಣಗಳು, ಭೂಗೋಳ ಮತ್ತು ಜ್ಯೋತಿಶಾಸ್ತ್ರ, ಧರ್ಮ ಮತ್ತು ತತ್ವಶಾಸ್ತ್ರ ಮುಂತಾದ ಹಲವಾರು ವಿಷಯಗಳನ್ನು ಚರ್ಚಿಸಿದ್ದಾನೆ. ಈ ಕೃತಿಯ ಮತ್ತೊಂದು ವಿಶೇಷವೆಂದರೆ ಕೃತಿಕಾರನು ಪ್ರತಿಕಲ್ಲೋಲದ ಅಂತ್ಯದಲ್ಲಿ ತಾನು ಅವಲೋಕಿಸಿರುವ ಗ್ರಂಥಗಳ ಹೆಸರನ್ನು ಸೂಚಿಸಿರುವುದು. ಉದಾಹರಣೆಗೆ ವೀರಶೈವ ಶಿಖಾರತ್ನ, ಶೈವಾಮೃತ ಪುರಾಣ, ದಶಾಂಗ ಸೃಷ್ಟ್ಯುದ್ಧರಣ, ವೀರಶೈವಾಚಾರ, ಮಹಾಭಾರತ, ವರಾಹ-ಕೂರ್ಮ-ಸ್ಕಾಂದ ಇತ್ಯಾದಿ ಪುರಾಣಗಳು, ನಿಧಿಪ್ರದೀಪಿಕೆ, ಜ್ಯೋತಿಷಾರ್ಣವ, ಇತ್ಯಾದಿ ಅನೇಕ ಗ್ರಂಥಗಳನ್ನು ಹೆಸರಿಸಿರುವನು. ಈ ಕೃತಿಯ ವಿಷಯ ಸಂಪತ್ತಿನ ಬಗ್ಗೆ ವಿವರಿಸುತ್ತಾ ಹೋದರೆ ಒಂದು ಮಹಾ ಪ್ರಬಂಧವೇ ಆದೀತು. ಆದ್ದರಿಂದ ಲೇಖನವನ್ನು ವಿಸ್ತರಿಸದೆ, ಕರ್ತೃವೇ ತನ್ನ ಕೃತಿಯ ಬಗ್ಗೆ ಮಾಡಿ ಕೊಟ್ಟಿರುವ ಪರಿಚಯದೊಂದಿಗೆ ನಿಲ್ಲಿಸಲಾಗಿದೆ.

ಶಕ್ತಸ್ತ್ರರೀತುಂ ನಭವೇತ್‌ಪರ್ರೈರ್ಯಃ ಆದೇಯತಾಮಪ್ಯಖಿ
ಲಸ್ಯಥತ್ತ್ರೇ ।
ಸ ವಿಷಭೂಯಃ ಶಿವತತ್ತ್ವ ರತ್ನಾಕರಸ್ತಾಂ ಕೌತುಕ
ಮಾತನೋತು ॥ ೭ ॥
ದೋಷೈರೇಷ ವಿವರ್ಜಿತೋ ಘನಗುಣೈರಾಲಿಂಗತಃ ಸಪ್ರಭಃ
ಸದ್ವೃತೋ ಬಹುಲಾರ್ಥಯುಗ್ಮವಿಲಸತ್ಕಲ್ಲೋಲ
ರತ್ನಾನ್ವಿತಃ ॥
ಗ್ರನ್ಥೋಯಂ ಮಣಿಹಾರತ್ತವ ಶತೇನಾಪ್ನೋತ್ತ
ರೇಗಾಧುನಾ
ಗೌರೀನಾಥ ಭವೇತ್ತರಂಗಮಣಿಭಿರ್ವಿಭ್ರಾಜಿತೋ
ಭೂಷಣಮ್ ॥ ೮ ॥[18]

ಹೀಗೆ ಗ್ರಂಥಪರಿಚಯವನ್ನು ಮಾಡಿಕೊಟ್ಟು ತನ್ನ ಗ್ರಂಥವನ್ನು ಗೌರೀನಾಥನಿಗೆ ಸಮರ್ಪಿಸಿದ್ದಾನೆ.

**ಸುಭಾಷಿತ ಸುರದ್ರುಮಂ :** ಇದು ಅಪ್ರಕಟಿತ ಹಾಗೂ ವಿಶಿಷ್ಟ ರೀತಿಯಿಂದ ರಚಿತವಾಗಿರುವ ನೀತಿ ಗ್ರಂಥವಾಗಿದೆ. ಇದರ ಹಸ್ತಪ್ರತಿಗಳು ಶೃಂಗೇರಿ, ಮೈಸೂರು ಮತ್ತು ಪೂನಾಗಳಲ್ಲಿ ಹಂಚಿಹೋಗಿವೆ. ಇದರಲ್ಲಿ ಒಟ್ಟು ಐದು ಸ್ಕಂದಗಳಿದ್ದು, ಪ್ರತಿಯೊಂದು ಸ್ಕಂದಗಳನ್ನು ಅನೇಕ ಸ್ತಬಕಗಳನ್ನಾಗಿಯೂ, ಸ್ತಬಕ ಗಳನ್ನು ಕುಸುಮಗಳನ್ನಾಗಿಯೂ ವಿಂಗಡಿಸಲಾಗಿದೆ. ಇದರಲ್ಲಿ ಸುಮಾರು ಹದಿನೈದು ಸಾವಿರ ಶ್ಲೋಕಗಳಿರ ಬಹುದು.

ಪ್ರಥಮ ಸ್ಕಂದದ ಪ್ರಾರಂಭದಲ್ಲಿ ಶಿವ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಗೆ ನಮಸ್ಕಾರರೂಪ ಶ್ಲೋಕಗಳು ನಂತರ ಅವರಿಂದ ಆಶೀರ್ವಾದರೂಪ ಶ್ಲೋಕಗಳೂ ಇವೆ. ನಂತರ ಸುಮಾರು ನಲವತ್ತು ಶ್ಲೋಕಗಳಲ್ಲಿ ತನ್ನ ಪೂರ್ವಜರ ಚರಿತ್ರೆಯನ್ನು ವಿವರಿಸಿ ದ್ದಾನೆ. ವಿಶಿಷ್ಟಕವಿ ಪ್ರಶಂಸಾ ಸ್ತಬಕದಲ್ಲಿ ಅನೇಕ ಪೂರ್ವ ಕವಿಗಳ ಸ್ತುತಿಮಾಡಿರುವುದು ಗಮನೀಯ.[19] ಎರಡನೆಯ ಚಿತ್ರಾತ್ಮಕ ಸ್ಕಂದದಲ್ಲಿ ಹತ್ತು ಸ್ತಬಕಗಳಿದ್ದು, ಅನ್ಯೋಕ್ತಿ ಪ್ರಶಂಸಾ-ನಿಂದಾ, ದೇವತಾನ್ಯೋಕ್ತಿ, ತೇಜೋವಾಯ್ವಾಕಾಶಾನ್ಯೋಕ್ತಿ ಮತ್ತು ಸಜ್ಜನ ಪ್ರಶಂಸಾ, ದುರ್ಜನನಿಂದೆ, ಶಬ್ದಾರ್ಥಾಲಂಕಾರಗಳ ನ್ನೊಳಗೊಂಡ ಕುಮಾರಾವಸ್ಥೆಯಲ್ಲಿ ಕೇಳಲು ಯೋಗ್ಯ ವಾದ ಸುಭಾಷಿತಗಳಿವೆ.

ಮೂರನೆಯ ಸ್ಕಂದದ ಆರು ಸ್ತಬಕಗಳಲ್ಲಿ ದೇಶ, ನಗರ, ರಾಜಗೃಹ, ರಾಜಚರಿತ, ರಾಜವಿಹಾರ, ಕುಮಾರಾಭ್ಯುದಯ ವರ್ಣನೆಗೆ ಸಂಬಂಧಿಸಿದ ಯುವಾ ವಸ್ಥೆಯಲ್ಲಿ ಕೇಳಲು ಯೋಗ್ಯವಾದ ಸೌಂದರ್ಯ, ರಸ, ಆನಂದಾದಿಗಳ ವರ್ಣನೆಯ ಸುಭಾಷಿತಗಳಿವೆ. ನಾಲ್ಕನೆಯ ಸ್ಕಂದದ ಆರು ಸ್ತಬಕಗಳಲ್ಲಿ ವೈರಾಗ್ಯ ನಿರೂಪಣೆ, ಜಗದ್ವೈಚಿತ್ರ್ಯ, ಆತ್ಮನಿರ್ವೇದ, ಸಾಂಸಾರಿಕ ಸುಖಾನು ಭವ, ನಿಷೇಧ್ಯೋಪದೇಶ, ವಿನೇಯೋಪದೇಶ ಮತ್ತು

---

18 ಶಿವತತ್ತ್ವ ರತ್ನಾಕರ : (ORI) ಸಂ. ೩. ಪು. ೨೧೦

19 ಉದಾಹರಣೆಗೆ ಕೆಲವು ಕವಿಗಳನ್ನು ಹೆಸರಿಸಲಾಗಿದೆ—ವ್ಯಾಸ, ವಾಲ್ಮೀಕಿ, ಕಾಳಿದಾಸ, ದಂಡಿ, ಬಾಣ, ಮಯೂರ, ಶ್ರೀಹರ್ಷ, ಮಾಘ, ಮುರಾರಿ, ಜಯದೇವ, ಧನಂಜಯ, ಕೃಷ್ಣಕವಿ, ವ್ಯಾಸಭಾರತೀ, ಶಾಕಲ್ಯಮಲ್ಲ, ಕಲಿಂಗಕವಿ, ಸುದರ್ಶನ, ಕ್ಷೇಮೇಂದ್ರ, ಗುರುರಾಮ, ಅಪ್ಪಯ್ಯ ದೀಕ್ಷಿತ ಇತ್ಯಾದಿ

ಫಲಸ್ತಬಕಗಳಿಗೆ ಸಂಬಂಧಿಸಿದ ವಾರ್ಧಕ್ಯದಲ್ಲಿ ಕೇಳಲು ಯೋಗ್ಯವಾದ ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ಶಾಂತಿ ಇವುಗಳನ್ನು ಪರಿಪೋಷಿಸುವ ಸುಭಾಷಿತಗಳಿವೆ. ಕೊನೆಯದಾದ ಐದನೇ ಸ್ಕಂದದಲ್ಲಿ ಐದು ಸ್ತಬಕಗಳಲ್ಲಿ ವಿನಾಯಕಾದಿ ದೇವತೆಗಳು ವಿಷ್ಣು, ಗೌರಿ, ಶಿವ ಇತ್ಯಾದಿ ಪೂರ್ವಕವಿ ಉಕ್ತವಾದ ಸಮಸ್ತ ದೇವತಾ ಸ್ತುತಿರೂಪದ ಸುಭಾಷಿತಗಳಿವೆ. ಈ ಮೇಲಿನ ಎಲ್ಲ ವಿಷಯಗಳನ್ನು ತಿಳಿಸುವ ಶ್ಲೋಕಗಳನ್ನು ಕವಿಯು ಗ್ರಂಥಾರಂಭದಲ್ಲಿ ಹೇಳಿರುವುದನ್ನು ನೋಡಬಹುದಾಗಿದೆ.

"ಸ್ಕಂಧಾಃ ಕೃತೌಪಂಚ ಭವಂತ್ಯಥಾಧ್ಯೇತುಂ
ಆರಂಭಕಾಲೇ ಕೃತಿಭಿಃ ಕೃತೀನಾಂ ।
ಪಕ್ತ್ಯಾನಿರೂಪೇಗ್ರಥಿತಾನಿ ಯಾನಿ
ಪದ್ಯಾನಿತಾನೇ ಕಹಿ ಕೀರ್ತಯಾನಿ ॥ ೫೦ ॥

ಸ್ಕಂಧೇ ದ್ವಿತೀಯೇ ತು ಕುಮಾರಭಾವ
ಶ್ರಾವ್ಯಾಣಿ ಪದ್ಯಾಸುಗರ್ಪಣಯಾಮಿ ।
ಸ್ವಾನ್ಯಾತ್ಮ ದೇಶಾತ್ಮಕ ನೀತಿ ನಾನಾ
ಶಬ್ದಾರ್ಥ ಚಿತ್ರಾತ್ಮಕತಾಂ ಗತಾನಿ ॥ ೫೧ ॥

ಸ್ಕಂದೇ ತಥಾಷ್ಟದಶವರ್ಣನಾಂತಃ
ಗತಾನಿ ನಾನಾವಿಧ ವರ್ಣನಾನಿ ।
ಬ್ರವೀಮಿ ತಾರುಣ್ಯದಶಾಂತರಾಲ
ಶ್ರಾವ್ಯಾಣ ಭವ್ಯಾನಿ ಪರಂ ತೃತೀಯೇ ॥ ೫೨ ॥

ತುರ್ಯೇತು ವಾರ್ಧಕಗತಾ ಶ್ರವಣೋಚಿತಾನಿ
ಪದ್ಯಾನಿ ಶಾಂತರಸ ಪೋಷಕತಾಂ ಗತಾನಿ ।
ಸ್ಕಂಧೇ ವದಾಮಿ ಪರಮೇಽಖಿಲ ದೇವತಾನಾಂ
ಸ್ತೋತ್ರಾಣಿ ತಾನುದಿತಾನಿ ಪುರಾ ಮಹರ್ಷಿಃ ॥ ೫೩ ॥

ನಾನಾ ಕೃತಿರಿತಿ ಸುಭಾಷಿತ ಸಂಗ್ರಹಾತ್ಮಾ
ಪಂಚಭಿಸ್ಕಂದೈರಚಿತೋಽಯಂ ಮಹಾಪ್ರಬಂಧಃ ।
ಕುಮಾರ ಯುವವೃದ್ಧದಶಾಸ್ವವಹ್ಯಂ
ಯಶೋವಿಭವಾಭಿವೃದ್ಧ್ಯೈ ಶ್ರೋತೃಪ್ರಯೇನ
॥ ೫೪ ॥"

ಎಂದು ಗ್ರಂಥಪರಿಚಯ ಮಾಡಿಕೊಟ್ಟಿದ್ದಾನೆ.[20]

ಪ್ರತಿಸ್ಕಂದದ ಅಂತ್ಯದಲ್ಲಿ "...............ಕೋಟೇಕೋಲಾಹಲೈಕಾಂಗಿ ವೀರಮೋನೇಜ ದೋಖಂಡೇರಾಯ ಪಶ್ಚಿಮ ಸಮುದ್ರಾಧೀಶ್ವರ ಶ್ರೀಮತ್ಕೆಳದೀ ಬಸವ ಕ್ಷಿತೀಂದ್ರ ಸಂಗ್ರಹೀತೆ ಸುಭಾಷಿತ ಸುರದ್ರುಮ ಗ್ರಂಥಾರಂಭೋಚಿತ ನತ್ಯಾಶ್ರೀಃ ಪ್ರಶಂಸಾನಿಂದಾತ್ಮಕಃ........[21] ಎಂದಿದೆ.

ಈ ಗ್ರಂಥರಚನೆಯ ಉದ್ದೇಶವನ್ನು ಕುರಿತು ಕವಿಯು—

"ವಚೋವಿಲಾಸಿನಂ ದ್ವಿಧಾಯದಿಹ ಲಕ್ಷ್ಯಾಲಕ್ಷ್ಯಾತ್ಮಕಂ
ತಯೋಃ ಪ್ರಥಮಮೀರಿತಂ ಸ್ವಶಿವತತ್ತ್ವರತ್ನಾಕರೇ ।
ಪರಂ ವಿಶದಯೇ ಸುಧೀವನಮಿತೋ ವಿನೋದೇಚ್ಛಯಾ
ಸುಭಾಷಿತ ಸುರದ್ರುಮಂ ವಿರಚಯೆಚ್ಛ್ರುಣುತ್ವಂ
ಸುತ ॥"[22]

ಅಂದರೆ ಶಿವತತ್ತ್ವರತ್ನಾಕರದಲ್ಲಿ ಸಕಲಶಾಸ್ತ್ರ ಇತ್ಯಾದಿ ತಿಳಿಸಿರುವೆನು. ಪ್ರಸ್ತುತ 'ಸುಭಾಷಿತಸುರದ್ರುಮ'ವೆಂಬ ಈ ಗ್ರಂಥವನ್ನು ವಿದ್ವಾಂಸರ ಮನೋಚ್ಛೆಯಂತೆ ಅವರನ್ನು ಸಂತೋಷಗೊಳಿಸುವುದಕ್ಕಾಗಿ ರಚಿಸಿರುವೆನು, ಕೇಳು ಎಂದು ತನ್ನ ಮಗನಿಗೆ ಉಪದೇಶ ಮಾಡುತ್ತಿದ್ದಾನೆ. ಸಕಲ ವಿಷಯಸಾರವಾದ ಈ ಗ್ರಂಥವನ್ನು ಒಂದು 'ವಿಶ್ವಕೋಶ'ವೆಂದರೆ ಅತಿಶಯೋಕ್ತಿಯಾಗಲಾರದು. ಇಂತಹ ಮಹಾನ್ ಕೃತಿಗಳನ್ನು ರಚಿಸಿ ಸಂಸ್ಕೃತ ಸಾಹಿತ್ಯದ ಮೆರಗನ್ನು ಹೆಚ್ಚಿಸಿದ್ದಾನೆ.

**ಕಿರಿಯ ಬಸವಪ್ಪನಾಯಕ**

'ವಿದ್ವನ್ಮಂಡಲೀಮಂಡಿತ', 'ವಿಬುದಶಿಖಾಮಣಿ' ಎಂದೇ ಪ್ರಖ್ಯಾತನಾದ ಕಿರಿಯ ಬಸವಪ್ಪನಾಯಕನು (ಕ್ರಿ. ಶ. ೧೭೪೦–೧೭೫೫) 'ಶೈವಸಂಜೀವಿನಿ' ಎಂಬ ವ್ಯಾಖ್ಯಾನವನ್ನು 'ಹರದತ್ತನ' ಪಂಚಶ್ಲೋಕಿಗೆ ಬರೆದಿರುವನು. ಹರದತ್ತನು ತಂಜಾವೂರು ಬಳಿಯ ಕಂಚನೂರಿನವನೆಂದು, ಇವನ ಕಾಲ ಕ್ರಿ. ಶ. ೯ ರಿಂದ ೧೧ನೇ ಶತಮಾನವಿರಬಹುದೆಂದು ತಿಳಿದುಬರುತ್ತದೆ.[23]

---

20 ಪ್ರಾಚ್ಯ ವಿದ್ಯಾ ಸಂಶೋಧನಾ ಕೇಂದ್ರ, ಮೈಸೂರು. ಹ. ಪ್ರ. ಸಂ. P೨೫೫೪ ; P೨೫೭೩ ; P೨೨೩೧ ಇತ್ಯಾದಿ

21 ಅದೇ.

22 ಅದೇ.

23 ಡಾ॥ ಕೆ. ವನಜಾ. 'ಹರದತ್ತನ ಕೃತಿಗಳು' ಕೆಳದಿ ಅರಸರ ಸಮಗ್ರ ಅಧ್ಯಯನ, ವೀರಶೈವ ಅಧ್ಯಯನ ಕೇಂದ್ರ, ಶಿವಮೊಗ್ಗ ೧೯೯೩, ಪು. ೪೧೨

'ಹರದತ್ತನು' ಪಂಚಶ್ಲೋಕಿಯನ್ನು ರಚಿಸಿರುವುದರ ಬಗ್ಗೆ ಒಂದು ಐತಿಹ್ಯವು ತಮಿಳುನಾಡಿನಲ್ಲಿ ಜನಜನಿತವಾಗಿದೆ. ಅದೇನೆಂದರೆ—"ಶಿವಭಕ್ತಿಯುತನೂ, ಅಪ್ಪಾವರಣ ನಿಪ್ಪನೂ, ಪಂಚಾಚಾರ ಪರಾಯಣನೂ ಆಗಿ, ಶಿವೈಕ ದೇವತೋಪಾಸಕನೆಂಬ ಬಿರುದನ್ನು ಪಡೆದು ಮೆರೆಯುತ್ತಿದ್ದನು. ಆಗ ಪರಮತದವರೆಲ್ಲರೂ ಅವನ ಸತ್ಯನಿಷ್ಠೆಯನ್ನು ನೋಡಿ ಸಹಿಸಲಾರದೇ ವಾದಿಸುವುದಕ್ಕೆ ಬಂದಾಗ, ಅವನು ಪರವಾದಿಗಳೊಡನೆ ವಾದಿಸಿ, ವೇದಾಗಮ–ಪುರಾಣೇತಿಹಾಸ ಪ್ರಮಾಣಗಳಿಂದ ಈ ಬ್ರಹ್ಮಾಂಡ ಮಂಡಲದಲ್ಲಿ ಶಿವನೇ ಪೂಜ್ಯನು, ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲರೂ ಪೂಜ್ಯರು ಎಂದು ಸಿದ್ಧಾಂತ ಮಾಡಿದನು. ಆಗ ಪರವಾದಿಗಳು ಹರದತ್ತಾಚಾರ್ಯನನ್ನು ಕುರಿತು, ನಿನ್ನ ಈ ವಾಗಾಡಂಬರಕ್ಕೆ ಮರಳಾಗುವುದಿಲ್ಲ. ಹಾಗೆ ನಿಮ್ಮ ಪರಶಿವನೇ ಅಧಿಕನೂ, ಪೂಜ್ಯನೂ ಆಗಿದ್ದ ಪಕ್ಷದಲ್ಲಿ, ಆ ವಿಷಯದಲ್ಲಿ ನಿನ್ನ ಮಹತ್ವಸತ್ವ ಸ್ಥಿತಿಯನ್ನು ತೋರಿಸಿದರೆ ನಾವು ನಂಬುತ್ತೇವೆ ಎಂದರಂತೆ. ಅವರ ಮಾತನ್ನು ಒಪ್ಪಿದ ಹರದತ್ತನು ಆ ಕ್ಷಣದಲ್ಲಿಯೇ ಉಕ್ಕಿನಿಂದ ಐದು ಮೆಟ್ಟಲಿನ ಪೀಠ ಮಾಡಿಸಿ, ಅದನ್ನು ಕೆಂಪಾಗಿ ಕಾಯಿಸಿ, ತಾನು ವೀರಭಕ್ತಿಯಿಂದ ಒಂದೊಂದು ಮೆಟ್ಟಲಿಗೆ ಒಂದೊಂದು ಶ್ಲೋಕವನ್ನು ಉಚ್ಚರಿಸುತ್ತಾ ಅದನ್ನು ಏರಿನಿಂತನು. ಆಗ ಪರವಾದಿಗಳೆಲ್ಲರೂ ಭಯಭಕ್ತಿಯಿಂದ ಶರಣಾದರು ಎಂಬ ಕಥೆಯಿದೆ.[23] ಆ ಪಂಚಶ್ಲೋಕಗಳಲ್ಲಿ ಮೊದಲನೆಯದು ಹೀಗಿದೆ :

"ಗಾಯತ್ರ್ಯಾ ಬೋಧಿತತ್ವಾದಪಿನಮಕಮುಖ್ಯೈ ರಾಘವ
ಸ್ಥಾಪಿತತ್ವಾಚ್ಚಾರೇಃ
ಕೈಲಾಸಾಯಾತ್ರಾಕ್ರಮಮುರಿತ ತಯೋಃಭಿಷ್ಟ ಸಂತಾನ
ದಾನಾತ್ ।
ನೇತ್ರೇಣ ಸ್ವೇನ ಸಾಕಂದಶತಕಮಲೈರ್ವಿಷ್ಣುನಾಪೂಜಿ
ತತ್ವಾತ್ತಸ್ಮೈ
ಚಕ್ರಪ್ರಧಾನಾದಪಿಂಚ ಪಶುಪತಿ ಸರ್ವದೇವ
ಪ್ರಕೃಷ್ಟಃ ॥ ೩ ॥[24]

ಆ ಪಂಚಶ್ಲೋಕಿಗಳಿಗೆ ಕಿರಿಯ ಬಸವಪ್ಪನಾಯಕನು –ಬೃಹದಾರಣ್ಯಕೋಪನಿಷತ್, ಛಾಂದೋಗ್ಯ ಉಪನಿಷತ್ ಇತ್ಯಾದಿ ಉಪನಿಷತ್ತುಗಳಿಂದಲೂ, ಪದ್ಮಪುರಾಣ, ಬ್ರಹ್ಮಾಂಡಪುರಾಣ ಇತ್ಯಾದಿ ಪುರಾಣಗಳಿಂದಲೂ, ಅಥರ್ವಸಂಹಿತೆ, ಸೂತಸಂಹಿತೆ, ಬ್ರಹ್ಮಸೂತ್ರ, ನಯವಿವೇಕ, ಯೋಗಯಾಜ್ಞವಲ್ಕ್ಯ, ಇತಿಹಾಸ, ಶಿವಪಂಚಕ, ಶೈವರತ್ನಾಕರ, ಆಗಮಗಳು, ಶಿವಧರ್ಮಶಾಸ್ತ್ರ ಗ್ರಂಥಗಳಿಂದಲೂ ಪ್ರಮಾಣ ವಾಕ್ಯಗಳನ್ನು ಉದಾಹರಿಸಿ ಸುಮಾರು ೨೫೦ ಪುಟಗಳ ಪ್ರೌಢವಾದ ವ್ಯಾಖ್ಯಾನವನ್ನು ಬರೆದು ಶಿವಸರ್ವೋತ್ತಮತ್ತ್ವವನ್ನು ಸಾರಿದ್ದಾನೆ.

ಈ ಕೃತಿಯು ಪ್ರಕಟವಾಗಿದ್ದು[25] ಪ್ರಾರಂಭದಲ್ಲಿ ಸಂಕ್ಷಿಪ್ತವಾಗಿ ತನ್ನ ಪೂರ್ವಜರ ಸ್ಮರಣೆ ಮಾಡಿ, ಮಾತಾಪಿತೃಗಳಿಗೆ ವಂದಿಸಿ, ಶಿವತತ್ವ ವಿವೇಕವೇ ಮುಂತಾದ ಗ್ರಂಥಗಳ ಪ್ರಮಾಣವಾಕ್ಯಗಳಿಂದ ವ್ಯಾಖ್ಯಾನವನ್ನು ರಚಿಸುತ್ತಿರುವುದಾಗಿ ಹೇಳಿಕೊಂಡಿದ್ದಾನೆ.[26] ಕಡೆಯಲ್ಲಿ "................ವಿಶುದ್ಧಾದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಶ್ರೀ ವೀರಭದ್ರ ಕ್ಷಿತಿಪತಿ ಹೃದಯಾನಂದನ ಮಲ್ಲಾಂಬಿಕ ಗರ್ಭಶುಕ್ತಿಮುಕ್ತಾಮಣಿ ಶ್ರೀ ಮತ್ಕೆಳದೀ ಬಸವವಸುಮತೀ ವಾಸವ ವಿರಚಿತಾಯಾಂ ಪಂಚಶ್ಲೋಕೀ ಪ್ರದೀಪಿಕಾಯೊಂ ಶೈವಸಂಜೀವಿನೀ ವ್ಯಾಖ್ಯಾಯೋಂ ಪಂಚಮ ಶ್ಲೋಕವ್ಯಾಖ್ಯಾ ಪರಿಪೂರ್ಣ" ಎಂದಿದೆ.[27]

ಪ್ರಕಾಂಡಪಂಡಿತನೂ, ಶಿವಾಂಶಸಂಭೂತನೂ ಆದ ಕಿರಿಯ ಬಸವಪ್ಪನಾಯಕನು 'ಹರದತ್ತನ' ಪಂಚ

---

23 ಪಂಚಶ್ಲೋಕೀ ವ್ಯಾಖ್ಯಾ, (ಸಂ) ಯಂ. ಬಸವಲಿಂಗಶಾಸ್ತ್ರಿ, ವೀರಶೈವ ಗ್ರಂಥ ಪ್ರಕಾಶಿಕಾ ಗ್ರಂಥಾವಳಿ, ಮೈಸೂರು, ೧೩೧೨, ಪೀಠಿಕೆ ನೋಡಿ.
24 ಅದೇ. ಪು. ೧
25 ಪಂಚಶ್ಲೋಕೀ ವ್ಯಾಖ್ಯಾ, (ಸಂ) ಯಂ. ಬಸವಲಿಂಗಶಾಸ್ತ್ರೀ, ವೀರಶೈವ ಗ್ರಂಥ ಪ್ರಕಾಶಿಕಾ ಗ್ರಂಥಾವಳಿ, ಮೈಸೂರು, ೧೯೧೨
26 ಅದೇ. ಪು. ೨-೩
27 ಅದೇ. ಕೊನೇ ಪುಟ ನೋಡಿ

ಶ್ಲೋಕಕ್ಕೆ ಸಂಸ್ಕೃತದಲ್ಲಿ ವೀರಶೈವಪರವಾದ ದೀರ್ಘವಾದ ವ್ಯಾಖ್ಯಾನವನ್ನು ವಿವರಿಸಿ ಸಂಸ್ಕೃತ ಸಾಹಿತ್ಯ ಸೇವೆಗೈದಿದ್ದಾನೆ. ಅನೇಕ ಶ್ರುತ್ಯಾಗಮ ಪುರಾಣಾದಿ ಪ್ರಮಾಣ ವಚನ ಜಟಿಲವಾದ ಈ ಗ್ರಂಥವು ಶೈವಸಿದ್ಧಾಂತವನ್ನು ಪ್ರತಿಪಾದಿಸುವಲ್ಲಿ ಸರ್ವೋತ್ತಮ ಕೃತಿ ಎನಿಸಿದೆ.

ವಿಜಯನಗರ ಸಾಮ್ರಾಜ್ಯದ ನಂತರ ಭಾರತೀಯ ಧರ್ಮ, ಸಂಸ್ಕೃತಿಯು ವಿಶೇಷ ರೀತಿಯಲ್ಲಿ ಬೆಳೆಯುವಂತೆ ಮಾಡಿ, ಸ್ವತಃ ಕವಿಗಳಾಗಿ ಕೆಳದಿ ಅರಸರು ಸಂಸ್ಕೃತದಲ್ಲಿ ವಿಶ್ವಕೋಶದಂತಹ ಸಾಹಿತ್ಯ ಕೃತಿಗಳನ್ನು ವಿರಚಿಸಿ, ಸಾಹಿತ್ಯ ಸೇವೆ ಗೈದು ಅಮರರಾಗಿದ್ದಾರೆ.

ಮೋಹನ್ ಜಿ. ಹೆಗ್ಡೆ*

# ನಾಗಪಂಥ ಹಾಗೂ ನಾಗಮಂಡಲ-ಒಂದು ಐತಿಹಾಸಿಕ ದೃಷ್ಟಿ

ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಯಲ್ಲೂ ಸರ್ಪಾರಾಧನೆ ಇದ್ದುದನ್ನು ಕೆಲ ಅವಶೇಷಗಳು ಸ್ಪಷ್ಟಪಡಿಸಿವೆ. ಪ್ರಾಚೀನ ಈಜಿಪ್ಟಿನ ನೈಲ್ ನದೀ ತೀರದಲ್ಲಿ ನಾಗಾರಾಧನೆ ವೈಭವದಿಂದ ನಡೆಯುತ್ತಿದ್ದುದರ ಕುರುಹು ಕಂಡುಬಂದಿದೆ. ಯುಫ್ರಟಿಸ್ ತೀರದ ತುರೇನಿಯನ್ ಜನಾಂಗದಲ್ಲಿ, ಗ್ರೀಕ್ ಸಂಸ್ಕೃತಿಯಲ್ಲಿ, ಬ್ರಿಟನ್ನಿನ ಡ್ರೂಯಿಕ್ ಜನಗಲ್ಲಿ, ಮೆಸಪೊಟೇಮಿಯಾದ ಅವಶೇಷಗಳಲ್ಲಿ, ಆಫ್ರಿಕಾದ ಹಲವೆಡೆಗಳಲ್ಲಿ ಹಾಗೂ ಏಷಿಯಾದ ಹಲವೆಡೆ ಕೂಡಾ ಇದರ ಆರಾಧನೆ ಕಂಡುಬಂದಿದೆ. ಫೆಸಿಫಿಕ್‌ನ ಫಿಜಿ ದ್ವೀಪದಲ್ಲಿ ಹಾಗೂ ಮಾಯಾ ಜನಾಂಗದಲ್ಲಿ ರೆಕ್ಕೆ ಇರುವ ಸರ್ಪದ ಚಿನ್ಹೆ ಕಂಡುಬಂದಿದೆ.

ಈಜಿಪ್ಟಿನ "ಸಬ್" ದೇವತೆ ನಾಗಗಳ ರಾಜನಾಗಿತ್ತು. ಸಿಂಧೂ–ಪೂರ್ವ ಸಂಸ್ಕೃತಿಯ ಗುಪ್ಲ ಸಂಸ್ಕೃತಿಯವರು ನಾಗಪೂಜಕರು. ಜೈನ ತೀರ್ಥಂಕರರ ಶಿಲ್ಪದಲ್ಲಿ ನಾಗಶಿಲ್ಪದ ಕೆತ್ತನೆ ವಿನ್ಯಾಸ ಇದೆ. ಸುಮೇರಿಯನ್, ಅಸ್ಸೀರಿಯನ್ ದೇವತೆಗಳಲ್ಲಿ ನಾಗ ಕಂಡುಬಂದಿದೆ. ಇವೆಲ್ಲವೂ ವಿಶ್ವಾದ್ಯಂತ ಪುರಾಣಕಾಲದಿಂದಲೂ ನಾಗಾರಾಧನೆಯ ವಿಶೇಷತೆಯನ್ನು ತೋರಿಸುತ್ತವೆ.

ಸನಾತನ ಭಾರತೀಯ ಸಂಸ್ಕೃತಿಯ ಸತ್ವಸಂಪನ್ನ ಸಂಪ್ರದಾಯದಲ್ಲಿ ನಾಗಾರಾಧನೆ ವೈದಿಕಕಾಲದಿಂದಲೂ ಕಂಡುಬರುತ್ತದೆ. ಆದರೆ ದ್ರಾವಿಡ ಪ್ರದೇಶಗಳೆಂದು ಕರೆಯಿಸಿಕೊಳ್ಳುವ ಪ್ರದೇಶಗಳಲ್ಲಿ ನಾಗಪೂಜಾ ಪ್ರಾಬಲ್ಯ ಹೆಚ್ಚು ಕಂಡುಬರುತ್ತದೆ. ಭಾರತದಲ್ಲಿ ಕೆಲ ನಾಗಪಂಥದವರು, ಯೋಗಿಗಳು–ದಿಗಂಬರರು, ನಾರಿನ ಟೊಂಕಪಟ್ಟಿ ಹೊದಿದ್ದು ನಾಗೋಪಾಸಕರಾಗಿದ್ದಾರೆ. ಕಾಶಿ ಮುಂತಾದ ಹಲವೆಡೆ ಇವರ ವಾಸ. ಯೋಗಾಭ್ಯಾಸ, ತಪಸ್ಸುಗಳು ಕಾಯಕ. ಭಾರತದಲ್ಲಿ ಉಲೂಪಿ, ನಾಗರಾಣಿ ಮಣಿಪುರದ "ಪೈಥೈ" ಹಿಂದುಗಳು ಬಂಗಾಲಿ ಪ್ರಭಾವದಿಂದ ವೈಷ್ಣವರಾದರು. ಭಾರತದ ತಮಿಳುನಾಡು ಘಟ್ಟದ ಕೆಲ ಪ್ರದೇಶಗಳು, ದ್ರಾವಿಡ ಪ್ರದೇಶಗಳ ಜನರಿಗೆ ನಾಗ ವೇದೋಕ್ತ ದೇವತೆ. ಬಿಹಾರ, ರಾಜಸ್ಥಾನಗಳು, ಮಹಾರಾಷ್ಟ್ರ, ಪಂಜಾಬ್ ರಾಜ್ಯಗಳಲ್ಲಿ ಈ ಪಂಥವಿದೆ. ಬಂಗಾಳದಲ್ಲಿ ಈ ಪಂಥಕ್ಕೆ ಮನ್ನಣೆ ಇಲ್ಲ.

ಶಂಕರಾಚಾರ್ಯರು ಬರುವವರೆಗೆ ಶೈವ, ಶಾಕ್ತ, ಸೌರ, ಗಾಣಪತ್ಯ ಪಂಥಗಳಿದ್ದವು. ಗಣೇಶ, ಮಹಾ, ಹರಿದ್ರಾ, ಉಚ್ಚಿಷ್ಟ, ನವನೀತ, ಸ್ವರ್ಣ, ಸಂತಾನ ಗಣಪತಿ ಪಂಥಗಳು ಒಳ ಪಂಥಗಳಾಗಿದ್ದವು.

**ನಾಗರು ಯಾರು ? :** ಬೌದ್ಧ ಪುರಾಣದ ಪ್ರಕಾರ ಶ್ರೀಲಂಕೆ ನಾಗವಂಶಜರ ನಾಡು. ಬೌದ್ಧ ಧರ್ಮಕ್ಕೆ ಅವರು ಮತಾಂತರ ಹೊಂದಿದರೂ ನಾಗ ಪಂಥದಲ್ಲಿ ನಂಬುಗೆಯುಳ್ಳವರು. ಮೂಲನಿವಾಸಿಗಳು ನಾಗಾರಾಧಕರೇ ಆಗಿದ್ದಾರೆ.

ದಕ್ಷಿಣಕನ್ನಡ ಹಾಗೂ ಉತ್ತರಕನ್ನಡಗಳು

* ಅಧ್ಯಾಪಕರು, ಬಂದಗದ್ದೆ, ಕೆಳದಿ-೫೭೭ ೪೦೧

ನಾಗರಖಂಡದ ಭಾಗಗಳು. ಉತ್ತರ ಕರ್ನಾಟಕದ ವಿಜಾಪುರ, ಗುಲ್ಬರ್ಗಾ, ಧಾರವಾಡ, ಬೆಳಗಾವಿ ಹಾಗೂ ಕೆಲ ಉತ್ತರ ಭಾಗಗಳು ನಾಗರಖಂಡ ಎನಿಸಿಕೊಂಡಿವೆ. ಆದ್ದರಿಂದ ಇಂದಿಗೂ ಅಲ್ಲಿ ನಾಗರಪಂಚಮಿ ದೊಡ್ಡ ಹಬ್ಬವೆನಿಸಿದೆ. ನಾಗಪಂಥದವರನ್ನು ನಾಗರು ಎಂದು ಕರೆಯುತ್ತಾರೆ. ಇದನ್ನು ಸುಬ್ರಹ್ಮಣ್ಯ ಪಂಥ ಎಂದೂ ಕರೆಯುತ್ತಾರೆ. ಸು+ಬ್ರಹ್ಮ ಇದು ವಿಷ್ಣುವಿನ ಹೆಸರು. ಬ್ರಹ್ಮ+ವ ಸುಬ್ರಹ್ಮಣ್ಯ. ದಕ್ಷಿಣಕನ್ನಡದ ಕುಕ್ಕೆ ಸುಬ್ರಹ್ಮಣ್ಯ, ಮುರುಗೇಶ್ವರ, ಬಳ್ಳಮಂಜ, ಷಣ್ಮುಖ, ಬಡಭಾಂಡದೇವ, ಕುಂದಪೂಲದೇವ, ಭಟ್ಟಾರಕ, ಉಳ್ಳೂರದೇವ ಎಂದೂ ನಾಗನನ್ನು ಕರೆಯುವುದುಂಟು.

ಸುಬ್ರಹ್ಮಣ್ಯ ಪಂಥ ತುಳುನಾಡಿನದು. ದಕ್ಷಿಣ ಭಾರತದಲ್ಲಿ ಹೆಚ್ಚು ಕಂಡುಬರುತ್ತದೆ. ಇದು ಎಂಟನೇ ಶತಮಾನದವರೆಗೂ ನಡೆದುಬಂತು. ಕೊರಗರ ತುಳು ಭಾಷೆಯಲ್ಲಿ ಸ್ಕಂದ (ಕಂದ), ಬಾಲಸುಬ್ರಹ್ಮಣ್ಯ ಒಂಭತ್ತನೇ ಶತಮಾನದ ಕಡಂದಲೆಯ ಶಾಸನದಲ್ಲಿ ಸ್ಕಂದಾರಾಧನೆ ಕುರಿತು ಹೇಳಿದೆ. ಪಾರಿಪಲಿ ಕ್ಷೇತ್ರದಲ್ಲಿ "ಕುಂದಪೂಳ ಭಟ್ಟಾರಕನಿಗೆ ಭೂಮಿ ಬಿಟ್ಟದ್ದು" ಎಂದು ಇದೆ. ಈ ಶಾಸನವು ಈ ವಿಷಯಕ ಪ್ರಥಮ ಶಾಸನ ವಿರಬಹುದೆಂದು ಡಾ|| ಪಿ. ಗುರುರಾಜ ಭಟ್ಟರ ಅಭಿಪ್ರಾಯ. ಕುಕ್ಕೆ ಸುಬ್ರಹ್ಮಣ್ಯಕ್ಕೆ ದಕ್ಷಿಣ ಭಾರತ ದಲ್ಲಿ ಒಂದು ವಿಶೇಷ ಸ್ಥಾನವಿದೆ. ಶ್ರೀ ಶಂಕರಾಚಾರ್ಯ ವಿರಚಿತ "ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರ" ದಲ್ಲಿ ಈತನನ್ನು ಲಿಂಗಾಕಾರದ್ದಾಗಿ ಪೂಜಿಸುತ್ತಿದ್ದರೆಂದು ಹೇಳಿದೆ. ಇಂದು ಇಲ್ಲಿ ಕೇವಲ ಹುತ್ತದ ಪೂಜೆಯೇ ನಡೆಯುತ್ತಿರುವುದು ವಿಚಿತ್ರವಾದರೂ ಸತ್ಯ.

ರೂಪ ವಿಶೇಷ : ಕುಂದಾಪುರ ತಾಲೂಕಿನ "ಕಂದಾವರ" (ಸ್ಕಂದಪುರ) ಬ್ರಾಹ್ಮಣ ಸಂಸ್ಕೃತಿಯ ಕೇಂದ್ರವಾಗಿದೆ. ಬ್ರಾಹ್ಮಣರ ಒಂದು ಶಾಖೆಯ ಆರಾಧ್ಯ ದೈವ ಸ್ಕಂದ. ಈತನ ದೇವಾಲಯವೂ ಇಲ್ಲಿವೆ. ಉಡುಪಿ ತಾಲೂಕಿನ ಉದಯಾವರದ ಮಾಂಗೋಡಿನಲ್ಲಿ ಸ್ಕಂದ ಮಂದಿರದಲ್ಲಿಯ ಭಗ್ನ ಪ್ರತಿಮೆ ೧೧ನೇ ಶತಮಾನದ್ದೆಂದು ಸಾಧಾರವಾಗಿ ಹೇಳಬಹುದು. ಬಡಭಾಂಡೇಶ್ವರ, ಸುಬ್ರಹ್ಮಣ್ಯನಿಗಾಗಿ ಅರ್ಪಿತವಾದು ದೆಂದು ೧೨ನೇ ಶತಮಾನದ ಸಿ. ಎ. ಡಿ. ಶಾಸನ ಹೇಳು ತ್ತದೆ. ಕಾರ್ಕಳ, ಕುಂದಾಪುರ, ಕುಡುಪುಗಳು ಹೆಚ್ಚಾಗಿ ಸುಬ್ರಹ್ಮಣ್ಯ ಪಂಥದವು. ಧ್ವಜಸ್ತಂಭದ ತುದಿಯಲ್ಲಿ "ಸ್ಕಂದನಿಗಾಗಿ" ಎಂಬ ಶಾಸನ ಕೂಡ ಇದೆ. ಇಲ್ಲಿಯೂ ಹುತ್ತವೇ ಪೂಜಾಸ್ಥಾನವಾಗಿದೆ. ಮುಂದೆ ವೈಷ್ಣವ ಪಂಥ ಹರಡುತ್ತಿದ್ದಂತೆ ಅದು ಅನಂತಪದ್ಮನಾಭ ಎಂದಾಗಿರಬೇಕು. ಪುತ್ತೂರಿನ ಬಿಳುಪಾಡಿಯ ಸುಬ್ರಹ್ಮಣ್ಯನಿಗೆ ಬಹುಮಂದಿ ನಡೆದುಕೊಳ್ಳುವುದುಂಟು. (ಸುಮಾರು ಕ್ರಿ.ಶ. ೧೪೩೧) ಬಳ್ಳಮಂಜದ ಸುಬ್ರಹ್ಮಣ್ಯ ದಲ್ಲಿ ನಾಗನೇ ಆರಾಧ್ಯ ದೈವ. ಆದರೆ ಮೇಲರ್ಧಭಾಗ ಮನುಷ್ಯ, ಉಳಿದ ಭಾಗ ಸರ್ಪದ ರೂಪ ಹೊಂದಿದ ಇದನ್ನು "ಅನಂತೇಶ್ವರ"ನೆಂದೂ ಕರೆಯುತ್ತಾರೆ. ದಕ್ಷಿಣ ಕನ್ನಡದಲ್ಲಿ "ನಾಗ", "ಸ್ಕಂದ", ಅಭೇದ. ಪೊಳಲಿಯ ರಾಜರಾಜೇಶ್ವರಿ ಮಂದಿರದಲ್ಲಿ ಸುಮಾರು ೨೦ ಸೆಂ.ಮೀ. ಎತ್ತರದ ಎರಡು ಭುಜಗಳ ಸ್ಕಂದನ ಮೂರ್ತಿಯಿದೆ. ಕುಡುಪಿನಲ್ಲಿ ನಾಲ್ಕು ಕೈಗಳ ಮೂರ್ತಿಯಿದೆ. ಲಲಿತಾಸನ ದಲ್ಲಿದ್ದ ಈ ವಿಗ್ರಹ ಸುಮಾರು ಹದಿಮೂರನೇ ಶತ ಮಾನದ್ದು. ಬೈಂದೂರಿನ ಶೇನೇಶ್ವರ ಮಂದಿರದಲ್ಲಿ ಆರು ತಲೆಗಳ ಮಯೂರ ವಾಹನ ವಿಗ್ರಹವಿದೆ. ಸುಮಾರು ೧೦೫ ಸೆಂ. ಮೀ. ಎತ್ತರವಾಗಿದೆ. ಇದು ಕಲ್ಯಾಣ ಚಾಲುಕ್ಯರ ಶೈಲಿಯದು. ನೀಲಾವರದ ದುರ್ಗಾ ಭಗವತಿಯ ಮಂದಿರದಲ್ಲಿನ ಪ್ರತಿಮೆ ಮಧ್ಯಕಾಲೀನ, ಶೇಷನ ರೂಪದಲ್ಲಿದೆ. ಇದು ದುರ್ಗಾದೇವತೆ ಎಂಬ ಹೇಳಿಕೆ ವಿಚಿತ್ರವಾಗಿದೆ.

ತುಳುನಾಡಿನ 'ಕುಕ್ಕೆ' ಅನಾದಿಯಿಂದ ಪರಿಚಿತ ಪ್ರದೇಶ. ಇದನ್ನು ೧೩೮೮ರ ಒಂದು ಶಾಸನದಲ್ಲಿ ತುಳುಮಂಡಲ ಎಂದು ಕರೆಯಲಾಗಿದೆ. ಅಲ್ಲಿ ಸಿಕ್ಕ ತಾಮ್ರಶಾಸನವು "ಕುಕ್ಕೆ ಸುಬ್ರಹ್ಮಣ್ಯ ದೇವರಿಗೆ ಕಡಬದ ಸ್ಥಳ ಕೊಟ್ಟಿದೆ" ಎಂದು ಹೇಳುತ್ತಿದೆ. ಕ್ರಿ. ಶ. ೧೪೦೬ ರಲ್ಲಿ ಬರೆದ 'ಶ್ರೀ ತತ್ವನಿಧಿ'ಯಲ್ಲಿ ಶೈವಧರ್ಮದ ೧೦೮ ಜಾಗಗಳಲ್ಲಿ ಸುಬ್ರಹ್ಮಣ್ಯನದೂ ಒಂದು. ಅವನಿಗೆ "ಅಹಿಪೇಶ್ವರ"ನೆಂದು ಪೂಜೆ ಇತ್ತು ಎಂದು ಹೇಳಿದೆ. ಮಚ್ಚಲಗೆಡು ಮಂದಿರದಲ್ಲಿ ಸುತ್ತಿಕೊಂಡ ಸರ್ಪರೂಪ ದಲ್ಲಿ, ಸ್ಕಂದನ ಕಂಚಿನ ಮೂರ್ತಿ ಇದೆ. ಮಧ್ಯದಲ್ಲಿ ಕಮಲನನ್ನು ಸುತ್ತಿಕೊಂಡಂತಿದೆ. ಇದು ಆತನ ಆಯುಧದ ಪ್ರತೀಕ. ಶಂಕರಾಚಾರ್ಯರು ಪ್ರಥಮಬಾರಿ

ಸುಬ್ರಹ್ಮಣ್ಯಕ್ಕೆ ಬಂದಾಗ ಅನೇಕರನ್ನು ವಾದದಲ್ಲಿ ಸೋಲಿಸಿ ಪಾಂಥಿಕ ಪದ್ಧತಿ ತಂದವರಲ್ಲಿ ಪ್ರಥಮರೆಂದು ಹೇಳುತ್ತಾರೆ. "ಶಿವ", "ವಿಷ್ಣು", "ಅಂಬಿಕೆ", "ಗಣಪತಿ", ಹಾಗೂ "ಸೂರ್ಯ" ಇವೇ ಪಂಚಾಯತನ.

ಉಡುಪಿಯ ಸುತ್ತಣ ಮುಚ್ಚಲಗೋಡು, ಅರಿತೋಡು, ಕುಕ್ಕಹಳ್ಳಿ, ಶಿರ್ವ, ಪಡುಬಿದ್ರಿ, ಶಾಂತೂರ್, ಕಾರ್ಕಳದ ಸೂಡುಗಳಲ್ಲಿ ಸ್ಕಂದಪಂಥ ಹರಡಿದೆ. ಇದನ್ನು ನೋಡಿದಾಗ ಪಶ್ಚಿಮ ಕರಾವಳಿ ಹಾಗೂ ಒಳನಾಡುಗಳು ಸ್ಕಂದಪಂಥ ಅಥವಾ ನಾಗ ಪಂಥವನ್ನು ಅನುಸರಿಸಿರಬೇಕು" ಎಂಬುದು ಸ್ಪಷ್ಟ.

**ಸಾಂಕೇತಿಕತೆ :** ಆಧ್ಯಾತ್ಮಿಕ ದೃಷ್ಟಿಯಲ್ಲಿ ನಾಗ ಎಂದರೆ "ಶೇಷ", "ಆದಿ" ಎಂದರೆ "ವಿಶ್ವ" ಎಂದು ಅರ್ಥ ವಿದೆ. ಮಿದುಳು ಸರ್ಪದ ಹೆಡೆಯ ಆಕಾರದಲ್ಲಿದೆ. ಆದುದರಿಂದ ಅದನ್ನು 'ಕುಂಡಲಿನಿ' ಎಂದೂ ಕರೆದರು. ಸುತ್ತಿಕೊಂಡ ಹಾವು ಸುಪ್ತಾವಸ್ಥೆಯ ಮೆದುಳನ್ನು ಜಾಗ್ರತಗೊಳಿಸುವಂಥದ್ದು. ಹಾವು ಲೈಂಗಿಕ ಸಂಕೇತವೂ ಹೌದು, ವೈದ್ಯಕೀಯ ಗುರುತೂ ಹೌದು. ಕೆಲವು ನಾಗ ಪ್ರತಿಮೆಗಳು, ಒಂದು, ಮೂರು, ಐದು, ಏಳು ಹೆಡೆ ಗಳನ್ನು ಹೊಂದಿವೆ. ತ್ರಿದೋಷ, ತ್ರಿಧಾತುಗಳ ನಿಯಂತ್ರಣಕ್ಕೆ ಸಹಾಯಕಾರಿ ಬುದ್ಧಿಯನ್ನು ಉಂಟು ಮಾಡುವುದು ಮೂರು ಹೆಡೆಗಳ ಸಂಕೇತ. ಪಂಚಭೂತ ಗಳ ನಿಯಂತ್ರಕ ಬುದ್ಧಿಯ ಸಂಕೇತ ಐದು ಹೆಡೆಗಳು. 'ಸಪ್ತಧಾತು' ಶಕ್ತಿದೇವನ ಸಂಕೇತ ಇದೇ 'ಏಳು' ಹೆಡೆ ಗಳು. ಪ್ರಕೃತಿದತ್ತ ಬೆಳೆಯನ್ನು ನಾಶಗೊಳಿಸುವ ಇಲಿ ಗಳನ್ನು ತಿನ್ನುವ ನಾಗನಪೂಜೆ ವರ್ಷದ ಆರಂಭದಲ್ಲಿ ಬಂದಿರಲೂ ಸಾಕು. ಹೆಡೆಯ ಮೇಲೆ ಶಿವನ ಲಿಂಗ ಇರುವುದು 'ಶೈವ' ಸಂಕೇತ. ಸ್ಕಂದನ ಮೇಲೆ ಸರ್ಪವಿರು ವುದು ತುಳುನಾಡ ವಿಶೇಷವಾಗಿದೆ.

**ಆರಾಧನೆ :** ಕಲೆ, ಸಾಹಿತ್ಯ, ಚಿಂತನ ಶೀಲತೆ ಗಳು ಬದುಕಿಗೆ ಆಹಾರದಂತೆ ಅಗತ್ಯವಾಗಿವೆ. ಸಮಾಜ ಜೀವನವನ್ನು ನಿಯಂತ್ರಿಸುವ ಮೌಲ್ಯಗಳಿವು. ವಿಕಾಸದ ಇತಿಹಾಸವೆಂದರೆ ಆತ ಬೆಳೆಸಿಕೊಂಡ ಮೌಲ್ಯ ಸಂಸ್ಕೃತಿಗಳ ಇತಿಹಾಸ. ಮಾನವನ ನಂಬಿಕೆ, ಚಿಂತನೆಗಳು ಆರಾಧನೆಗೆ ಕಾರಣಗಳು. ಜನಪದ ಕಲೆ, ಧರ್ಮಗಳು ಮಾನವ ನೊಂದಿಗೇ ಬೆಳೆದು ಬಂದಿವೆ. ಅವನ ದೈವ ಪರಿಕಲ್ಪನೆ ಯಲ್ಲಿ, ಕಲೆ, ಸಾಹಿತ್ಯ, ಇತಿಹಾಸಗಳ ಮೂಲವೂ ಇದೆ. ನಾಗಾರಾಧಕರು ಹೆಚ್ಚಿರುವ ಪ್ರದೇಶಗಳಲ್ಲಿ ನಾಗರಹಾವು ವಿವಿಧ ರೀತಿಯಲ್ಲಿ ಪೂಜೆಗೊಳ್ಳುತ್ತಿದೆ.

ಪಾಪ ಪರಿಮಾರ್ಜನೆ, ಸಂತಾನ ಪ್ರದಾನ, ಕುಷ್ಠ ರೋಗ ನಿವಾರಣೆ, ಮಕ್ಕಳು ಸತ್ತು ಹುಟ್ಟದಂತೆ ಬೇಡಿಕೆ, ನಾಗಶಾಪ ನಿವಾರಣೆ, ಚರ್ಮರೋಗ ನಿವಾರಣೆ ಮುಂತಾದವು ನಾಗಾರಾಧನೆಯ ಉದ್ದೇಶಗಳಾಗಿವೆ.

"ಮಾನವ ಜೀವನದ ಎಷ್ಟೋ ಸತ್ಯಗಳು ಮಾನವನ ಒರಗಲ್ಲಿಗೆ ಸಿಕ್ಕದು" ಎಂಬುದು ಮಾನವ ಇತಿಹಾಸದಿಂದ ತಿಳಿದುಬರುತ್ತದೆ. ಇವನ್ನು ನಾವು 'ಮೂಢ ನಂಬಿಕೆ' ಎಂದೋ 'ಭ್ರಮೆ' ಎಂದೋ ಹೇಳುತ್ತೇವೆ. ನಾಗಪೂಜೆ, ಶಿವಗಣಪೂಜೆ, ನಾಗಮಂಡಲಗಳು ಇದರಲ್ಲಿ ಸೇರಿವೆ. ಹಾವು, ಮರ, ಪೂಜೆಗೊಳ್ಳುವುದು ನಾಗಾರಾಧನೆಯಲ್ಲಿ ಸಾಮಾನ್ಯ "ಲಿಂಗ" ವನದ ಸಂಕೇತವಾದರೆ, 'ನಾಗ' ಮರದ ಸಂಕೇತ, ನಾಗಪಂಥ, ನಾಗಪ್ರತಿಷ್ಠೆ, ಸರ್ಪ ಸಂಸ್ಕಾರ, 'ನಾಗಬಲಿ', 'ಆಶ್ಲೇಷಾ ಬಲಿ', 'ಸ್ವಾಮಿ ಕೋಲ', 'ನಾಗದರ್ಶನ', 'ಕಾಡಯನ ಕೋಲ'ಗಳೆಲ್ಲ ನಾಗಪ್ರೀತಿಯ ಆಚರಣೆಗಳು. ಅಶ್ವತ್ಥ ಮರದೆಡೆ ನಾಗ ವಿಗ್ರಹ ಪ್ರತಿಷ್ಠಾಪನೆಗಳು ನಡೆಯುತ್ತವೆ. ಡಕ್ಕೆ ಬಲಿ, ನಾಗಮಂಡಲಗಳು, ತುಳುನಾಡಲ್ಲಿ ಮಾತ್ರ ಕಂಡುಬರುವ ಧಾರ್ಮಿಕ ವಿಧಿಗಳು.

ಒಂದೇ ಸರ್ಪ ವಿವಿಧ ರೀತಿಗಳಲ್ಲಿ ೪, ೮, ೧೨, ೧೬ ಪವಿತ್ರ ಗಂಟುಗಳಾಗಿ ಕಾಲು, ಅರ್ಧ, ಮುಕ್ಕಾಲು, ಒಂದು ಮಂಡಲದಲ್ಲಿ ಹೆಣೆದುಕೊಂಡ ಅದ್ಭುತ ಶಿಲ್ಪ. 'ನಾಗ ಮಂಡಲ'ದ ಸಾಕ್ಷಿ ಸಿಗುವುದು ೧೩ನೇ ಶತಮಾನದ ನಂತರವಷ್ಟೇ. ದ. ಕನ್ನಡದ ನಂದಳಿಕೆಯಲ್ಲಿ ಸಿಕ್ಕ ಒಂದು ನಾಗಮಂಡಲದ ಶಿಲ್ಪ ೧೩ನೇ ಶತಮಾನದ್ದೆಂದು ಹೇಳ ಬಹುದಾಗಿದೆ. ಡಾ|| ಶಿವರಾಮ ಕಾರಂತರ ಅಭಿಪ್ರಾಯ ದಂತೆ "ಇದು ಆರ್ಯ, ದ್ರಾವಿಡರ ಸಮ್ಮಿಲನ"ವಾಗಿದೆ. ೧೫ನೇ ಶತಮಾನದ ಶಾಸನವೊಂದರಲ್ಲಿ 'ನಾಗಮಂಡಲದ' ಉಲ್ಲೇಖವಿದೆ.

ಉತ್ತರ ಕನ್ನಡದ ಶಿರಸಿಯ ಪ್ರಸಿದ್ಧ ಶ್ರೀ ಮಾರಿಕಾಂಬಾ ದೇವಾಲಯ ಸೋದೆಯ ೨ನೇ ಸದಾಶಿವ

ರಾಯನ ಕಾಲವಲ್ಲಿ ಕ್ರಿ.ಶ. ೧೬೭೯ರಲ್ಲಿ ಸ್ಥಾಪಿಸಲ್ಪಟ್ಟಿದೆ. ಇದರ ಪ್ರಧಾನ ಬಾಗಿಲು ಭವ್ಯವಾದ ಶಿಲೆಯಿಂದ ಸಿದ್ಧವಾಗಿದ್ದು, ತಲೆಯ ಮೇಲ್ಗಡೆಯಲ್ಲಿ 'ಕಾಲು ನಾಗಮಂಡಲ'ದ ಸುಂದರ ಕೆತ್ತನೆ ಕಂಡುಬರುತ್ತಿದೆ. ದೊಡ್ಡ ಸಂಕಣ್ಣನಾಯಕ[1] ಸ್ಥಾಪಿಸಿದ್ದ (ಕ್ರಿ.ಶ. ೧೫೬೭–೭೦) ಸ್ಪಷ್ಟ[2] ಸುಂದರವಾದ ಅರ್ಧನಾಗಮಂಡಲದ ಶಿಲ್ಪ ಕೆಳದಿಯ ವೀರಭದ್ರ ದೇವಾಲಯದಲ್ಲಿದೆ (ಚಿತ್ರ ನೋಡಿ). ಕ್ರಿ.ಶ. ೧೬೨೯ ರಿಂದ ೪೬ರ ಅವಧಿಯಲ್ಲಿ ವೀರಭದ್ರನಾಯಕನ ಕಾಲದಲ್ಲಿ ಇದರ ಕಟ್ಟುವಿಕೆ ಆಗಿದೆ. ರಂಗಮಂಟಪದಲ್ಲಿಯ ನವರಂಗದ ಅಕ್ಕಪಕ್ಕದಲ್ಲಿ ಎರಡು ನಾಗಮಂಡಲಗಳ ಅದ್ಭುತ ಚಿತ್ರಣವಿದೆ.

ಡಾ॥ ಪಿ. ಗುರುರಾಜಭಟ್ಟರು ತಮ್ಮ "ತುಳು ನಾಡ ಸಾಂಸ್ಕೃತಿಕ ಅಧ್ಯಯನ" ಗ್ರಂಥದಲ್ಲಿ "ಗೋಕರ್ಣ ಮಹಾಬಲೇಶ್ವರ ಮಂದಿರದಲ್ಲಿಯ ನಾಗಮಂಡಲ ಶಿಲ್ಪ ಸುಮಾರು ೧೭೫ ವರ್ಷಗಳ ಹಿಂದಿನದು" ಎಂದಿದ್ದಾರೆ.

## ನಾಗಮಂಡಲ

ಈ ಪೂಜಾ ವಿಶೇಷ ಬ್ರಾಹ್ಮಣ, ಪುರೋಹಿತ, ನಾಗಪಾತ್ರಿ, ನರ್ತಕರ ಸಮ್ಮಿಲನ, ವೇದ ಮಂತ್ರೋಕ್ತ ಹೋಮ–ಹವನಗಳ ವಿಧಿಗಳಿಂದ ನಾಗಮಂಡಲ, ಶುದ್ಧ ವೈದಿಕ ಆಚರಣೆ ಹೊಂದಿದೆ. ಇದರ ಮೂಲ ಸ್ವರೂಪವನ್ನು "ಪಾಣ"ರು ಬೃಹತ್ ಹುತ್ತಗಳ ಸ್ವಾಮಿಗೆ ನಡೆಸುವ 'ಡಕ್ಕೆ ಬಲಿ'ಯಲ್ಲಿ ನೋಡಬಹುದು.

ವರ್ಣ ವೈವಿಧ್ಯ : ನಾಗಮಂಡಲದ ನಕ್ಷೆಯ ಚಿತ್ರಣ ಒಂದು ಅದ್ಭುತ ಕಲೆ. ಪಂಚವರ್ಣಗಳಿಂದ ಇದು ತೀರಾ ಆಕರ್ಷಕವಾಗಿದೆ. ಅರಿಶಿನ, ಕೆಂಪು. ಕರಿ, ಹಸಿರು, ಬಿಳಿ ಬಣ್ಣಗಳನ್ನು ಬಳಸಲಾಗುತ್ತಿದೆ.ಅರಿಶಿನ ಕೊಂಬಿನಿಂದ ಅರಿಶಿನ, ಅರಿಶಿನ ಹಾಗೂ ಸುಣ್ಣದ ಹಿಟ್ಟು ಕಲೆಸಿ ಕೆಂಪು ಭತ್ತದ ಹೊಟ್ಟನ್ನು ಸುಟ್ಟು ಕಪ್ಪು ಬಣ್ಣ ಜಂಗಮನ ಎಲೆಯ ಪುಡಿಯಿಂದ ಹಸಿರು, ಅಕ್ಕಿಯ ಹಿಟ್ಟನ್ನು ಬಿಳಿ ಬಣ್ಣಕ್ಕಾಗಿ ಬಳಸುತ್ತಾರೆ.

ಕಂಚಿನ ಡಕ್ಕೆ, ಮರದ ಚರ್ಮದ ಡಕ್ಕೆ, ತಾಳ, ಚಕ್ರತಾಳ ಮುಂತಾದವು ಈ ಆರಾಧನೆಗೆ ಅವಶ್ಯಕ ವಾದ್ಯ ಮೇಳಗಳು.ಇವುಗಳ ನಾದ, ವೈಶಿಷ್ಟ್ಯಪೂರ್ಣ ಕಿವಿಯಲ್ಲಿ ಬಹುಕಾಲ ಗುಣಿಸತಕ್ಕದಾದ್ದು.

ನಾಗಮಂಡಲ ರಂಗ : ಜನ ಸಮುದ್ರದ ಮಧ್ಯೆ ಎತ್ತರದ ಚೌಕಾದ ವೇದಿಕೆ, ಮಧ್ಯೆ ಕಂಬ ಬಾರದಂತೆ ಚಪ್ಪರ ನಿರ್ಮಾಣ ಅದಕ್ಕೆ ಮೇಲುಗಟ್ಟೆ ಕಟ್ಟಿ ವಸ್ತ್ರ ಇಳಿಬಿಡುತ್ತಾರೆ. ಮೇಲೆ ತೆಂಗಿನ ಎಳೆ ಗರಿಯಿಂದ ತಾವರೆ ಮೊಗ್ಗು. ಹೂಗಳು ಮೊದಲಾದವುಗಳಿಂದ ಅರಣ್ಯದ ಭಾವನೆ ಹುಟ್ಟಿಸಲು ಇಳಿಬಿಡುತ್ತಾರೆ. ತೆಂಗಿನ ಎಳೆಯ ಗರಿ ಚಪ್ಪರದ ಅಲಂಕಾರಕ್ಕೆ ಬಳಕೆಯಾಗುತ್ತದೆ. ಅಡಿಕೆಯ ಸರಮಾಲೆ, ವೀಳ್ಯದ ಪಟ್ಟಿಗಳಿಂದ ಕಂಬ ಚಪ್ಪರವನ್ನು ಅಲಂಕರಿಸುತ್ತಾರೆ. ಅಕ್ಕಿ, ಕಾಯಿ, ಅಡಿಕೆ, ಅಡಿಕೆಸಿಂಗಾರ, ಎಳನೀರುಗಳು ನಾಗಾರಾಧನೆಗೆ ಯಥೇಚ್ಛವಾಗಿ ಬೇಕು.

ಈ ವಿಶಾಲ ವೇದಿಕೆಯ ಮಧ್ಯದಲ್ಲಿ ಬೃಹದಾಕಾರದ ಭಯಂಕರವಾದ ವರ್ಣಮಯ ಅದ್ಭುತವಾಗಿ ಹೆಡೆಯೆತ್ತಿದ ನಾಗಮಂಡಲ ಉಡಿಸುತ್ತಾರೆ. ಅಲಂಕಾರದ ಹೊಣೆಯೆಲ್ಲವೂ ವೈದ್ಯ ತಂಡದವರದ್ದು. ಸೇರಿದ ಭಕ್ತರಿಂದ ಮಂಡಲ ಅಪವಿತ್ರವಾಗದಂತೆ ರಕ್ಷಣೆ ಇರುತ್ತದೆ. ಚಪ್ಪರ ಅಲಂಕಾರ, ಬಣ್ಣಗಾರಿಕೆ, ಇದರ ವೈಶಿಷ್ಟ್ಯಗಳು ಇದಕ್ಕಾಗಿಯೇ ಹೆಚ್ಚು ಖರ್ಚು ತಗಲುತ್ತದೆ.

ಉಡುಪು–ತೊಡುಪುಗಳು : ನಾಗಮಂಡಲದಲ್ಲಿ ವೈದ್ಯ, ನಾಗಪಾತ್ರಿಗಳು ಮುಖ್ಯರು. ವೈದ್ಯ ಅರ್ಧನಾರೀ ವೇಷ ತೊಡುತ್ತಾನೆ. ಎದೆಗೆ ಕುಪ್ಪಸ, ಭುಜಕ್ಕೆ ಜರಿ ಶಾಲು. ಸೊಂಟಕ್ಕೆ ಕೆಂಪು ಚೌಕಳಿ ಸೀರೆ.ಕೈಗೆ ಬಂಗಾರದ ಕಂಕಣ, ತಲೆಗೆ ಜರಿ ರುಮಾಲಿನ ಮುಂಡಾಸು, ಅದರ ತುದಿಗೆ ಕೋರೆಯಾಗಿ ಬಂಗಾರದ ಕಂಠಾಭರಣಗಳು, ಕಾಲಿಗೆ ಗೆಜ್ಜೆ ತೊಟ್ಟಿರುತ್ತಾನೆ. ನಾಗಪಾತ್ರಿಯ ಮುಂಗೈಗೆ ಕಡಗ, ಮೈಗೆ ಕೆಂಪು ಪಟ್ಟಿಕೆ, ಹೊಂದಿರುತ್ತಾನೆ ತಲೆಗೂದಲು ಕೆದರಿರುತ್ತದೆ. ತೆಕ್ಕೆ

---

1 ಚಿತ್ರ ನೋಡಿ "ಅ"
2 " "ಬ"

ತುಂಬಾ ಒತ್ತಿಕೊಂಡಿರುವ ಸಿಂಗಾರದ ಹೂಗಳನ್ನು ಮುಖಕ್ಕೆ ಆಗಾಗ್ಗೆ ಬಡಿಯುಕೊಳ್ಳುತ್ತಿರುವುದರಿಂದ ಅದರ ಕಾಳು ಬೆವರಿದ ಮುಖಕ್ಕೆ ಅಂಟಿಕೊಂಡು ನಾಗರ ಸ್ಮರಣೆ ತೋರುತ್ತದೆ. ರೇಷ್ಮೆ ಕಚ್ಚೆ ಪಂಚೆಯನ್ನು ಈತ ಉಟ್ಟಿರುತ್ತಾನೆ. ಮೇಳದ ಇತರ ಎರಡು–ಮೂರು ಮಂದಿ, ಕಚ್ಚೆ ಪಂಚೆ, ಅಂಗಿ, ಶಾಲು ಧರಿಸುತ್ತಾರೆ. ಒಬ್ಬ ಮರದ ಡಕ್ಕೆ, ಒಬ್ಬ ಕಂಚಿನ ಡಕ್ಕೆ, ಪುಟ್ಟ ಡಮರು ಇನ್ನಿಬ್ಬರು ತಾಳ, ಚಕ್ರತಾಳ ಬಾರಿಸುವವರು.

ನಾಗ ನರ್ತನ : ದಕ್ಷಿಣ ಕನ್ನಡದ ಉತ್ತರದಲ್ಲಿ ಪ್ರಚಾರದಲ್ಲಿರುವ ನಾಗಮಂಡಲ ಹಾಗೂ ಡಕ್ಕೆಬಲಿಗಳಲ್ಲಿ ತುಸು ವ್ಯತ್ಯಾಸವಿದ್ದರೂ ನೃತ್ಯ ಹೆಚ್ಚು ಕಡಿಮೆ ಒಂದೇ ರೀತಿಯದು. ನಾಗ ಪ್ರೀತಿಗಾಗಿ ನರ್ತನ ಸೇವೆ, ಡಕ್ಕೆಬಲಿಗೆ ಡಮರು ಸೇವೆ, ಇತರ ದೈವಾರಾಧನೆ. ಜನಪದ ಆರಾಧನೆ, ಸಂಪ್ರದಾಯ ಇದರ ಮೂಲ. ವೈದಿಕ ಆಚರಣೆಯೂ ಇದಕ್ಕೆ ಸೇರಿ ಸಂಕೀರ್ಣ ಎನಿಸಿದೆ.

ಧಾರ್ಮಿಕ ನರ್ತನಗಳಲ್ಲಿ ಬ್ರಾಹ್ಮಣರು ಭಾಗವಹಿಸುತ್ತಾರೆ. ನಾಗ ಶಿಲಾ ಪ್ರತಿಷ್ಠೆ, ಆಶ್ಲೇಷಾ ಬಲಿ, ನಾಗ ಪ್ರಾಯಶ್ಚಿತ್ತ ಹೋಮ, ನಾಗ ಪ್ರತಿಷ್ಠೆ, ಸಂಸ್ಕಾರ–ಸಂತರ್ಪಣೆಗಳು ಹಗಲಿನಲ್ಲಿ ನಡೆಯುತ್ತವೆ. ನಾಗಬನದಲ್ಲಿ ಹಾಲು–ಹಿಟ್ಟು ಸೇವೆ, ವಿವಿಧ ಆರಾಧನೆಗಳು ರಾತ್ರಿ ನಡೆಯುತ್ತವೆ. ನಾಗಮಂಡಲದ ಚಿತ್ರದ ಸುತ್ತ ಆವೇಶಗೊಂಡ ನಾಗಪಾತ್ರಿ, ಅರ್ಧನಾರೀ ವೇಷದ ನಾಗಕನ್ನಿಕೆಯ ನರ್ತನ ನಡೆಯುತ್ತದೆ. ನಾಗಪಾತ್ರಿ ಬ್ರಾಹ್ಮಣ, ಅರ್ಧನಾರೀ ವೇಷಧಾರಿ ನಾಗಕನ್ನಿಕೆಯ ಪಾತ್ರಧಾರಿ, ವೈದ್ಯರು, ಡಮರು ಮೇಳ ಎಲ್ಲ ಸೇರಿ ಇದೊಂದು ಭಾರೀ ಮೇಳವೆನಿಸಿದೆ. ನಾಗಪಾತ್ರಿಯಲ್ಲಿ ನಾಗಾವೇಶವಾದಾಗ ವೈದ್ಯ ವರ್ಗದ ನರ್ತಕ ಅರ್ಧನಾರೀ ವೇಷದಲ್ಲಿ ಕಂಚಿನ ಡಮರು ಬಾರಿಸುತ್ತಾ ನಾಗಮಂಡಲದ ಸುತ್ತ ನಾಗಪ್ರತಿಮೆಯೊಂದಿಗೆ ನರ್ತಿಸುತ್ತಾನೆ. ಸುಂದರ ತಾಳಬದ್ಧ ಭಾವ, ರಸಾಭಿವ್ಯಕ್ತಿಗೆ ಅನುಬದ್ಧವಾದ ನರ್ತನ ನಡೆಯುತ್ತದೆ. ಪ್ರತೀ ಅಂಗಾಂಗಕ್ಕೂ ಕಾರ್ಯ ಸಿಗುತ್ತದೆ. ಕುಣಿತ, ಜಿಗಿತ, ಮೈ ಕುಲುಕಾಟದ ಶೈಲಿಗಳು ಸ್ನೇಹ, ವಿನಯ ಆವೇಶ ಎಲ್ಲ ಸೇರಿ ಭಾವ ಪ್ರದರ್ಶಿಸುತ್ತವೆ.

ಇದರಲ್ಲಿ ಯಕ್ಷಗಾನದ "ಗಿರಕಿ" ಕುಣಿತವಿದೆ. ಭರತನಾಟ್ಯದ ಹಸ್ತ ಮುದ್ರಿಕೆಗಳಿವೆ. ಭಾವ ಸ್ಫುಟತೆಗಾಗಿ ಸುಮಾರು ಹದಿನೈದು ಹಸ್ತ ಮುದ್ರೆಗಳನ್ನು ಬಳಸುತ್ತಾರೆ. ಪತಾಕಾ, ತ್ರಿಪತಾಕಾ, ಅರ್ಧಚಂದ್ರ, ಸೂಚಕ, ಅಲ ಪಲ್ಲವಿ, ಪದ್ಮಕೋಶ, ಶಿಖರ, ಸರ್ಪಶೀಷ, ಮೃಗಶೀಷ, ಸಿಂಹಮುಖ, ಕಪಿತ್ಥ, ಲಾಂಗಲ, ಅಭಯ, ಕರ್ತರಿಮುಖ, ಸಖಿ ತಂಡಗಳು ಮುಂತಾಗಿ.

ಅರ್ಧನಾರೀ ವೇಷ ನರ್ತಕ ಡಕ್ಕೆ ಸಪ್ಪಳದಿಂದ ಪಾತ್ರಿಯ ಚಲನ ವಲನಗಳನ್ನು ನಿಯಂತ್ರಿಸುತ್ತಾನೆ. ಹಿಮ್ಮೇಳದವರ ಮತ್ತೊಂದು ಭಾಗ ಡಕ್ಕೆ, ತಾಳ ಹಾಡುಗಳ ಸಹಾಯದಿಂದ ವಿವಿಧ ಭಾವ ಪ್ರಚೋದನೆಗೆ ಪುಷ್ಟಿ ನೀಡುತ್ತದೆ. ಇದರ ನೃತ್ಯಗಳು ಕರ್ನಾಟಕ ಶಾಸ್ತ್ರೀಯ ರಾಗಗಳನ್ನು ಹೊಂದಿದೆ. ನಾಟಿ, ಮಧ್ಯಮಾವತಿ, ಸುರುಟಿ, ಆರಭಿ, ಕಾನಡಾ, ಮೋಹನ, ಭೂಪಾಳೀ ರಾಗಗಳು ಮಂದಗತಿಯಿಂದ ಆರಂಭವಾಗಿ ಚುರುಕು ಗತಿಯಲ್ಲಿ ವಿವಿಧ ತಾಳಗಳಿಗೆ ಬದಲಾಗುತ್ತದೆ. ಕುಣಿತದಲ್ಲಿ ರಸಭಾವಗಳ ಪರಾಕಾಷ್ಠತೆ (climax) ಸ್ಪಷ್ಟವಾಗಿರುತ್ತದೆ. ಈ ವಿವಿಧ ರಾಗ ಸಮ್ಮಿಲನಗಳ ನೃತ್ಯಗಳು ನಾಗನ ಬಗೆಗಿನ ಪ್ರಶಂಸೆ, ಪ್ರೀತಿ, ನಿಂದೆ, ಕಲಹ, ದ್ವೇಷ ಮುಂತಾದ ಸಂಚಾರಿ, ವ್ಯಭಿಚಾರಿ ಭಾವಗಳು ಸೇರಿ ರಸದೌತಣ ನೀಡುತ್ತವೆ.

ಹಾಡುಗಾರ ನರ್ತಕ, ಚಿತ್ರಕಾರ, ವೈದ್ಯರೆಲ್ಲ ಪರಂಪರೆಯವರು. ಇಷ್ಟಾದರೂ ಈ ಸಾಂದರ್ಭಿಕ ಹಾಡುಗಳು, ಪ್ರಾದೇಶಿಕ ಸಾಂಪ್ರದಾಯಕ ಹಾಡುಗಳ ಪ್ರತಿರೂಪ ಎಂಬುದು ಇದರ ವಿಶೇಷತೆ.

ಪೂಜೆಯ ಕೊನೆಯಲ್ಲಿ ನರ್ತಕರು ಪರಸ್ಪರ ಕಂಕುಳೊಳಗೆ ಕೈ ಕೈ ಸೇರಿಸಿ ಪವಿತ್ರ ಗಂಟಿನಂತೆ ಸುತ್ತಿಕೊಂಡು ಹೋಗುವ ಕುಣಿತ, ಗಂಟು ಹಾಕುವ ಹಾಗೂ ಬಿಡಿಸುವ ನೃತ್ಯ, ಅರ್ಧನಾರೀ ವೇಷಧಾರಿ ಮಧ್ಯ ಹೋಗುವಾಗ ಹೂವಿನ ಕಟ್ಟು. ವಾಲಗ ಸೇವೆ ನಡೆದಿರುತ್ತದೆ. ಇವುಗಳ ಮಧ್ಯೆ ನಾಗಪಾತ್ರಿ ಹೊಂಬಾಳೆಯನ್ನು ಮುಖ ಮೈಗೆ ತಿಕ್ಕಿಕೊಂಡು ರುದ್ರ ಭೀಕರವಾದ ಚಲನ ವಲನ

ತೋರುತ್ತಾ ನೆಲದಲ್ಲಿ ಹೊರಳುವುದು, ತೆವಳುವುದು ರೋಮಾಂಚಕಾರೀ ದೃಶ್ಯ. ನಾಗಪಾತ್ರಿ, ಅರ್ಧನಾರೀ ನಾಗಕನ್ನಿಕೆಯ (ಪಾಣಾರ ವರ್ಗ) ಕುಣಿತದಲ್ಲಿ ಪ್ರಕೃತಿ-ಪುರುಷರ ಮಿಲನದ ಕಲ್ಪನೆಯಿದೆ. ಇದು ಒಂದು ತಂತ್ರವಾಗಿ ಬೆಳೆದು ಬಂದಿದೆ. ಇದನ್ನೇ ಕಾರಂತರು "ವ್ಯವಸ್ಥಿತ ವೈಜ್ಞಾನಿಕ ರೀತಿಯ ಜಾನಪದ ಕಲೆ" ಎಂದಿದ್ದಾರೆ. ಸುಮಾರು ಆರೇಳು ಗಂಟೆಗಳ ಈ ನೃತ್ಯನಾಟಕಾನಂತರ ನಾಗಪಾತ್ರಿಯ ನುಡಿಗಟ್ಟು ಭಕ್ತರ ಅಹವಾಲು ನಿವೇದನೆ, ಸಂಭಾಷಣೆ, ಸಂಶಯ ಪರಿಹಾರಗಳ ಅನಂತರ ಕಾರ್ಯಕ್ರಮ ಮುಕ್ತಾಯವಾಗುತ್ತದೆ.

ಇಂಥ ನಾಗ ನೃತ್ಯವು ಕೇರಳದ "ಸರ್ಪಕ ತುಳ್ಳಲ್", "ಸರ್ಪಕ್ಕಳ್ಳಂ"ಗಳಲ್ಲಿ ತೋರಿ ಬರುತ್ತಿವೆ. ಡಕ್ಕೆ, ಚರ್ಮ ವಾದ್ಯದಿಂದ ಭಾವಾವೇಶನಾಗಿ ಕುಣಿದ ಅನಂತರ ಪಾತ್ರಿ ಭಕ್ತರೊಂದಿಗೆ ನಡೆಸುವ ಸಂಭಾಷಣೆ, ನುಡಿಕಟ್ಟುಗಳು ಇದರ ವಿಶೇಷವಾಗಿದೆ.

**ನಾಗಮಂಡಲ ಚಿತ್ರಣ :** ನಾಲ್ಕು[3] ಪವಿತ್ರ ಗಂಟುಗಳ ನಾಗ ಚಿತ್ರಣಕ್ಕೆ ಕಾಲು ನಾಗಮಂಡಲವೆಂದು, ಎಂಟು[4] ಪವಿತ್ರ ಗಂಟುಗಳಿದ್ದರೆ ಅರ್ಧ ನಾಗ ಮಂಡಲವೆಂದು, ಹದಿನಾರು ಗಂಟುಗಳಿದ್ದರೆ ಪೂರ್ಣ ನಾಗಮಂಡಲವೆಂದು ಲೆಕ್ಕಾಚಾರ. ಮಂಡಲದ ಸ್ವರೂಪಕ್ಕನುಸರಿಸಿ ಬಾಳೆಯ ಬಳ್ಳಿಯ ಅಳತೆ ಪಟ್ಟಿಯಿಂದ ಮಂಡಲದ ಹೊರಾವರಣವನ್ನು ಶುಚಿರ್ಭೂತರಾದ ವೈದ್ಯರು ಅರಿಶಿನಪುಡಿಯಿಂದ ಗುರುತಿಸುತ್ತಾರೆ.

ಆರಂಭದಲ್ಲಿ ಮಂಡಲದ ಕೇಂದ್ರ ಸ್ಥಾನದಲ್ಲಿ ಗಣಪತಿ ಮಂಡಲ, ಅವರೆದುರು ನಾಗಮಂಡಲ ನಡೆಸುವ ಯಜಮಾನ, ಪುರೋಹಿತ ಹಾಗೂ ವೈದ್ಯರು ಕುಳಿತು, ಆರಾಧನೆಗೆ ಅಡ್ಡಿ ಬಾರದಂತೆ, ಪ್ರಾರ್ಥನೆ ಸಲ್ಲಿಸುತ್ತಾರೆ. ಪೂರ್ಣ ನಾಗಮಂಡಲದ ರಚನೆಗೆ ಕನಿಷ್ಠ ಆರು ಗಂಟೆಗಳು ಅವಶ್ಯ. ಏಳು ಹೆಡೆಗಳ ಸರ್ಪದ ಅದ್ಭುತ ಆಕೃತಿ ಸುರಳಿ ಸುರುಳಿಯಾಗಿ ಪವಿತ್ರ ಗಂಟುಗಳೊಂದಿಗೆ ಚಿತ್ರಿಸುವ ಮೊದಲು ಜೀವರೇಖೆಯನ್ನು ಎಳೆಯುತ್ತಾರೆ. ಈ ರೇಖೆಯ ಎರಡೂ ಕಡೆ ಅರಿಶಿನ ಬಣ್ಣದಿಂದ ಹಾವಿನ ನಕ್ಷೆ ಬಿಡಿಸುತ್ತಾರೆ. ಕೆಂಪು ಬಣ್ಣದಿಂದ ಕಣ್ಣು ಬರೆಯುತ್ತಾರೆ. ಪವಿತ್ರ ಗಂಟಿನೊಳಗಿನ ಖಾಲಿ ಜಾಗೆಯನ್ನು ಕಪ್ಪು ಬಣ್ಣದಿಂದ ತುಂಬುತ್ತಾರೆ. ಬಿಳಿ ವರ್ಣದಿಂದ ಬಿಂದು ಬಿಂದುವಾಗಿ ನಾಗನಿಗೆ ಕಾಲು ಬರೆಯುತ್ತಾರೆ. ನಾಗಾಕೃತಿಯ ಮಧ್ಯೆ ಮರಿ ಮೊಟ್ಟೆಯನ್ನು ಚಿತ್ರಿಸುತ್ತಾರೆ. ಪಂಚ ವರ್ಣಗಳಿಂದ ಹೆಡೆಯ ಉಬ್ಬು-ತಗ್ಗುಗಳು ಸಿದ್ಧವಾಗುತ್ತವೆ. ಹೆಡೆಯಡಿಯ ವಿಷ್ಣುಪಾದ 'S' ಆಕಾರದಲ್ಲಿ ಕಾಳಿಂಗ ಮರ್ದನ ಪ್ರತೀಕವಾಗುತ್ತದೆ. ಹೆಡೆಯ ಮೇಲೆ ದೊಡ್ಡ ಪ್ರಭಾವಳಿ ಸಿದ್ಧವಾಗುತ್ತದೆ. ಒಳಗಡೆ ಬ್ರಹ್ಮನ ಮುಖ, ದ್ರಾಕ್ಷಿ ಬಳ್ಳಿ, ಎಲೆಗಳು ಕಪ್ಪು ಬಣ್ಣದಲ್ಲಿ ಎರಡು ಇಂಚು ಅಗಲವಾಗಿ ಚಿತ್ರಿತವಾಗುತ್ತದೆ. ಹಸಿರು ಪುಡಿಯ ದಂಡೆ ಬರೆಯಲಾಗುತ್ತದೆ. ಇದರ ಮೇಲೆ ಮಂಡಲದ ಬಳಿ ಸೀಯಾಳ, ಸಿಂಗಾರ, ಅಡಿಕೆ, ವೀಳ್ಯದೆಲೆ ಹಣ್ಣುಗಳ ರಾಶಿ ಮತ್ತು ದೀಪವಿಡಲಾಗುತ್ತದೆ.

ಮಧ್ಯಾಹ್ನದಿಂದ ಸಂಜೆಯವರೆಗೆ ಚಿತ್ರ ರಚನೆಯ ಕೆಲಸವಾಗುತ್ತದೆ. ಭಯ ಭಕ್ತಿಗೆ ಕಾರಣವಾದ ನಾಗ ಮಂಡಲದ ಬೃಹದಾಕಾರದ ಮೇಲೆ ಬ್ರಹ್ಮಕಪಾಲ, ಯಕ್ಷಿ, ಗಣಪತಿ, ಲತಾವೈಖರಿ ನೋಡುವಂಥದ್ದು.

ಡಿಸೆಂಬರಿನಿಂದ ಮೇವರೆಗೆ ಹೆಚ್ಚಾಗಿ ಸುಬ್ರಹ್ಮಣ್ಯ ಷಷ್ಠಿಯೆಂದು ದಕ್ಷಿಣ ಕನ್ನಡದಲ್ಲಿ ಕೆಲವು ಕಡೆಗೆ ಆಶ್ಲೇಷಾ ಬಲಿ, ನಾಗಮಂಡಲಾಚರಣೆಗಳು ಕಂಡು ಬರುತ್ತವೆ. ಅದರಲ್ಲೂ ಉಡುಪಿ, ಕುಂದಾಪುರಗಳ ಸುತ್ತಮುತ್ತ ನಾಗ ಮಂಡಲಗಳು ನಡೆಯುವುದು ಹೆಚ್ಚು. ಇದನ್ನೇ ಹೋಲುವ ಡಕ್ಕೆ ಬಲಿ, ಮಂಡಲ ಭೋಗ, ಹಾಗೂ ಕೆಂಡ ಸೇವೆಗಳು ಬಳಕೆಯಲ್ಲಿವೆ.

**ಆಚರಣೆ :** ಪೂಜೆಯ ದಿನ ರಾತ್ರಿ ಸುಮಾರು ೯ ಗಂಟೆಗೆ ನಾಗಬನದ ನಾಗಶಿಲೆಗೆ, ವಾಲಗದೊಂದಿಗೆ ಅಕ್ಕಿ, ಹಾಲು, ಅರಿಶಿನ ಹಾಕುವಾಗ ಪಾತ್ರಿಗೆ ಆವೇಶ ತುಂಬುತ್ತದೆ. ಕೆಂಪು ರೇಶಿಮೆ ಧೋತರ ಉಟ್ಟು ಬಿಚ್ಚಿ

---

3 ರೇಖಿಸಿದ ಚಿತ್ರ ನೋಡಿ ೫
4 " ೬

ಕೆದರಿದ ತಲೆಗೂದಲಿನಿಂದ ಆತ ಕ್ರೂರವಾಗಿ ಕಾಣು ತ್ತಾನೆ. ಎಲ್ಲರೂ ಮಂಡಲ ಪ್ರದೇಶವನ್ನು ಪೂಜಿಸುತ್ತಾರೆ. ವೈದ್ಯ ಅರ್ಧನಾರೀ ವೇಷ ತೊಟ್ಟಿರುತ್ತಾನೆ. ಗಣಪತಿ ಮಂಡಲ ಶ್ರೀಚಕ್ರದ ಪ್ರತಿನಿಧಿಯಾಗಿದೆ. ನಾಗಮಂಡಲ ದಲ್ಲಿ ರೇಖಿಸಿದ ತಲೆಯ ಚಿತ್ರವನ್ನು "ಬ್ರಹ್ಮಪುರುಷ" ಎನ್ನುತ್ತಾರೆ. ವಾದ್ಯದೊಂದಿಗೆ ಎಲ್ಲರೂ ಮಂಡಲಕ್ಕೆ ಬರುತ್ತಾರೆ. ಹೊಂಬಾಳೆಯಲ್ಲಿ ನೀರು ಹೊಯ್ದು ನಾಗ ಪಾತ್ರಿ ಅಕ್ಕಿ ಕಾಳನ್ನು ಮುಖಕ್ಕೆ ಬಡಿದುಕೊಂಡಾಗ ಸಿಂಗಾರದ ಬಿಳಿ ಕಣಗಳು ಹಿಡಿದುಕೊಂಡು ಆತ ಬುಸು ಗುಟ್ಟುತ್ತಾ ಮೈ ಕಂಪಿಸುತ್ತಾ ಕುಣಿಯುವಾಗ ನಾಗ ನೃತ್ಯವು ನಾಗನೇ ಮೈದುಂಬಿ ಬಂದ ಭ್ರಮೆ ಹುಟ್ಟಿಸು ತ್ತದೆ.

ವೈದ್ಯರು ನಾಗಕನ್ನಿಕೆಯ ಪೋಷಾಕಿನಲ್ಲಿ ನಾಗ ಪಾತ್ರಿಯ ಜೊತೆ ಮಂಡಲಕ್ಕೆ ಬರುತ್ತಾರೆ. ಕೈಲಿ ಕಂಚಿನ ಡಕ್ಕೆ ಇರುತ್ತದೆ. ಸಾಮಾನ್ಯ ಉಡುಪಿನ ಇಬ್ಬರು ಸಹಾಯಕರು, ಸಾಂಕೇತಿಕ ವಾದ್ಯದವರು ಇರುತ್ತಾರೆ. ಸರ್ಪದ ಸ್ತುತಿಯನ್ನು ಎಲ್ಲರೂ ಮಾಡುತ್ತಿರುತ್ತಾರೆ. ಕೆಲವೊಮ್ಮೆ ತೆಗಳಿಕೆಯ ಹಾಡುಗಳಿಂದ ನಾಗನನ್ನು ಕೆರಳಿಸುತ್ತಾರೆ. ಈ ನಾಗನೃತ್ಯ ಭಾರೀ ಸಂಕೀರ್ಣವಾಗಿದೆ. ಎರಡು ಮೂರು ಗಂಟೆಗಳ ಕಾಲ ಮಂಡಲದ ಸುತ್ತಲೂ ವೈವಿಧ್ಯಮಯವಾಗಿ ಮಂತ್ರ ಪಠಣ ವಾದ್ಯದೊಂದಿಗೆ ನಡೆಯುತ್ತದೆ. ನಾಗನನ್ನು ಧಾರ್ಮಿಕ ಹಾಗೂ ಕಲಾತ್ಮಕ ವಾಗಿ ಒಲಿಸಿಕೊಳ್ಳುವ ಪ್ರಯತ್ನ ಇದು.

ಸಾಹಿತ್ಯ : ಆಚರಣಾ ಕಾಲದ ಹಾಡುಗಳು ದಾಸರ ಕೀರ್ತನೆಯ ರೂಪದಲ್ಲಿವೆ. ದೀರ್ಘವಾದ ಈ ಹಾಡಿನಲ್ಲಿ ನಾಗ ವಂಶಜರು ಭೂಲೋಕಕ್ಕೆ ಬಂದಿದ್ದು ಅವರು ಅನುಭವಿಸಿದ ತೊಂದರೆ, ಅದರಿಂದ ಭೂಮಿಯ ಜನರಿಗಾದ ಹಾನಿಯ ವರ್ಣನೆ ಇದೆ. ನಾಗನನ್ನು ಪೂಜಿಸುವಾಗ ಕತೆ, ಸ್ತುತಿ, ವಿಧಾನಗಳ ವರ್ಣನೆ ತುಂಬಿದೆ. ಕೊನೆಯಲ್ಲಿ ಮಾನಸಿಕವಾಗಿ ತೃಪ್ತಿ, ಸಮಾಧಾನಗೊಂಡ ಜನಕ್ಕೆ ಪ್ರಸಾದ ವಿತರಣೆ ನಡೆಯು ತ್ತಿದೆ. ಭೂರಿ ಭೋಜನ ಸಂತರ್ಪಣೆಯಿಂದ ನೆರೆದ ಜನ ಸಂತೃಪ್ತಿ ಹೊಂದುತ್ತಾರೆ. ಊಟದ ವ್ಯವಸ್ಥೆಗೇ ಹೆಚ್ಚಿನ ಖರ್ಚು ತಗಲುತ್ತದೆ. ಮಂಡಲದ ಪ್ರಮಾಣ ಹೆಚ್ಚಿದಂತೆ (ಕಾಲು, ಅರ್ಧ ಹಾಗೂ ಪೂರ್ಣ ಖರ್ಚಿನ ಗಾತ್ರ ಕೂಡಾ ಹೆಚ್ಚುತ್ತದೆ.)

ವೈಶಿಷ್ಟ್ಯ : ನಾಗ ಮಂಡಲದಲ್ಲಿಯ ಜಾನಪದ ಶೈಲಿಯ ಸಂಗೀತ, ಹಾಡಿಕೆ, ಕುಣಿತ, ಪೂಜೆಯ ವೈವಿಧ್ಯ ಪೂಜಾಕಾಲದ ಭಕ್ತರ ಸಂಭಾಷಣೆಗಳೆಲ್ಲ ಸೇರಿ ಒಂದು ರೀತಿಯ ಸಂಗೀತ, ನಾಟಕ ನೃತ್ಯ ರೂಪಕ ಎನಿಸುತ್ತದೆ. ನಾಗ ಮಂಡಲ ಪೂಜೆ ಎಲ್ಲ ಜಾತಿ ವರ್ಗ ಭೇದವಿಲ್ಲದೇ ನಂಬಿಕೆಯ ಆಧಾರದ ಮೇಲೆ ನಿಂತ ವಿಶೇಷ ಆಚರಣೆ ಯಾಗಿದೆ. ಬಡವ–ಬಲ್ಲಿದ, ಪಾಮರ–ಪಂಡಿತ, ಜ್ಞಾನಿ–ಅಜ್ಞಾನಿಗಳ ವರ್ಣ ಸಾಮರಸ್ಯಕ್ಕೆ ಉತ್ತಮ ಉದಾಹರಣೆ ಯಾಗಿದೆ.

ಮನುಷ್ಯ ತನ್ನ ಮಾನಸಿಕ ಧೈರ್ಯದಿಂದ ನಿಸರ್ಗದ ಅದ್ಭುತ ಶಕ್ತಿಯನ್ನು ಕೇಂದ್ರೀಕರಿಸಿ ಅದನ್ನು ಸಂತೃಪ್ತ ಗೊಳಿಸುವ ಯತ್ನ ಮಾಡಿದ್ದಾನೆ. ನಾಗಮಂಡಲದೊಂದಿಗೆ ಧಾರ್ಮಿಕತೆಯ ಜೀವಾಳಕ್ಕೆ ಜಾನಪದದ ಸೊಗಡು ಸೇರಿ ಶುದ್ಧ ಕಲೆಯಾಗಿದೆ. ಸಮುದಾಯದ ಏಕತಾ ಭಾವದ ಧನ್ಯತೆ ಪಡೆಯುತ್ತದೆ.

ಹೀಗೆ ನಾಗಮಂಡಲದ ಚಿತ್ರ ರಚನೆ, ನಾಗನರ್ತನ ವಿಶಿಷ್ಟ ವಾದ್ಯಗಳು, ಸಂಕೀರ್ಣ ಧಾರ್ಮಿಕ ಕ್ರಿಯೆಗಳಾಗಿ ಕಂಡರೂ, ಭ್ರಮೆ, ಕಲ್ಪನೆ, ಆವೇಶ, ಸಂದೇಶಗಳು ಲೌಕಿಕತೆ, ಅಲೌಕಿಕತೆಗಳ ಅಪೂರ್ವ ಸಂಗಮವಾಗಿವೆ. ವೈಜ್ಞಾನಿಕ, ಶಾಸ್ತ್ರೀಯ ಸಂಶೋಧಕರಿಗೆ, ನಾಗಪಾತ್ರಿ ಭಕ್ತರಿಗೆ ಸಮಸ್ಯಾ ಪರಿಹಾರ ಹೇಳುವ, ಪ್ರಶ್ನೆಗಳನ್ನು ಉತ್ತರಿಸುವ ರೀತಿಗಳು ಮಾತ್ರ ಸವಾಲಾಗಿಯೇ ಉಳಿದಿವೆ.

## ಆಧಾರಗಳು


1) ತುಳುವರ ಆಚರಣೆಗಳಲ್ಲಿ ಕಲಾವಂತಿಕೆ "ಪಂಚವರ್ಣ" ಲೇ : ಕ. ವೆಂ. ರಾಜಗೋಪಾಲ

2) ನಾಗಮಂಡಲ–ಪೂಜೆ : ಎ. ವಿ. ನಾವಡ

3) *Mythic Society Journal*, "Naga Cult" ಶ್ರೀಕಂಠಯ್ಯ ಎಸ್.

4) *Studies in Tuluva History and Culture*, P. Gururaj Bhat

5) ವಿಶ್ವವ್ಯಾಪಿ ನಾಗರಾಜ, ಯು. ಪಿ. ಉಪಾಧ್ಯಾಯ ಮತ್ತು ಸುಶೀಲಾ ಉಪಾಧ್ಯಾಯ

6) ಇದಲ್ಲದೆ ಶ್ರೀ ಅನಂತಜೋಷಿ (ಬಿಣಗಾ), ಡಾ॥ ಎಚ್. ಕೆ. ಭಟ್ (ಮಾನಸ ಗಂಗೋತ್ರಿ) ಹಾಗೂ ಉಡುಪಿಯ ತುಳು ಅಧ್ಯಯನ ಪೀಠ ಇವರೆಲ್ಲರಿಂದ ಸಂಗ್ರಹಿಸಿದ ಮಾಹಿತಿ

ಎಂ. ಎಲ್. ಶಿವಶಂಕರ್*

# ಅಪೂರ್ವ ನರಸಿಂಹಮೂರ್ತಿ ಶಿಲ್ಪಗಳು

ಕುಳಿತಿರುವ ನರಸಿಂಹಮೂರ್ತಿ ದ್ವಿಬಾಹುಗಳನ್ನು ಹೊಂದಿದೆ. ಉತ್ತರಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನ ಸನ್ನಳ್ಳಿಯಲ್ಲಿ ಅಶೋಕವನದ ಸಮೀಪ ದೊರೆತಿದೆ.[1] ಪ್ರೊ. ನೀಲಾಂಬರ್ ಹಟ್ಟಿ ದಿನಾಂಕ ೮-೪-೯೪ರಂದು ಈ ಅಪೂರ್ವ ಮೂರ್ತಿಯನ್ನು ಕರ್ನಾಟಕ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಗೆ ಕೊಟ್ಟಿರುತ್ತಾರೆ. ಈ ಮೂರ್ತಿಯ ಅಳತೆ ೬೦ ಸೆಂ.ಮೀ., ೩೨ ಸೆಂ.ಮೀ., ೬ ಸೆಂ.ಮೀ. ಆಗಿದೆ (ಛಾಯಾಚಿತ್ರ ೧, ೨). ಕಾಲ ಸುಮಾರು ಕ್ರಿ.ಶ. ೧೧-೧೨ನೆಯ ಶತಮಾನ. ಶಿರ ಗುಂಗುರು ಕೂದಲಿನಿಂದ ಕೂಡಿದೆ (ಮುಂಭಾಗ ಮತ್ತು ಹಿಂಭಾಗ). ಕೊರಳಲ್ಲಿ ಪದಕ, ಒಂದೆಳೆಯಲ್ಲಿ ಯಜ್ಞೋಪವೀತ, ಕಟಿಬಂಧ, ತೋಳ್ಬಂದಿ, ಮೇಲ್ಭಾಗ ಬೆತ್ತಲೆಯಿದ್ದು, ಸೊಂಟದ ತಳಭಾಗ ಧೋತಿ ಧರಿಸಿದೆ. ಪೀಠಭಾಗ ಪದ್ಮಗಳಿಂದ ಅಲಂಕೃತವಾಗಿದೆ.

ನರಸಿಂಹ ಮೂರ್ತಿಗಳು ಮಧುಕೇಶ್ವರ ದೇವಾಲಯ, ಬನವಾಸಿ (ಉತ್ತರ ಕನ್ನಡ ಜಿಲ್ಲೆ), ಹಲಸಿಯ ದೇವಾಲಯ (ಬೆಳಗಾವಿ ಜಿಲ್ಲೆ), ಕೂಡ್ಲಿ ನರಸಿಂಹ ದೇವಾಲಯಗಳಲ್ಲಿ (ಶಿವಮೊಗ್ಗ ಜಿಲ್ಲೆ) ದೊರೆತಿವೆ.

ಕುಣಿಗಲ್ ಕೆರೆಯ ಹೂಳು ತೆಗೆಯುವಾಗ ನರಸಿಂಹಸ್ವಾಮಿ ಶಿಲಾಮೂರ್ತಿ ದೊರೆತಿದೆ. ಈ ಮೂರ್ತಿ ಸಮಭಂಗದಲ್ಲಿದ್ದು, ಚತುರ್ಭುಜದಿಂದ ಕೂಡಿದ್ದು, ಮುಂಭಾಗದ ಬಲಗೈಗಳು ಮುರಿದಿವೆ. ಎಡ ಮೇಲ್ಭಾಗದ ಕೈ ಶಂಖ, ಎಡ ಕೆಳಗಿನ ಕೈ ಗದೆಯನ್ನು ಹಿಡಿದಿದೆ. ಬಲಕಾಲಿನ ಬಳಿ ನಿಂತಿರುವ ಮೂರ್ತಿ (ಪ್ರಹ್ಲಾದ) ಭಕ್ತಿಪೂರ್ವಕನಾಗಿ ನಿಂತಿದ್ದಾನೆ. ಈ ಮೂರ್ತಿ ಯಜ್ಞೋಪವೀತ, ಕಂಠೀಹಾರದಿಂದ ಅಲಂಕೃತಗೊಂಡಿದೆ. ಈ ಮೂರ್ತಿ ಎತ್ತರ ೧೧೭ ಸೆಂ.ಮೀ. ಅಗಲ ೪೪ ಸೆಂ.ಮೀ. ಇರುತ್ತದೆ. ಕಾಲ ಸುಮಾರು ೧೫ನೇ ಶತಮಾನ. ಈಗ ಈ ಮೂರ್ತಿ ಧರ್ಮಸ್ಥಳದ ಮಂಜೂಷಾ ವಸ್ತು ಸಂಗ್ರಹಾಲಯದಲ್ಲಿರುತ್ತದೆ. (ಛಾಯಾಚಿತ್ರ ೩).

---

* ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು-೫೭೦ ೦೦೧

1 ಶ್ರೀ ಮಾಧವ ಎನ್. ಕಟ್ಟಿ, ನಿರ್ದೇಶಕರು, ಭಾರತೀಯ ಶಾಸನ ನಿರ್ದೇಶನಾಲಯ, ಮೈಸೂರು ಇವರು ಅಶೋಕವನ ಯುದ್ಧ ಭೂಮಿ ಇರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.

ಕುಂ. ಬಾ. ಸದಾಶಿವಪ್ಪ*

# ಕೂಲಹಳ್ಳಿ ಮದ್ದಾನೇಶ್ವರರ ಮಠ - ಒಂದು ಅಧ್ಯಯನ

ಮದ್ದಾನೆಸ್ವಾಮಿ, ಗುರುಬಸವರಾಜ (ಕೊಟ್ರಯ್ಯ), ಕೆಂಪಯ್ಯ, ತಿಪ್ಪೇರುದ್ರ, ಕೋಲಶಾಂತ ಎಂಬುವ ಹೆಸರುಗಳ ಐದು ಜನ ಸ್ವಾಮಿಗಳು ಯಾವ ಸ್ಥಳದಿಂದಲೋ ಬಂದು, ಬಾಗಳಿ ಕಲ್ಲೇಶ್ವರ ದೇವಾಲಯದಲ್ಲಿ ಕೆಲಕಾಲ ತಂಗಿದ್ದರು. ಇವರಿಗೆ ಪಂಚಗಣಾಧೀಶರೆಂದೂ ಕರೆಯುವರು. ಇವರ ಕಾಲದ ಬಗ್ಗೆಯೂ ಖಚಿತವಾಗಿ ತಿಳಿದು ಬಂದಿಲ್ಲ. ಉಚ್ಚಂಗಿದುರ್ಗದ ಗಂಟೆ ಶಾಸನದ ಹಾಗೂ ವಯೋವೃದ್ಧರ ಹೇಳಿಕೆಗಳನ್ನು ಗಮನಿಸಿ ಇವರ ಕಾಲ ಸುಮಾರು ೧೭ನೇ ಶತಮಾನವೆಂದು ಹೇಳಬಹುದು.

ಒಂದು ದಿನ ಪೂಜೆಗೆ ಹೋದಾಗ ಮದ್ದಾನೇಶ್ವರರಿಗೆ ತೋಟದಲ್ಲಿ ಕನಕವ್ವ ಎಂಬುವ ಸ್ತ್ರೀ ಭೇಟಿಯಾಗಿ ಅವಳಲ್ಲಿ ಅವರು ಅನುರಕ್ತರಾಗಿ ಪುನಃ ಕಲ್ಲೇಶ್ವರ ದೇವಾಲಯಕ್ಕೆ ಬರಲಿಲ್ಲವೆಂದು ಒಂದು ಹೇಳಿಕೆ ಇದ್ದರೆ, ಮತ್ತೊಂದು ಹೇಳಿಕೆಯಲ್ಲಿ ಮದ್ದಾನೇಶ್ವರರು ಹಾಲು ಮತ್ತು ಮೊಸರು ತರಲು ಊರೊಳಗೆ ಹೋದವರು ಕನಕವ್ವಳನ್ನು ಪ್ರೀತಿಸಿ ಅಲ್ಲಿಯೇ ಉಳಿದರು. ಮದ್ದಾನೇಶ್ವರರು ಬಾರದೆ ಇದ್ದುದನ್ನು ಕಂಡು ಉಳಿದ ಗಣಾಧೀಶರು ಬಾಗಳಿಯಿಂದ ಹೊರಟು ಹರಪನಹಳ್ಳಿಯಲ್ಲಿ ಕೆಂಪೇಶ್ವರರು, ಅರಸೀಕೆರೆಯಲ್ಲಿ ಕೋಲಶಾಂತರು, ಕೊಟ್ಟೂರಿನಲ್ಲಿ ಗುರುಬಸವರಾಜರು, ನಾಯಕನಹಟ್ಟಿಯಲ್ಲಿ ತಿಪ್ಪೇರುದ್ರರು ಉಳಿದು, ಆಯಾ ಸ್ಥಳಗಳಲ್ಲಿ ಭಕ್ತಾದಿಗಳನ್ನು ಆಕರ್ಷಿಸಿದ ವಿಷಯ ಬಳ್ಳಾರಿ ಮತ್ತು ಚಿತ್ರದುರ್ಗದ ಜನರಿಗೆ ಹೊಸದೇನಲ್ಲ.

ಕನಕವ್ವ ಮತ್ತು ಮದ್ದಾನೇಶ್ವರ ಪುತ್ರನಾಗಿ ಜನಿಸಿದ ಮಗುವೇ ಗೋಣಿಬಸವೇಶ್ವರ. ಇವನ ಜನನವಾದ ಕೂಡಲೇ ಕನಕವ್ವ ಕಾಲವಶವಾಗುವಳು. ಆನಂತರ ಮದ್ದಾನೇಶ್ವರರು ಕೂಲಹಳ್ಳಿ ಬಿಟ್ಟು ಬಳ್ಳಾರಿಗೆ ಹೋಗಿ ಕೊನೆವರೆಗೂ ಅಲ್ಲಿಯೇ ನೆಲೆಸಿದರು. ಈ ವಿಷಯ ಜನ ಸಾಮಾನ್ಯರ ಆಡು ಮಾತುಗಳಿಂದ ನಮಗೆ ಗೊತ್ತಾಗುತ್ತದೆ. ಗೋಣಿ ಬಸವೇಶ್ವರನನ್ನು ಹತ್ತಿರದ ಸಂಬಂಧಿಗಳು ಸಾಕಿದರು. ಸುಮಾರು ೭-೮ ವರ್ಷ ಪ್ರಾಯಕ್ಕೆ ಬಂದ ಮೇಲೆ ಅವರು ಬಾಗಳಿಯ ಶ್ರೀಮಂತ ರೈತರಾದ ಗೌಡರಲ್ಲಿ ಊಳಿಗಕ್ಕೆ ನಿಂತರು. ವಯೋವೃದ್ಧರ ಹೇಳಿಕೆಯಂತೆ ಮದ್ದಾನೇಶ್ವರರು ಕೂಲಹಳ್ಳಿಯಲ್ಲಿ ವಾಸಿಸಿದ ಕಾಲ ಎರಡು ಮೂರು ವರ್ಷಗಳು ಮಾತ್ರ.

ಬಾಗಳಿಯಿಂದ ಉತ್ತರ ದಿಕ್ಕಿನಲ್ಲಿ ಸುಮಾರು ೩/೪ ಕಿ.ಮೀ. ದೂರದಲ್ಲಿ ಕಾಣುವ ಹಳ್ಳಿಯೇ ಕೂಲಹಳ್ಳಿ. ಈ ಹಳ್ಳಿಯಲ್ಲೇ ಗೋಣಿಬಸವೇಶ್ವರ ಮತ್ತು ಮದ್ದಾನೇಶ್ವರ ಎರಡು ಮಠಗಳು ಇರುವುವು. ಗೋಣಿ ಬಸವೇಶ್ವರರು ಮದ್ದಾನೇಶ್ವರರು ಪುತ್ರರು. ಗೋಣಿಬಸವೇಶ್ವರ ಮಠ ಚಿಕ್ಕದು. ಇದು ಆಧುನಿಕ ಕಟ್ಟಡವನ್ನು ಹೊಂದಿದೆ. ಮದ್ದಾನೇಶ್ವರರ ಮಠವು ಪ್ರಾಚೀನ ಕಾಲದ ಕಟ್ಟಡವು. ಇದು ವಿಶಾಲವಾಗಿದ್ದು, ಜಾತ್ರೆಯ ಭಕ್ತಾದಿಗಳಿಗೆ ಹೆಚ್ಚು ಆಕರ್ಷಕವಾಗಿರುತ್ತದೆ. ಈ ಮಠಕ್ಕೆ ಹೊರ ಸುತ್ತಿನ

* ಶಂಕರಮಠದ ಹತ್ತಿರ, ಹೊಸಪೇಟೆ ರಸ್ತೆ, ಹರಪನಹಳ್ಳಿ, ಬಳ್ಳಾರಿ ಜಿಲ್ಲೆ-೫೮೩೧೩೧

ಎರಡು ಕಲ್ಲು ಗೋಡೆಗಳಿರುವುವು. ಪ್ರಾಂಗಣದ ಒಳ ಭಾಗದ ಅಳತೆ ಹೀಗಿದೆ :

ಪೂರ್ವ ಮತ್ತು ಪಶ್ಚಿಮ – ಅಗಲು – ೨೮೦ ಅಡಿಗಳು
ಉತ್ತರ ಮತ್ತು ದಕ್ಷಿಣ – ಉದ್ದ – ೫೧೧ ಅಡಿಗಳು

ಮಠದ ದಕ್ಷಿಣದ ಕೊನೆಯ ಆವರಣ ಗೋಡೆಯ ಹಿಂಭಾಗದಲ್ಲಿ ೪ ಗೋಡೆಗಳ ಸಾಲುಗಳು ಪೂರ್ವ ಮತ್ತು ಪಶ್ಚಿಮ–೧೯೮ ಅಡಿಗಳು ಉತ್ತರ ಮತ್ತು ದಕ್ಷಿಣ–೧೬೦ ಅಡಿಗಳ ಖಾಲಿ ಸ್ಥಳ. ಸ್ವಲ್ಪ ದೂರದಲ್ಲಿ ಒಂದು ಹೂಡೇವು ಕಾಣುವುದು.

ಈ ಮಠಕ್ಕೆ ಮೂರು ದ್ವಾರಗಳಿರುವುವು. ಮೊದಲ ದ್ವಾರ ಸಾಮಾನ್ಯವಾಗಿರುವುದು. ಎರಡನೇ ದ್ವಾರದ ಮೊದಲು ಮೆಟ್ಟಿಲಿಗೆ ಬಲಗಡೆ ಆನೆ, ಎಡಗಡೆ ಸಿಂಹದ ಶಿಲ್ಪಗಳು, ದ್ವಾರದ ಮೇಲ್ಭಾಗದಲ್ಲಿ ಆಂಜನೇಯನ ಮೂರ್ತಿ ಇರುವುದು. ಈ ದ್ವಾರ ಅಂತಸ್ತುಗಳಿಂದ ಕೂಡಿದ ಮಂಟಪ. ಇದರಿಂದ ಮೂರನೇ ದ್ವಾರಕ್ಕೆ ಬರುವಾಗ ಅಂದರೆ ಎರಡು ಮತ್ತು ಮೂರನೇ ದ್ವಾರಗಳ ಮಧ್ಯ ಕಟ್ಟೆಗಳು ಕಾಣುವುವು. ಈ ಕಟ್ಟೆಗಳಲ್ಲಿ ಉಬ್ಬು ಶಿಲ್ಪದ ಕೆಲವು ಚಿತ್ರಗಳು ಕಾಣುವುವು. ಅವುಗಳಲ್ಲಿ ಕೆಲವು ಮಿಥುನ ಶಿಲ್ಪಗಳು. ಮೂರನೇ ದ್ವಾರವನ್ನೂ ಹಾದು ಮಠದ ಒಳಗಡೆ ಹೋದರೆ ಅಲ್ಲಿ ಎಡಕ್ಕೂ ಮತ್ತು ಬಲಕ್ಕೂ ಎರಡು ವಿಶಾಲ ಪಡಸಾಲೆಗಳು ಇರುವುವು. ಗರ್ಭಗೃಹದಲ್ಲಿಯ ಪೀಠ, ಅದರ ಮೇಲೆ ಅರಳಿಯ ಗಾದಿ, ಅದರ ಮೇಲೆ ಮದ್ದಾನೇಶ್ವರ ಮೂರ್ತಿ. ಅದರ ಮುಂದೆ ಒಂದು ಕುಡುಗೋಲು. ಇದು ಗೋಣಿಬಸವೇಶ್ವರದೆಂದು ಹೇಳುವರು. ಆದರೆ ಅದರಲ್ಲಿ ಯಾವ ಬರವಣಿಗೆಯಿಲ್ಲ. ಈ ಮಠದಲ್ಲಿ ನಾಲ್ಕು ಗುಹೆಗಳು ಕಾಣುವುವು. ಮಠವನ್ನು ಪ್ರವೇಶಿಸಿದಾಗ ಬಲ ಭಾಗಕ್ಕೆ ಒಂದು ಗುಹೆ ; ಅದರಲ್ಲಿ ಒಂದು ಬಾವಿಯಿದೆ, ಎಡಭಾಗದಲ್ಲಿ ಒಂದು ಗುಹೆ, ಅದರಲ್ಲಿ ಏನೂ ಇಲ್ಲ, ಉಳಿದ ಅಂದರೆ ಮೂರನೇ ಗುಹೆಯಲ್ಲಿ ಮೊದಲ ದ್ವಾರದಿಂದ ಮತ್ತೊಂದು ದ್ವಾರದವರೆಗೂ ಗೋಡೆಗೆ ಹೊಂದಿಕೊಂಡು ೩ ೧/೨ ಅಡಿ ಎತ್ತರದ ಕಟ್ಟೆಯಲ್ಲಿ ೨೨ ಹೂಡೇವುಗಳು (೨೫ ಕೆ.ಜಿ. ಯಿಂದ ೪೫ ಕೆ.ಜಿ. ವರೆಗೂ ಧಾನ್ಯಗಳನ್ನು ತುಂಬಲಿಕ್ಕೆ ಸಾಧ್ಯತೆ ಇದೆ) ಅವುಗಳ ಮೇಲೆ ಗೋಡೆಯ ಶಿಲ್ಪಗಳಲ್ಲಿ ಸುಂದರ ಉಬ್ಬು ಚಿತ್ರಗಳು ಕಾಣುವುವು.

ನಾಲ್ಕನೇ ಗುಹೆಯಲ್ಲಿ ಎರಡು ಬಾವಿಗಳಿರುವುವು. ಮೊದಲ ಬಾವಿ ಉದ್ದ–೩ ಅಡಿ, ಅಗಲ–೬ ಅಡಿ, ಉಪ್ಪು ನೀರು, ಎರಡನೇ ಬಾವಿ ಉದ್ದ–೧೫ ಅಡಿ, ಅಗಲ–೧೦ ಅಡಿ, ಸಿಹಿ ನೀರು. ಇದರಲ್ಲಿಯೇ ದ್ವಾರದಿಂದ ದ್ವಾರದವರೆಗೂ ೪ ಅಡಿ ಉದ್ದ, ೪ ಅಡಿ ಅಗಲವುಳ್ಳ ೧೬ ಗೂಡುಗಳು, ೬ ಅಡಿ ಉದ್ದ, ೪ ಅಡಿ ಅಗಲವುಳ್ಳ ೪ ಗೂಡುಗಳು. ಒಟ್ಟಿಗೆ ೨೦ ಗೂಡುಗಳು ಇವೆ. ಅವುಗಳ ಬಾಗಿಲುಗಳಿಗೆ ೨೦ ಅಂಗುಲ ಉದ್ದ, ೨೦ ಅಂಗುಲ ಅಗಲವುಳ್ಳ ಕಲ್ಲುಗಳ ಚೌಕಟ್ಟುಗಳು ಇರುವುವು.

ಮಠದ ಹಿಂಭಾಗದಲ್ಲಿ ಒಂದು ಕಲ್ಲಿನ ಹೂಡೇವು ಇರುವುದು. ಮಠದ ಮೇಲ್ಭಾಗದಲ್ಲಿ ಹಿಂದುಗಡೆ ಮುಸ್ಲಿಂ ವಾಸ್ತು ಶೈಲಿಯ ಒಂದು ಎತ್ತರದ ನಮೂನೆ ಇದ್ದರೆ ಮುಂಭಾಗದಲ್ಲಿ ಬಸವಣ್ಣನ ಮೂರ್ತಿ ಕಂಡು ಬರುವುದು. ಅಲ್ಲಲ್ಲಿ ಅಂಜನೇಯನ ಚಿತ್ರಗಳು ಕಂಡು ಬರುವುವು.

ವಿಮರ್ಶೆ

೧) ಈ ಮಠವು ವಾಸ್ತುಶಿಲ್ಪ ದೃಷ್ಟಿಯಿಂದ ಹೇಳಿಕೊಳ್ಳುವಂಥದ್ದೇನು ಅಲ್ಲ. ಆದರೂ ಬೃಹದಾಕಾರವಾಗಿದೆ. ವಿಶಾಲವಾದ ಪ್ರಾಂಗಣವಿದೆ. ಇದನ್ನು ಅಲ್ಪ ಕಾಲದಲ್ಲಿ ಶ್ರೀ ಮದ್ದಾನೇಶ್ವರರಿಗೆ ಭಕ್ತರು ಕಟ್ಟಿ ಕೊಟ್ಟಿರುವರೆ ?

೨) ಮಠಕ್ಕೆ ಹಿಂದಿನ ಭಾಗದಲ್ಲಿ ಹೂಡೇವು ಇದೆ. ಮಠಗಳಲ್ಲಿ ಹೂಡೇವು ಏಕೆ ಇರುತ್ತದೆ ?

೩) ಮಠದಲ್ಲಿ ನಾಲ್ಕು ಗುಹೆಗಳು ಇರುವುವು ಈ ತೆರನಾದ ಗುಹೆಗಳು ಮಠಗಳಲ್ಲಿರುವುದು ಅಪರೂಪದ ಸಂಗತಿ.

೪) ಗುಹೆಗಳು ಒಂದು ವೇಳೆ ಇದ್ದರೂ ಅವುಗಳಲ್ಲಿ ಹೂಡೇವು ಮತ್ತು ಚಿಕ್ಕ ಚಿಕ್ಕ

ಗೂಡೆಗಳು ಹಾಗೂ ಮೂರು ಬಾವಿ ಗಳಿರುವುದು ಏಕೆ ?

೫) ಮಠದಲ್ಲಿ ಕಂಡು ಬರುವ ಉಬ್ಬು ಶಿಲ್ಪ ಗಳಲ್ಲಿ ಹೆಚ್ಚಾಗಿ ಶ್ರೀ ಆಂಜನೇಯ ದೇವರ ಮೂರ್ತಿಗಳು ಇರುವುವು.

೬) ಮಠದಲ್ಲಿ ಈಗಿರುವ ಶ್ರೀ ಮುದ್ದಾನೇಶ್ವರರ ಮೂರ್ತಿಯನ್ನು ಸ್ಥಾಪಿಸಿರುವ ಕಟ್ಟೆ ಸಾಮಾನ್ಯವಾದ ಈಗಿನ ಕಾಲದ ಕಟ್ಟೆ ಯಾಗಿದೆ.

೭) ಮಠದ ಯಾವ ಭಾಗದಲ್ಲಿಯೂ ಮುದ್ದಾ ನೇಶ್ವರರ ಅಥವಾ ಯೋಗಿಗಳ, ಸ್ವಾಮಿ ಗಳ, ಸಾಧು-ಸಂತರ, ಸಂನ್ಯಾಸಿಗಳ ಚಿತ್ರ ಗಳು ಕಂಡು ಬರುವುದಿಲ್ಲ.

೮) ಬಾಗಳಿಯ ಅನೇಕ ದೇವಾಲಯುಗಳ ಶಿಲ್ಪ ಗಳನ್ನು ಇಲ್ಲಿಗೆ ತಂದು ಈ ಕಟ್ಟಡಕ್ಕೆ ಜೋಡಿಸಿದಂತೆ ಕಂಡು ಬರುವುದು.

೯) ಹರಪನಹಳ್ಳಿ ಪಾಳೇಗಾರರ ಆರಾಧ್ಯ ದೇವರು ಆಂಜನೇಯ ಮತ್ತು ಉಚ್ಚಂಗೆಮ್ಮ. ಈ ಕಟ್ಟಡದಲ್ಲಿ ಕಂಡು ಬರುವ ಆಂಜನೇಯ ಅವರ ಮನೆ ದೇವರೇ ಇರಬೇಕು.

೧೦) ಹಿಂದಿನ ಕಾಲದಲ್ಲಿ ರೈತರ ದವಸ-ಧಾನ್ಯ ಗಳನ್ನು ಹಗೇವು, ಕಣಜ, ವಾಡೇವುಗಳಲ್ಲಿ ಸಂಗ್ರಹಿಸುತ್ತಿದ್ದರು. ಈ ತೆರನಾದ ವಾಡೇವುಗಳು ಗುಹೆಗಳಲ್ಲಿ ಕಂಡು ಬರುವು ದರಿಂದ ಇವುಗಳನ್ನು ಅರಸರು ಸಂಪತ್ತನ್ನು (ನಾಣ್ಯ) ಸಂಗ್ರಹಿಸಲಿಕ್ಕೆ ಬಳಸಿಕೊಂಡಿರ ಬೇಕು.

೧೧) ಇದರ ಗುಹೆಗಳು, ಬಾವಿಗಳು, ಅರಸರು ಗುಪ್ತವಾಗಿ ಅಡಗಿಕೊಳ್ಳಲು, ತಪ್ಪಿಸಿ ಕೊಂಡು ಬೇರೆ ಕಡೆಗೆ ಪಲಾಯನ ಮಾಡಲು ನಿರ್ಮಿಸಿದವು ಆಗಿರಬೇಕು.

೧೨) ಹೂಡೇವು ಬರುವ ಶತ್ರುಗಳನ್ನು ನಿರೀಕ್ಷಿ ಸಲು ನಿರ್ಮಿಸಿರಬೇಕು.

೧೩) ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯ ನಗರ, ನೊಳಂಬ, ಹರಪನಹಳ್ಳಿ ಪಾಳೇ ಗಾರರ ಆಳ್ವಿಕೆಗೆ ಬಾಗಳಿಪಟ್ಟಣ ಒಳ ಗಾಗಿದ್ದು, ಇತಿಹಾಸದಿಂದ ನಮಗೆ ತಿಳಿಯು ತ್ತದೆ. ಬಾಗಳಿ ಪಟ್ಟಣ ಈಗಿರುವ ಕೂಲ ಹಳ್ಳಿ ಗ್ರಾಮದವರೆಗೂ ವ್ಯಾಪಿಸಿದ್ದಿತ್ತೆಂದು ಹೇಳಲಾಗಿದೆ. ಮೇಲಿನ ಕೆಲವು ಅಂಶ ಗಳನ್ನು ಗಮನಿಸಿದರೆ ಈ ಮಠ ಬಾಗಳಿ ರಾಜ್ಯವನ್ನು ಆಳಿದ ಅರಸರ ಆರಾಧ್ಯ ದೇವರ ದೇವಾಲಯ ಮತ್ತು ಅರಮನೆ ಪ್ರದೇಶ ಇರಬೇಕು. ಎಂಬುವ ನನ್ನ ಊಹೆಯನ್ನು ಬಲಪಡಿಸುತ್ತದೆ. ಇತಿಹಾ ಸದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ. ಹೆಚ್ಚಿನ ಸಂಶೋಧನೆಗೆ ಅವಕಾಶವನ್ನು ಕಲ್ಪಿಸಿದೆ.

## ಆಧಾರಗಳು

೧) ವಾಸ್ತುಶಿಲ್ಪ, ೨) ಹೂಡೇವು, ೩) ಗೋಡೆಗಳು, ೪) ಪ್ರಾಂಗಣ, ೫) ಗುಹೆಗಳು, ೬) ಬಾವಿಗಳು, ೭) ವಾಡೇವುಗಳು, ೮) ಗೂಡುಗಳು, ೯) ವಯೋ ವೃದ್ಧರ ಹೇಳಿಕೆಗಳಲ್ಲಿ ದಟ್ಟವಾಗಿ ಪ್ರಸಾರವಾದ ಮಾಹಿತಿಗಳು, ೧೦) ಉಚ್ಚಂಗೆಮ್ಮನ ಗಂಟೆ ಶಾಸನ, ೧೧) ಗೋಣಿ ಬಸವೇಶ್ವರ ನಾಟಕ, ೧೨) ಹರಪನಹಳ್ಳಿ ಪಾಳೇಗಾರರಿಗೆ ಸಂಬಂಧಿಸಿದ ಒಂದು ಹಳೇ ದಾಖಲೆ ಹಾಗೂ ೧೪) ಮಠಕ್ಕೆ ಸಂಬಂಧಿಸಿದ ಚಿತ್ರಗಳು.

ಹನುಮಾಕ್ಷಿ ಗೋಗಿ*

# ಕುಹುಂಡಿ ಪಟ್ಟಣ ಎಲ್ಲಿದೆ?

ಕುಹುಂಡಿ ೩೦೦೦ ಪ್ರಾಂತದ ರಾಜಧಾನಿ ಎಲ್ಲಿದೆ? ೧೩ನೆಯ ಶತಮಾನದ ಮಧ್ಯಭಾಗದವರೆಗೆ ಬೆಳಗಾವಿ ಜಿಲ್ಲೆ ಮತ್ತು ಕೊಲ್ಲಾಪುರ ಗಡಿ ಪ್ರದೇಶದ ಭಾಗಗಳಲ್ಲಿ ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ತುಂಬ ಸುಪ್ರಸಿದ್ಧವಾದ ಪ್ರಾಂತ ಕುಹುಂಡಿ ೩೦೦೦. ಶಾಸನಗಳಲ್ಲಿ ಈ ನಾಡನ್ನು ಕೂಂಡಿನಾಡು, ಕುಹುಂಡಿ ಮಂಡಳ, ಕೂಂಡಿ ಮೂಸಾಸಿರ, ಕೂಂಡಿ ೩೦೦೦, ಕೂಂಡಿ ದೇಶ, ಕೂಂಡಿ ತ್ರಿಸಹಸ್ರ[1] ಇತ್ಯಾದಿ ಹೆಸರುಗಳಲ್ಲಿ ಗುರುತಿಸಲಾಗಿದೆ.

ಸುಮಾರು ೧೧೯೦ರಲ್ಲಿ ರಚಿತವಾದ ಸಮಯ ಪರೀಕ್ಷೆಯಲ್ಲಿ ಕವಿಬ್ರಹ್ಮಶಿವನು ಜೈನಾಚಾರ್ಯರು, ಐತಿಹಾಸಿಕ ವ್ಯಕ್ತಿಗಳನ್ನು ಸ್ತುತಿಸುವ ಸಂದರ್ಭದಲ್ಲಿ

ಪ್ರವಿಮಳ ಜಿನಶಾಸನದಿಂ ।
ಪವಿತ್ರಮೆನೆ ಮಾಡಿ ಕೂಂಡಿ ಮೂಸಾಸಿರಮಂ ।
ಭುವನನುತನಾದನಾತ್ಮೀ
ಯುವಚೋಮೃತದಿಂದೆ ಪೇಳ್ದ ಪೆರ್ಗ್ಗಡೆ ಬೊಮ್ಮಂ॥

---

* ಅಸಿಸ್ಟೆಂಟ್ ರಿಜಿಸ್ಟ್ರಾರ್, ಸಹಕಾರ ಇಲಾಖೆ. ಹಾವೇರಿ (ಕಾರ್ತೀಕಶ್ರೀ, ಎಚ್.ಐ.ಜಿ. ೨೭, ನವನಗರ, ಹುಬ್ಬಳ್ಳಿ-೫೮೦ ೦೨೫)

1 'ಕೂಣ್ಡಿ ಮಹೀವಳಯಾನ್ತರಾಳದೊಳ್'—ಸೊಗಲಶಾಸನ, ಕ್ರಿ.ಶ. ೯೮೦, EI, XVI, ಪು. ೪ ; 'ಕೂಣ್ಡಿ ಮಹೀವಳಯಾತಿಶಯಾಧೀಶ್ವರಂ'—ಅದೇ. ಪು. ೫ ; 'ಕೂಂಡಿ ಮೂಸಾಸಿರ'—ನರಗುಂದ ಕ್ರಿ.ಶ. ೧೦೭೪. KI, V, p. 30 ; 'ಕುಹುಣ್ಡಿ ಮಣ್ಡಳ'—ಸೌಂದತ್ತಿ, ಕ್ರಿ.ಶ. ೧೦೮೭, KI, V, p. 204 ; 'ಕೂಣ್ಡಿ ನಾಡ'—ಚಿಕ್ಕಹಂದಿಗೋಳ, ಕ್ರಿ.ಶ. ೧೧೯೯, KI, V p. 48 : 'ಕೂಂಡಿ ೩೦೦೦' ವಿಭಾಗ—ಯರಗಾಂವಿ ಕ್ರಿ.ಶ. ೧೧೦೨ : 'ಕೂಂಡಿ ನಾಮೋದ್ವದೇಶಂ'—ತೇರದಾಳ ಕ್ರಿ.ಶ. ೧೧೨೩, KI, V p 76 ; 'ಶ್ರೀಮತು ಕೂಂಡಿ ಮೂಱುಸಾಸಿರದೊಳಗೆ'—ತೇರದಾಳ. ಕ್ರಿ.ಶ. ೧೧೮೧. KI, V p. 298 ; 'ಕೂಂಡಿ ಮೂಸಾಸಿರ'—ತೇರದಾಳ. ಕ್ರಿ.ಶ. ೧೧೮೭, KI, V, p. 301 ; 'ಕೂಂಡಿ ನಾಡೊಳು'—ಅರ್ಜುನವಾಡ ಕ್ರಿ.ಶ. ೧೨೬೦, ಶಾಸನ ಸಂಪದ, (ಸಂ.) ಎಂ. ಎಂ. ಕಲಬುರ್ಗಿ ; 'ಕೊಣ್ತಿದೇಶ'—ಕೊಡ್ಡಸಿ, ಕ್ರಿ.ಶ. ೧೦೨೪, EI, XIV, p. 31 ; 'ಕೂಣ್ಡಿ ೩೦೦೦—ಕ್ರಿ.ಶ. ೧೧೨೧-೨೨. JBBRAS, Vol. X, p. 291 ; Copper Plate Inscriptions of Western Chalukya King Vijayaditya Satyashraya ಲೇಖನದಲ್ಲಿ "Some of the grants of Vijayaditya have been issued from Rasenagara. *Kuhundinagara*" ಎಂದಿದೆ. ARSIE, 1934-35. App. : Kolhapur Copper Plates of Gandaradityadeva ಲೇಖನದಲ್ಲಿ 'ಕೂಂಡಿ ದಂಡೇಶ' ಎಂಬ ಆಳತೆಯು ಉಲ್ಲೇಖವಿದೆ. EI, XXIII, p. 31 : Kolhapur Copper Plates of Silahara Gandaradityadeva ಲೇಖನದಲ್ಲಿ 'ಕೂಣ್ಡಿ ದೇಶಾಧಿಪೋ' ಎಂದಿದೆ. EI, XXVII, p. 181 : ನೇಸರಗಿ ತಾಮ್ರಪಟ ಶಾಸನ 'ಕೂಂಡಿ ಅರಸರ ಇಚ್ಛೆಗಳನ್ನು ಪೂರೈಸುವ'ನೆಂಬ ಶಿವಸ್ತೋತ್ರವನ್ನು ಹೊಂದಿದೆ. JBBRAS X, p. 194 : 'ಕೂಂಡಿ ೩೦೦೦'ದಲ್ಲಿರುವ ಚಿಂಚೋಳಿ ಗ್ರಾಮದ ಉಲ್ಲೇಖ ರಾಯಬಾಗ ಶಾಸನದಲ್ಲಿದೆ : 'ಕೂಂಡಿ ೩೦೦೦'ವನ್ನು ರಟ್ಟಕತ್ತಮದೇವನಾಳುವಾಗ ಗೋಕಾಕ್ ಫಾಲ್ಸ್ ಶಾಸನ ಬರೆಯಲಾಗಿದೆ : 'ಕೂಂಡಿ ೩೦೦೦'ವನ್ನು ಜಗನೂರು ಶಾಸನ ಹೆಸರಿಸಿದೆ : 'ಕೂಂಡಿಯ ಕೋಲು' ಎಂಬ ಅಳತೆ ಎಕ್ಸಂಬಾ ಶಾಸನದಲ್ಲಿದೆ. ಕರ್ನಾಟಕ ಭಾರತಿ, ೧೧-೨, ಪು. ೪೦-೪೧. ಡಾ॥ ಆರ್. ಎನ್. ಗುರವ.

ಆ ವಿಭುವಿನಗ್ರತನಯಂ ।
ಪಾವನ ಚರಿತಂ ವಿನೇಯಕಲ್ಪಮಹೀಜಂ ।
ಕೇವಳಮೆ ನಾಗದೇವಂ ।
ಭೂವಿಶ್ರುತ ಕೀರ್ತಿಮಂಡಳೇಶ್ವರ ತಿಲಕಂ ॥[2]

ಎಂದು ಇಬ್ಬರು ವ್ಯಕ್ತಿಗಳನ್ನು ಹೆಸರಿಸುತ್ತಾನೆ. ಹೀಗೆ ಬ್ರಹ್ಮಶಿವನು ತನ್ಮಯತೆಯಿಂದ ಕೊಂಡಾಡಿರುವ ಆ ತಂದೆ ಮಕ್ಕಳು ಯಾರೆಂಬುದು ತಿಳಿಯದು" ಎನ್ನುತ್ತಾರೆ ಕೆ. ಅನಂತರಾಮು ಅವರು[3]. "ಇಂದಿನ ಬೆಳಗಾವಿ ಜಿಲ್ಲೆಯ ಸುತ್ತಮುತ್ತಲ ಪ್ರದೇಶವು ಹಿಂದೆ ಕೂಂಡಿ ಮಂಡಲ ಅಥವಾ ಕುಹುಂಡಿ ಮಂಡಲ ಎಂದು ಕರೆಯಲ್ಪಡುತ್ತಿತ್ತೆಂದೂ ಜೈನಧರ್ಮಕ್ಕೆ ವಿಶೇಷ ಬೆಂಬಲ ನೀಡಿದ[4] ಶಿಲಾಹಾರ ಮತ್ತು ರಟ್ಟವಂಶದ ಅರಸರು ಅಲ್ಲಿ ಆಳುತ್ತಿದ್ದರೆಂದೂ" ಪಿ. ಬಿ. ದೇಸಾಯಿ ಹೇಳಿದ್ದಾರೆ. ಜೆ. ಎಫ್. ಫ್ಲೀಟ್ ಅವರು ಕೂಡ ತಮ್ಮ 'The Kundi Country' ಲೇಖನದಲ್ಲಿ[5] "There was a town named Kuhundipattana from which the country took its name. It is mentioned in an inscription of A.D. 1135 at Kolhapur. The record names among the persons who made the grant, the Heggade Ravasetti who was the Sasaniga of the Adityagriha of Kundipattana. The town has to be looked for in the Belgaum dist. or in the Kolhapur territory. But I cannot as yet find it. And we shall probably eventually identify it with some place now posessing a totally different name. Any genuine tradition which might have helped us to identify and locate the town of Kundipattana seems to have been lost" ಎನ್ನುತ್ತಾರೆ.

ವಿದ್ಯಾಗುರುಗಳಾದ ಡಾ॥ ಎಂ. ಎಂ. ಕಲಬುರ್ಗಿಯವರು ತಮ್ಮ 'ಶಾಸನ ಸಂಪದ' ಪುಸ್ತಕದ ಟಿಪ್ಪಣಿಗಳಲ್ಲಿ ಕೂಂಡಿನಾಡಿನ ಬಗ್ಗೆ ವಿವರಿಸುತ್ತ "ಕೂಂಡಿ ಮೂಸಾಸಿರ, ಕುಹುಣ್ಡಿ ವಿಷಯ, ಕೂಂಡಿ ತ್ರಿಸಹಸ್ರ ಇತ್ಯಾದಿ ಹೆಸರುಗಳಿಂದ ಶಾಸನಗಳಲ್ಲಿ ಪ್ರಸಿದ್ಧವಿದೆ. ಈ ನಾಡಿನ ಮುಖ್ಯಪಟ್ಟಣವಾದ ಕೂಂಡಿ ಗೋಕಾಕ–ರಾಯಭಾಗ ತಾಲ್ಲೂಕುಗಳ ನಡುವೆ ಇದ್ದಿರಬಹುದು. ಚಿಕ್ಕೋಡಿ, ಹಿರೇಕೋಡಿ ಎಂಬ ಗ್ರಾಮಗಳು ಈಗಲೂ ಇವೆ. ಇವುಗಳಲ್ಲಿ ಒಂದು ಕೊಂಡಿ ಆಗಿರಬಹುದು."[6] ಎಂಬ ಊಹೆಯನ್ನು ಮುಂದಿಡುತ್ತಾರೆ. ಅವರೇ ಇನ್ನೊಂದೆಡೆ "ಈ ಪ್ರಾಂತದ ಕೇಂದ್ರಪಟ್ಟಣ ಕುಹುಂಡಿ. ಇದನ್ನು ಗೊತ್ತುಹಚ್ಚುವುದು ಇನ್ನೂ ಸಾಧ್ಯವಾಗಿಲ್ಲ. ಬಹುಶಃ ಚಿಕ್ಕೋಡಿ, ಹಿರೇಕೋಡಿ ಗ್ರಾಮಗಳ ಹೆಸರನ್ನು ಚಿಕ್ಕ ಕುಹುಂಡಿ, ಹಿರಿಯ ಕುಹುಂಡಿ ಎಂದು ಬಿಡಿಸಿ, ಇವುಗಳಲ್ಲಿ ಒಂದು ಪ್ರಾಚೀನ ಕುಹುಂಡಿ ಪಟ್ಟಣವಾಗಿರಬೇಕೆಂದು ಊಹಿಸಬಹುದಾಗಿದೆ. ಕೊಲ್ಲಾಪುರ ಶಾಸನವು ಈ ಪಟ್ಟಣದಲ್ಲಿ ಆದಿತ್ಯಗೃಹ ಎಂದರೆ ಸೂರ್ಯ ದೇವಾಲಯವಿದ್ದುದನ್ನು ಸೂಚಿಸುತ್ತದೆ. ಈ ಸೂಚನೆಯನ್ನು ಆಧಾರವಾಗಿಟ್ಟುಕೊಂಡು ಈ ನಗರವನ್ನು ಇನ್ನೂ ಖಚಿತವಾಗಿ ಹುಡುಕಬಹುದಾಗಿದೆ,"[7] ಎನ್ನುತ್ತಾರೆ. ಅವರೇ ಮತ್ತೊಂದೆಡೆ "ಬೆಳಗಾವಿ ಜಿಲ್ಲೆಯ ಪಟ್ಟಣಕೋಡಿ ಇತ್ಯಾದಿ ಗ್ರಾಮಗಳಲ್ಲಿ ಶೋಧ ನಡೆಸಿ ರಾಜಧಾನಿ ಕುಹುಂಡಿಯನ್ನು ಹುಡುಕಬೇಕಾಗಿದೆ"[8] ಎಂದು ಸೂಚಿಸುತ್ತಾರೆ.

ಈ ಎಲ್ಲ ಮೇಲ್ಕಾಣಿಸಿದ ಉಲ್ಲೇಖಗಳನ್ವಯ ಕುಹುಂಡಿ ಪಟ್ಟಣವನ್ನು ಹುಡುಕಲು ನಮಗಿರುವ ಸದ್ಯದ ಏಕೈಕ ಆಧಾರ ಕೊಲ್ಲಾಪುರದ ಪಾರ್ಶ್ವನಾಥ ಬಸದಿಯ ಶಾಸನ (ಕ್ರಿ.ಶ. ೧೧೩೫)ದಲ್ಲಿ ಬರುವ "ಕೂಂಡಿ

2 'ಸಮಯ ಪರೀಕ್ಷೆ', ಸಂ. ಬಿ. ಎಸ್. ಕುಲಕರ್ಣಿ, ಪು. ೮
3 ಕವಿಬ್ರಹ್ಮಶಿವ ಒಂದು ಅಧ್ಯಯನ, ಪು. ೪೦
4 *Jainism in South India & Some Jaina Epigraphs*, ಪು. ೧೦೯-೧೦
5 *Indian Antiquary*, Vol. XXIX, p. 278-280.
6 ಶಾಸನಸಂಪದ, ದ್ವಿತೀಯ ಮುದ್ರಣ, ೧೯೭೨, ಟಿಪ್ಪಣಿಗಳು
7 ಮಹಾರಾಷ್ಟ್ರದ ಕನ್ನಡ ಶಾಸನಗಳು, ಪು. ೨೦
8 ಕನ್ನಡ ಸಂಶೋಧನಾ ಶಾಸ್ತ್ರ, ಪು. ೧೧೫

ಪಟ್ಟಣದಾದಿತ್ಯಗೃಹದ ಸಾಸನಿಗಂ ಹೆಗ್ಗಡೆ ರಾವ ಸೆಟ್ಟಿಯುಂ"[9] ಎಂದು ಹೇಳುವ ಸಾಲು ಮಾತ್ರ. ಈ ಹಿನ್ನೆಲೆಯಲ್ಲಿ ಡಾ॥ ಕಲಬುರ್ಗಿಯವರು ಸೂಚಿಸಿದಂತೆ ಚಿಕ್ಕೋಡಿ ತಾಲ್ಲೂಕಿನಲ್ಲಿ ಬರುವ ಕುಡಿ, ಕೋಡಿ ಶಬ್ದಗಳಿಂದ ಅಂತ್ಯವಾಗುವ ಹೆಸರುಳ್ಳ ಊರುಗಳಲ್ಲಿ ಆದಿತ್ಯ ದೇವಾಲಯದ ಪರಿಶೋಧನೆ ಕೈಕೊಳ್ಳಬೇಕಾದ ಅವಶ್ಯಕತೆ ಪ್ರಾಪ್ತವಾಯಿತು.

ಚಿಕ್ಕೋಡಿ ಊರಿನಲ್ಲಿ ಯಾವುದೇ ಹೇಳಿಕೊಳ್ಳುವಂಥ ಪ್ರಾಚ್ಯಾವಶೇಷಗಳು ದೊರೆಯಲಿಲ್ಲ. ಹಿರೇಕೋಡಿ ಗ್ರಾಮ ಹಾಳು ಮಣ್ಣಿನಿಂದ ಕೂಡಿದ್ದು ಒಂದು ಭಗ್ನಗೊಂಡ ಪಾರ್ಶ್ವನಾಥ ವಿಗ್ರಹ, ಗಣಪತಿ ವಿಗ್ರಹ, ಒಂದು ಕೈಯೆತ್ತಿದ್ದ ಮಾಸ್ತಿಕಲ್ಲು (ಕಂಬಕ್ಕೆ ಹೊಂದಿ), ಒಂದು ವಿಷ್ಣು ವಿಗ್ರಹಗಳು ದೊರೆತವು. ಊರಿನಲ್ಲಿ ಯಾವುದೇ ಸೂರ್ಯದೇವಾಲಯವಾಗಲಿ, ಸೂರ್ಯ ವಿಗ್ರಹವಾಗಲಿ ಕಂಡುಬರಲಿಲ್ಲ.

ಪಟ್ಟಣಕೋಡಿ ಗ್ರಾಮದ ಪರಿಶೀಲನೆ ನಡೆಸಿದಾಗ ಸಿದ್ದಗೊಂಡ ಚಿರಾಯಿ ಎನ್ನುವವರ ಪೂರ್ವಜರಿಗೆ ಸುಮಾರು ೧೦೦ ವರ್ಷಗಳ ಹಿಂದೆ ಅವರದೇ ಹೊಲದಲ್ಲಿ ಸಿಕ್ಕ ಸುಮಾರು ೧೧ನೆಯ ಶತಮಾನದ ಸುಂದರವಾದ ಚತುರ್ಭುಜ ಗಣಪತಿ ವಿಗ್ರಹವನ್ನು ಗಮನಿಸಲಾಯಿತು. ಬಾಶೆ ಎನ್ನುವವರ ಹೊಲದಲ್ಲಿಯೂ ದೇವಸ್ಥಾನದ ಕಂಬಗಳು, ಲಲಾಟ ಬಿಂಬಗಳು ಇತ್ಯಾದಿ ದೇಗುಲದ ಅವಶೇಷಗಳು ಸಿಕ್ಕಾಗ ಅವುಗಳನ್ನು ಕೆಳಗೆ ಹಾಕಿ ಕೆರೆಯನ್ನು ೪–೫ ವರ್ಷಗಳ ಹಿಂದೆ ಮುಚ್ಚಲಾಯಿತೆಂದೂ ತಿಳಿಸಿದರು. ಊರಲ್ಲಿಯ ಲಕ್ಷ್ಮೀದೇವಿ ಗುಡಿ, ಪಾರ್ಶ್ವನಾಥ ಬಸದಿಗಳನ್ನೂ ಗಮನಿಸಲಾಯಿತು. ಊರಲ್ಲಿಯ ಉಳಿದ ಎಲ್ಲ ಚಿಕ್ಕಪುಟ್ಟ ಗುಡಿಗಳನ್ನು ಪರಿಶೀಲಿಸಲಾಗಿ ವಿಠ್ಠಲ ಮಂದಿರ ಎಂದು ಕರೆಸಿಕೊಳ್ಳುವ ದೇಗುಲದಲ್ಲಿ ಸೂರ್ಯ ವಿಗ್ರಹ ನೋಡಲು ಸಿಕ್ಕಿತು. ದೇವಸ್ಥಾನವನ್ನು ಇತ್ತೀಚಿನ ೫೦–೬೦ ವರ್ಷಗಳಲ್ಲಿ ಕಟ್ಟಲಾಗಿದ್ದು ವಿಗ್ರಹ ಮಾತ್ರ ಸುಮಾರು ೧೧ನೆಯ ಶತಮಾನದ ಅಂತ್ಯದ ಕಾಲದ್ದಾಗಿದೆ.[10]

ಸೂರ್ಯ ವಿಗ್ರಹದ ವಿವರಗಳು ಇಂತಿವೆ. ವಿಗ್ರಹದ ಭುಜದವರೆಗೆ ಎತ್ತಿಹಿಡಿದ ಎರಡೂ ಕೈಗಳಲ್ಲಿ ಕಮಲದ ಹೂವುಗಳಿದ್ದು ಅವು ಭುಜದ ಮೇಲೆ ಒರಗಿಕೊಂಡಿವೆ. ಅನೇಕ ಆಭರಣಗಳನ್ನು ಧರಿಸಿದ ವಿಗ್ರಹದ ಶಿರೋಭಾಗದ ಹಿಂದೆ ಕಾಂತಿ ಮಂಡಲವಿದೆ. ಕರಂಡ ಮಕುಟವನ್ನು ಧರಿಸಿರುವ ಆದಿತ್ಯನ ಕಿವಿಯಲ್ಲಿ ಕುಂಡಲಗಳಿವೆ. ಎಡಭುಜದ ಮೇಲಿಂದ ಸೊಂಟದವರೆಗೆ ಯಜ್ಞೋಪವಿತವನ್ನು ಇಳಿಬಿಡಲಾಗಿದೆ. ಕೊರಳಲ್ಲಿ ನಾನಾಬಗೆಯ ಹಾರಗಳಿವೆ. ವಕ್ಷಸ್ಥಲದಲ್ಲಿ ಕವಚವಿದೆ. ಧರಿಸಿದ ವಸ್ತ್ರ ಪಾರದರ್ಶಕವಾಗಿದೆ. ವಿಗ್ರಹದ ಪೀಠಭಾಗ ಒಡೆದಿದ್ದು ಕೆಳಗಡೆಯಲ್ಲಿ ಒಂದು ಕುದುರೆ ಮಾತ್ರ ಕಾಣಿಸುತ್ತದೆ. ಸೂರ್ಯನ ಬಲ ಮತ್ತು ಎಡಭಾಗಗಳಲ್ಲಿ ಉಷೆ–ಪ್ರತ್ಯುಷೆಯರಿದ್ದಾರೆ. ಈ ವಿಗ್ರಹವು ೨ ೧/೨ ಅಡಿ ಎತ್ತರದ ಕರಿಕಲ್ಲಿನ ವಿಗ್ರಹವಾಗಿದ್ದು ಶಿಲ್ಪಶಾಸ್ತ್ರದ ಪ್ರಕಾರ ಆದಿತ್ಯ ವಿಗ್ರಹದ ಬಹುಪಾಲು ಗುಣಲಕ್ಷಣಗಳನ್ನು ಹೊಂದಿದೆ.[11]

ಈ ಮೂರ್ತಿ ಎಲ್ಲಿ ಸಿಕ್ಕಿತು ಎಂಬ ಬಗ್ಗೆ ಸ್ಥಳೀಕರನ್ನು ವಿಚಾರಿಸಿದಾಗ ಅಲ್ಲಿಯ ಪೂಜಾರಿ ಸುಮಾರು ೧೦೦ ವರ್ಷಗಳ ಹಿಂದೆ ಮಾಲಗಾರರ ಹೊಲದಲ್ಲಿ ಕಂಬ ನೆಡಲು ತಗ್ಗು ತೋಡುವಾಗ ಸಿಕ್ಕ ಮೂರ್ತಿ ಇದೆಂದೂ ಅದನ್ನು ವಿಠ್ಠಲ ಎಂದು ತಪ್ಪಾಗಿ ಗುರುತಿಸಿ ಪೂಜಿಸುತ್ತಿರುವುದಾಗಿಯೂ ತಿಳಿಸಿದರು. ಅಲ್ಲದೆ ಮಾಲಗಾರರ ಹೊಲದ ಪಕ್ಕದಲ್ಲಿಯೇ ಪೂಜಾರರ ಹೊಲ ಇರುವುದೆಂದೂ ಆ ಹೊಲಗಳಲ್ಲಿ ಉತ್ಖನನ ಮಾಡಿದರೆ ಸೂರ್ಯ ದೇವಾಲಯ ಸಿಗಬಹುದೆಂದೂ ತಿಳಿಸಿದರು. ಈ ಮೂರ್ತಿಯ ಜೊತೆಯಲ್ಲಿಯೇ ಸಿಕ್ಕ ಕಲಾದಗಿ ಸುಣ್ಣದ ಕಲ್ಲಿನಲ್ಲಿ

---

9 ಅ) ಕೊಲ್ಲಾಪುರ-ಗ್ರಹಾಮ್, ಪು. ೩೫೭, ನಂ. ೩ ; ಆ) ನಿಂಬಸಾಮಂತಚರಿತೆ, ಸಂ. : ಎಂ. ಎಂ. ಕಲಬುರ್ಗಿ, ಪು. ೧೩೯ ; ಇ) ಶಿಲಾಹಾರ ರಾಜವಂಶಾಚಾ ಇತಿಹಾಸ ಆಣಿ ಕೋರೀವ ಲೇಖ, ಖಂಡ ೨ ಭಾಗ ೩ ರಿಂದ ಉದ್ಧೃತ.

10 ಕಾಲ ಗುರುತಿಸುವಲ್ಲಿ ನೆರವಾದವರು ಡಾ॥ ರಾಜಶೇಖರ ಸಿಂದಗಿಯವರು ಮತ್ತು ಡಾ॥ ಆರ್. ಎಂ. ಷಡಕ್ಷರಯ್ಯನವರು.

11 The Elements of Hindu Iconography—T. A. Gopinath Rao, Vol I, Part II.

ಕೆತ್ತಲಾದ ಶಿವಲಿಂಗ, ಬಸವಣ್ಣ ಇತ್ಯಾದಿಗಳನ್ನು ತೋರಿಸಿದರು. ಆದರೆ ಪರಿವೀಕ್ಷಣಾ ಸಮಯದಲ್ಲಿ ಯಾವ ಶಾಸನಗಳೂ ದೊರೆಯಲಿಲ್ಲ.

ಸದ್ಯ ಪಟ್ಟಣಕೋಡಿ ಸುಮಾರು ೧೦,೦೦೦ ಜನ ವಸತಿಯುಳ್ಳ ಗ್ರಾಮ. ಊರಿನ ಹರಹು ಈಗ ಚಿಕ್ಕದಾಗಿದ್ದರೂ ಪ್ರಾಚ್ಯಾವಶೇಷಗಳು ಸಿಕ್ಕ–ಸಿಗುತ್ತಿರುವ ನೆಲೆಗಳನ್ನು ಗಮನಿಸಿದಾಗ ೮–೧೦ ಕಿಲೋಮೀಟರ್ ವ್ಯಾಪ್ತಿಯನ್ನು ಈ ಹಿಂದೆ ಗ್ರಾಮ ಹೊಂದಿತ್ತೆಂದು ಹೇಳಬಹುದು. ಊರು ಮಿನ್ನೆಯ ಮೇಲಿದ್ದು ಸೂರ್ಯ ವಿಗ್ರಹ ಸಿಕ್ಕ ಪ್ರದೇಶ ಹಳ್ಳದ ಹತ್ತಿರ ತಗ್ಗಿನಲ್ಲಿ ಇದೆ. ಊರಿನಲ್ಲಿ ಸಿಕ್ಕ ಪ್ರಾಚ್ಯಾವಶೇಷಗಳು ಮತ್ತು ದೇವಾಲಯಗಳಿಂದ ಶೈವ, ವೈದಿಕ, ಜೈನ ಮತಾವಲಂಬಿಗಳೆಲ್ಲರೂ ಒಂದು ಕಾಲದಲ್ಲಿ ಈ ಊರಿನಲ್ಲಿ ವಾಸಿಸುತ್ತಿದ್ದರೆಂದು ಹೇಳಬಹುದು. ಸದ್ಯ ಊರಿನಲ್ಲಿ ವಾಸಿಸುವ ಜನರಲ್ಲಿ ಶೇ. ೬೦ ಜನ ಜೈನಧರ್ಮಕ್ಕೆ ಸೇರಿದವರಾಗಿದ್ದಾರೆ.

ಮೂಲತಃ "ಪಟ್ಟಣ" ಎಂದರೆ ಸಂತೆ ನೆರೆಯುವ ಸ್ಥಳ ಮತ್ತು ಅಲ್ಲಿ ವ್ಯಾಪಾರ ಮಾಡುವವರು ಪಟ್ಟಣಸೆಟ್ಟಿಯರು ಎಂದು ಕರೆಸಿಕೊಳ್ಳುತ್ತಾರೆ. ಆದರೆ ಆಲಂದೆ ಸಾಸಿರದ ರಾಜಧಾನಿ ಅಲಂದೆಯ ಶಾಸನದಲ್ಲಿ (ಕ್ರಿ.ಶ. ೧೦೮೨)[12] ಬರುವ "ಪಟ್ಟಣದ ಹೆಗ್ಗಡೆ", ಸಗರವೈನೂರರ ರಾಜಧಾನಿ ಸಗರದ ಶಾಸನ (ಕ್ರಿ.ಶ. ೧೧೯೬)[13] ದಲ್ಲಿಯ "ಮಹಾಪಟ್ಟಣ ಸಗರ", ಬಂಕಾಪುರದ ಶಾಸನಗಳಲ್ಲಿ ಬರುವ "ಶ್ರೀ ಪೊಳಲ್ ಪಟ್ಟಣಂ ರಾಜಧಾನಿ ಬಂಕಾಪುರ",[14] "ಶ್ರೀ ಮದ್ರಾಜಧಾನಿ ಪಟ್ಟಣಂ ಬಂಕಾಪುರ",[15A] ಶ್ರೀ ಮದೀಂದ್ರವಲ್ಲಭ ರಾಜಧಾನಿ ಪಟ್ಟಣಂ ಬಂಕಾಪುರ",[15B] "ಯಿಂದ್ರನಿಜ ರಾಜಧಾನಿ ಪಟ್ಟಣಂ ಬಂಕಾಪುರ"[15C] ಎಂಬ ಉಲ್ಲೇಖಗಳು ಶರಣರ ವಚನಗಳಲ್ಲಿ ಬರುವ "ಕಲ್ಯಾಣಪಟ್ಟಣ" ಎಂಬ ಉಲ್ಲೇಖಗಳ ಆಧಾರದಿಂದ ರಾಜಧಾನಿ ಅಥವಾ ಪ್ರಾಂತಗಳ ಕೇಂದ್ರಕ್ಕೆ "ಪಟ್ಟಣ" ಎಂದು ಕರೆಯಲಾಗಿದೆಯೆಂದು ಗಮನಿಸಬಹುದು. ಹೀಗಾಗಿ ಪಟ್ಟಣ ಕುಹುಂಡಿ ಅರ್ಥಾತ್ ರಾಜಧಾನಿ ಕುಹುಂಡಿಯೇ ಪಟ್ಟಣ ಕೋಡಿ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಪಟ್ಟಣಕೋಡಿ ಎಂಬ ಹೆಸರನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ನೋಡಿದಾಗ ಕುಹುಂಡಿ>ಕೊಂಡಿ> ಕೂಡಿ > ಕುಡಿ > ಕೋಡಿಯಾಗಿರುವ ಸಾಧ್ಯತೆಗಳಿವೆ. ಮೊದಲು ಮಧ್ಯದ ಅಕ್ಷರ ಲೋಪವಾಗಿ ಹಿಂದಿನ ಅಕ್ಷರ ದೀರ್ಘವಾಗಿ, ನಂತರ ಬಿಂದು ಲೋಪವಾಗಿ, ತದನಂತರ ದೀರ್ಘಾಕ್ಷರ ಹ್ರಸ್ವವಾಗಿದೆ. ಬರುಬರುತ್ತ ಜನರ ಬಾಯಲ್ಲಿ ಉ> ಒ ಓ ಪರಿವರ್ತನೆಯಾಗಿ (ಕುಡು> ಕೊಡು ಆದಂತೆ) ಇಂದಿನ ಪಟ್ಟಣಕೋಡಿ ಎಂಬ ನಾಮರೂಪ ಸಿದ್ಧವಾಗುತ್ತದೆ.

ಇನ್ನು 'ಕುಹುಂಡಿ' ಗ್ರಾಮನಾಮದ ವ್ಯುತ್ಪತ್ತಿಯ ಬಗ್ಗೆ ವಿದ್ವಾಂಸರ ಮುಂದೆ ಇಡಬಹುದಾದ ಸಮೀಕರಣ ಇಷ್ಟು–ಗ್ರಾಮನಾಮಗಳು ವ್ಯಕ್ತಿವಾಚಿ, ಜನಾಂಗವಾಚಿ ಮತ್ತು ನಿಸರ್ಗವಾಚಿಗಳಾಗಿರಬಹುದು.[16] ಈ ಹಿನ್ನೆಲೆಯಲ್ಲಿ ಕುಹುಂಡಿ ಎಂಬುದನ್ನು ಕುಪ್ಪೆ + ಗುಂಡಿ> ಕುಪ್ಪಗುಂಡಿ> ಕುಹುಂಡಿ ಎಂದು ಅಥವಾ ಕುಪ್ಪೆ + ಹುಂಡಿ> ಕುಪ್ಪಹುಂಡಿ > ಕುಹುಂಡಿ ಎಂದು ನಿಸರ್ಗವಾಚಿಯಾಗಿಯೋ ಇಲ್ಲವೇ ಕುಪ್ಪಯನ + ಗುಂಡಿ> ಕುಪ್ಪಗುಂಡಿ> ಕುಹುಂಡಿ ಎಂದು ಅಥವಾ ಕುಪ್ಪಯನ + ಹುಂಡಿ ಕುಪ್ಪಹುಂಡಿ> ಕುಹುಂಡಿ ಎಂದು ವ್ಯಕ್ತಿವಾಚಿಯಾಗಿಯೋ ಬಿಡಿಸಬಹುದಾಗಿದೆ. ಇದಕ್ಕೆ ಉದಾಹರಣೆಯಾಗಿ

---

12 ಅಲಂದೆ ಶಾಸನ EI, XXVIII.

13 ಸಗರದ ಶಾಸನ ಹೈದ್ರಾಬಾದ್ ಕರ್ನಾಟಕದ ಶಾಸನಗಳು, ಪು. ೨೩೧

14 ಬಂಕಾಪುರ ಶೋಧನೆ, ಡಾ॥ ಚನ್ನಕ್ಕ ಎಲಿಗಾರ, ಶಾ.ಸಂ. ೩, ಕ್ರಿ.ಶ. ೧೦೯೦

15A ಅದೇ, ಶಾಸನ ಸಂಖ್ಯೆ. ೭, ಕ್ರಿ.ಶ. ೧೧೭೮ ಮತ್ತು ಶಾಸನ ಸಂಖ್ಯೆ ೨೦, ಕ್ರಿ.ಶ. ೧೨೦೦

15B ಅದೇ, ಶಾಸನ ಸಂಖ್ಯೆ, ೧೦. ಕ್ರಿ.ಶ. ೧೨೫೬

15C ಅದೇ, ಶಾಸನ ಸಂಖ್ಯೆ, ೧೨, ಕ್ರಿ.ಶ. ೧೧೯೦

16 ಕನ್ನಡ ನಾಮ ವಿಜ್ಞಾನ, ಡಾ॥ ಎಂ. ಎಂ. ಕಲಬುರ್ಗಿ, ಪು. ೫೮

ಗುಂಡಿ>ಡಿ ಎಂದು ಕೊನೆಯಾಗಿರುವ ಊರಿನ ಹೆಸರುಗಳು ಈ ನಾಡಿನಲ್ಲಿ ಸಾಕಷ್ಟಿವೆ. ಶಾಸನದಲ್ಲಿ ಬರುವ ಲೊಕ್ಕಿಗುಂಡಿ ಇಂದು ಲಕ್ಕುಂಡಿಯಾಗಿದೆ. ಅಲ್ಲದೆ 'ಚಿಕ್ಕಹುಂಡಿ, ದೊಡ್ಡಹುಂಡಿ, ಸಿದ್ಧರಾಮನ ಹುಂಡಿ ಇತ್ಯಾದಿಯಾಗಿ 'ಹುಂಡಿ' ಶಬ್ದದಿಂದ ಅಂತ್ಯಗೊಳ್ಳುವ ಹೆಸರಿನ ಊರುಗಳೂ ಸಾಕಷ್ಟು ಪ್ರಮಾಣದಲ್ಲಿ ಕರ್ನಾಟಕದಾದ್ಯಂತ ದೊರೆಯುತ್ತವೆ.

ಇಲ್ಲಿ ವಿದ್ವಾಂಸರು ತುಲನಾತ್ಮಕವಾಗಿ ಇನ್ನೆರಡು ಹೋಲಿಕೆಗಳನ್ನೂ ಗಮನಿಸಬೇಕು. ಕವಿ ಬ್ರಹ್ಮಶಿವ ಉಲ್ಲೇಖಿಸುವ ಪೆರ್ಗಡೆ ಬೊಮ್ಮ, ನಾಗವರ್ಮರು ಹೆಗ್ಗಡೆ ಮತ್ತು ಮಂಡಲೇಶ್ವರರಾಗಿದ್ದರು. ಅದೇ ರೀತಿ ಕೊಲ್ಲಾಪುರ ಶಾಸನೋಕ್ತ ರಾವಿಸೆಟ್ಟಿಯೂ ಹೆಗ್ಗಡೆಯಾಗಿದ್ದಾನೆ. ಇವುಗಳನ್ನು ಗಮನಿಸಿದಾಗ ಇವರು ಸಂಬಂಧಿಕರಾಗಿರಬಹುದೇ ಎನ್ನುವ ಊಹೆ ಮನದಲ್ಲಿ ಮೂಡುತ್ತದೆ. ಅರ್ಜುನವಾಡ ಶಾಸನದಲ್ಲಿ 'ಕವಿಳಾಸಪುರವೇ ಸಾಸನದ ಮನೆ ಬಸವರಾಜನೇ ಸಾಸನಿಗಂ' ಎಂದಿದ್ದರೆ, ಕೊಲ್ಲಾಪುರ ಶಾಸನದಲ್ಲಿ 'ಕೂಂಡಿ ಪಟ್ಟಣದಾದಿತ್ಯಗೃಹದ ಸಾಸನಿಗಂ ಹೆಗ್ಗಡೆ ರಾವಿಸೆಟ್ಟಿಯುಂ' ಎನ್ನುವಲ್ಲಿ ಬಸವರಾಜ ಮತ್ತು ರಾವಿಸೆಟ್ಟಿ ಇಬ್ಬರಿಗೂ 'ಸಾಸನಿಗ' ಎಂಬ ಶಬ್ದ ಬಳಸಲಾಗಿದೆ. ಈ ಶಬ್ದದ ಅರ್ಥವೇನೆಂಬುದನ್ನು ವಿದ್ವಾಂಸರು ಬಿಡಿಸಿ ಹೇಳಬಹುದಾಗಿದೆ. ಆದರೆ ಒಂದು ವ್ಯತ್ಯಾಸ–ಕೊಲ್ಲಾಪುರ ಶಾಸನದಲ್ಲಿ ದತ್ತಿ ನೀಡುವಾಗ ರಾವಿಸೆಟ್ಟಿಯ ಸಮ್ಮುಖದಲ್ಲಿ ದತ್ತಿ ಬಿಡಲಾಯಿತು. ಅರ್ಜುನವಾಡ ಶಾಸನದಲ್ಲಿ ದತ್ತಿ ನೀಡುವಾಗ ಬಸವಣ್ಣನವರು ಬದುಕಿರಲಿಲ್ಲ.

ಒಟ್ಟಿನಲ್ಲಿ ಈ ಎಲ್ಲ ಕಾವ್ಯಾಧಾರ, ಶಾಸನಾಧಾರ, ಭಾಷಾಶಾಸ್ತ್ರ, ಗ್ರಾಮನಾಮ ವಿವೇಚನೆ, ಮೂರ್ತಿಶಾಸ್ತ್ರ ಮತ್ತು ಪಟ್ಟಣಕೋಡಿ ಊರಿನ ಪರಿಶೋಧನೆಗಳಿಂದ ಹನ್ನೆರಡನೆಯ ಶತಮಾನದ ಸುಪ್ರಸಿದ್ಧವಾದ ಕುಹುಂಡಿ ಮೂರುಸಾವಿರ ಪ್ರಾಂತದ ರಾಜಧಾನಿ ಇಂದಿನ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಪಟ್ಟಣಕೋಡಿ ಗ್ರಾಮ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

(ಪಟ್ಟಣಕೋಡಿ ಗ್ರಾಮ ಪರಿಶೋಧನೆಯಲ್ಲಿ ನೆರವಾದ ಚಿಕ್ಕೋಡಿಯ ರಾಮಣ್ಣ ಮತ್ತು ಶತ್ರುಘ್ನ ಕರಾಳೆ ಸೋದರರಿಗೆ, ಪಟ್ಟಣಕುಡಿಯ ವಸಂತ ಗಣಪತಿ ಘಾಟಗೆ, ಸಿದ್ಧು ಕಲ್ಲು ಹಜಾರೆ ಮತ್ತು ಕಲ್ಲಪ್ಪ ತಾತೋಬಾ ಖೋತ ಅವರಿಗೆ ನಾನು ಕೃತಜ್ಞಳಾಗಿದ್ದೇನೆ.)

ಡಾ|| ಮೃತ್ಯುಂಜಯ ಹೊರಕೇರಿ*

# ಬಾದಾಮಿ ಬಂಡಾಯ

ಬಾದಾಮಿಯಲ್ಲಿ ಬ್ರಿಟಿಷರ ವಿರುದ್ಧ ನರಸಪ್ಪ ಪೆಟ್‌ಕರ್ ಎಂಬುವನು ನಡೆಸಿದ ಬಂಡಾಯ ಇತಿಹಾಸ ಪುಟಗಳಲ್ಲಿ ಸೇರಿಕೊಂಡಿದೆ. ಅದರ ಕಥೆ ಬಲು ಕುತೂಹಲಕರವಾಗಿದೆ. ಶಿವಾಜಿ ವಂಶಜನಾದ ಪ್ರತಾಪ ಸಿಂಹನು ಸತಾರಾ ಸಂಸ್ಥಾನದ ಮಹಾರಾಜನಾಗಿದ್ದು "ಸತಾರಾ ಛತ್ರಪತಿ" ಎಂಬ ಬಿರುದು ಹೊಂದಿದ್ದನು. ಆಗ ಮರಾಠರ ಸಾಮ್ರಾಜ್ಯವು ಪೇಶ್ವೆಯವರ ಹಿರಿತನದಲ್ಲಿತ್ತು. ಇದನ್ನರಿತ ಬ್ರಿಟಿಷರು ಪ್ರತಾಪಸಿಂಹನನ್ನು "ಮರಾಠಾ ಛತ್ರಪತಿ"ಯನ್ನಾಗಿ ಮಾಡುತ್ತೇವೆಂದು ತಂತ್ರ ಹೂಡಿದರು. ಇದಕ್ಕೆ ಪ್ರತಾಪಸಿಂಹ ಮನಸೋಲಲಿಲ್ಲ. ಉಪಾಯಗಾಣದ ಬ್ರಿಟಿಷರು ಪ್ರತಾಪಸಿಂಹ ಸೋದರನಾದ ಅಪ್ಪಾಸಾಹೇಬನನ್ನು ಎತ್ತಿಕಟ್ಟಿ ೫-೯-೧೮೩೯ರಂದು ಪ್ರತಾಪಸಿಂಹನನ್ನು ಸತಾರಾ ಸಂಸ್ಥಾನದಿಂದ ಪದಚ್ಯುತನನ್ನಾಗಿಸಿ ಅದಕ್ಕೆ ಅಪ್ಪಾಸಾಹೇಬನನ್ನು ನೇಮಿಸಿದರು.

ಮರಾಠಾ ರಾಜರಲ್ಲಿಯೇ ಅಪ್ರತಿಮನೆನಿಸಿದ ಪ್ರತಾಪಸಿಂಹನು ಸತಾರೆಯನ್ನು ಕಳೆದುಕೊಂಡು ವಿಚಲಿತನಾಗಲಿಲ್ಲ. ತನ್ನೆಲ್ಲ ಆಪ್ತವಲಯಗಳನ್ನು ಕೂಡಿಸಿ ಸತಾರೆಯನ್ನು ಮರಳಿ ಪಡೆಯಲೆತ್ನಿಸಿದ. ಇದರ ಸುಳಿವನ್ನರಿತ ಬ್ರಿಟಿಷರು ಪ್ರತಾಪಸಿಂಹನನ್ನು ಬಂಧಿಸಿ ಮಾಸಿಕ ಹತ್ತು ಸಾವಿರ ರೂಪಾಯಿಗಳ ರಾಜಧನ ನೀಡಿ ಬನಾರಸಕ್ಕೆ ಕಳಿಸದರು.

ಸತಾರೆಯ ದಿವಾನರಾಗಿದ್ದ ದತ್ತಾತ್ರೇಯರಾಯರ ಮಗ ನರಸಿಂಹ ಪೇಟಕರ್ ಎಂಬಾತನು ಪ್ರತಾಪಸಿಂಹರಿಗೆ ಸ್ವಾಮಿನಿಷ್ಠನಾಗಿದ್ದ. ಆತ ಬ್ರಾಹ್ಮಣನಾಗಿದ್ದು ಬಾಲ್ಯದಲ್ಲಿ ಸಿಡುಬು ರೋಗಕ್ಕೆ ಬಲಿಯಾಗಿದ್ದರಿಂದ ಮುಖ ತುಂಬ ಸಿಡುಬು ಕಲೆಗಳಾಗಿದ್ದವಲ್ಲದೇ ಒಂದು ಕಣ್ಣಿನ ದೃಷ್ಟಿಯನ್ನು ಕಳೆದುಕೊಂಡಿದ್ದ. ನರಸಿಂಹನು ಸತಾರೆಯನ್ನು ಮರಳಿ ಪಡೆಯುವ ಗುರಿಯನ್ನು ಹೊಂದಿದ್ದ. ಆತ ಸತಾರಾ ಬಿಟ್ಟು ಪುಣೆ, ನಾಸಿಕ, ಅಹಮ್ಮದ್‌ನಗರ. ರಾಯಚೂರು, ದೇವದುರ್ಗ ಮುಂತಾದೆಡೆ ತಿರುಗಾಡಿ ಬ್ರಿಟಿಷರನ್ನು ಎದುರಿಸಲು ತನ್ನದೇ ಆದ ಸೈನಿಕ ಸಂಘಟನೆಯಲ್ಲಿ ತೊಡಗಿದ.

ಪ್ರತಾಪಸಿಂಹನನ್ನು ಬನಾರಸಿಗೆ ಕಳಿಸುವ ಪೂರ್ವದಲ್ಲಿ ನಿಂಬ ಎಂಬ ಊರಲ್ಲಿ ಕೆಲಕಾಲವಿರಲು ಬ್ರಿಟಿಷರು ಅವಕಾಶ ನೀಡಿದ್ದರು. ಇದನ್ನರಿತ ನರಸಿಂಹನು ನಿಂಬಕ್ಕೆ ತೆರಳಿ ತಾನು ನಡೆಸಿದ ಪ್ರಯತ್ನಗಳನ್ನು ವಿವರಿಸಿದ. ನರಸಿಂಹನ ಪ್ರಯತ್ನದಲ್ಲಿ ಆಶಾಭಾವನೆ ತಾಳಿದ ಪ್ರತಾಪಸಿಂಹರು ಇವನಿಂದಲಾದರೂ ಸತಾರೆ ಸ್ವತಂತ್ರವಾಗಲೆಂದು ತಮ್ಮ ಬಳಿಯಿದ್ದ ಸಂಸ್ಥಾನದ ಬೆಳ್ಳಿ ಮೊಹರನ್ನು ನೀಡಿದರು. ಆನಂತರ ಅವರಿಬ್ಬರ ಭೆಟ್ಟಿ ನಡೆಯಲಿಲ್ಲ. ಮುಂದೆ ೧೫-೧೦-೧೮೪೭ರಂದು ಪ್ರತಾಪಸಿಂಹರು ನಿಧನರಾದರೆಂದು ತಿಳಿದುಬರುತ್ತದೆ.

ಮಹಾರಾಜರಿಂದ ಮೊಹರನ್ನು ಪಡೆದ ನರಸಿಂಹನು

* ರೀಡರ್ ಮತ್ತು ಮುಖ್ಯಸ್ಥರು, ಕನ್ನಡ ಅಧ್ಯಯನ ಕೇಂದ್ರ, ಕೃಷ್ಣದೇವರಾಯನಗರ, ಸೊಂಡೂರು ೫೮೩ ೧೧೯

ಆದರ ಮೂಲಕ ಸಂಸ್ಥಾನದ ಜನರಲ್ಲಿ ನಂಬಿಕೆ ಹುಟ್ಟಿಸಿದ. ನೂರಾರು ಸೈನಿಕರನ್ನು ಸಂಘಟಿಸಿದ. ಅರಬ ಜನಾಂಗದ ಮುಖಂಡ ಜಮೇದಾರ್ ಸಲೀಮ್ ಬಿನ್ ಅಬೂದ್ ಉರುಫ್ ಕೊಹೆರೆನ್ ಎಂಬಾತ ಸುರುಪುರದ ನಾಯಕ ರಲ್ಲಿದ್ದುದನ್ನರಿತು ಸುರಪುರಕ್ಕೆ ಹೋಗಿ ಕೊಹೆರೆನ್‌ನನ್ನು ಕಂಡನು. ಕೊಹೆರೆನ್‌ನೊಂದಿಗೆ ತಾಲೂಬ್ ಬಿನ್ ಅಲಿ ಯನ್ನು ಕಂಡು ತನ್ನೊಂದಿಗೆ ಹೋರಾಟಕ್ಕೆ ಒಪ್ಪಂದ ಮಾಡಿಕೊಂಡ, ಅವರಿಗೆ ವೇತನವನ್ನು ಗೊತ್ತುಪಡಿಸಿದ ಆತನ ಪ್ರಯತ್ನ ಹುಸಿಹೋಗಲಿಲ್ಲ. ಸೈನ್ಯದ ತುಕಡಿ ಯೊಂದನ್ನು ಸಿದ್ಧಪಡಿಸಿದ.

ನೇರವಾಗಿ ಸತಾರೆಗೆ ಮುತ್ತಿಗೆ ಹಾಕುವಂತಿರಲಿಲ್ಲ. ನರಸಿಂಹನು ಯೋಚಿಸಿ ಆಗ ಸತಾರಾ ಸಂಸ್ಥಾನದ ವಶ ದಲ್ಲಿದ್ದ ಬಾದಾಮಿ ಕೋಟೆಗೆ ಮೊದಲಿಗೆ ಲಗ್ಗೆ ಹಾಕ ಬೇಕೆಂದು ನಿರ್ಧರಿಸಿದ. ಅದರಂತೆ ಅವನ ಸೈನಿಕ ತುಕಡಿಯು ದೇವದುರ್ಗದಿಂದ ಲಿಂಗಸೂಗೂರು, ಹನುಮಸಾಗರ, ಹನುಮನಹಾಳ, ಜಾಲೀಹಾಳ ಮಾರ್ಗ ವಾಗಿ ಬಾದಾಮಿಗೆ ಬಂದಿತು.

ದಿನಾಂಕ ೨೭–೫–೧೮೫೮ರಂದು ನರಸಿಂಹನ ನೇತೃತ್ವ ದಲ್ಲಿ ಬಾದಾಮಿ ಕೋಟೆಗೆ ಮುತ್ತಿಗೆ ನಡೆದು ಬಾದಾಮಿ ಕೋಟೆ ನರಸಿಂಹನ ಕೈವಶವಾಯಿತು. ಬಾದಾಮಿ ಕೋಟೆಯನ್ನು ವಶಪಡಿಸಿಕೊಂಡ ನರಸಿಂಹ ಪೇಟಕರನು ಕೋಟೆಯ ಮೇಲೆ ಸಾತಾರ ಸಂಸ್ಥಾನದ ಧ್ವಜವನ್ನು ಹಾರಿಸಿದನು. "ನರಸಿಂಹ ಛತ್ರಪತಿ" ಎಂಬ ಬಿರುದು ಗಳಿಸಿ ಆ ಪ್ರದೇಶವನ್ನು ಆಳಹತ್ತಿದನು. ಅಲ್ಲಿದ್ದ ಬ್ರಿಟಿಷ್ ಖಜಾನೆ ವಶಪಡಿಸಿಕೊಂಡ. ರೈತರಿಗೆ ಜಮೀನು ಹಂಚಿದನೆಂಬುದು ತಿಳಿದುಬರುತ್ತದೆ. ಅಲ್ಲಿಂದ ಆತ ಸತಾರಾ ಸಂಸ್ಥಾನದ ವಿಮೋಚನೆಗೆ ಗುಪ್ತ ಚಟುವಟಿಕೆ ನಡೆಸುತ್ತಿದ್ದಂತೆ ಬ್ರಿಟಿಷರಿಗೆ ಈ ವಿಷಯ ಗೊತ್ತಾಗಿ ನರಸಿಂಹನನ್ನು ಹತ್ತಿಕ್ಕಲು ಸಿದ್ಧರಾದರು. ಸಿವಿಲ್ ಸರ್ವಿಸ್ ಅಧಿಕಾರಿಯಾಗಿದ್ದ ಬೆಟ್ಟಿಂಗಟನ್ ಮತ್ತು ಸೈನಿಕಾಧಿಕಾರಿಯಾಗಿದ್ದ ಎ. ಎನ್. ಷಾ ಅವರು ಧಾರವಾಡ ಹಾಗೂ ಬೆಳಗಾವಿಯಿಂದ ಬ್ರಿಟಿಷ್ ಸೈನಿಕ ಪಡೆಗಳನ್ನು ತೆಗೆದುಕೊಂಡು ಬಾದಾಮಿಗೆ ಬಂದು ಮುತ್ತಿಗೆ ಹಾಕಿ ನರಸಿಂಹ ಪೇಟಕರ್‌ನನ್ನು ಕ್ಷಿಪ್ರ ಅವಧಿ ಯಲ್ಲಿ ಬಂಧಿಸಿದರು. ಧಾರವಾಡದ ಕೋರ್ಟಿನಲ್ಲಿ ನರಸಿಂಹನನ್ನು ಹಾಜರುಪಡಿಸಿದರು. ಈ ನ್ಯಾಯಾ ಧೀಶರು ಮೊದಲಿಗೆ ನರಸಿಂಹನಿಗೆ ಮರಣದಂಡನೆ ವಿಧಿಸಿ ಆನಂತರ ಅದನ್ನು ಬದಲಿಸಿ ಜೀವಾವಧಿ ಶಿಕ್ಷೆಗೆ ಒಳಪಡಿಸು ವರು. ಆನಂತರ ಅವನನ್ನು ಅಹಮದಾಬಾದ್ ಜೈಲಿಗೆ ಕಳಿಸಿದರೆಂದೂ ಅಲ್ಲಿ ಆತ ೧೮೬೨ರಲ್ಲಿ ಮರಣ ಹೊಂದಿದನೆಂದು ತಿಳಿದುಬರುತ್ತದೆ.

ಹೀಗೆ ಬಾದಾಮಿ ಬಂಡಾಯವು ಬ್ರಿಟಿಷರ ವಿರುದ್ಧ ನಡೆದ ಕ್ಷಿಪ್ರಕ್ರಾಂತಿಯಾಗಿದ್ದು ಅದು ವಿಫಲವಾಗಿದ್ದರೂ ಅದಕ್ಕೊಂದು ಮಹತ್ವವಿದೆ. ಬಾದಾಮಿ ಬಂಡಾಯ ಕುರಿತು ರಚಿಸಲಾಗಿದ್ದ ಜಾನಪದ ಲಾವಣಿಯನ್ನು ಜೆ. ಎಫ್. ಫ್ಲೀಟ ಅವರು ಸಂಗ್ರಹಿಸಿ 'ಇಂಡಿಯನ್ ಎಂಟಿಕ್ವೆರಿ'ಯಲ್ಲಿ ಪ್ರಕಟಿಸಿದ್ದಾರೆ. ಈ ಬಗೆಗೆ ಹೆಚ್ಚಿನ ಶೋಧನೆ ನಡೆಯಬೇಕಾಗಿದೆ.

## ಆಧಾರ ಗ್ರಂಥಗಳು


1 *Source Material for the History of the Freedom Movement in India*, Bombay Govt. Records Vol. 1

2 *Civil Disurbances during the British Rule in India*

3 *Story of Satara*, B. D. Basu

4 ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ತಿ. ತಾ. ಶರ್ಮಾ

5 *The Freedom Movement in Karnatak* Vol. 1, M. V. Krishna Rao and G. S. Halappa

ಡಾ॥ ಎಂ. ವಾಯ್. ಸಾವಂತ*

# ಪೇಶ್ವೆಯರ ಕಾಲದ ನರಗುಂದ (೧೭೮೭-೧೮೧೮)

ಕ್ರಿ.ಶ. ೧೭೮೭ ರಿಂದ ೧೮೧೮ರವರೆಗೆ ನರಗುಂದದ ಆಡಳಿತವು ಪೇಶ್ವೆ ಸರಕಾರದ ನೇರ ಆಡಳಿತಕ್ಕೆ ಒಳಪಟ್ಟಿತ್ತು. ನರಗುಂದದ ದೇಸಾಯಿ ವೆಂಕಟರಾವ್ ಭಾವೆ ಟಿಪ್ಪುಸುಲ್ತಾನನ ವಿರುದ್ಧ ಬಂಡೆದ್ದಾಗ ದೇಸಾಯಿ ಪುಣೆಯ ಪೇಶ್ವೆಯರ ಸಹಾಯಕ್ಕೆ ಧಾವಿಸಿದನು. ಈ ಕಾರಣದಿಂದ ಪೇಶ್ವೆಯರಿಗೂ ಟಿಪ್ಪುವಿಗೂ ನಡೆದ ಯುದ್ಧದಲ್ಲಿ ನರಗುಂದದ ಮೇಲೆ ದಾಳಿ ಮಾಡಿ ಟಿಪ್ಪು ಭಾವೆಯನ್ನು ಸೋಲಿಸಿದನು (೧೭೮೫). ೧೭೮೭ರ ಗಜೇಂದ್ರಗಡ ಒಪ್ಪಂದದ ಮೇರೆಗೆ ನರಗುಂದವನ್ನು ಟಿಪ್ಪು ಮರಾಠರಿಗೆ ಮರಳಿ ಒಪ್ಪಿಸಬೇಕಾಯಿತು.[1]

ಪುಣೆಯ ಪತ್ರಾಗಾರದಲ್ಲಿ[2] ಅನೇಕ ಮೋಡಿ ದಾಖಲೆಗಳಲ್ಲಿ ಪೇಶ್ವೆಯರ ಕಾಲದ ನರಗುಂದದ ಮಾಹಿತಿ ಸಿಗುತ್ತದೆ. ಇವುಗಳಿಂದ ಅಂದಿನ ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳ ಬಗೆಗೆ ತಿಳಿದುಕೊಳ್ಳಬಹುದು. ಇಲ್ಲಿಯ ಕೆಲವು ಮಹತ್ವದ ಮೋಡಿ ದಾಖಲೆಗಳನ್ನು ಖ್ಯಾತ ವಿದ್ವಾಂಸರಾದ ಡಾ॥ ಕೆ. ಎನ್. ಚಿಟ್ನಿಸ್‌ರು ಬೆಳಕಿಗೆ ತಂದಿದ್ದಾರೆ.

ಪತ್ರಾಗಾರದಲ್ಲಿನ ತಾಳೇಬಂದಗಳ[3] ಪ್ರಕಾರ ಕ್ರಿ. ಶ. ೧೭೮೭–೮೮ರಲ್ಲಿ ತಾಲೂಕಾ ನರಗುಂದವು ರಘುನಾಥ ಚಿಂತಾಮಣ ಎಂಬ ಮರಾಠಾ ಅಧಿಕಾರಿಯ ಆಡಳಿತಕ್ಕೆ ಒಳಪಟ್ಟಿತ್ತು. ನರಗುಂದವು ತಾಲೂಕಾ ಸ್ಥಾನವನ್ನು ಪಡೆದು, ಅನೇಕ ಗ್ರಾಮಗಳನ್ನು ಹೊಂದಿತ್ತು. ಆದರಲ್ಲಿ ಆಡಳಿತ ವಿಭಾಗಗಳು ಇದ್ದವು. ತಾಲೂಕಾ ನರಗುಂದವು ೧ ಪರಗಣ, ೧ ಸಮತ ಹಾಗೂ ೨ ತರ್ಫಗಳನ್ನು ಹೊಂದಿತ್ತು. ಒಂದು ತಾಳೇಬಂದದ ಪ್ರಕಾರ ೧೭೮೭–೮೮ರಲ್ಲಿ[4] ತಾಲೂಕಾ ನರಗುಂದವು ಈ ಈ ರೀತಿ ವಿಭಜಿಸಲ್ಪಟ್ಟಿತ್ತು :

೧) ಪರಗಣಾ ನರಗುಂದ–೨೨ ಗ್ರಾಮಗಳು ; ೨) ತರ್ಫ ಕೊಣ್ಣೂರ–೧೯ ಗ್ರಾಮಗಳು ೩) ತರ್ಫ ನವಲಗುಂದ ೩–ಗ್ರಾಮಗಳು ಹಾಗೂ ೪) ಸಮತ ಬಾದಾಮಿ–೫ ಗ್ರಾಮಗಳು ;- ಒಟ್ಟು ೪೯ ಗ್ರಾಮಗಳು.

ಸುಮಾರು ೪೨ ಗ್ರಾಮಗಳು ಇನಾಮದಾರರು ಮತ್ತು ದೇಸಾಯಿಗಳ ಅಧೀನದಲ್ಲಿದ್ದವು. ಉಳಿದವುಗಳ ಮೇಲೆ ಕಂದಾಯವನ್ನು ಹೇರಲಾಗಿತ್ತು. ಜಮೀನುದಾರರ ಹೆಸರುಗಳು ಈ ಕೆಳಗಿನಂತಿವೆ.

೧) ನರಗುಂದಕರ ದೇಸಾಯಿ, ೨) ಬದ್ರಿ ಜಮಲಖಾನ, ೩) ನರಗುಂದ ದೇಶಪಾಂಡೆ, ೪) ಹೊಸಕೇರಿ ದೇಸಾಯಿ, ೫) ಶಿರೋಳ ದೇಸಾಯಿ, ೬) ವೆಂಕಟರಾವ್ ಭಾಸ್ಕರ, ೭) ರಾಮದುರ್ಗಕರ, ೮) ದೇಶಪಾಂಡೆ

* ಲಕ್ಷ್ಮಿನಗರ್, ವಿದ್ಯಾಗಿರಿ, ಧಾರವಾಡ-೫೮೦ ೦೦೪

1 ಭಾರತೀಯ ವಿದ್ಯಾಭವನ. ಮುಂಬೈ, "ಮರಾಠಾ ಸುಪ್ರಮೆಸಿ", ಸಂ. VIII, ಪು. ೪೭೩

2 ಪುಣೆಯ ಪತ್ರಾಗಾರ, "ಕರ್ನಾಟಕ ಜಮಾವ", ರೂಮಾಲ ನಂ. ೨೪೯-೪೨

3 ಅದೇ.

4 ಪು. ಪ. ಕ. ಜ. ರೂ. ನಂ. ೧೫೦೧

ತೊರಗಲಕರ, ೯) ನರಸಿಂಗ ದೀಕ್ಷಿತ, ಕೋರಿ ಗೋವನ ಕೊಪ್ಪ ಹಾಗೂ ರಾಮರಾವ ಗೋವಿಂದ.

ನರಗುಂದ ಪರಗಣೆಯು ಈ ಕೆಳಗಿನ ೨೩ ಗ್ರಾಮ ಗಳಿಂದ ಕಂದಾಯ ವಸೂಲಿ ಆಗುತ್ತಿತ್ತು : (ಕ–ಕಸಬಾ, ಮೌ–ಮೌಜೆ, ಮ–ಮಜರೆ) ಕ. ನರಗುಂದ, ಮೌ. ದಂಡಾಪುರ, ಮೌ. ಸೋಮಾಪುರ, ಮೌ. ಪೇಟ, ಮೌ. ಅರಬನ, ಮ. ಬಹಿಕನಹಟ್ಟಿ, ಮ. ಜಗಾಪುರ, ಮ. ಕರವಿನಕೊಪ್ಪ, ಮೌ. ಸಿದ್ದಾಪುರ, ಮೌ. ಕಿತ್ತೂರ, ಮೌ. ಅಲೂರ, ಮೌ. ಗುಲಕಟೆ, ಮೌ. ಹೆಬಳಿ, ಕ. ಶಿರೋಳ, ಮೌ. ವಡವಟ್ಟಿ, ಮೌ. ಇಗಲಗುಂಡಿ, ಮೌ. ಲಕಮಾಪುರ, ಮೌ. ಬಿಕನೂರ, ಮೌ. ಡೊಂಗರ ಗೊಮನಕೊಪ್ಪ, ಮೌ. ಅನಗುಂಡಿ, ಮೌ. ಮನಿಹಾಲ, ಮೌ. ಗೊನ್ನಾಗರ, ಮೌ. ಚಿಕಮೂಲಂಗಿ, ಮೌ. ಬೆನ್ನೂರ, ಮೌ. ತಡಸಿ, ಮೌ. ಸನಗಲ, ಮೌ. ತಲಕ ವಾಡ, ಮೌ. ವಾಸನ, ಮೌ. ಮಲ್ಲಾಪುರ, ಮೌ. ಹೋಟಿಹೋಳಿವಾಸ.

ತೇರೀಜ ಎಂಬ ೧೭೮೮ರ ದಾಖಲೆಯಲ್ಲಿ ತಾಲೂಕಾ ನರಗುಂದದ ಬಗ್ಗೆ ಈ ಕೆಳಗಿನ ವಿವರಣೆ ದೊರೆಯುತ್ತದೆ.

| ಆಡಳಿತದ ವಿಭಾಗಗಳು | ಗ್ರಾಮಗಳ ಸಂಖ್ಯೆ | ಆದಾಯ |
|---|---|---|
| ಪರಗಣಾ ನರಗುಂದ | ೧೩ | ರೂ. ಆ. ಪೈ. |
| ೧. ಸಮಂತ ಶಿರೋಳ | ೩ | ೮,೬೨೮–೧೫–೦ |
| ಸಮಂತ ಹೊಸಕೇರಿ | ೬ | |
| ೨. ತರ್ಫ ಕೊಣ್ಣೂರ | ೧೯ | ೫,೬೪೪–೧೦–೧ |
| ೩. ತರ್ಫ ನವಲಗುಂದ | ೩ | ೧,೧೧೫–೧೦–೦ |
| ೪. ಪರಗಣಾ ಬಾದಾಮಿ | ೫ | ೩,೧೦೧–೧೪–೦ |
| | ೪೯ | ೧೮,೪೯೧–೧–೧ |

ಸಾಮಾನ್ಯವಾಗಿ ಪ್ರತಿ ಪರಗಣೆಯಲ್ಲಿ ನಾಲ್ಕು ಅಧಿಕಾರಿ ಗಳನ್ನು ನೇಮಿಸಲಾಗುತ್ತಿತ್ತು. ೧) ಕಮಾವಿಸದಾರ್ ೨) ಫಡ್ನಿಸ್ ೩) ಸಬನಿಸ್ ಮತ್ತು ೪) ಧಪ್ತರದಾರ. ಕಮಾವಿಸದಾರನ ಕೈಕೆಳಗೆ ಈ ಕೆಳಗಿನ ಅಧಿಕಾರಿಗಳು ಇದ್ದರು : ಮುಜುಮದಾರ, ಫಡ್‌ನಿಸ್, ದಫ್ತರದಾರ, ಹಶಮನಿಸ್, ಪೋತದಾರ, ಚಿಟನಿಸ್, ನಾಕೇದಾರ, ಕೋತವಾಲ, ಕಾರಖಾನಿಸ್ ವಗೈರೆ. ಮಜುಮದಾರ ಮತ್ತು ಫಡನಿಸ್ ಇವರು ಪೇಶ್ವೆ ಸರಕಾರದಿಂದ ನೇಮಿಸ ಸಲ್ಪಡುತ್ತಿದ್ದರು. ಉಳಿದವರೆಲ್ಲ ಸ್ಥಳೀಯ ಅಧಿಕಾರ ಗಳಾದ ಸರಸುಬೇದಾರ ಅಥವಾ ಕಮಾವಿಸದಾರರಿಂದ ನೇಮಿಸಲ್ಪಡುತ್ತಿದ್ದರು.[5]

ತಾಲೂಕಾ ನರಗುಂದದ ೧೭೮೬–೮೮ರ[6] ಒಟ್ಟು ಆದಾಯವು ರೂ. ೧,೮೧,೭೯೬–೯೬ ಆಗಿತ್ತು. ಅದರ ವಿಂಗಡಣೆ ಈ ರೀತಿಯಾಗಿತ್ತು.

| ಉತ್ಪನ್ನದ ಬಾಬತ್ತುಗಳು | ರೂ. ಆ. ಪೈ. |
|---|---|
| ೧. ಭೂಕಂದಾಯ (ಐನ ಜಮಾ) ಮುಖ್ಯ ಆದಾಯ | ೬,೨೦೮–೩–೦ |
| ೨. ಸಿವಾಯೆ ಜಮಾ | ೧೦,೨೮೬–೮–೦ |
| ೩. ಕಮಾವಿಸ ಜಮಾ | ೧೦,೦೯೬–೯–೬ |

5 ಸೇನ. ಎಸ್. ಎನ್., "ಎಡಮಿನಿಸ್ಟ್ರೇಟಿವ್ ಸಿಸ್ಟಮ್ ಆಫ್ ದಿ ಪೇಶ್ವಾಸ್"

6 ಪ್ರ. ಪ. ಕ. ಜ. ರೂ. ಸಂ. ೧೪೭೫-೧೪೫೬, ನರಗುಂದ ಇಲಾಖಾ (ಲೆಕ್ಕಪತ್ರ)

೪. ಇಜಾಫತ್ ಜಮಾ ೫೦,೦೦೦–೦–೦

೫. ಕರ್ಜ ಜಮಾ (ಸಾಲ) ೪೪,೮೯೯–೮–೯

ಹಿಂದಿನ ವರ್ಷದ ಬಾಕಿ ೧,೩೦೭–೭–೯

ಒಟ್ಟು ರೂ. ೧,೮೧,೭೯೭–೯–೬

ನಿವ್ವಳ ಆದಾಯ ನರಗುಂದದ ಈ ಕೆಳಗಿನ ಗ್ರಾಮಗಳಿಂದ ಕಂದಾಯ ರೂಪದಲ್ಲಿ ವಸೂಲಾದದ್ದು ೧. ನರಗುಂದ ಪರಗಣೆಯ ೨೨ ಗ್ರಾಮಗಳಿಂದ, ೨. ತರ್ಫ ಕೊಣ್ಣೂರಿನ ೧೯ ಗ್ರಾಮಗಳಿಂದ, ೩. ಸಮತ ಬಾದಾಮಿಯ ೫ ಗ್ರಾಮಗಳು ಹಾಗೂ ೪. ತರ್ಫ ನವಲಗುಂದ ೩ ಗ್ರಾಮಗಳಿಂದ. ಸಮತ ಇದು ಅತ್ಯಂತ ಕೆಳಮಟ್ಟದ ಆಡಳಿತ ವಿಭಾಗವಾಗಿತ್ತು. ಫಲವತ್ತತೆಯ ಆಧಾರದ ಮೇಲೆ ಭೂಮಿಯನ್ನು ಬಾಗಾಯತ, ತರಿ, ಖುಷ್ಕಿ ಎಂಬುದಾಗಿ ವಿಂಗಡಿಸಲಾಗಿತ್ತು. ಭೂಕಂದಾಯ ನಗದು ಹಾಗೂ ಧಾನ್ಯ ರೂಪದಲ್ಲಿ ಸಂದಾಯವಾಗುತ್ತಿತ್ತು.

ಸಿವಾಯಿ ಜಮಾ ಅಂದರೆ ಭೂಕಂದಾಯದ ಹೊರತಾಗಿ ಇತರ ಬಾಬತ್ತುಗಳಿಂದ ಬಂದ ಆದಾಯ. ಉದಾಹರಣೆಗೆ ಜಕಾತ—ಇಜಾರದಾರರ ಕಡೆಯಿಂದ, ಅಂಬ್ರಾಯಿ–ಹಣ್ಣಿನ ತೋಟಗಳಿಂದ, ಇನಾಮು ತಿಜಾಯಿ ಇನಾಮುದಾರರ ಜಮೀನಿನ ಉತ್ಪನ್ನದ ೧/೩ ಭಾಗ, ವನಚರಾಯಿ–ದನಕರುಗಳನ್ನು ಕಾಡಿನ ಹುಲ್ಲುಗಾವಲಿನಲ್ಲಿ ಮೇಯಿಸಲು, ಮೊಹತರ್ಫಾ–ವ್ಯಾಪಾರಸ್ಥರ ಮೇಲಿನ ತೆರಿಗೆ ಹಾಗೂ ಬಸಕ–ಸಣ್ಣಪುಟ್ಟ ವ್ಯಾಪಾರಸ್ಥರಿಂದ (ಪರಪೇಟಕರರು) ವಸೂಲಾದದ್ದು ಇರುತ್ತದೆ. ಅವರಲ್ಲಿ ಮುಖ್ಯವಾಗಿ ತೇಲಿ (ಗಾಣಿಗ), ತಾಂಬೋಳಿ (ಎಲೆವ್ಯಾಪಾರಿ), ಕಾಸಾರ (ಕಂಚುಗಾರ), ಲೋಣಾರಿ (ಕಮ್ಮಾರ) ಇತ್ಯಾದಿ.

ಕಮಾವಿಸ ಜಮಾ ಇದು ಕಂದಾಯ ವಸೂಲು ಮಾಡಲು ಯಾರು ಗುತ್ತಿಗೆ ಹಿಡಿಯುತ್ತಾರೋ ಅವರಿಂದ ಮತ್ತು ಕೆಲವು ಮುಖ್ಯ ಗ್ರಾಮಗಳಲ್ಲಿ ಮಾರುಕಟ್ಟೆ ಸ್ಥಾಪಿಸಲು ಪರವಾನಿಗೆ ಪಡೆಯಲು ನೀಡುವ ಹಣ[7], ಸರದಾರರು ನೀಡುವ ಕಾಣಿಕೆಗಳು, ನ್ಯಾಯಾಂಗ ಫೀ ಇತ್ಯಾದಿಗಳಿಂದ ಕೂಡಿರುತ್ತಿತ್ತು. ಉದಾಹರಣೆಗೆ, ಖಂಡಗುನ್ನೆಗಾರಿ, ದಾವೆಗಳಲ್ಲಿ ಸೋತವರಿಂದ ವಸೂಲು ಮಾಡುವ ದಂಡ, ಪೈದಾಸ್ತ ಜಮಾ ಲಾಭದಿಂದ ಬಂದ ಹಣ, ಚಿಟ್ಟಿ ಮುಸಾಲಾ ಆಪಾದನೆಗೊಳಗಾದ ವ್ಯಕ್ತಿ ಜವಾಬ ನೀಡಲು ಬಂದಾಗ ಕೊಡುವ ಫೀ, ಗುನ್ನೆಗಾರಿ–ಅಪರಾಧಿಗಳಿಂದ ವಸೂಲು ಮಾಡುವ ಹಣ ಹಾಗೂ ನರಖುರ ಅಧಿಕಾರ ಅಥವಾ ಆಸ್ತಿಯನ್ನು ಪಡೆಯಬೇಕಾದರೆ ನೀಡಬೇಕಾದ ಹಣ, ಕಪ್ಪಕಾಣಿಕೆ ಇತ್ಯಾದಿ.[8]

ಖರ್ಚಿನ ಬಾಬತ್ತುಗಳು : ಸರಕಾರೀ ನೌಕರರಿಗೆ (ಕಾರಕೂನ), ವೇತನ ; ೨) ಗಾರ್ದಿ ಹಾಗೂ ರೊಹಿಲ್ಲಾ ಸೈನಿಕರಿಗೆ ವೇತನ ; ೩) ದೇವಾಲಯಗಳ ಖರ್ಚು, ದೇವಸ್ಥಾನ ಖರ್ಚು ; ೪) ದಫ್ತರ ಖರ್ಚು (ಕಚೇರಿ ಖರ್ಚು) ; ೫) ತೈವಜ ; ೬) ಹಬ್ಬ–ಹರಿದಿನಗಳ ಖರ್ಚು ; ೭) ಕೋಟೆಗೆ ದೀಪ ಹಚ್ಚುವ ಖರ್ಚು ; ೮) ವಸತಿ ಖರ್ಚು ; ೯) ಮಿಲಿಟರಿ ಯೋಜನೆ ಖರ್ಚು (ಮುಸಲತ್ ಖರ್ಚು) ; ೧೦) ಧಾರ್ಮಿಕ ಖರ್ಚು (ಧರ್ಮಾದಾಯ) ಇತ್ಯಾದಿ.

ಕಮಾವಿಸದಾರ, ಕಾರಕೂನ, ದರಕದಾರ, ದಫ್ತರದಾರ ಹಾಗೂ ತರಫದಾರ ಇವರಿಗೆ ವೇತನ ನೀಡಲಾಗುತ್ತಿತ್ತು. ಇದರ ಹೊರತಾಗಿ ಅವರು ವಿಶೇಷ ಹಕ್ಕು ಸೌಲಭ್ಯಗಳಿಗೆ ಅರ್ಹರಾಗಿದ್ದರು.

ಶಂಕರಲಿಂಗ, ಮಹಾಬಳೇಶ್ವರ ಹಾಗೂ ವೆಂಕಟರಮಣ ದೇವಾಲಯಗಳಿಗೆ ಖರ್ಚಿಗೆ ಹಣ ಮೀಸಲಾಗಿರುತ್ತಿತ್ತು. ಈ ಹಣವನ್ನು ನಂದಾದೀಪ, ಶ್ರಾವಣ ತಿಂಗಳಲ್ಲಿ

---

7 ವಿಲ್ಸನ್, ಎಚ್. ಎಚ್. "ಗ್ಲೊಸರಿ ಆಫ್ ಜುಡಿಶಿಯಲ್ ಎಂಡ್ ರೆವಿನ್ಯೂ ಟರ್ಮ್ಸ್", ಪು. ೨೦೫

8 ಅದೇ. ಪು. ೩೦೧

ಅಭಿಷೇಕ, ರಥೋತ್ಸವ ಮತ್ತು ಕಾರ್ತಿಕ ತಿಂಗಳಲ್ಲಿ ದೀಪೋತ್ಸವದ ಸಲುವಾಗಿ ಇರುತ್ತಿತ್ತು.

ದಫ್ತರ ಖರ್ಚು ಮುಖ್ಯವಾಗಿ ಪೇಪರ್, ಬಟ್ಟೆ, ಮಸಿ ಇತ್ಯಾದಿ ಖರೀದಿಗೆ ಇರುತ್ತಿತ್ತು.

ತೈವಜ ಖರ್ಚು ಅಂದರೆ, ವಿಶೇಷ ಅತಿಥಿಗಳಿಗಾಗಿ ವಿಳ್ಯದೆಲೆ, ಅಡಿಕೆ, ಲವಂಗ ಮತ್ತು ಏಲಕ್ಕಿ ಖರೀದಿಸಲಾಗುತ್ತಿತ್ತು. ಇದಲ್ಲದೆ ವಾರ್ಷಿಕ ಖರ್ಚು ಹಬ್ಬ ಹರಿದಿನಗಳಿಗಾಗಿ—ನಾಗಪಂಚಮಿ, ಗಣೇಶ ಚತುರ್ಥಿ, ದಸರಾ, ಸಂಕ್ರಾಂತಿ, ಹೋಳಿ ಇತ್ಯಾದಿ. ನೃತ್ಯ ಮಾಡುವವರಿಗೆ (ಕಲಾವಂತ) ಹಾಗೂ ಹಾಡುವವರಿಗೆ (ನಾಚಗಾನ) ಕೊಡುಗೆಗಳನ್ನು ನೀಡಲಾಗುತ್ತಿತ್ತು. ಡೊಂಬರಾಟ ಮಾಡುವವರಿಗೆ, (ಡೋಂಬಾರಿ), ಬಹುರೂಪಿ, ಖೇಲಕರಿ, ಜಾದುಗಾರರಿಗೆ, ದಶಾವತಾರಿಗಳಿಗೆ ಹಣ ನೀಡಲಾಗುತ್ತಿತ್ತು. ಇದಕ್ಕೆ ಸಾದಿಲವಾರ ಖರ್ಚು ಎಂದು ಹೆಸರಿತ್ತು. ಬೈರಾಗಿ ಮತ್ತು ಗೋಸಾವಿಗಳಿಗೆ ಹರಿದಾಸ ಕೀರ್ತನೆ ಮಾಡಿದ ಬಗ್ಗೆ ಹಣ ಸಂದಾಯವಾಗುತ್ತಿತ್ತು. ಬ್ರಾಹ್ಮಣ ಅತಿಥಿಗಳಿಗೆ, ವೈದ್ಯರಿಗೆ, ಭೂಕಂದಾಯ ನಿಗದಿಪಡಿಸಲು ಬಂದ ಪಾಟೀಲ, ಕುಲಕರ್ಣಿಯವರಿಗೆ ಕಾಳು-ಕಡ್ಡಿ ಪೂರೈಸಲಾಗುತ್ತಿತ್ತು. (ಸಿದೇ ಖರ್ಚು). ಮೊಹರಮ್ ಸಲುವಾಗಿ ಫಕೀರರಿಗೆ ದಾನ ಕೊಡಲಾಗುತ್ತಿತ್ತು. (ಖೈರಾತ)[9]

ಬಾಹ್ಮಣರಿಗೆ ವರ್ಷಾಸನ ಮುಂದುವರಿಸಲಾಗಿತ್ತು. (ಧರ್ಮಾದಾನ).

ಪೇಶ್ವೆಯ ಗ್ರಾಮಾಡಳಿತ ವೈಶಿಷ್ಟ್ಯಪೂರ್ಣವಾಗಿತ್ತು. ದೊಡ್ಡ ಗ್ರಾಮಕ್ಕೆ ಮೌಜೆ ಮತ್ತು ಸಣ್ಣ ಗ್ರಾಮಕ್ಕೆ ಮಜರೆ ಅಂತಾ ಹೆಸರಿದ್ದವು. ಗ್ರಾಮದ ಮುಖಂಡನಿಗೆ ಗೌಡ/ಪಾಟೀಲ ಎಂಬ ಹೆಸರಿತ್ತು. ಇವನ ಸಹಾಯಕ್ಕೆ ಕುಲಕರ್ಣಿ ಎಂಬ ಗ್ರಾಮಲೆಕ್ಕಿಗ. ಇವರ ಹೊರತಾಗಿ ಬಾರಾಬಲುತೇದಾರರು[10] ಸೇವೆ ಸಲ್ಲಿಸುತ್ತಿದ್ದರು. ಉದಾಹರಣೆಗೆ : ಸುತಾರ, ಲೋಹಾರ, ಕುಂಬಾರ, ಮಾಂಗ, ನಾವಿ, ಪರೀಟ, ಜೋಶಿ, ಗುರವ ಮತ್ತು ತಲವಾರ. ಇವರ ಸಂಖ್ಯೆ ಬೇರೆ ಬೇರೆ ಗ್ರಾಮಗಳಲ್ಲಿ ಬೇರೆ ಬೇರೆ ಇರುತ್ತಿತ್ತು.

ಆ ಕಾಲದ ಸಮಾಜದಲ್ಲಿ ಚತುರ್ವರ್ಣ ಪದ್ಧತಿಯಲ್ಲದೆ ವೀರಶೈವ, ಜೈನ, ಮುಸ್ಲಿಂ ಪಂಗಡಗಳಿದ್ದವು. ಬ್ರಾಹ್ಮಣರು ವ್ಯಾಸಂಗದ ಜೊತೆಗೆ ವ್ಯಾಪಾರ ಮತ್ತು ಆಡಳಿತ ವರ್ಗದಲ್ಲಿ ಕಂಡುಬರುತ್ತಾರೆ. ಅವರು ಸಮಾಜದಲ್ಲಿ ಹೆಚ್ಚಿನ ಪುರಸ್ಕಾರವನ್ನು, ಪ್ರೋತ್ಸಾಹವನ್ನು ಪಡೆದಿದ್ದರು. ಅಂದು ಸಮಾಜದಲ್ಲಿ ಏಕಪತ್ನಿತ್ವ ಮತ್ತು ಬಹುಪತ್ನಿತ್ವ ರೂಢಿಯಲ್ಲಿತ್ತು. ಬಾಲ್ಯವಿವಾಹ ರೂಢಿಯಲ್ಲಿತ್ತು. ಮೂಢನಂಬಿಕೆಗಳು ಸಾಮಾನ್ಯವಾಗಿದ್ದವು. ದೇವದಾಸಿ ಹಾಗೂ ವೇಶ್ಯಾವಾಟಿಕೆಯ ಉದಾಹರಣೆ ಸಿಗುತ್ತವೆ. ಸ್ತ್ರೀಯರು ಮತ್ತು ಕೆಳವರ್ಗದ ಜನರ ಸ್ಥಿತಿಯು ಉತ್ತಮವಾಗಿರಲಿಲ್ಲ.

ವ್ಯಾಪಾರವು ಅಭಿವೃದ್ಧಿಗೊಂಡಿತ್ತು. ಮಾರುಕಟ್ಟೆಯಲ್ಲಿ ಜನರಿಗೆ ಬೇಕಾಗುವ ಎಲ್ಲ ಜಿನಸುಗಳು ಮಾರಾಟವಾಗುತ್ತಿದ್ದವು. ಹೊನ್ನು ಎಂಬ ಬಂಗಾರದ ನಾಣ್ಯ ಚಲಾವಣೆಯಲ್ಲಿತ್ತು. ಧಾರವಾಡೀ, ಇಕ್ಕೇರಿ, ಪುಣೆ ಹೊನ್ನುಗಳು ಮುಖ್ಯವಾದವು. ವ್ಯವಸಾಯದ ಪ್ರಗತಿ ಕೂಡ ಆಗಿತ್ತು. ಹತ್ತಿ, ಜೋಳ, ಹೆಸರು, ಕಬ್ಬು, ಅವರೆ, ಕಡಲೆ, ತೊಗರಿ ಮೊದಲಾದ ಧಾನ್ಯಗಳು ಪ್ರಮುಖ ಉತ್ಪನ್ನಗಳಾಗಿದ್ದವು. ಸಂತೆಗಳು, ಉತ್ಸವಗಳು ಸರ್ವಸಾಮಾನ್ಯವಾಗಿದ್ದವು. ಹೀಗೆ ನರಗುಂದವು ಒಂದು ಸಣ್ಣ ವ್ಯಾಪಾರ ಕೇಂದ್ರವಾಗಿತ್ತು.[11]

ಧಾರ್ಮಿಕ ಕ್ಷೇತ್ರದಲ್ಲಿ ಇವರು ವಿಶೇಷ ಪಾತ್ರ ವಹಿಸದಿದ್ದರೂ ಸ್ಥಳೀಯ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದರು. ಶಂಕರಲಿಂಗ, ಮಹಾಬಳೇಶ್ವರ, ಹನುಮಂತ ಹಾಗೂ ವೆಂಕಟರಮಣ ದೇವಾಲಯಗಳಿಗೆ

---

9 ಕ. ಜ. ರೂ. ನಂ. ೨೯೦
10 ಅದೇ.
11 ಚಿಟ್ನಿಸ್, ಕೆ. ಎನ್., "ಗ್ಲಿಂಪ್ಸಸ್ ಆಫ್ ಮರಾಠಾ-ಸೋಶಿಯೊ ಇಕೊನೊಮಿಕ್ ಹಿಸ್ಟರಿ"

ದಾನದತ್ತಿಗಳನ್ನು, ಜೀರ್ಣೋದ್ಧಾರಕ್ಕೆ ಧನಸಹಾಯ ಮಾಡಿದರು. ಹೀಗೆ ಪೇಶ್ವೆಯರು ಸ್ಥಳೀಯ ಧಾರ್ಮಿಕ ಪರಂಪರೆಯನ್ನು ಮುಂದುವರೆಸಿಕೊಂಡು ಹೋದರು.

ಮರಾಠಿಗೆ ಪ್ರಾಧಾನ್ಯ ದೊರಕಿತು. ಮೋಡಿ ಲಿಪಿ ಬಳಸುತ್ತಿದ್ದರು. ಮರಾಠಿ ಪದಗಳೊಡನೆ ಧಾರಾಳವಾಗಿ ಕನ್ನಡ ಪದಗಳನ್ನು ಬಳಸುತ್ತಿದ್ದರು.[12]

12 ಮೋಲ್ಸವರ್ತ್ : ಮರಾಠಿ-ಇಂಗ್ಲಿಷ್ ಡಿಕ್ಷನರಿ, ಪು. ೧೧೦

ಬಸವರಾಜ್ ಎನ್. ಅಕ್ಕಿ*
ವೈ. ಆರ್. ಸದಾಶಿವಯ್ಯ**

# ಪ್ರಥಮ ವಿಶ್ವಸಮರದಲ್ಲಿ ಮೈಸೂರು ಪ್ರಾಂತದ ಪಾತ್ರ

ಸುಮಾರು ನೂರು ವರ್ಷಗಳ ಕಾಲದ ಕೈಗಾರಿಕಾ ಕ್ರಾಂತಿ, ವೈಜ್ಞಾನಿಕ ಪ್ರಗತಿ ಮತ್ತು ತಂತ್ರಜ್ಞಾನದ ಬೆಳವಣಿಗೆಯು ನೇರ ಕೊಡುಗೆ ಎಂದರೆ ಕ್ರಿ.ಶ. ೧೯೧೪ರ ಆಗಸ್ಟ್ ೩೧ ರಂದು ಮೊದಲನೆಯ ವಿಶ್ವ ಯುದ್ಧದ ಪ್ರಾರಂಭ. ಒಂದನೇಯ ಮಹಾಯುದ್ಧದಲ್ಲಿ ಮಿತ್ರಬಣ ಗಳ ನಾಯಕನಾಗಿ ಬ್ರಿಟಿಷ್ ಚಕ್ರಾಧಿಪತ್ಯ ಭಾಗವಹಿಸಿದ್ದ ರಿಂದ ಅವರ ಅಧೀನ ರಾಷ್ಟ್ರವಾದ ಭಾರತ ಮತ್ತು ಭಾರತೀಯರು ಯುದ್ಧದಲ್ಲಿ ಪಾಲ್ಗೊಳ್ಳಬೇಕಾಯಿತು. ಆದರೆ ಶತ್ರು ಬಣಗಳಾದ ಜರ್ಮನಿ, ಇಟಲಿ, ಟರ್ಕಿ ಮುಂತಾದ ರಾಷ್ಟ್ರಗಳೊಡನೆ ಭಾರತೀಯರಿಗೆ ದ್ವೇಷ ಕ್ಕಿಂತ ಹೆಚ್ಚಾಗಿ ಸಹಾನುಭೂತಿ ಇದ್ದಿತು. ಆದಾಗ್ಯೂ ಅದು ಬ್ರಿಟನ್ನಿನ ಮಾರ್ಗವನ್ನು ಅನುಸರಿಸಬೇಕಾಯಿತು. ಭಾರತದ ಹಲವಾರು ಶ್ರೀಮಂತರು, ಸಂಸ್ಥಾನಿಕರು ರಾಜ ಮಹಾರಾಜರು, ಜನ, ಧನ, ಧಾನ್ಯಗಳ ಮೂಲಕ ಬ್ರಿಟಿಷರ ಯುದ್ಧದಲ್ಲಿ ಸಹಾಯ ಮಾಡುವ ಮೂಲಕ ಅವರ ಅನುಗ್ರಹಕ್ಕೆ ಪಾತ್ರರಾಗಲು ಮುಂದಾದರು. ಆದರೆ ಭಾರತ ಮತ್ತು ಹೊರಗಿನ ಕೆಲವು ಜನ ಬ್ರಿಟಿಷರ ಮರ್ಜಿ ಹಾಗೂ ವಿಶ್ವಾಸಕ್ಕೆ ಪಾತ್ರರಾಗುವ ಯಾವುದೇ ನೀತಿಯನ್ನು ಒಪ್ಪಲಿಲ್ಲ. ಅವರ ಅಭಿಪ್ರಾಯದಲ್ಲಿ ಅದರಲ್ಲೂ ಪ್ರಾಚೀನ ಐರಿಷ್ ಗಾದೆ ಹೇಳುವಂತೆ "ಬ್ರಿಟನ್ನಿನ ಸಂಕಷ್ಟ ಐರಿಷರ ಸದಾವಕಾಶ". ಈ ದಿಶೆ ಯಲ್ಲಿ ಭಾರತದಲ್ಲೂ ಕೆಲವು ಸಂಚಿನ ಪ್ರಕರಣಗಳು ಕ್ರಾಂತಿಕಾರಿ ಚಟವಟಿಕೆಗಳು ನಡೆದು ಬ್ರಿಟಿಷರ ಯುದ್ಧ ಪ್ರಯತ್ನವನ್ನು ಭಂಗಗೊಳಿಸುವ ಪ್ರಯತ್ನಗಳು ನಡೆದು ಹಲವಾರು ವ್ಯಕ್ತಿಗಳು ವಿಚಾರಣೆಗಳನ್ನು ಎದುರಿಸಿ ಬಂಧಿತರಾದರು.

ಬ್ರಿಟಿಷ್ ಚಕ್ರಾಧಿಪತ್ಯದ ವಿಶ್ವಾಸ, ನಂಬಿಕೆ ಮತ್ತು ಅನುಗ್ರಹಕ್ಕೆ ಒಳಗಾದ ಮೈಸೂರು ಸಂಸ್ಥಾನ ಬ್ರಿಟಿಷರ ಹೋರಾಟದಲ್ಲಿ ಕೈಜೋಡಿಸುವ ಪ್ರಯತ್ನ ಮಾಡಿ ತನ್ನ ಹೃದಯ ಪೂರ್ವಕ ಜನ, ಧನ ಮತ್ತು ವಸ್ತುರೂಪಿ ಸಹಾಯವನ್ನು ಮಾಡಲು ನಿಷ್ಠೆಯಿಂದ ಮುಂದಾಯಿತು. ಈ ದಿಶೆಯಲ್ಲಿ ಅಂದಿನ ಮಹಾರಾಜ ರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಅಂದಿನ ದಿವಾನರಾದ ಸರ್. ಎಂ. ವಿಶ್ವೇಶ್ವರಯ್ಯನವರ ಪ್ರಯತ್ನ ಗಳು ಗಣನೀಯವಾದವುಗಳಾಗಿವೆ. ಕ್ರಿ.ಶ. ೧೯೧೪ ರಲ್ಲಿ ವಿಶ್ವಯುದ್ಧದ ಪ್ರಾರಂಭದ ನಂತರ ಇಂಗ್ಲೆಂಡಿನ ದೊರೆ ಐದನೇಯ ಜಾರ್ಜ್ ನಾಲ್ವಡಿ ಕೃಷ್ಣರಾಜ ಒಡೆಯರಲ್ಲಿ ಮನವಿಯನ್ನು ಮಾಡಿ ಕೈಲಾದ ಸಹಾಯವನ್ನು ಯಾಚಿಸಿ ದನು. ಬ್ರಿಟನ್ನಿನ ದೊರೆಯ ಮನವಿಗೆ ಓಗೊಟ್ಟ ಮಹಾ ರಾಜರು ೨೦ನೆಯ ಅಗಸ್ಟ್ ೧೯೧೪ ರಲ್ಲಿ ಪ್ರತ್ಯುತ್ತರ ವನ್ನು ನೀಡಿ "ಬ್ರಿಟಿಷ್ ಚಕ್ರಾದಿಪತ್ಯದ ಅಧೀನ ಸಾಮಂತರು ಹಾಗೂ ವಿಶ್ವಾಸಗಳಿಂದ ಭಾರತೀಯರಾದ ನಾವು ಚಕ್ರಾದಿಪತ್ಯದ ದಿಟ್ಟ ಹೋರಾಟಕ್ಕೆ ಸರ್ವ ರೀತಿಯ

* ಕರ್ನಾಟಕ ರಾಜ್ಯ ಪತ್ರಾಗಾರ, ವಿಧಾನಸೌಧ, ಬೆಂಗಳೂರು
** ಉಪನ್ಯಾಸಕರು, ಯೂನಿಯನ್ ಕ್ರಿಶ್ಚಿಯನ್ ಕಾಲೇಜು, ತುಮಕೂರು

ಸಹಾಯವನ್ನು ಮಾಡಿ ನಮ್ಮೆಲ್ಲರ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಬೇಕಾಗಿರುವುದು ನಮ್ಮ ಆದ್ಯ ಕರ್ತವ್ಯ ವಾಗಿದೆ." ಈ ದಿಶೆಯಲ್ಲಿ ರಾಜ್ಯದ ಜನತೆಗೆ ಮನವಿ ಯನ್ನು ಮಾಡಿ ನಾಲ್ವಡಿ ಕೃಷ್ಣರಾಜ ಒಡೆಯರು ಯುದ್ಧಕ್ಕೆ ಜನತೆ ತಮ್ಮ ಕೈಲಾದ ಸಹಾಯವನ್ನು ಮಾಡಲು ಮುಂದಾಗಬೇಕೆಂದು ಕೇಳಿಕೊಂಡರಲ್ಲದೆ ವಿಶ್ವದ ಭವಿಷ್ಯದ ಶಾಂತಿಗೆ ಸಮಸ್ತ ಜನಾಂಗದ ತ್ಯಾಗ ಅಗತ್ಯ ಎಂದು ಸಾರ್ವಜನಿಕ ತಿಳವಳಿಕೆಯನ್ನು ನೀಡಿದರು.

## ಮೈಸೂರಿನ ಸಹಾಯ

ಮೈಸೂರು ಸರ್ಕಾರದ ವತಿಯಿಂದ ಹಾಗೂ ಸಾರ್ವಜನಿಕರಿಂದ ಸಂಗ್ರಹಿಸಲಾದ ಯುದ್ಧವಂತಿಗೆಯು ಒಟ್ಟು ಸುಮಾರು ೬೦,೫೫,೬೯೫ ರೂ.ಗಳನ್ನು ಯುದ್ಧ ಖರ್ಚಿಗೋಸ್ಕರ ನೀಡಲು ಮುಂದಾದರು. ಇವರ ಜೊತೆಗೆ ರಾಜ್ಯದ ಅಂಚೆ ಇಲಾಖೆ ಮತ್ತು ಬ್ಯಾಂಕ್‌ಗಳು ಸಾರ್ವಜನಿಕರಿಂದ ೧,೦೭,೮೩,೮೫೫ ರೂ.ಗಳನ್ನು ಠೇವಣಿಯಾಗಿ ಸಂಗ್ರಹಿಸಿ ನೀಡಿದವು. ಸಾಗರೋತ್ತರ ಸಾಗರೋತ್ತರ ಯುದ್ಧಗಳಲ್ಲಿ ಪಾಲ್ಗೊಳ್ಳಲು ಸಹಾಯಕ ವಾಗುವಂತೆ ಶಸ್ತ್ರಾಸ್ತ್ರ ಕಾಲದಳ, ಸಾರಿಗೆ ವಾಹನಗಳು, ಅಶ್ವಾರೋಹಿಪಡೆ ಇದಲ್ಲದೆ ಸುಮಾರು ೨೬,೦೦೦ ಕಂಬಳಿಗಳು, ಸುಮಾರು ೩೦೦ ಘನ ಅಡಿಗಳಷ್ಟು ಹೊನ್ನೆ ಮರದ ತುಂಡುಗಳು ಸುಮಾರು ೩೦,೦೦೦ ತೇಗಿನ ಮರದ ರೈಲ್ವೆ ಕಟ್ಟಿಗೆ ತುಂಡುಗಳನ್ನು ಹಾಗೂ ೧೫,೦೦೦ ಟನ್ ಹುಲ್ಲನ್ನು ಯುದ್ಧ ಸಾಮಗ್ರಿಯನ್ನಾಗಿ ಕಳುಹಿಸ ಲಾಯಿತು.

ಯುದ್ಧ ಪ್ರಾರಂಭವಾದ ದಿನದಿಂದ ಮಹಿಳಾ ಸೇವಾ ಸಮಾಜಗಳು ಕಾರ್ಯೋನ್ಮುಖವಾಗಿ ಹಲವಾರು ಜನೋಪಯೋಗಿ ಕಾರ್ಯಗಳನ್ನು ಕೈಗೊಳ್ಳಲು ಮುಂದಾದವು. ಕ್ರಿ.ಶ. ೧೯೧೫ರ ವೇಳೆಗೆ ಹಲವಾರು ಪ್ರಮುಖ ಮಹಿಳಾ ಸಂಘಟನೆಗಳ ಸಭೆಗಳು ನಡೆದು ಸಮರದ ಖರ್ಚಿಗೋಸ್ಕರ ಹಣ, ಸಲಕರಣೆಗಳನ್ನು ಸಂಗ್ರಹಿಸಲು ಹಾಗೂ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಸಮಿತಿಗಳನ್ನು ನೇಮಿಸ ಲಾಯಿತು. ಕ್ರಿ.ಶ. ೧೯೧೫ ರ ನವೆಂಬರ್ ೧೭ ರಂದು ನಡೆದ ಮಹಿಳೆಯರ ಸಾರ್ವಜನಿಕರ ಸಭೆಯಲಿ ಯುದ್ಧ ಚಂದಾ ವಸೂಲಾತಿಗೆ ಕಾರ್ಯಕ್ರಮಗಳನ್ನು ರೂಪಿಸಿ ಸುಮಾರು ರೂ. ೨೦೦ ಗಳ ಬೆಲೆಬಾಳುವ ಯುದ್ಧ ಸಾಮಗ್ರಿಗಳನ್ನು ಯುದ್ಧರಂಗಕ್ಕೆ ರವಾನಿಸಲಾಯಿತು. ಮಹಿಳಾ ಸಮಾಜದ ಸದಸ್ಯರು ತಲಾ ೧೫೧ ರೂ.ಗಳ ವಸ್ತುಗಳನ್ನು ಕೊಡುಗೆಯಾಗಿ ನೀಡುವ ಮೂಲಕ ಆ ವಸ್ತುಗಳನ್ನು ೧೯೧೭ ರ ದಸರಾ ಸಂದರ್ಭದಲ್ಲಿ ಹರಾಜು ಹಾಕುವ ಮೂಲಕ ಬಂದ ಹಣವನ್ನು ಯುವರಾಜರ ಹೆಸರಿನಲ್ಲಿ ಮೈಸೂರು ಇಂಪಿರಿಯಲ್ ಟ್ರೂಪ್ಸ್‌ಗೆ ಕಳುಹಿಸಲಾಯಿತು. ಸಮಾಜದ ವಿದ್ಯಾರ್ಥಿಗಳು ಚಿಕಿತ್ಸಾ ವಾಹನಗಳಿಗೆ ಬೇಕಾಗುವ ಕರವಸ್ತ್ರಗಳು, ಉಡುಪುಗಳು, ದಿಂಬುಗಳು ಮುಂತಾದ ವಸ್ತುಗಳನ್ನು ದೇಣಿಗೆಯಾಗಿ ನೀಡಿದರು. ಇವರ ಜೊತೆಗೆ ಕಾಫಿ, ಟೀ, ಕೋಕೋ, ಸಕ್ಕರೆ, ಘನೀಕರಿಸಿದ ಹಾಲು, ಬಿಸ್ಕತ್ತುಗಳು ಮುಂತಾದ ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಿ ಕಳುಹಿಸಿಕೊಡ ಲಾಯಿತು. ಇದಲ್ಲದೆ ಯುದ್ಧರಂಗದಲ್ಲಿ ಮಡಿದ ವೀರ ಚೇತನಗಳಿಗೆ ಶ್ರದ್ಧಾಂಜಲಿ ಅರ್ಪಿಸಿ ಅವರ ಸ್ಮರಣಾರ್ಥ ವಾಗಿ ಸ್ಮರಣೆ ದಿನಗಳನ್ನು ಆಚರಿಸಲಾಯಿತಲ್ಲದೆ ಯುದ್ಧ ರಂಗದಲ್ಲಿ ಬ್ರಿಟಿಷರ ಜಯ ಮತ್ತು ಸಾಧನೆಗಳನ್ನು ಶ್ಲಾಘಿಸಿ ಗುರುತಿಸುವ ಸಲುವಾಗಿ ೧೯ ನವೆಂಬರ್, ೧೯೧೮ ರಲ್ಲಿ ಮಹಿಳೆಯರ ಸಭೆಗಳು ನಡೆದು ಯುದ್ಧ ದಲ್ಲಿ ಮಿತ್ರರಾಷ್ಟ್ರಗಳ ಹೋರಾಟ ಮತ್ತು ಜಯವನ್ನು ಶುಭಕಾಮನೆಗಳೊಂದಿಗೆ ನೆನೆಯಲಾಯಿತು.

ಶ್ರೀ ಶಾರದಾ ಸಮಾಜವು ಪ್ರಾರಂಭ ದಿನ ಗಳಿಂದಲೂ ಸೆಂಟ್‌ಜಾನ್ ಅಂಬ್ಯೂಲನ್ಸ್ ಸಂಘದೊಡನೆ ಹೆಚ್ಚಿನ ಸಹಕಾರದಿಂದ ಕಾರ್ಯ ಪ್ರವೃತ್ತವಾಗಿ ಯುದ್ಧದ ಗಾಯಾಳುಗಳ ಚಿಕಿತ್ಸೆಗೆ ಬೇಕಾಗುವ ಅಗತ್ಯ ಸಾಮಗ್ರಿಗಳನ್ನು ತಯಾರಿಸುವಲ್ಲಿ ಹೆಚ್ಚಿನ ಜವಾಬ್ದಾರಿ ನಿರ್ವಹಿಸಿತು. ಕ್ರಿ.ಶ. ೧೯೧೭ ರ "ನಮ್ಮ ದಿನ" ಆಚರಣೆ ಸಂದರ್ಭದಲ್ಲಿ ಸಂಘದ ಸದಸ್ಯರು ಬೆಳ್ಳಿ ಮತ್ತು ಕಂಚಿನ ವಸ್ತುಗಳನ್ನು ಮಾರಿ ಹಣ ಸಂಗ್ರಹಣೆಯನ್ನು ಮಾಡಿ ದರು. ಇದಲ್ಲದೆ ಮೈಸೂರಿನ ಇಂಪೀರಿಯಲ್ ಸರ್ವಿಸ್ ಲಾನ್ಸ್‌ರ್ಸಿನ ವಸ್ತು ಪ್ರದರ್ಶನದಲ್ಲಿ ವಸ್ತುಗಳನ್ನು ಮಾರಿ ಯುದ್ಧ ಠೇವಣಿಗೆ ಹಣವನ್ನು ಸಂಗ್ರಹಿಸಿತು. ಕ್ರಿ.ಶ. ೧೯೧೭ ರಲ್ಲಿ ಬೆಂಗಳೂರಿನಲ್ಲಿ ನಡೆದ ತೋಟಗಾರಿಕೆ ವಸ್ತು ಪ್ರದರ್ಶನದಲ್ಲಿ ಶ್ರೀ ಶಾರದಾ ಸಮಾಜದ ಕಾರ್ಯದರ್ಶಿ ಮತ್ತು ಸದಸ್ಯರು ಹಲವಾರು ಕರಕುಶಲ ವಸ್ತುಗಳನ್ನು

ವಾರಿ ಹಣ ಸಂಗ್ರಹಿಸಿ ಸುಮಾರು ೧೦೦ ಸಿಪಾಯಿಗಳ ಯುದ್ಧದ ಖರ್ಚನ್ನು ನಿಭಾಯಿಸಿದರು.

## ಬೆಂಗಳೂರು ನಗರಸಭೆ

ಮೈಸೂರು ಸಂಸ್ಥಾನದ ಗಣ್ಯ ನಗರ ಸಭೆಯು ಚಕ್ರಾಧಿಪತ್ಯದ ಯುದ್ಧ ಪರಿಹಾರ ನಿಧಿ ಹಾಗೂ ಭಾರತ ಯುದ್ಧ ನಿಧಿಗೆ ನಿಧಿಯನ್ನು ಸಂಗ್ರಹಿಸುವ ಪ್ರಯತ್ನವಾಗಿ ಹಲವಾರು ಸಭೆಗಳನ್ನು ನಡೆಸಿ ಹಣ ಸಂಗ್ರಹಿಸಿದ್ದಲ್ಲದೆ ಸಿಪಾಯಿಗಳ ನೇಮಕಕ್ಕೆ ಹಲವಾರು ಉತ್ತೇಜನಕಾರಿ ಸೌಲಭ್ಯಗಳನ್ನು ಒದಗಿಸಿತು. ನಗರ ಸಭೆಯ ಅಧ್ಯಕ್ಷರಾದ ದಿವಾನ ಬಹದ್ದೂರ್ ರಾಜಸಭಾಭೂಷಣ ಕೆ.ಪಿ. ಪುಟ್ಟಣ್ಣಚೆಟ್ಟಿಯವರು ಗಣನೀಯ ಸೇವೆ ಸಲ್ಲಿಸಿದರು. ಅದರಲ್ಲಿಯೂ ಮುಖ್ಯವಾಗಿ ಭಾರತ ಯುದ್ಧ ನಿಧಿಗೆ ಸುಮಾರು ೧೪,೭೦,೧೮೦ ರೂ.ಗಳನ್ನು ದೇಣಿಗೆಯಾಗಿ ಸಂಗ್ರಹಿಸಿದ್ದು ಪುಟ್ಟಣಚೆಟ್ಟಿಯವರ ಪರಿಶ್ರಮದಿಂದಾಗಿ. ಇದೇ ರೀತಿ ಬೆಂಗಳೂರಿನ ಪ್ರಜ್ಞಾವಂತ ನಾಗರೀಕರು ಭಾರತ ಯುದ್ಧ ಸಾಲ ನಿಧಿಗೆ ೮,೪೫,೨೩೦ ರೂ.ಗಳನ್ನು ನೀಡಿದರು. ಈ ದಿಶೆಯಲ್ಲಿ ನಗರದ ವಿವಿಧ ಕಡೆಗಳಲ್ಲಿ ಹಲವಾರು ಸಭೆಗಳು ನಡೆದವು. ಚಕ್ರಾಧಿಪತ್ಯ ಯುದ್ಧ ಪರಿಹಾರ ನಿಧಿಗೆ ಹಣವನ್ನು ಸಂಗ್ರಹಿಸುವ ಸಲುವಾಗಿ ಕೆ. ಪಿ. ಪುಟ್ಟಣ್ಣಚೆಟ್ಟಿಯರ ನೇತೃತ್ವದಲ್ಲಿ ಉಪಸಮಿತಿಯನ್ನು ನೇಮಿಸಲಾಯಿತು. ಆ ಸಮಿತಿಯಲ್ಲಿ ಕೆ. ಚಾಂಡಿಯವರನ್ನು ಅದರ ಉಪಾಧ್ಯಕ್ಷರನ್ನಾಗಿ ಹಾಗೂ ೩೦ ಪ್ರಜ್ಞಾವಂತ ನಾಗರಿಕರನ್ನು ಸಮಿತಿಯ ಸದಸ್ಯರನ್ನಾಗಿ ನೇಮಿಸಲಾಯಿತು. ಈ ಸಮಿತಿಯು ಸುಮಾರು ೯,೦೦೦ ರೂ.ಗಳನ್ನು ಸಂಗ್ರಹಿಸಿ ಮದ್ರಾಸ್ ಬ್ಯಾಂಕಿಗೆ ಜಮಾ ಮಾಡಿತು. ಇದೆಲ್ಲಕ್ಕಿಂತ ಮಿಗಿಲಾಗಿ ಕೆ.ಪಿ. ಪುಟ್ಟಣ್ಣಚೆಟ್ಟಿಯವರು ಉಳಿದ ಕೌನ್ಸಿಲರುಗಳ ಸಹಾಯ ಮತ್ತು ಸಹಕಾರದಿಂದಾಗಿ ಕೆಳ ಕಾಣಿಸಿದ ಜನೋಪಯೋಗಿ ಕಾರ್ಯಗಳ ಮೂಲಕ ಬ್ರಿಟಿಷರ ಯುದ್ಧ ಕಾರ್ಯವನ್ನು ಬೆಂಬಲಿಸಿದರು. ೧. ನಮ್ಮ ದಿನದ ಆಚರಣೆ, ೨. ರೆಡ್‌ಕ್ರಾಸ್ ನಿಧಿ, ೩. ಮದ್ರಾಸ್ ಅಧಿಪತ್ಯ ನಿಧಿ, ೪. ತಂಬಾಕು ಕಾರ್ಯ ನಿಧಿ ಹಾಗೂ ೫. ಸಾಮ್ರಾಜ್ಞಿಯ ವಿವಾಹದ ಬೆಳ್ಳಿ ಹಬ್ಬದ ನಿಧಿ. ಹೀಗೆ ಬೇರೆ ಬೇರೆ ಸಾರ್ವಜನಿಕ ಉತ್ಸವಗಳ ಮೂಲಕ ನಿಧಿ ಸಂಗ್ರಹಣೆ ಕಾರ್ಯವನ್ನು ಕೈಗೊಂಡರು.

## ವಿವಿಧ ಜಿಲ್ಲೆಗಳಲ್ಲಿ

ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಯುದ್ಧ ಸಹಾಯಕ್ಕೋಸ್ಕರ ಜನ, ಧನ, ಕನಕಗಳನ್ನು ಹೃದಯ ಪೂರ್ವಕವಾಗಿ ನೀಡಲಾಯಿತು. ಇದಲ್ಲದೆ ಸೇವಾ ಸಮಿತಿಗಳನ್ನು ನೇಮಿಸಿ ಆಸಕ್ತ ಯುವಕರನ್ನು ಸೇನೆಯಲ್ಲಿ ನೇಮಿಸಿಕೊಳ್ಳಲಾಯಿತು. ಬೆಂಗಳೂರು ಜಿಲ್ಲೆಯಲ್ಲಿ ಶ್ರೀ ಎಫ್. ಎಸ್. ರಾಘವಾಚಾರ್ಯರನ್ನು ಜಿಲ್ಲಾ ನೇಮಕ ಅಧಿಕಾರಿಯನ್ನಾಗಿ ನೇಮಿಸಲಾಯಿತು. ಅವರ ಅಧ್ಯಕ್ಷತೆಯಲ್ಲಿ ವಿಭಾಗೀಯ ನೇಮಕಾತಿ ಸಮಿತಿಗಳನ್ನು ರಚಿಸಿ ಸುಮಾರು ೧೯೩೧ ಜನರನ್ನು ಬ್ರಿಟಿಷ್ ಸೇನೆ ಮತ್ತು ಮೈಸೂರು ಸೇನೆಗೆ ನೇಮಿಸಿಕೊಳ್ಳಲಾಯಿತು. ಈ ಕೆಲಸದಲ್ಲಿ ರಾಘವಾಚಾರರಿಗೆ ಬೆನ್ನೆಲುಬಾಗಿ ನಿಂತ ಪ್ರಮುಖ ವ್ಯಕ್ತಿಗಳೆಂದರೆ, ೧. ರಾಮಸ್ವಾಮಿ, ೨. ಪಟೇಲ ವೆಂಕಟಸ್ವಾಮಿ, ೩. ಸೈಯದ್ ಅಹಮ್ಮದ್, ೪. ಬುಡಾನ್ ಮೇಯರ್ ೫. ಮಸ್ತಾನ್‌ಖಾನ್, ಹಾಗೂ ೬. ಅಬ್ದುಲ್ ರಹೀಮ್.

ಕೋಲಾರ ಜಿಲ್ಲೆಯಲ್ಲಿ ಸುಮಾರು ೧೩ ನೇಮಕಾತಿ ಸಮಿತಿಗಳನ್ನು ನೇಮಿಸಿ ಪ್ರತೀ ನೇಮಕಾತಿ ಸಮಿತಿಯು ಓರ್ವ ದಫೇದಾರ್ ಹಾಗೂ ಇಬ್ಬರೂ ಪೋಲೀಸರನ್ನೊಳಗೊಂಡಿತ್ತು. ಸ್ಥಳೀಯವಾಗಿ ಹೆಚ್ಚಿನ ಪ್ರಭಾವ ಉಳ್ಳವರು ಹಾಗೂ ಮಾಜಿ ಸೈನಿಕರನ್ನು ಈ ಕೆಲಸದಲ್ಲಿ ತೊಡಗಿಸಲಾಯಿತು. ಕೆ.ಜಿ.ಎಫ್.ನಲ್ಲಿ ಮೂರು ಸಮಿತಿಗಳನ್ನು ನೇಮಿಸಿ ಆ ಸಮಿತಿಯ ಹೊಣೆಗಾರಿಕೆಯನ್ನು ಮಾಜಿ ಯೋಧರಿಗೆ ವಹಿಸಿಕೊಡಲಾಗಿತ್ತು. ಜಿಲ್ಲಾ ಕೇಂದ್ರವಾದ ಕೋಲಾರದಲ್ಲಿ ಕ್ಯಾಂಪ್‌ನ್ನು ಸ್ಥಾಪಿಸಿ ನೇಮಕಾತಿ ಬಯಸುವ ಯುವಕರಿಗೆ ವಸತಿ ಹಾಗೂ ಪ್ರಾಥಮಿಕ ತರಬೇತಿಗಳನ್ನು ನೀಡಲಾಯಿತು. ಯುದ್ಧ ನಿಧಿಗೆ ಸುಮಾರು ೪೫೦೦ ರೂ.ಗಳನ್ನು ಸಂಗ್ರಹಿಸಿ ನೀಡಲಾಯಿತು. ಎರಡನೆಯ ಯುದ್ಧ ಸಾಲ ನಿಧಿಗೆ ಸುಮಾರು ೧,೧೪,೫೪೫ ರೂ.ಗಳನ್ನು ಸಂಗ್ರಹಿಸಿ ನೀಡಲಾಯಿತಲ್ಲದೆ ಜನ, ಹಲವಾರು ವಸ್ತುಗಳನ್ನು ಕೊಡುಗೆಯನ್ನಾಗಿ ನೀಡಿ ಬ್ರಿಟಿಷ್ ಚಕ್ರಾದಿಪತ್ಯದ ಯುದ್ಧ ಕಾರ್ಯದಲ್ಲಿ ತಮ್ಮ ಬೆಂಬಲವನ್ನು ವ್ಯಕ್ತಪಡಿಸಿದರು.

ತುಮಕೂರು ಜಿಲ್ಲೆಯಲ್ಲಿ ವಿವಿಧ ಕಡೆಗಳಿಂದ ೧೯೦ ಆಸಕ್ತ ಯುವಕರನ್ನು ಸೇನೆಗೆ ಸೇರಿಸಿಕೊಳ್ಳ

ಲಾಯಿತು. ತಾಲ್ಲೂಕು ಕೇಂದ್ರವಾದ ಚಿಕ್ಕನಾಯಕನ ಹಳ್ಳಿಯ ಶ್ರೀ ಸಿ. ಎಲ್. ಹನುಮಂತೇ ಗೌಡರು ಭಾರತ ಯುದ್ಧ ಸಹಾಯ ನಿಧಿಗೋಸ್ಕರ ಸಾವಿರಾರು ಕಂಬಳಿಗಳನ್ನು ಉತ್ಪಾದಿಸಿ ನೀಡುವಲ್ಲಿ ಹೆಚ್ಚಿನ ಜವಾಬ್ದಾರಿ ವಹಿಸಿದರು. ಒಟ್ಟಾರೆಯಾಗಿ ತುಮಕೂರು ಜಿಲ್ಲೆಯ ಯುದ್ಧಸಾಲ ಮತ್ತು ನಿಧಿಗೆ ೧,೦೦,೮೦೦ ರೂ.ಗಳನ್ನು ದೇಣಿಗೆಯಾಗಿ ನೀಡಿತು.

ಯುದ್ಧ ಸಹಾಯಕೋಸ್ಕರ ಮೈಸೂರು ಜಿಲ್ಲೆಯಲ್ಲಿ ನೇಮಕಾತಿಗಳು ಸ್ವಲ್ಪ ತಡವಾಗಿ ೧೯೧೭ ಅಕ್ಟೋಬರ್ ತಿಂಗಳಲ್ಲಿ ಪ್ರಾರಂಭವಾಗಿ ನೇಮಕಗೊಂಡ ೭೧೭ ಸಿಪಾಯಿಗಳಲ್ಲಿ ೪೫೩ ಸಿಪಾಯಿಗಳು ವೈದ್ಯಕೀಯ ಮತ್ತು ದೇಹದಾರ್ಢ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಅನಂತರ ಅವರನ್ನು ಬೆಂಗಳೂರಿನ ಕೇಂದ್ರಿಯ ನೇಮಕಾತಿ ಅಧಿಕಾರಿಯಾದ ಖಾಜಾಬಹು ಉದ್ದೀನ್ ಅವರಲ್ಲಿ ತರಬೇತಿಗೋಸ್ಕರ ಕಳುಹಿಸಲಾಯಿತು. ಸೈನಿಕರ ನೇಮಕ ಮತ್ತು ಯುದ್ಧ ನಿಧಿಯ ಕೊಡುಗೆಯಲ್ಲಿ ಮೈಸೂರು ಜಿಲ್ಲೆ ದ್ವಿತೀಯ ಸ್ಥಾನವನ್ನು ಪಡೆಯಿತು. ಪೂರ್ವ ನೇಮಕಾತಿ ಅಧಿಕಾರಿಯಾದ ಪ್ರಾನ್ಸಿಸ್ ಸುಮಾರು ೪೫ ಜನ ಸಮರ್ಥ ಸೈನಿಕರನ್ನು ಸೇನೆಗೆ ತರಬೇತಿಗೊಳಿಸಿದನು. ಜಿಲ್ಲೆಯಾದ್ಯಾಂತ ಸುಮಾರು ೫೯,೨೭೫ ರೂ.ಗಳನ್ನು ಯುದ್ಧ ನಿಧಿಗೆ ಸಂದಾಯ ಮಾಡಲಾಯಿತು.

ಉಳಿದ ಜಿಲ್ಲೆಗಳ ಅಂಕಿ ಸಂಖ್ಯೆಗಳಂತೆ ಹಾಸನ ಜಿಲ್ಲೆ ಸುಮಾರು ೫೨,೭೦೦ ರೂ.ಗಳನ್ನು, ಶಿವಮೊಗ್ಗ ಜಿಲ್ಲೆ ೨,೩೦೮ ರೂ.ಗಳನ್ನು, ಕಡೂರು ೨,೭೦೦ ರೂ.ಗಳನ್ನು ಯುದ್ಧ ನಿಧಿಗೆ ದೇಣಿಗೆಯಾಗಿ ನೀಡಿದವು. ಇದಲ್ಲದೆ ಶಿವಮೊಗ್ಗ ಜಿಲ್ಲೆಯು ಮೈಸೂರು ಚಕ್ರಾಧಿಪತ್ಯದ ಲಾನ್ಸರ್ಸ್‌ಗೆ ೬೯,೦೨೯ ರೂ.ಗಳನ್ನು ಕೊಡುಗೆಯಾಗಿ ನೀಡಿತು.

ರಾಜ್ಯದಲ್ಲಿ ಯುದ್ಧಕ್ಕೆ ಅಗತ್ಯವಾಗಿ ಬೇಕಾದ ಸೈನಿಕರ ನೇಮಕಾತಿಯಲ್ಲಿ ಮಾಜಿ ಸೈನಿಕರ ಸಹಾಯ ಮತ್ತು ಜನಪ್ರಿಯತೆ ಗಣನೀಯವಾಗಿತ್ತು. ಅವರುಗಳಲ್ಲಿ ಪ್ರಮುಖವಾಗಿ ಮರಾಠಾ ರೆಜಿಮೆಂಟಿನ ಬಾಬಾ ಸಾಹೇಬ ಬೇಡರ್, ಕೊಂಡಜ್ಜಿಯ ಮೊದಲಿಯಾರ್ ನಾಯಕ ಮುಂತಾದವರು ತಮ್ಮ ಗಣನೀಯ ಸೇವೆ ಸಲ್ಲಿಸಿದರು. ಇದಲ್ಲದೆ ಹಲವಾರು ಪ್ರಜ್ಞಾವಂತ ಮಾಜಿ ಸೈನಿಕರು ಸುಮಾರು ೧೫೦೦ ರೂ.ಗಳನ್ನು ಮೊದಲನೆಯ ಯುದ್ಧನಿಧಿಗೆ ೨,೩೩,೨೮೧ ರೂ.ಗಳನ್ನು ಎರಡನೆಯ ಯುದ್ಧನಿಧಿಗೆ ದೇಣಿಗೆಯಾಗಿ ನೀಡಿದರು.

ಹೀಗೆ ಚಕ್ರಾಧಿಪತ್ಯದ ಸಾವು ಬದುಕಿನ ಹೋರಾಟವಾದ ಒಂದನೇಯ ಮಹಾಯುದ್ಧ ಮಹತ್‌ಕಾರ್ಯದಲ್ಲಿ ವಿವಿಧ ಜಾತಿ, ವರ್ಗ, ಧರ್ಮ ಹಾಗೂ ಸಮುದಾಯಗಳ ಜನ ಯಾವುದೇ ಭೇದಭಾವವಿಲ್ಲದೆ ತಮ್ಮ ತನು, ಮನ, ಧನಗಳನ್ನು ಅರ್ಪಿಸಿದರು. ಒಂದನೇಯ ಮಹಾಯುದ್ಧ ೮ನೇಯ ನವೆಂಬರ್ ೧೯೧೮ರಲ್ಲಿ ಮುಕ್ತಾಯಗೊಂಡು ಮಿತ್ರ ರಾಷ್ಟ್ರಗಳು ಜಯವನ್ನು ಸಾಧಿಸಿರುವುದರಿಂದ ಮೈಸೂರು ಸಂಸ್ಥಾನದಲ್ಲಿ ವಿಜಯೋತ್ಸವವನ್ನು ಆಚರಿಸಲಾಯಿತು. ಆದರೆ ಒಂದನೇಯ ಮಹಾಯುದ್ಧದಲ್ಲಿ ಭಾರತೀಯರು ಇಂಗ್ಲೆಂಡಿಗೆ ನೀಡಿದ ಸಹಾಯದಿಂದಾಗಿ ಪಾಶ್ಚಿಮಾತ್ಯ ಜಗತ್ತಿನಲ್ಲಿ ಕೆಲವು ಆರೋಪಗಳನ್ನು ಎದುರಿಸಬೇಕಾಯಿತು. ಬ್ರಿಟಿಷ್ ಚಕ್ರಾಧಿಪತ್ಯದ ಅಧೀನ ರಾಷ್ಟ್ರವಾದ ಭಾರತಕ್ಕೆ ಬೇರೆ ಗತ್ಯಂತರವಿರಲಿಲ್ಲ. ಆದಾಗ್ಯೂ ನಾಡಿನಾದ್ಯಾಂತ ಜನ ನೀಡಿದ ಬೃಹತ್ ಯುದ್ಧ ಸಹಾಯ ಕೊಡುಗೆಗಳು ರಾಜ್ಯದ ಆರ್ಥಿಕ ವ್ಯವಸ್ಥೆಯ ಮೇಲೆ ಗಣನೀಯ ಪರಿಣಾಮಗಳನ್ನು ಉಂಟು ಮಾಡಿದವು.

ಡಾ|| ಸರೋಜಿನಿ ಚವಲಾರ*

# ಸ್ವಾತಂತ್ರ್ಯ ಹೋರಾಟದಲ್ಲಿ ಇಂಚಗೇರಿಯ ಪಾತ್ರ

ಇಂಚಗೇರಿ ಕರ್ನಾಟಕದ ಕೊನೆಯ ಹಳ್ಳಿ. ಇಂಡಿ ತಾಲ್ಲೂಕಿನ (ವಿಜಾಪುರ ಜಿಲ್ಲೆಯ)ಲ್ಲಿದೆ. ಮಹಾರಾಷ್ಟ್ರ ಕರ್ನಾಟಕದ ಗಡಿಯಲ್ಲಿದೆ. ಹಳ್ಳಿಯ ಆಚೆಗೆ ಹಳ್ಳದ ದಂಡೆಗೆ ಸುಮಾರು ೭೬ ಎಕರೆ ಹೊಲದಲ್ಲಿ ಇಂಚಗೇರಿ ಮಠ ಈಗ ಮೂರು ಗುಡಿಗಳ ಕಳಸದೊಂದಿಗೆ ಶೋಭಿಸುತ್ತಲಿದೆ. ಸುತ್ತಮುತ್ತ ಹಚ್ಚಹಸುರಿನ ಬೆಳೆ, ಗಿಡಮರಗಳ ಗುಂಪು.

ಇಂಚಗೇರಿಯ ಮಠವೆಂದ ಕೂಡಲೇ ಬಹಳ ಜನರಿಗೆ 'ದೇವರ' ನೆನಪಾಗುತ್ತದೆ. 'ದೇವರು' ಅಂದರೆ ಮಹದೇವರು ಮುರಗೋಡ. ಇವರಿಂದಲೇ ಈ ಮಠದ ಇತಿಹಾಸದಲ್ಲಿ ಸ್ವಾತಂತ್ರ್ಯ ಹೋರಾಟದ ಹೊಸ ಪುಟ ಬರೆಯಲ್ಪಟ್ಟಿತು.

ಶ್ರೀಪಾದ ಡಾಂಗೆಯವರು (ಕಮ್ಯುನಿಸ್ಟ್ ಧುರೀಣರು) ಮಹಾದೇವರು ಜೈಲಿನಲ್ಲಿದ್ದಾಗ 'ದೇವರು' ಎಂದು ಕರೆಯತೊಡಗಿದರು. ಅಪರ ಜೈಲಿನಲ್ಲಿದ್ದವರಿಗೆ ಪೋಲಿಸರಿಗೆ ಮಹಾದೇವರು ಸಾಧಿಸಿದ ಅಣಿಮಾದಿ ಸಿದ್ಧಿಗಳ ಪರಿಚಯವಾಗಿತ್ತು. ಅವರು ಓಡಿಹೋಗದಿರಲಿ, ಮಾಯವಾಗದಿರಲಿ ಎಂದು ಅಡ್ಡ, ಉದ್ದ ಬೇಡಿಗಳನ್ನು ಹಾಕಿ ಮಹದೇವರನ್ನು ಕಾಯುತ್ತಿದ್ದರು.

ಇಂಚಗೇರಿ ಮಠವು ಆಧ್ಯಾತ್ಮ ಸಂಪ್ರದಾಯಕ್ಕೆ ಪ್ರಸಿದ್ಧವಾದುದು. ಸಂಘಟನಾ ಶಕ್ತಿಗೆ ಇಂಚಗೇರಿ ಮಠವು ಅಂದಿಗೂ ಇಂದಿಗೂ ಹೆಸರಾದದ್ದು. ಜನ ಸಾಮಾನ್ಯರಿಗೆ ತಮ್ಮ ನಿತ್ಯಕರ್ತವ್ಯಗಳ ಜೊತೆಗೆ ಅದರಲ್ಲೂ ಶ್ರಮಜೀವಿಗಳು ಒಕ್ಕಲುತನ ಮೊದಲಾದ ಕಾಯಕಪ್ಪ ವಹಿಸುವವರಿಗೆ ಆಧ್ಯಾತ್ಮ ಬೋಧೆ, ವಿಧಾನವನ್ನು ಸುಲಭೀಕರಿಸಿ ಅಳವಡಿಸಿರುವುದು ಇಲ್ಲಿಯ ವಿಶೇಷ. ವೇದಾಧ್ಯಯನ, ಶಾಸ್ತ್ರಸಾಧನೆಗಳಿಂದಲೇ ಮುಕ್ತಿ ದೊರೆಯುವುದೆಂಬ ನಂಬಿಗೆಯನ್ನು ಅಲ್ಲಗಳೆದು ಪುರಾತನರ ಮುಗ್ಧಭಕ್ತಿಯಂಥ ನಿಷ್ಠೆಯ ನಿಲುವನ್ನು ತಳೆದು ಸಾಮಾನ್ಯನು ಇಲ್ಲಿ ಸಾಧಕನಾಗಿ ಪರಿವರ್ತನೆ ಹೊಂದುತ್ತಾನೆ. ಈ ಒಲವು ಒಂದುಗೂಡಿದ ಲಕ್ಷ–ಲಕ್ಷ ಜನ ಈ ಮಠದ ಅನುಯಾಯಿಗಳಾದರು.

ಇಂಚಗೇರಿ ಮಠದಲ್ಲಿ 'ಪೀಠ'ವೆಂದು ಸಿಂಹಾಸನ, ಪ್ರತ್ಯೇಕ ಆಸನವಿಲ್ಲ. ಗುರುಗಳಾದವರು 'ಮಹಾರಾಜ' ಎಂದು ಸಂಬೋಧನೆಗೆ ಪಾತ್ರರು, ಕಾವೀ ಬಟ್ಟೆಯನ್ನೇ ತೊಡಬೇಕೆಂದಿಲ್ಲ. ಬ್ರಹ್ಮಚಾರಿಗಳಾಗಿಯೇ ಇರಬೇಕೆಂದಿಲ್ಲ. ಅಡ್ಡ–ಉದ್ದ ನಾಮಗಳಿಲ್ಲ. ವಿಷ್ಣು, ಬ್ರಹ್ಮ, ಶಿವ, ಗಣಪತಿ, ಸರಸ್ವತಿ, ಲಕ್ಷ್ಮೀ—ಹೀಗೆ ಯಾವುದೇ ದೇವ, ದೇವತೆಯ ಮೂರ್ತಿಗಳಿಲ್ಲ. ಅಭಿಷೇಕ, ಮಂತ್ರ ಪಠಣದ ಪೂಜೆ ಇಲ್ಲ. ಕರ್ಪೂರ–ಕಾಯಿಗಳು ಬೇಕಿಲ್ಲ. ಸಾಮೂಹಿಕ ಭಜನೆ, ಧ್ಯಾನಗಳಿಗೆ ಹೆಚ್ಚಿನ ಪ್ರಾಶಸ್ತ್ಯ. ಗುರು ಆಗಬೇಕಾದವರಿಗೆ ಇಂಥದೇ ಜಾತಿಯಲ್ಲಿ ಹುಟ್ಟಿರಬೇಕೆಂಬ ಕಟ್ಟುಪಾಡು ಇಲ್ಲ.

---

* 'ಸಂಕಲ್ಪ' ೧೫೦, ಜಯಪ್ರಕಾಶನಗರ, ಹುಬ್ಬಳ್ಳಿ ೫೮೦ ೦೩೦

ಭಾರತದ ಶ್ರೇಷ್ಠ ತತ್ತ್ವಜ್ಞಾನಿಗಳಲ್ಲಿ ಒಬ್ಬರಾದ ಶ್ರೀ ಆರ್. ಡಿ. ರಾನಡೆಯವರು ಇಂಚಗೇರಿಯ ಭಾವು ಸಾಹೇಬ ಮಹರಾಜರ ಶಿಷ್ಯರು. ಇನ್ನೊಬ್ಬ ಶಿಷ್ಯರು ಗಿರಿಮಲ್ಲೇಶ್ವರರು.ಭಾವುಸಾಹೇಬರಿಗೆ ಉಪದೇಶ ಕೊಟ್ಟ ಗುರುಲಿಂಗಜಂಗಮ ಮಹಾರಾಜರು ಈ ಮಠದ ಮೊದಲ ಗುರುಗಳು. ಇವರು ದೇಹ ಬಿಟ್ಟದ್ದು ೧೮೮೫ರಲ್ಲಿ. ರಾನಡೆಯವರು ಗುರುದೇವರೆಂದು ಮಾನ್ಯರಾಗಿ ಸುಶಿಕ್ಷಿತರಲ್ಲಿ ಹೆಚ್ಚು ಪ್ರಚಲಿತರಾದರು. ಗಿರಿಮಲ್ಲೇಶ್ವರರು ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸಲು ಮುಡಿಪಾದವರು. ಇದೇ ಗಿರಿಮಲ್ಲೇಶ್ವರರು ತಮ್ಮ ಗುರುಗಳ ನೆನಪಿಗೆ ಇಂಚಗೇರಿಯಲ್ಲಿ ಗುಡಿ ಕಟ್ಟಿಸಿದರು. ಗಿರಿಮಲ್ಲೇಶ್ವರರ ಶಿಷ್ಯರು ಗಿರೀಶ ಆಶ್ರಮಗಳೆಂದು ಊರೂರಿಗೆ ಆಶ್ರಮಗಳನ್ನು ಕಟ್ಟಿಸಿದರು. ಅವರ ಒಬ್ಬ ಶಿಷ್ಯ ಶಿವಪ್ಪ ಮುರಗೋಡ ಅವರು ಇಂಚಗೇರಿಯಲ್ಲಿ ಗುರುವಿನ ಹೆಸರಿನಲ್ಲಿ ಗುಡಿ ಕಟ್ಟಿದ್ದಾರೆ. ಗಿರಿಮಲ್ಲೇಶ್ವರರ ನಂತರ ಶಿವಪ್ಪ ಮುರಗೋಡ ಅವರು ಇಂಚಗೇರಿಯ ಗುರುಗಳು ಆಗಿದ್ದರು. ಇವರ ಮಗ ಮಹದೇವರು.

### ಹೋರಾಟದ ಕಣಕ್ಕೆ

ಕುಸ್ತಿಪಟು, ಆಜನ್ಮ ಬ್ರಹ್ಮಚಾರಿ ಮಹದೇವರು ಕುಸ್ತಿಪಟುಗಳಿಗೆ ಜನಪ್ರಿಯ, ಗೌರವಾರ್ಹರಾದವನು. ಈ ಮಾತಿಗೆ ಸಾಕ್ಷಿಯಾಗಿ ಇಂದಿಗೂ ಕುಸ್ತಿಪಟುಗಳ ಕೊರಳಲ್ಲಿ ಮಹದೇವರ ಚಿತ್ರವಿರುವ ತಾಯಿತಗಳನ್ನು ಕಾಣಬಹುದು. ಚಿಕ್ಕಂದಿನಿಂದಲೂ ಮಹದೇವರು ಮುತ್ಸದ್ದಿ. ಆಧ್ಯಾತ್ಮ, ಜನ್ಮದಿಂದಲೇ ತಂದೆಯ ಪ್ರಭಾವದಿಂದ ರೂಢಿಗತವಾಗಿತ್ತು. ಅಣಿಮಾದಿ ಸಿದ್ಧಿಗಳನ್ನು ಮಾಡಿಕೊಳ್ಳಲು ತಪಸ್ಸು ಮಾಡಿದ್ದರು. ರಾಜಕೀಯದಲ್ಲಿ ಒಲವು ಮೂಡಿದ್ದು ಗುರುಗಳಾದ ಶಿರಹಟ್ಟಿಮಠರ ಪ್ರೇರಣೆಯಿಂದ. ಅವರೆಲ್ಲರೂ (ಮಾಸ್ತರರು–ಮಹದೇವರು ಮತ್ತಿತರ ಶಿಷ್ಯರು) ತ್ರಿಪುರಾ, ಹರಿಪುರ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದರು. ನೇತಾಜಿ ಸುಭಾಷ್‌ಚಂದ್ರಬೋಸರಿಂದ ಬಹಳ ಪ್ರಭಾವಿತರಾದರು. ನೇತಾಜಿ ಸುಭಾಷರನ್ನು ಕಾಂಗ್ರೆಸ್ ಅಧಿವೇಶನಕ್ಕೆ ಅಧ್ಯಕ್ಷರನ್ನಾಗಿ ಮಾಡಲು ದುಡಿದ ಕನ್ನಡಿಗರಲ್ಲಿ ಇವರೂ ಇದ್ದರು.

ಸುಭಾಷ್‌ಚಂದ್ರರ ಪ್ರಭಾವದಿಂದ ಕರ್ನಾಟಕದಲ್ಲಿಯೂ ಉಗ್ರಗಾಮಿಗಳ ತಂಡವೊಂದು ರೂಪುವೆತ್ತಿತು. ಈ ತಂಡದ ಅನೇಕರು ಗಾಂಧೀ ಅನುಯಾಯಿಗಳೂ ಹೌದು. ಸೌಮ್ಯವಾದಿಗಳು, ಗಾಂಧೀ ಅನುಯಾಯಿಗಳು ಆದ ಅನೇಕರು ಅಬುಲ್‌ಕಲಂ ಆಝಾದರು ಹೇಳುವಂತೆ ಅಹಿಂಸೆಯನ್ನು ಒಂದು ಧೋರಣೆಯಾಗಿ ಸ್ವೀಕರಿಸಿದ್ದರೇ ವಿನಾ ತತ್ವವೆಂದಲ್ಲ.

"ಭಿಕ್ಷೆ ಬೇಡಿದರೆ ಬ್ರಿಟಿಷರು ನಮಗೆ ಸ್ವಾತಂತ್ರ್ಯ ಕೊಡುವುದಿಲ್ಲ. ನಮ್ಮ ಜನ್ಮಸಿದ್ಧ ಹಕ್ಕನ್ನು ನಾವು ಕಿತ್ತುಕೊಳ್ಳಬೇಕು" ಎಂಬ ಸುಭಾಷ್‌ಚಂದ್ರರ ಮಾತು ಮಹದೇವರಂತೆ ಅನೇಕ ಯುವಕರಿಗೆ ವೇದವಾಕ್ಯವಾಯಿತು. ಹೊಸಮನಿ ಸಿದ್ದಪ್ಪನವರ ಮಾರ್ಗದರ್ಶನದಲ್ಲಿ ನಂಬಿಗೆ ಇಟ್ಟು ಮುನ್ನಡೆಯುವ ನಿರ್ಧಾರ ಮಹದೇವರದಾಯಿತು.

ಮಹದೇವರು ಇಂಚಗೇರಿ ಮತ್ತು ಇತರ ಆಶ್ರಮಗಳ ಜನತೆಯಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕಾದ ಅಗತ್ಯವನ್ನು ಆಧ್ಯಾತ್ಮದೊಡನೆಯೇ ಉಪದೇಶಿಸತೊಡಗಿದರು. ಪ್ರಭಾವಶಾಲಿ ವಕ್ತಾರರಾದ, ಇಂಚಗೇರಿ ಅನುಯಾಯಿಗಳ ಗುರುಗಳೂ ಆದ ಅವರ ಮಾತು ಲಕ್ಷಾನುಗಟ್ಟಲೆ ಜನರನ್ನು ಹೋರಾಟದ ಕಣಕ್ಕಿಳಿಸಿತು.

ವಿಜಾಪುರ, ಧಾರವಾಡ, ಬೆಳಗಾವಿ, ಸಾಂಗ್ಲಿ, ಸೊಲ್ಲಾಪುರ ಜಿಲ್ಲೆಯ ಬಹುಭಾಗದ ಜನತೆ (ಗ್ರಾಮೀಣರು) ಇಂಚಗೇರಿಯ ಅನುಯಾಯಿಗಳಾಗಿದ್ದರು. ಅನೇಕ ಆಶ್ರಮಗಳು ಅಸ್ತಿತ್ವದಲ್ಲಿದ್ದವು. ಮುಂಬೈ, ಆಗ್ರಾ, ಮಹಾಬಳೇಶ್ವರ, ಗೋವಾ, ವರ್ಧಾ, ಶ್ರೀಶೈಲಗಳಲ್ಲಿಯೂ ಆಶ್ರಮಗಳು ತಲೆಎತ್ತಿದ್ದವು. ಇವೆಲ್ಲವೂ ಹೋರಾಟದ ಕೇಂದ್ರಗಳಾಗುವಂತೆ ಮಾರ್ಪಡಿಸಿದರು ಮಹದೇವರು.

"ಆ್ಯನ್ ಇಂಡಿಯನ್ ಪಿಲ್‌ಗ್ರಿಮ್" (ಘಟಕ ೬ ರಿಂದ ೭) ದಲ್ಲಿ ಸುಭಾಷ್‌ಚಂದ್ರಬೋಸರು "ಮಿಲಿಟರಿ ಶಕ್ತಿ ಪ್ರತಿಯೊಂದು ದೇಶಕ್ಕೂ ಅನಿವಾರ್ಯ ಅಗತ್ಯ. ಸಮರಗಳಿಂದ ನಾವು ಸಾಕಷ್ಟು ಪಾಠ ಕಲಿತಿದ್ದೇವೆ. ಮಿಲಿಟರಿ ಶಕ್ತಿ ಪ್ರಬಲವಾಗಿರದಿದ್ದರೆ ಯಾವ ದೇಶವೂ ತನ್ನ ರಾಜಕೀಯ ಸ್ವಾತಂತ್ರ್ಯವನ್ನು, ಪ್ರಾದೇಶಿಕ ಸಮಗ್ರತೆಯನ್ನು ಉಳಿಸಿಕೊಳ್ಳಲಾರದು" ಎಂದಿದ್ದಾರೆ.

ನೇತಾಜಿಯವರ ಶಿಷ್ಯರಲ್ಲಿ ಅನೇಕರು ಈ ಮಾತಿನಂತೆ ಪ್ರಯತ್ನಿಸಿರಬೇಕು. ಜನಶಕ್ತಿಯನ್ನು ಯಥೇಚ್ಛವಾಗಿ ಪಡೆದ ಮಹದೇವರು ಮಾತ್ರ ಈ ಪ್ರಯತ್ನದಲ್ಲಿ ವಿಶ್ವಾಸವಿಟ್ಟು ಮುಂದುವರಿದರು. ತಮ್ಮ ಅನುಯಾಯಿಗಳನ್ನು ಸೈನಿಕರಂತೆ ತರಬೇತುಗೊಳಿಸಿದರು. ಕೊಟ್ಟಲಗಿ (ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ), ಅಸೂಟಿ (ಗದಗ ತಾಲ್ಲೂಕು ಧಾರವಾಡ ಜಿಲ್ಲೆ), ಸೋನಿಹಾಳ (ಜತ್ತ್ ತಾಲ್ಲೂಕು, ಸಾಂಗ್ಲಿ ಜಿಲ್ಲೆ) ಊರುಗಳಲ್ಲಿ ಮದ್ದುಗುಂಡು ತಯಾರಿಕೆಯನ್ನು ಆರಂಭಿಸಿದರು. ಸಶಸ್ತ್ರಪಡೆ ಕಟ್ಟುವ ಕಾರ್ಯಕ್ಕೆ ಸನ್ನದ್ಧರಾದರು.

ಆಗ ಗಾಂಧೀಜಿಯ ನಿಶ್ಶಸ್ತ್ರಯುದ್ಧ, ಅಹಿಂಸಾ ಹೋರಾಟಕ್ಕೆ ಎಲ್ಲೆಡೆಯಿಂದ ಬೆಂಬಲ ಸಿಕ್ಕಿತು. ಮಹದೇವರು ಸಕ್ರೀಯವಾಗಿ ಹೋರಾಡುವ ಇಚ್ಛೆ ಇದ್ದರೂ ಸಮಕಾಲೀನ ಪರಿಸ್ಥಿತಿಯನ್ನು ಹಿಂಬಾಲಿಸಬೇಕಾಯಿತು. ಅದು ವೈಯಕ್ತಿಕ ಸತ್ಯಾಗ್ರಹದ ಕಾಲ. ಮಹದೇವರು ತಮ್ಮ ಅನುಯಾಯಿಗಳಿಗೆಲ್ಲ ಅದರ ಮಹತ್ವವನ್ನು ತಿಳಿಹೇಳುತ್ತ ಆಶ್ರಮದಿಂದ ಆಶ್ರಮಕ್ಕೆ ಅಲೆದರು. ತಾವು ಗಾಂಧೀಜಿಯ ಕರೆಯ ಮೇರೆಗೆ ಅವರ ಅನುಮತಿ ಪಡೆದು ೧೯೪೧ರ ಜನವರಿ ೧ರಂದು ವೈಯಕ್ತಿಕ ಸತ್ಯಾಗ್ರಹ ಮಾಡುವುದಾಗಿ ಘೋಷಿಸಿದರು. ಇಂಚಗೇರಿಯಲ್ಲಿ ಸತ್ಯಾಗ್ರಹ ಮಾಡಿ ಬಂಧಿತರಾದರು. ಬಿಡುಗಡೆಯೂ ಆಯಿತು.

ಎರಡನೇಯ ಸಲ ಮತ್ತೊಮ್ಮೆ ಮಹದೇವರು ಹಿಪ್ಪರಗಿಯಲ್ಲಿ ಸತ್ಯಾಗ್ರಹ ಮಾಡುವುದಾಗಿ ಘೋಷಿಸಿದರು. ಅಂದು ಬೆಳಗಾವಿ, ವಿಜಾಪುರ, ಧಾರವಾಡ ಜಿಲ್ಲೆಯಿಂದ ಒಟ್ಟು ೧೫೦೦ ಜನ ಸತ್ಯಾಗ್ರಹಿಗಳು ವೈಯಕ್ತಿಕ ಸತ್ಯಾಗ್ರಹ ಮಾಡಿ ಬಂಧಿತರಾದರು. ಜನರನ್ನು ಪ್ರಚೋದಿಸಿದ್ದಕ್ಕೆ ಮಹದೇವರಿಗೆ ಒಂದು ವರ್ಷ ಶಿಕ್ಷೆಯಾಯಿತು. ಬಿಡುಗಡೆಯಾಗಿ ಹೊರಬರುವುದರಲ್ಲಿ ೧೯೪೨ರ ಚಳುವಳಿ ಆರಂಭವಾಗಿತ್ತು.

೧೯೪೨ರ ಚಳುವಳಿಯ ಸ್ವರೂಪವು ಈಗಾಗಲೇ ಇಂಚಗೇರಿಯ ಅನುಯಾಯಿಗಳು ಸಿದ್ಧವಾಗಿದ್ದ ಮಾದರಿಯಲ್ಲಿಯೇ ಇತ್ತು. ಮದ್ದು ಗುಂಡು ತಯಾರಿಕೆಗೆ ಈ ನಡುವೆ ಬಿದ್ದ ತೆರೆ ಸರಿಸಿ ಮತ್ತೆ ಕಾರ್ಯಪ್ರವೃತ್ತರಾದರು.

ಅಲ್ಲಲ್ಲಿ ಚಳುವಳಿ ಮಾಡಿದ ಇಂಚಗೇರಿಯ ಅನುಯಾಯಿಗಳಿಗೂ, ಇತರರಿಗೂ ಪೋಲಿಸರ ಕಿರುಕುಳ ಹೆಚ್ಚುತ್ತಲಿತ್ತು. ರೈತರು ಮನೆ–ಹೊಲ ಕಳೆದುಕೊಂಡು ನಿರ್ಗತಿಕರಾಗುವ ಸ್ಥಿತಿ ಒದಗಿತ್ತು. ಆಗ ಇಂಚಗೇರಿಯ ಆಶ್ರಮಗಳು ಚಳುವಳಿಯವರಿಗೆ ಆಶ್ರಯವೊದಗಿಸತೊಡಗಿದವು. ಗಂಡಸರು ಗುಪ್ತ ಚಟುವಟಿಕೆಗಳಿಗಾಗಿ ಕಾಡು–ಗುಡ್ಡ ಸೇರಿದರೆ ಮಹಿಳೆಯರು ಆಶ್ರಮದ ನಿಯಮಗಳನ್ನು (ನಾಲ್ಕು ಹೊತ್ತು ಭಜನೆ–ದಾಸೋಹ–ರಾಜಕಾರಣ ಬಿಡದೆ) ಪಾಲಿಸಿಕೊಂಡು ನಡೆದರು. ಹೊಲಗಳನ್ನು ಉತ್ತು–ಬಿತ್ತಿ–ಬೆಳೆ ಮಾಡಿದರು. ಶಸ್ತ್ರಾಸ್ತ್ರಗಳನ್ನು ಅಡಗಿಸಿಟ್ಟು ತಂಡಗಳಿಗೆ ಪೂರೈಸಿ ಬಂದರು. ಬುತ್ತಿ ಕಟ್ಟಿಕೊಂಡು ಹರದಾರಿ ನಡೆದುಹೋಗಿ ಕೊಟ್ಟು ಬಂದರು. ಮದ್ದು ಕುಟ್ಟಿದರು ; ಗುಂಡು ಮಾಡಿದರು ; ಹೀಗೆ ಹಲವು ರೀತಿಯ ಚಟುವಟಿಕೆಯಿಂದ ದೇಶದ್ರೋಹಿಗಳ ಕಣ್ಣಲ್ಲಿ ಮುಳ್ಳಾದರು. ಕೆಲವೊಮ್ಮೆ ಸೆರೆ ಸಿಕ್ಕರು. ಜೈಲು ಅನುಭವಿಸಿದರು. (ದಿವಂಗತರಾದ ಸೋನಿಹಾಳದ ಮಹಾದೇವಿ ಮಸಳಿ ಮತ್ತು ವಿಜಾಪುರದ ಗಿರಿಜಾ ಕಲಗೊಂಡ ಅಥವಾ ಅಂಗಡಿ ಹಾಗೂ ಈಗ ಜೀವಂತರಿದ್ದು ಮಾಹಿತಿ ನೀಡಿದ ಹೊಂಬಳದ ಈರಮ್ಮ ಶಿರಹಟ್ಟಿಮಠ ಇವರು ಗಣ್ಯ ಪಾತ್ರ ವಹಿಸಿದವರು. ಈರಮ್ಮ ನೀಡಿದ ಮಾಹಿತಿಯಂತೆ) ಸ್ವತಂತ್ರವಾಗಿ ಪಂಢರಪುರದ ದಾರಿಯಲ್ಲಿರುವ ಮಲವಾಡಿ–ಸಿದ್ದವಾಡಿ ಹಳ್ಳಿಗಳ ನಡುವಿನ ತಂತಿ ಕತ್ತರಿಸಿದರು. ಸೋನಿಹಾಳ, ಅಸೂಟಿಗಳಲ್ಲಿ ಮದ್ದು ತಯಾರಿಸಿದರು. ನಿಂಬಾಳ ಸ್ಟೇಶನ್ ಬಳಿ ಗೂಡ್ಸ್ ಗಾಡಿ ಉರುಳಿಸಿದರು. ಮಸಳಿ ಮಹದೇವಿ ಸೋನಿಹಾಳದ ಹೋರಾಟಗಾರರಿಗೆ ಕೇಂದ್ರಶಕ್ತಿಯಾಗಿದ್ದಳು. ಅವಳನ್ನು ಸೆರೆಹಿಡಿದ ಪೋಲಿಸರು ಅವಳ ಮೇಲೆ ಘೋರ ಅತ್ಯಾಚಾರವೆಸಗಿದರು. ಅವಳು ತವರುಮನೆ ಕಾರಾಜಣಗಿಯವರಲ್ಲಿಯೇ ಇದ್ದಳು. ಜತ್ತಿಸಂಸ್ಥಾನಿಕರ ಸಿಟ್ಟಿಗೆ ಗುರಿಯಾಗಿ ಕಾರಾಜಣಗಿಯವರು ತಮ್ಮ ಶ್ರೀಮಂತಿಕೆಯನ್ನು ಕಳೆದುಕೊಳ್ಳಬೇಕಾಯಿತು. ಆದರೂ ಅವರು ಮಹದೇವರನ್ನು ಇಂಚಗೇರಿಯನ್ನು ಬಿಡದೆ ಅಲ್ಲಿಗೆ ಬಂದರು. ಮಹದೇವರ ಜೊತೆ ಸಾಮೂಹಿಕ ಬೇಸಾಯದಲ್ಲಿ ತೊಡಗಿದರು.

೧೯೪೨ರ ಚಳುವಳಿಯಲ್ಲಿ ಭಾಗವಹಿಸಿದ ಜನರಿಗೆ ಬ್ರಿಟಿಷರು ಬಹಳ ಕಂಟಕವೊಡ್ಡುತ್ತಿದ್ದರು. ಜನ ಮನೆ ಮಾರು ತೊರೆದು ಓಡುತ್ತಿದ್ದರು. ಆಗ ಆಶ್ರಯಕ್ಕಾಗಿ ಇಂಚಗೇರಿಯೇ ಯೋಗ್ಯವೆಂದು ಮಹದೇವರ ಕಡೆಗೆ ಹೋಗುತ್ತಿದ್ದರು.

ರಡ್ಡೇರಹಟ್ಟಿ ಬೇಡರ ತಂಡವೊಂದು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಕಾಡುತ್ತಿತ್ತು. ಅವರು ಮಹದೇವರ ಆಶ್ರಯಕ್ಕೆ ಬರುವ ಮೊದಲು ಸಂತ್ಲೂರು (ಸತ್ತಿ–ಅಥಣಿ ತಾಲ್ಲೂಕು) ಎಂಬಲ್ಲಿ ಅನಂತರಾವ್ ಕುಲಕರ್ಣಿಯವರ ರೈತರಾಗಿದ್ದರು. ಅನಂತರಾವ್ ಕುಲಕರ್ಣಿ ಮಹದೇವರ ಜೊತೆಗೆ ಚಳುವಳಿಯ ಭಾಗಿದಾರರು. ಒಂದು ಸಲ ಅನಂತರಾವ್ ಕುಲಕರ್ಣಿಯವರ ಮನೆಯಲ್ಲಿ ಕಾರ್ಯಕರ್ತರ ಸಭೆ ನಡೆದಾಗ ಪೋಲಿಸರು ಮುತ್ತಿಗೆ ಹಾಕಿದರು. ಆಗ ಎಲ್ಲರೂ ತಪ್ಪಿಸಿಕೊಂಡರು. ಮಹದೇವರು ಮತ್ತು ಬಾಳಪ್ಪ ಬಬರೆಯೆಂಬವರು ಕುಲಕರ್ಣಿಯವರ ಮನೆಯ ಗೋಡೆ ಜಿಗಿದು ಸೈಕಲ್ ಹತ್ತಿ ಓಡುತ್ತಿದ್ದಾಗ ಪೋಲಿಸರು ನೋಡಿ ಬೆನ್ನು ಹತ್ತಿದರು. ಸತ್ತಿಯಿಂದ ಮಸೂಡಿ (ಮಹಿಷವಾಡಿ)ವರೆಗೂ ಬಂದರು. ಕೃಷ್ಣಾನದಿ ತುಂಬಿ ಹರಿಯುತ್ತಿತ್ತು. ಮಹದೇವರು ಸೈಕಲ್ಲನ್ನು ತಲೆಯ ಮೇಲೆ ರುಮಾಲಿನಿಂದ ಕಟ್ಟಿಕೊಂಡು ಹೊಳೆಯಲ್ಲಿ ಈಸು ಬಿದ್ದು ಆಚೆ ದಡ ಸೇರಿದರು. ಈಚೆ ದಡದಲ್ಲಿ ಪೋಲಿಸರು ನೋಡುತ್ತ ನಿಂತರು.

ರಡ್ಡೇರಹಟ್ಟಿ ಬೇಡರ ತಂಡದ ಕುರಿತು ಅಂದಿನ ಪೋಲಿಸ್ ಅಧಿಕಾರಿ ನಿಜಾಮುದ್ದೀನ್ ಎಂಬುವರು ಮರಾಠಿ 'ಸಕಾಳ' ಪತ್ರಿಕೆಯಲ್ಲಿ ೬ ಲೇಖನಗಳನ್ನು ಧಾರಾವಾಹಿಯಾಗಿ ಬರೆದಿದ್ದಾರೆ. ಅದರಲ್ಲಿ ಆ ಬೇಡರನ್ನು ಕಟುಕರು, ದರೋಡೆಖೋರರೆಂದು ವರ್ಣಿಸಿದ್ದಾರೆ. ರೈತರು ಹೊಲ ಕಳೆದುಕೊಂಡು ನೆಲೆಗೆಟ್ಟು ಇಂಚಗೇರಿಗೆ ಬಂದಾಗ ೪೨ರ ಚಳುವಳಿ ನಡೆದಿತ್ತು. ಆಗ ಟಪಾಲು ಲೂಟಿ, ಸ್ಟೇಶನ್ ಸುಡುವುದು, ತಾರಕಂಬ ಉರುಳಿಸುವುದು, ದೇಸಾಯಿ, ದೇಶ್ಪಾಂಡೆ, ಕುಲಕರ್ಣಿ, ಪಾಟೀಲರು ಇಂಗ್ಲೀಷರ ಬಾತ್ಮಿದಾರರಾಗಿದ್ದರಿಂದ ಅವರ ಮನೆಗಳನ್ನು ಲೂಟಿ ಮಾಡುವುದು ಸರ್ವೇಸಾಮಾನ್ಯವಾಗಿತ್ತು. ಅಂಥ ಕೆಲಸ ಮಾಡಿದ ಅನೇಕರು ಇಂದು ಅಗ್ರಮಾನ್ಯರಾಗಿದ್ದಾರೆ. ಇಂಥ ಬಡರೈತ, ಕೂಲಿಕಾರ ವರ್ಗದವರಿಗೆ ಮಾತ್ರ ದರೋಡೆಕೋರರ ಪಟ್ಟ ದೊರೆತಿದೆ. ವೈಯಕ್ತಿಕ ಸ್ವಾರ್ಥಕ್ಕಾಗಿ, ದ್ವೇಷಕ್ಕಾಗಿ ಮುಗ್ಧ, ಅಜ್ಞ–ಜನ ಸಾಮಾನ್ಯರಾದ ಇಂಚಗೇರಿಯ ಅನುಯಾಯಿಗಳ ಗುಂಪನ್ನು ಸೇರಿ ತಮ್ಮ ಕಾರ್ಯಸಾಧನೆಯಾದ ಮೇಲೆ ಬಿಟ್ಟುಹೋಗಿ ಹೆಸರು ಇಟ್ಟವರು–ಹೆಸರು ಕೆಡಿಸಿದವರು ಇದ್ದಾರೆ. ಈ ಹೇಳಿಕೆಗೆ ನಿದರ್ಶನಗಳು ಜೀವಂತವಾಗಿ ನನ್ನ ಧ್ವನಿಸುರುಳಿ ಸಂಗ್ರಹದಲ್ಲಿವೆ.

ಕೆಲವು ಪತ್ರಿಕಾ ವರದಿಗಳನ್ನು ಅನುಬಂಧದಲ್ಲಿ ಕೊಟ್ಟಿದ್ದೇನೆ.

"ಬ್ರಿಟಿಷರ ಗುಂಡಿಗೆ ಎದೆಯೊಡ್ಡುವುದು 'ಅಹಿಂಸೆ' ಯೆಂದಾದರೆ ಬ್ರಿಟಿಷರ ಎದೆಗೆ ಗುಂಡುಹೊಡೆಯುವುದು ಯಾಕೆ ಹಿಂಸೆಯಾಗುತ್ತದೆ ?" ಇದು ಅಂದಿನ ಯುವಕರು ಗಾಂಧಿವಾದಕ್ಕೆ ಹಾಕಿದ ಪ್ರಶ್ನೆ. ಅದರ ಉತ್ತರ ರೂಪವೇ ೧೯೪೨ರ ಚಳುವಳಿ ಹಿಂಸಾಕಾಂಡವಾದದ್ದು. ಅಂದರೆ ಭಾರತೀಯರು ಹಿಂಸೆಯನ್ನೇ ಮೂಲದಲ್ಲಿಟ್ಟುಕೊಂಡು ಚಳುವಳಿ ಮಾಡಲಿಲ್ಲ. ಆಗತ್ಯ–ಅನಿವಾರ್ಯವಾದಾಗ ಮಾತ್ರ ಬಳಸಿಕೊಳ್ಳಲು ದೇಶಿಪಿಸ್ತೂಲು ತಯಾರಿಸಿದರು–ಬಳಸಿದರು. ಮಹದೇವರ ನಿಲವು ಕೂಡ ಅದೇ ಆಗಿತ್ತು.

## ಉಪಸಂಹಾರ

ಇಂಚಗೇರಿಯ ಮಠವು ಬಂಕಿಮಚಂದ್ರರ 'ಆನಂದ ಮಠ'ವನ್ನು ನೆನಪಿಸುತ್ತದೆ. ಈ ಮಠದ ಆಶ್ರಯಕ್ಕೆ ಹೋದ ಅನೇಕ ಅಪರಾಧಿಗಳು, ಅಪರಾಧಿ ಮನೋಭಾವವುಳ್ಳವರು ಅಲ್ಲಿಯ ಭಜನೆ–ನಿತ್ಯನಿಯಮಗಳಿಂದ ಪರಿವರ್ತಿತರಾದ ಉದಾಹರಣೆಗಳು ಇವೆ. ವಿ. ಶಾಂತರಾಮರ ನಿರ್ದೇಶನದಲ್ಲಿ ಹೊರಬಂದ 'ದೋ ಆಂಖೆ ಬಾರಾ ಹಾಥ'ದಲ್ಲಿ ೬ ಜನ ಅಪರಾಧಿಗಳ ಮನಃಪರಿವರ್ತನದ ಕಥೆ ಕರುಳು ಮಿಡಿವಂತೆ ಇಲ್ಲಿ ನೂರಾರು ಜನರ ಜೀವನಾದರ್ಶವು ನೇರಗೊಂಡದ್ದು ನೋಡಿದರೆ ಆಧ್ಯಾತ್ಮಿಕ ಸಂಪ್ರದಾಯದಲ್ಲಿ ಅಚಲ ವಿಶ್ವಾಸ ತಾನಾಗಿ ಹುಟ್ಟುತ್ತದೆ.

ಮತ್ತೊಂದು ಮಹತ್ವದ ಮಾತನ್ನು ನಾನಿಲ್ಲಿ ಹೇಳಬೇಕಾಗಿದೆ. ಸ್ವಾತಂತ್ರ್ಯ ಹೋರಾಟ ೧೯೪೭ರ ವರೆಗೆ ಮಾತ್ರ ನಡೆದಿಲ್ಲ. ಅಂದು ಬ್ರಿಟಿಷರಿಂದ ಮಾತ್ರ

ಮುಕ್ತರಾದೆವು. ನಂತರ ನಿಜವಾದ ಹೋರಾಟ ಪ್ರಾರಂಭ ವಾಯಿತು. ಬಡತನ, ನಿರುದ್ಯೋಗ, ಜಾತೀಯತೆ ಯೆಂಬ ಸಮಸ್ಯೆಗಳು ನಮಗೆ ದೊಡ್ಡ ಶತ್ರುಗಳಾದವು. ಇಂಚಗೇರಿಯ ಅನುಯಾಯಿಗಳಿಗೆ ಮಹದೇವರು ಈ ಶತ್ರುಗಳನ್ನು ಗೆಲ್ಲುವ ಮಾರ್ಗ ತೋರಿಸಿದ್ದಾರೆ. ಸಾಮೂಹಿಕ ಬೇಸಾಯ, ಅಂತರ್‌ಜಾತಿ ವಿವಾಹಗಳನ್ನು ಮಾಡಿಸಿ ಅವರ ಜೀವನ ಸುಗಮಗೊಳಿಸಿದ್ದಾರೆ. ಸ್ವಾವಲಂಬಿಗಳನ್ನಾಗಿ ಮಾಡಿದ್ದಾರೆ. ನೆಲ್ಸನ್ ಮಂಡೇಲಾರಂತೆ ಮಹದೇವರ ಸಾಧನೆ ಅವಿಸ್ಮರಣೀಯ.

ಸ್ವಾವಲಂಬನೆಯ ಹಾದಿಯೆಂದು ಖಾದಿವ್ರತ ಹಿಡಿದರು. ಅನುಯಾಯಿಗಳಿಗೆ ಹಿಡಿಸಿದರು. ಒಕ್ಕಲು ತನಕ್ಕೆ ದನಕರುಗಳು ಬೇಕು ; ಕಟುಕರಿಗೆ ಮಾರುವುದನ್ನು ಪ್ರತಿಬಂಧಿಸಲು ಪಾದಯಾತ್ರೆ ಮಾಡಿದರು. ಮಾಡಿಸಿ ದರು. ವಿನೋಬಾರವರ ಸರ್ವೋದಯವನ್ನು ಒಪ್ಪಿ ಕೊಂಡರು. ಅದರಂತೆ ಕರ್ನಾಟಕದಲ್ಲಿ ಸರ್ವೋದಯ ವನ್ನು ಯಶಸ್ವಿಗೊಳಿಸಿದರು. ಕರ್ನಾಟಕದ ಸರ್ವೋ ದಯದ ಪಾದಯಾತ್ರಿಗಳನ್ನು ಕಲ್ಕತ್ತಾ, ದಿಲ್ಲಿವರೆಗೂ ಕಳಿಸಿದರು. ಸರ್ವಹಿತಕಾರಿ ಸಾರ್ವಜನಿಕ ಕಾರ್ಯ ಗಳನ್ನು ನಿರಂತರ ಕಾರ್ಯಾಚರಣೆಯಲ್ಲಿ ತಂದರು. ರಜಾಕಾರರ ಹಾವಳಿ, ಗೋವಾ ಚಳುವಳಿ, ಏಕೀಕರಣ ಚಳುವಳಿ ಮುಂತಾದ ಎಲ್ಲ ಹೋರಾಟಗಳಲ್ಲಿ ತಮ್ಮ ಅನುಯಾಯಿಗಳೊಂದಿಗೆ ನಿರಂತರ ಹೋರಾಡಿ ಇಂಚ ಗೇರಿಗೆ ಆಧ್ಯಾತ್ಮದೊಂದಿಗೆ ರಾಜಕೀಯ ಮಹತ್ವ ತಂದರು.

## ಅನುಬಂಧ : ಕೆಲವು ವರದಿಗಳು

### ಪತ್ರಿಕಾ ವರದಿಗಳು

'ಸಕಾಳ' (ಮರಾಠಿ) ದೈನಿಕ-"ಕರ್ನಾಟಕಾತೀಲ ಕ್ರೂರ ರಡ್ಡೇರಹಟ್ಟಿ ಬೇರಡ ಟೋಳಿ" ರವಿವಾರದ ಸಂಚಿಕೆ ೨೧-೪-೧೯೪೪ ರಿಂದ ಪ್ರತಿವಾರ-೬ ಲೇಖನ, ಬರೆದವರು ಶೇಖ ನಿಜಾಮುದ್ದೀನ್.

ಸಂಯುಕ್ತ ಕರ್ನಾಟಕ ೧-೧೦-೧೯೪೨-ವಿಜಾಪೂರ,ಜತ್ತ ನಡುವಿನ ತಂತಿ ಕಂಬಗಳನ್ನು ಕಿತ್ತು ತಂತಿಗಳನ್ನು ತೆಗೆದುಕೊಂಡು ಹೋಗಿರುವ ರೆಂದು ತಿಳಿದುಬಂದಿದೆ.

ಕರ್ಮವೀರ-ಡಿಸೆಂಬರ್ ೧೧ (೧೯೪೪) ಹಾಗೂ ನವೆಂಬರ್ (೧೯೪೩)ನೇ ದಿನ ಹುಲಕೋಟಿ ಸ್ಟೇಶನ್ ಸುಟ್ಟ ಬಗ್ಗೆ ಫಕೀರಯ್ಯ ಶಿರಹಟ್ಟಿಮಠ ಇವರಿಗೆ ೬ ತಿಂಗಳಿಂದ ೨ ವರ್ಷದವರೆಗೆ ಶಿಕ್ಷೆ ವಿಧಿಸಿದರು. ಅಂದೇ ಮಹದೇವಪ್ಪ ಮುರಗೋಡ ಇವರನ್ನು ವಿಜಾಪುರ ಸ್ಟೇಶನ್ ಖಟ್ಲೆಗಾಗಿ ಒಯ್ದರು.

ಕರ್ಮವೀರ-೧೬-೧೦-೪೪ರಂದು ಮಹದೇವಪ್ಪ ಮುರಗೋಡ ಇವರು ಈಗ ವಿಜಾಪುರ ತುರಂಗದಲ್ಲಿರುವರು. ಅವರ ಖಟ್ಲೆ ಇದ್ದ ದಿವಸ ಜೈಲಿನಿಂದ ಕೋರ್ಟಿನವರೆಗೆ ಅವರನ್ನೂ ಕರೆದುಕೊಂಡು ಬರುವುದಲ್ಲದೆ ಕಾಲಿನಲ್ಲಿ ಅಡ್ಡಬೇಡಿಯನ್ನು ಹಾಕುತ್ತಾರೆ.

ಕೊಟ್ಬಲಗಿ ಟಪಾಲ ಅಪಹರಣ-೧೩-೪-೧೯೪೩.

ಸಂಯುಕ್ತ ಕರ್ನಾಟಕ–೧೬-೧೧-೧೯೪೩ : ಮಹದೇವಪ್ಪ ಮುರಗೋಡ ಇವರ ಕೈದು : ವಿಜಾಪೂರ ೧೫-ಕೆಲವು ದಿನಗಳಿಂದ ಕಾಣೆಯಾಗಿದ್ದ ಶ್ರೀ ಮಹದೇವಪ್ಪ ಶಿವಪ್ಪ ಮುರಗೋಡ, ಹುಬ್ಬಳ್ಳಿ ಇವರನ್ನು ಬಾದಾಮಿಯ ಫೌಜದಾರರಾದ ಶ್ರೀ ಬಳ್ಳಾರಿಯವರು ಪಟ್ಟದಕಲ್ಲಿನಲ್ಲಿ ತಾ-೬ನೇ ದಿವಸ ರಾತ್ರಿ ೧ ಗಂಟೆಗೆ ಬಂಧಿಸಿದ ಸುದ್ದಿ ಬಂದಿದೆ. ಇವರನ್ನು ಹಿಡಿದುಕೊಟ್ಟವರಿಗೆ ಇನಾಮು ಜಾಹೀರ ಮಾಡಲ್ಪಟ್ಟಿತ್ತು.

ಸಂಯುಕ್ತ ಕರ್ನಾಟಕ-೫-೧೨,೧೯೪೪ : ಹುಲಕೋಟಿ ಬಂದೂಕ್ ಅಪಹರಣ : ೧೫-೧೦-೪೩ನೇ ಸಾಯಂಕಾಲ ಹುಲಕೋಟಿ ಸ್ಟೇಶನ್ ಕಾವಲಿದ್ದ ಪೋಲಿಸರ ಬಂದೂಕು ಅಪಹರಿಸಿದ್ದು... ........ಶ್ರೀ ಮುರಗೋಡ ಮಹದೇವರು ಇವರನ್ನು ವಿಜಾಪೂರ ಸೆಶೆನ್ಸ್ ಕೋರ್ಟಿನಲ್ಲಿ ನಡೆದ ಒಂದು ಖಟ್ಲೆಯ ಸಲುವಾಗಿ ಅಲ್ಲಿಗೆ ಕರೆದುಕೊಂಡು ಹೋದರು.

ಕರ್ಮವೀರ-೧೮-೧೨-೧೯೪೪ : ಇಂಚಗೇರಿ ಪೋಲಿಸ್ ಸ್ಟೇಶನ್ ಸುಟ್ಟ ಪ್ರಕರಣದ ವಿಚಾರಣೆ ವಿಜಾಪೂರದ ಸೆಶನ್ ಜಜ್ಜರಾದ ಶ್ರೀ ಹೊನ್ನಾವರ ಇವರ ಮುಂದೆ ನಡೆದು ೧೩ ಆರೋಪಿಗಳು ನಿರ್ದೋಷಿಗಳೆಂದು ತೀರ್ಮಾನಿಸಲಾಯಿತು ..........

ಸಂಯುಕ್ತ ಕರ್ನಾಟಕ–೧೫-೧೨-೧೯೪೫ : ಜಮಖಂಡಿ : ೧೯೪೨ರ ಆಗಸ್ಟ್ ಆಂದೋಲನದಲ್ಲಿ ಸಾವಳಗಿ ಗ್ರಾಮದ ಪೋಲಿಸ್ ಕಚೇರಿಯಿಂದ ಆಯುಧ ಅಪಹರಣ ಮಾಡಿದ ಅಪರಾಧಕ್ಕಾಗಿ ಮುರಗೋಡ ಮಹದೇವಪ್ಪನವರನ್ನು ಬಂಧಿಸಲಾಯಿತು.

ಮಹದೇವರು ಇದ್ದ ಮನೆಗೆ ಪೋಲಿಸರೊಬ್ಬ ಬಂದು "ಸಬ್‌ಇನ್ಸ್‌ಪೆಕ್ಟರರು ಕರೆಯುತ್ತಾರೆ ಬನ್ನಿರಿ" ಅಂದನು. "ನನಗೆ ಬೇರೆ ಕೆಲಸಗಳಿವೆ. ಕೆಲಸವಿಲ್ಲದವರಿಗೆ ಬರಲು ತಿಳಿಸಿರಿ", ಎಂದು ಸಾಮಾನ್ಯ ವೇಷದಲ್ಲಿದ್ದ ಪೋಲಿಸರಿಗೆ ತಿಳಿಸಿದರು. ಅವರು ತಿರುಗಿಹೋಗಿ ಸಬ್‌ಇನ್ಸ್‌ಪೆಕ್ಟರರಿಂದ "ಶ್ರೀ ಮಹದೇವಪ್ಪ ಮುರಗೋಡರವರನ್ನೂ ಹಿಡಿದುಕೊಂಡು ಬನ್ನಿರಿ" ಎಂದು ಪೋಲಿಸರಿಗೆ ಹುಕುಂ ಮಾಡಿದ ಕಾಗದವನ್ನು ತಂದು ತೋರಿಸಿ "ನಿಮ್ಮ ಮೇಲೆ ವಾರೆಂಟ್ ಇದೆ ಬನ್ನಿರಿ" ಎಂದರು. "ಅದು ವಾರಂಟ್ ಸ್ವರೂಪದಲ್ಲಿಲ್ಲ. ವಾರಂಟ್ ತಂದರೆ ಬರುವೆ"ನೆಂದರು. ಒಂದು ತಾಸಿನ ನಂತರ ಪೋಲಿಸರು ವಾರಂಟ್ ತಂದು ಅವರನ್ನು ಬಂಧಿಸಿದರು.

ಕಸ್ತೂರಿ (ಮಾಸಪತ್ರಿಕೆ) ಫೆಬ್ರವರಿ ೧೯೮೭. ಲೇಖನ "ಕ್ರಾಂತಿವೀರ ವೆಂಕಣ್ಣ ಮಾಸ್ತರರು" ಲೇಖಕರು ಗುರುನಾಥ ಇನಾಂದಾರ.

ಸಂಯುಕ್ತ ಕರ್ನಾಟಕ–೩೦-೧೦-೧೯೪೨: ಕರ್ನಾಟಕದ ಪರಿಸ್ಥಿತಿ-ಕೊಟ್ಟಲಗಿಯಲ್ಲಿ ಪಿಸ್ತೂಲ ತಯಾರಿಸುವ ಸಾಮಾನು : ಅಥಣಿ ತಾಲ್ಲೂಕಿನ ಕೊಟ್ಟಲಗಿಯಲ್ಲಿ ಹೋದವಾರ ಪೋಲಿಸರು ಝಡತಿಗೆ ಹೋದ ಕಾಲಕ್ಕೆ ಪಿಸ್ತೂಲು ತಯಾರಿಸುವ ಕೆಲವು ಸಾಮಾನುಗಳು ದೊರೆತಿವೆಯಂತೆ.

ಸಂಯುಕ್ತ ಕರ್ನಾಟಕ–೨-೧೧-೧೯೪೨; ಹುಲಿಕೋಟೆ ಸ್ಟೇಶನ್‌ಗೆ ಬೆಂಕಿ : ಹುಬ್ಬಳ್ಳಿ-೧ ನಿನ್ನೆರಾತ್ರಿ ಹುಲಕೋಟೆ ಸ್ಟೇಶನ್‌ಗೆ ಜನರು ನುಗ್ಗಿ ಬೆಂಕಿ ಹಚ್ಚಿದ್ದರಿಂದ ಕಾಗದ ಪತ್ರಗಳು ಸುಟ್ಟುಹೋಗಿವೆಯಲ್ಲದೆ ಟೆಲಿಫೋನ್ ಯಂತ್ರಕ್ಕೂ ಧಕ್ಕೆಯಾಯಿತು. ಸ್ಟೇಶನ್ ಕಟ್ಟಡವೂ ಸ್ವಲ್ಪಮಟ್ಟಿಗೆ ಸುಟ್ಟುಹೋಗಿದೆಯೆಂದು ತಿಳಿಯುತ್ತದೆ. ವಿವರಗಳು ತಿಳಿದಿಲ್ಲ.

## ಕೃತಿಗಳು

೧. "ಸ್ವಾತಂತ್ರ್ಯ ಸಂಗ್ರಾಮದ ಬನಹಟ್ಟಿ ಭಂಟರು" -ಶ್ರೀ ಅಪ್ಪಣ್ಣಪ್ಪ ರಾಮಪ್ಪ ಜಂಬಗಿ, ಬನಹಟ್ಟಿ
೨. 'ಶ್ರೀ ಸ। ಸ। ಮಾಧವಾನಂದ ಪ್ರಭೂಜಿಯವರ ಜೀವನ ಚರಿತ್ರೆ'- ಶ್ರೀ ಮುತ್ತಪ್ಪ ಮಹಾರಾಜರು, ಖೋಜಾನಟ್ಟಿ.
೩. 'ಮಾಧವ ಜೀವನ ದರ್ಶನ' ಭಾಗ-೧. ಸಂ-ಮಹಾಲಿಂಗ ಮಂಗಿ
೪. 'ಸದ್ಗುರು ಸಮರ್ಥ'- ಡಾ॥ ಸಂಗಮೇಶ ಬಿರಾದಾರ
೫. ಶ್ರೀ 'ಮಾಧವ-ಪತ್ರ-ಸುಧಾ'–ಪ್ರಕಾಶಕರು : ಶ್ರೀ ಸ. ಸ. ಗುರುಪುತ್ರಪ್ಪ ಮಹಾರಾಜರು
೬. Shri Mahadevaru Murugod, 'The Great Humanitarian', Editor-G. S. Grampurohit.
೭. 'ಒಂದು ದಿಟ್ಟ ಪ್ರಯೋಗ'-ಅರುಣಗಾಂಧಿ, ಲೇಖನ (ಇಂಗ್ಲೀಷ್ ಮೂಲ)
೮. 'ಮಾಧವ ಮಂಜರಿ' (ಹಿಂದೀ) ಸಂ-ಪ್ರಕಾಶಚಂದ್ರ ಎಂ. ಜೋಶಿ.

•

ಡಾ|| ದೇವರಕೊಂಡಾರೆಡ್ಡಿ*

# ಆನೇಕಲ್ ಪಾಳೆಯಗಾರರ ಕೈಫಿಯತ್ತು

ಇತ್ತೀಚೆಗೆ ಆನೇಕಲ್ ಪಾಳೆಯಗಾರರ ಮನೆತನಕ್ಕೆ ಸೇರಿದ ಶ್ರೀ ಪಿ. ಎಸ್. ಶಿವಕುಮಾರ್ ಅವರು ತಮ್ಮ ಬಳಿಯಿದ್ದ ಅವರ ವಂಶಿಕರ ಕೈಫಿಯತ್ತಿನ ಝೆರಾಕ್ಸ್ ಪ್ರತಿಯನ್ನು ಹಾಗೂ ಅನೇಕ ಕಾಗದ ಪತ್ರಗಳನ್ನೂ ನೀಡಿದರು. ಅವುಗಳ ಪರಿಶೀಲನೆಯಿಂದ ಆನೇಕಲ್ ಪಾಳೆಯಗಾರರ ಬಗ್ಗೆ ಕೆಲವು ಹೊಸ ವಿವರಗಳು ಬೆಳಕಿಗೆ ಬಂದಿರುತ್ತವೆ. ಈ ಕೈಫಿಯತ್ತನ್ನು ಉದ್ದವಾದ ಕಾಗದದಲ್ಲಿ ಬರೆದು ಸುರಳಿಯಂತೆ ಇಟ್ಟಿರುತ್ತಾರೆ. ಈ ಕೈಫಿಯತ್ತಿನಲ್ಲಿ ಬರುವ ಅನೇಕ ಉಲ್ಲೇಖಿತ ವರ್ಷಗಳು ಕಲ್ಪಿತವಾಗಿದ್ದು, ಶಕ ೧೬೭೯ (ಕ್ರಿ.ಶ. ೧೭೫೭) ರಿಂದ ಸರಿಯಾದ ಕಾಲಮಾನವನ್ನು ತೋರಿಸುತ್ತದೆ. ಅನಂತರ ಘಟನಾವಳಿಗಳನ್ನು ನಿಖರ ಕಾಲದಿಂದ ಸೂಚಿಸುವುದಾಗಿದೆ.

ಈ ವಂಶದವರು ತಮ್ಮನ್ನು 'ಮುನಗಿನ' ವಕ್ಕಲಿನವರೆಂದು ಕರೆದುಕೊಂಡಿರುತ್ತಾರೆ. ಇದು 'ಮುಸುಗು' ಎಂದಿರಬೇಕು. ಮೊರಸು ವಕ್ಕಲಿಗರಲ್ಲಿ 'ಮುಸುಗು' ಎಂಬ ಗುಂಪಿದೆ. ಹೀಗಾಗಿ ಇವರು ಮೂಲತಃ ಮೊರಸು ಒಕ್ಕಲಿಗರ ಒಂದು ಪ್ರಬೇಧವಾದ ಮುಸುಕು ಒಕ್ಕಲಿಗರು ಎಂಬುದು ಸ್ಪಷ್ಟ.

ಈ ವಂಶದ ಮೂಲ ಪುರುಷ ದೇವಪ್ಪಗೌಡ. ಈತ ಕಂಚಿಕಡೆಯ ಅಲಕೂರು ವಡೇರಹಳ್ಳಿಯಿಂದ ಸುಗಟೂರು ಕಡೆಗೆ ಬರುತ್ತಾನೆ. ಈತನ ಮಗ ತಮ್ಮೇಗೌಡ, ಮಗಳು ಬಯ್ಯಮ್ಮ. ಈ ತಮ್ಮೇಗೌಡನೇ ಹೊಸಕೋಟೆಯಲ್ಲಿ ಅಯಿಮುಕ್ತೇಶ್ವರ ದೇವಾಲಯವನ್ನು ಕಟ್ಟಿಸಿದ್ದು. ಹೊಸಕೋಟೆಯಲ್ಲಿ 'ತಮ್ಮಾಂಬುಧಿ' ಎಂಬ ಕೆರೆಯನ್ನು ಈತನೇ ಕಟ್ಟಿಸಿದಂತೆ ಈ ಕೈಫಿಯತ್ತು ಸೂಚಿಸುತ್ತದೆ. ಈ ತಮ್ಮೇಗೌಡನಿಗೆ ಮೂವರು ಗಂಡು ಮಕ್ಕಳಿದ್ದು, ಅವರಲ್ಲಿ ಮೊದಲ ಮಗ ಐಯಮಗವುಡ ಹೊಸಕೋಟೆಯನ್ನೂ, ಇಮ್ಮಡಿನಂಜುಂಡ ತಮ್ಮೇಗೌಡನು ಕೋಲಾರವನ್ನೂ, ಶಿವನೇಗೌಡನು ಶಿಡ್ಲಘಟ್ಟವನ್ನು ಹಂಚಿಕೊಂಡು ತಮ್ಮ ಪ್ರದೇಶಗಳನ್ನು ಆಳಿದರು. ಹೊಸಕೋಟೆಯನ್ನು ಆಳಿದ ಮುಮ್ಮಡಿ ಅಯ್ಯಮಗೌಡನ ಮೊಮ್ಮಗ ಮುಮ್ಮಡಿ ವೀರನಂಜುಂಡ ತಮ್ಮೇಗೌಡನ ಮಗ ಚಿಕ್ಕರಾಯ ತಮ್ಮೇಗೌಡ. ಈತನೇ ಆನೇಕಲ್‌ನ ಸ್ಥಾಪಕ. ಇವನು ಆನೇಕಲ್‌ನಲ್ಲಿ ಅಮೃತ ಮಲ್ಲಿಕಾರ್ಜುನ ದೇವಾಲಯ, ತಮ್ಮಸಂದ್ರ ಅಗ್ರಹಾರ, ದೊಡ್ಡಕೆರೆಗಳನ್ನು ಕಟ್ಟಿಸಿದ್ದಾನೆ. ಹಾಗೆಯೇ ಆನೇಕಲ್, ಅತ್ತಿಬೆಲೆಯಲ್ಲಿ ಕೋಟೆಗಳನ್ನು ವಿಸ್ತಾರವಾಗಿ ಕಟ್ಟಿಸಿದಂತೆ ಇದರಲ್ಲಿ ಹೇಳಿದೆ. ಇವನ ಮಗ ಮುಂಮಡಿ ಕರಡು ತಮ್ಮೇಗೌಡ ಇವನ ಮಗ ವೀರನಂಜುಂಡ ತಮ್ಮೇಗೌಡ. ಈತನನ್ನು ಕ್ರಿ.ಶ. ೧೭೫೭ರಲ್ಲಿ ಹೈದರಾಲಿ ಸೆರೆಹಿಡಿದು ೩೪ ವರ್ಷ ಬೆಂಗಳೂರಿನಲ್ಲಿ ಸೆರೆಹಾಕುತ್ತಾನೆ. ಬಹುಶಃ ಆತ ಅಲ್ಲಿಯೇ ಗತಿಸಿದ್ದಿರಬೇಕು. ಇವನ ಮಗ ಮುಮ್ಮಡಿ ಐಯಮಗೌಡ. ಈತನೂ ಸು. ಕ್ರಿ.ಶ. ೧೭೯೩ರ ವೇಳೆಗೆ ತೀರಿಹೋಗಿರಬೇಕು. ಹೀಗಾಗಿ ಈತನ ಹಿರಿಯ ಪತ್ನಿ ಗವುರಮ್ಮನಿಗೆ ಪಟ್ಟವಾಗುತ್ತದೆ. ಆದರೆ ಆನೇಕಲ್ಲು ಇವರ ಕಾಲಕ್ಕೂ ಇವರ ವಶವಾಗುವುದಿಲ್ಲ. ಬ್ರಿಟೀಷರ

* ನಂ. ೭೨, ೧ನೇ ಅಡ್ಡರಸ್ತೆ, ಲಕ್ಕಸಂದ್ರ, ಬೆಂಗಳೂರು-೫೬೦೦೩೦

ಮೊರೆಹೊಕ್ಕು ಕೃಷ್ಣಗಿರಿಯಲ್ಲಿ ವಾಸವಾಗಿರುತ್ತಾರೆ. ಈ ವಂಶಸ್ಥರಲ್ಲಿ ದೊರೆತ ಇನ್ನೊಂದು ಪತ್ರದಲ್ಲಿ ಪಾಲ್ಕೋಡು, ಮಾರಂಡಹಳ್ಳಿ ಸ್ಥಳಗಳು ಇವರ ವಶದಲ್ಲಿದ್ದಂತೆಯೂ, ಗೌರವ್ಮನನ್ನು 'ದೊರೆಸಾನಿ'ಯೆಂದು ಸಂಬೋದಿಸಿರುವುದನ್ನು ಕಾಣಬಹುದಾಗಿದೆ.

ರಾಣಿ ಗೌರವ್ಮನವರಿಗೆ ಕರ್ನಲ್ 'ಅಲಕ ಸೌಂದರ ರೀಟು' (Alexander Reade) ಸಾಹೇಬನು ಇವರ ಕೈಫಿಯತ್ತು ವಿಚಾರಿಸಿ ಕೃಷ್ಣಗಿರಿಯಲ್ಲಿ ಉಳಿಯುವಂತೆಯೂ ಸ್ವಲ್ಪ ದಿನದ ನಂತರ ದೇವರು ನಿಮ್ಮ ಸಂಸ್ಥಾನವನ್ನು ದಯಮಾಡುವನು ಎಂದು ಆಶ್ವಾಸನೆ ನೀಡುತ್ತಾನೆ. ಆಗ ಈ ಸೀಮೆಯ ಹಕ್ಕುದಾರಳಾಗಿದ್ದ ಗೌರವ್ಮ ಕುಂಪಣಿ (East India Company)ಯವರಿಗೆ ದವಲತ್ತಾಗಬೇಕೆಂದು ಸದಾ ದೇವರನ್ನು ಪ್ರಾರ್ಥನೆ ಮಾಡುತ್ತಿದ್ದಳೆಂದು ಇದರಲ್ಲಿ ಹೇಳಿದೆ.

ಕ್ರಿ.ಶ. ೧೭೯೮ರಲ್ಲಿ (ಶಕ ೧೭೨೦) ಕುಂಪಣಿ ದಂಡು ಶ್ರೀರಂಗಪಟ್ಟಣದ ಕಡೆ ಬಂದಾಗ ಅಲೆಕ್ಸಾಂಡರ್ ರೀಡ್ ಇವರನ್ನು ಕರೆಸಿ 'ನಿಮ್ಮ ಸ್ಥಳವಂತರ ಕರಶಿ ದಂಡಿಗೆ ಸಹಾಯ, ಆಹಾರ ಸಾಮಗ್ರಿಗಳ ಸಹಾಯ ಮಾಡಬೇಕೆ'ಂಬ ಬೇಡಿಕೆಯನ್ನು ಸಲ್ಲಿಸುತ್ತಾನೆ. ಆಗ ಇವರು ವರ್ತಕರನ್ನು ಕರೆಸಿ ದವಸ ಧಾನ್ಯಗಳನ್ನು ಸಂಗ್ರಹಿಸಿ ಸೈನ್ಯದ ಬರವಿಗೆ ಮೂರು ಪಾಳಿಯಲ್ಲಿ ಕಾದು ಕೊಂಡಿದ್ದರು. ಆಗ 'ಜನಮಹಾರಿಸು ಬಹದರು'ರವರ (ಜಾನ್ ಹ್ಯಾರೀಸ್) ದಂಡು ಬರೋ ಮಾರ್ಗದಲ್ಲಿ ಅವರನ್ನು ಹೊಸೂರು ತಾಲೂಕು ಕೆಲಮಂಗಲದಲ್ಲಿ ಭೇಟಿ ಮಾಡಿ ಸನ್ನದನ್ನು ಹೇಳಿಕೊಂಡಾಗ ಆನೇಕಲ್ಲು ಮೇಲೆ ಲಡಾಯಿ ಮಾಡಿ ಸುಲ್ತಾನನ ಟಾಣ್ಯ ತೆಗೆಸಿ ಕುಂಪಣಿ ಸರ್ಕಾರದ ಪರವಾಗಿ ಇವರು (ಕುಂಪಣಿ ಕೆಲಸ ಮುಖ್ಯವಾಗಿ) ಆಡಳಿತ ನಡೆಸುತ್ತಿದ್ದರು. ಕ್ರಿ.ಶ. ೧೭೯೯ರ (ಶಕ ೧೭೨೧ ಶಿದ್ಧಾರ್ಥಿ ನಾಮ ಸಂವತ್ಸರ) ಶ್ರಾವಣ ಮಾಸದಲ್ಲಿ ಸಂಸ್ಥಾನ ಮೈಸೂರಿಗೆ ಸೇರಿತೆಂದೂ ಅವರ ಪರವಾಗಿ ಅಮಲರು ಈ ಸಂಸ್ಥಾನವನ್ನು ಜಪ್ತಿ ಮಾಡುತ್ತಾರೆ (ಕಿತ್ತುಕೊಳ್ಳುತ್ತಾರೆ). ಆದರೆ ಇದರ ನೆರೆಯ ಸಂಸ್ಥಾನಗಳಾದ ಅಂಕುಸಗಿರಿ, ಸೂಳಗಿರಿ, ಬಾಗಲೂರುಗಳು ಕುಂಪಣಿಗೆ ಸೇರಿದ್ದರೂ ಜಪ್ತಿ ಮಾಡಿರಲಿಲ್ಲ. ಹೀಗಾಗಿ ತಮಗೆ ಸಂಸ್ಥಾನ ಕೊಡಿಸಬೇಕೆಂದು 'ಲಾಟು ಬಹುದರು', ಕ್ಲೋಸ್ ಬಹದರು ಮತ್ತು ಪೂರ್ನಯ್ಯನವರಿಗೆ ಕೈಫಿಯತ್ತು ಕೊಟ್ಟಾಗ, ಕಚೇರಿಯಲ್ಲಿ ಪಂಚರಾಗಿಯಿರಿ ಎಂದು ಆದೇಶಿಸುತ್ತಾರೆ. ಕೆಲವು ದಿವಸದ ಮೇಲೆ ಸಾವಿರ ವರಹ ಕೊಡುತ್ತೇವೆ ನೆಮ್ಮದಿಯಾಗಿರಿ ಮುಂದೆ ತೇರುಗಡೆ ಮಾಡುತ್ತೇವೆ ಎಂಬ ಆಶ್ವಾಸನೆ ನೀಡುತ್ತಾರೆ. ಆದರೆ ಅಧಿಕಾರವಿಲ್ಲದ ಪೆನ್‌ಷನ್ ಮಾತ್ರ ಇವರಿಗೆ ಲಭಿಸುತ್ತದೆ.

ಇಲ್ಲಿ ಕುಂಪಣಿ ಸೀಮೆಯಲ್ಲಿದ್ದ ಸಂಸ್ಥಾನಗಳ ಅರಸುಗಳಿಗೆ ಕಂದಾಯದ ವಸೂಲಿ ಮುಂತಾದ ಅಧಿಕಾರಗಳನ್ನು ನೀಡಿದ ಬ್ರಿಟೀಷರು ಮೈಸೂರು ಸಂಸ್ಥಾನದಲ್ಲಿ ಅಧಿಕಾರವನ್ನು ನೀಡದೆ ಉಪಾಯದಿಂದ ಅವರಿಗೆ ಪೆನ್‌ಷನ್ ನೀಡಿ ಅಧಿಕಾರ ಕೊಡುತ್ತೇವೆ ಎಂಬ ಆಶ್ವಾಸನೆ ನೀಡಿ ವಂಚಿಸಿದ್ದು ತಿಳಿಯುತ್ತದೆ. ಮುಂದೆ ಮೈಸೂರು ಸಂಸ್ಥಾನದಲ್ಲಿದ್ದ ಹಿಂದಿನ ಸಂಸ್ಥಾನಿಕರು ಮತ್ತು ಅವರ ಸಂತತಿಯವರು ಪೆನ್‌ಷನ್‌ಗೆ ಹೊಡೆದಾಡಿದರೆ ಹೊರತು ಅಧಿಕಾರಕ್ಕೆ ಹೊಡೆದಾಡಲಿಲ್ಲ. ಬ್ರಿಟೀಷರ ಅಧೀನದಲ್ಲಿದ್ದ ಸಂಸ್ಥಾನಿಕರು ಪೆನ್‌ಷನ್ ಜೊತೆಗೆ ತಮ್ಮ ಕಂದಾಯ ವಸೂಲಿ, ಪೋಲೀಸ್ ಅಧಿಕಾರಗಳನ್ನು ಹೊಂದಿದ್ದರಿಂದ ಇಂದಿಗೂ ಜಮೀನುದಾರರಾಗಿ ಶ್ರೀಮಂತರಾಗಿರುತ್ತಾರೆ.

ಈ ಕೈಫಿಯತ್ತಿನಿಂದ ತಿಳಿಯುವುದೇನೆಂದರೆ ಬ್ರಿಟೀಷರು ಟೀಪೂವನ್ನು ಸೋಲಿಸಲು ಅವನಿಂದ ಪರಾಜಿತರಾಗಿ ರಾಜ್ಯ ಕಳೆದುಕೊಂಡಿದ್ದವರು ತಮ್ಮ ಬಳಿ ಬಂದಾಗ ಅವರ ಬಗ್ಗೆ ಅನುಕಂಪ ತೋರಿಸಿ, ಅವರನ್ನು ತಮ್ಮ ಕಡೆಗೆ ಒಲಿಸಿಕೊಂಡಿದ್ದು, ಸೋತಿದ್ದ ಅರಸರೂ ಸಹ ಟೀಪೂವಿನ ವೈರಿಗಳಾಗಿದ್ದು ಬ್ರಿಟೀಷರು ಟೀಪೂವನ್ನು ಸೋಲಿಸಿ ತಾವು ಕಳೆದುಕೊಂಡಿದ್ದ ರಾಜ್ಯವನ್ನು ಮರಳಿ ಕೊಡಿಸುತ್ತಾರೆಂದು ನಂಬಿದ್ದಲ್ಲದೆ ಟೀಪೂವಿನ ವಿರುದ್ಧ ಬ್ರಿಟೀಷರು ದಾಳಿ ಮಾಡಲು ಬಂದಾಗ ಅವರಿಗೆ ಮತ್ತು ಅವರ ಸೈನ್ಯಕ್ಕೆ ಆಹಾರ ಧಾನ್ಯಗಳ ಹಾಗೂ ಸೈನಿಕರ ಪೂರೈಕೆ ಮಾಡಿದ್ದು, ಇದೇ ಅಲ್ಲದೆ ಟೀಪೂವಿನ ರಾಜ್ಯದಲ್ಲಿದ್ದು ಅವನಿಗೆ ಉಪಟಳ ನೀಡಿದ್ದು. ಈ ಕಾರಣಗಳಿಂದ ಬ್ರಿಟೀಷ್ ಸೈನ್ಯ ಆಹಾರ ಧಾನ್ಯಗಳ ಕೊರತೆಯಿಂದ ಬಳಲಲಿಲ್ಲ ಹಾಗೂ ಸ್ಥಳೀಯರ ವಿರೋಧವನ್ನು ಎದುರಿಸಲಿಲ್ಲ. ಹೀಗಾಗಿ ಬೆಂಗಳೂರು ಹಾಗೂ ಶ್ರೀರಂಗಪಟ್ಟಣದ ಕಡೆಗೆ ಬ್ರಿಟಿಷ್ ಸೈನ್ಯ ಹೆಚ್ಚಿನ

ಹುರುಪಿನಿಂದ ಮುನ್ನುಗ್ಗಲು ಸಾಧ್ಯವಾಯಿತು. ಬಹುಶಃ ಟೀಪೂವಿನ ಪತನಕ್ಕೆ ಇಂತಹ ಸಣ್ಣ ಪಾಳೆಯಗಾರರು ಹೆಚ್ಚಿನ ಮಟ್ಟಿಗೆ ಕಾರಣರಾಗಿರುತ್ತಾರೆ. ಹಾಗೆಯೇ ಮೈಸೂರಿನ ದಿವಾನರಾಗಿ ಪೂರ್ಣಯ್ಯನು ತನ್ನ ಮಿತ್ರನ ಮಗ ಟೀಪು ಸೋಲಲು ಕಾರಣರಾದ ಪಾಳೆಯಗಾರರ ರಾಜ್ಯವನ್ನು ಮೈಸೂರಿಗೆ ಸೇರಿಸುವಲ್ಲಿ ಯಶಸ್ವಿಯಾದ ಹಾಗೆಯೇ ಈ ಪಾಳೆಯಗಾರರು ಅಥವಾ ಅವರ ವಂಶಸ್ಥರು ಜೀವನಾಂಶಕ್ಕಾಗಿ ಮೈಸೂರು ಅರಸರನ್ನು ಬೇಡಿಕೊಳ್ಳುವ ಸ್ಥಿತಿಗೆ ತರುತ್ತಾನೆ.

ಈ ಕೈಫಿಯತ್ತು ಟೀಪೂ ಸೋತಮೇಲೆ ಮೈಸೂರಿನ ಅಮಲರು ಆನೇಕಲ್‌ಗೆ ಬಂದು ಅವರ ಪಾಳೆಯಪಟ್ಟನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಬ್ರಿಟೀಷರಿಗೆ ಹಾಗೂ ಮೈಸೂರರಸರಿಗೆ ಸಲ್ಲಿಸಲು ಬರೆದುದಾಗಿದೆ. ಹೀಗಾಗಿ ಇದರ ಕಾಲ ಸು. ೧೮೦೦ ಆಗಿದೆಯೆಂದು ಹೇಳಬಹುದಾಗಿದೆ. ಬಹುಶಃ ಬಹಳಷ್ಟು ಇಂತಹ ಕೈಫಿಯತ್ತುಗಳು ಈ ಕಾಲದಲ್ಲೇ ಉದಿಸಿವೆ ಯೆಂದರೆ ತಪ್ಪಾಗಲಾರದು.

ಈ ಕೈಫಿಯತ್ತಿನಿಂದ ತಿಳಿದುಬರುವ ಆನೇಕಲ್ ಪಾಳೆಯಗಾರರ ವಂಶಾವಳಿ : (ಈ ವಂಶಾವಳಿಗೂ ಶಾಸನಗಳಿಂದ ಲಭಿಸುವ ವಂಶಾವಳಿಗೂ ವ್ಯತ್ಯಾಸವಿದೆ)*




---

* ಈ ವಂಶೀಯರ ಶಾಸನ, ಸಾಹಿತ್ಯ ಇತ್ಯಾದಿಗಳನ್ನು ಆಧರಿಸಿ ಶ್ರೀ ಹಿ. ವಿ. ಕೃಷ್ಣಮೂರ್ತಿಯವರು 'ಸುಗಟೂರು ವೀರಶೈವ ಅರಸು ಮನೆತನ' ಎಂಬ ಪುಸ್ತಿಕೆಯನ್ನು ರಚಿಸಿದ್ದು, ಅದು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುತ್ತದೆ.

ವೀರಚಿಕ್ಕರಾಯ (ದತ್ತು) ಮಲ್ಲಿಗಂಮಣ್ಣಿ

ಗಂಡ : (ಶೂಲಗಿರಿಯ ಪಾಳೆಯಗಾರ ಚೊಕ್ಕೇಗೌಡ)

ಚಿಕ್ಕರಾಯ (ದತ್ತು ?) ನಂಜುಂಡರಾಯ ಪುಟ್ಟಸ್ವಾಮಿರಾಯ ಚೆನ್ನಮ್ಮಣ್ಣಿ, ಪಾರ್ವತಮ್ಮಣ್ಣಿ, ಚೊಕ್ಕಮ್ಮಣ್ಣಿ

**ಅನುಬಂಧ : ಆನೇಕಲ್ಲು ಕೈಫಿಯತ್ತು**

.... .... .... .... .... .... ....

.... .... .... .... .... .. . ....

.... .... .... .... ಮಾಡಿಕೊಂಡು ....

ಅವರ ಕೈಕೆಳಗೆ ಪ್ರಭುತ್ವ ಮಾಡಿಕೊಂಡು ಯಿದನೂ ಕೆಲವು ದಿವಸದ ಮೇಲೆ ದೇ(ಪ)ಪ್ಪ ಗವುಡರು ಶ್ಯಾಲಿವಾಹನ ಷಕವರುಷ ..... ಶಿದ್ದಾರ್ಥಿ ನಾಮ ಸಂವತ್ಸರದಲ್ಲು....... ಕ್ಕೆ ಆಲಕುರುವಡೇರಹಳಿ ಗ್ರಾಮದಲ್ಲು ಬ.... ಹೋಗಲಾಗಿ ಯಿ ದೇವಪ್ಪ ಗವುಡರ ಗರ್ಭದಲ್ಲೂ ಗಂಡುತ್ರಂಮೊಗವುಡರು ಹೆಣುಮೊಗ ಬ್ಯೆಯಂಮ್ಮನು ಅತ್ತಿರುಪುರಕ್ಕೆ ಸವೂಂದರ್ಯವಾಗಿ ಹುಟಿಯಿರಲಾಗಿ ಕಂಚಿ ಮೇಲೆಯೇಕಲ್ಲಿ ಚತ್ರಿಯವನು ಯಿವರ ಕಡೆ ವೂಳಿಗದವನು ಬಂದು ಯಿೂ ಹೆಣ್ಣು ಮೊಗ ಬ್ಯೆಯಂಮ್ಮನ ರೂಪು ರೆಕ್ಕೆ ಸವುಂದರ್ಯವಂ ಕಂಡು ಕಂಚಿ ದೊರೆಗೆ ತ್ರಿಳಿ ಪಡಿಸಲಾಗಿ ಆಲಕೂರು ವಡೇರಹಳ್ಳಿ ಮೇಲೆ ಸ್ವಾರಿಮಾರ್ಗವಾಗಿ ಬಂದು ದೇವಪ್ಪ ಗವುಡರ ಕರೆಶಿ ನಿಂಮ್ಮ ಕರ್ನಿಕ್ಕೆ ನಮಗೆ ಕೊಡಿಯೆಂಬುದಾಗಿ ಕೇಳಿ ಯೆರಡು ದಿವಸ ಬಿಟ್ಟು ತಂಮ ನಿಯೋಗಿಗಳ ಸಂಗಾತ್ತ ಸಕಲ ಸೊಬಸ್ಕರ ಮಂಗಳ ದ್ರವ್ಯ ಮುಂತಾಗಿ ಕಳುಹಿಸಿ ಕರ್ನಿಕ್ಕೆ ನಿಷ್ಕರಿಷೆ ಮಾಡಿಕೊಂಡು ಬನ್ನಿಯೆಂದು ಕಳುಹಿಸಲಾಗಿ ನಿಯೋಗಿಗಳು ಬಂದು ಹೇಳಿದ ಮಾತು ಕೇಳಿ ತಂದ ಸೊಬಸ್ಕರ ವಂದು ಕಡೆವಿ ಯಿರಶಿ ಯೀ ದೇವಪ್ಪಗವುಡರ ಅಣ ತಂಮಿಂದರು ಹತ್ತು ಕುಲಾಚಾರದವರು ಕುಳಿತುಕೊಂಡು ಮಾತನಾಡಿ ಯಿ ಕಂಚಿ ದೊರೆ ಯೆಕಲಿ ಜಾತಿಯವನು ನಾವೂ ಮುನಗಿನ ವಕ್ಕಲಿನವರು ಯಿವರಿಗೆ ಹೆಣು ಕೊಟ್ಟರೆ ನಂಮ ಕುಲ ಕೆಟು ಹೋದಿತ್ತು ಯಿವರ ದೇಶ ಬಿಟ್ಟು ಮತ್ತೊಂದು ಕಡಿಗೆ ಹೋಗುವಾ ಯೆಂಬುದಾಗಿ ಮಾತನಾಡಿ ಬಂದ ನಿಯೋಗಿಗಳ ಸಂಗಾತ್ತ ನಿಮ್ಮ ದೊರೆನ ಕರದುಕೊಂಡು ಬಂನಿಯೆಂಬುದಾಗಿ ಹೇಳಿಕಳಾಏಶಿ ಆರಾತ್ರಿ ಬಂಡಿಗಳು ಕಟ್ಟಿಕೊಂಡು ಪಡುವಲ ದೇಶಕೆ ಹೋಗುವಾ ಯಂಬುದಾಗಿ ಸಾಗಿ ಬರುತ್ತಾಯಿರಲು ಕ್ಷೀರನದಿ ತುಂಬಿ ಆಚೆಗಡೆಯಿಚೆಗಡಿಗೆ ಸರಿದು ಕುಂಭಾರ್ರ ................ನಂಮಾ ಗರ್ಬದಲ್ಲು ಯಿ ಹೆಣ್ಣು ಮೊಗ ಹುಟ್ಟಿಯೇಳು ಮನೆಯವರು ಹತವಾಗುವ ಕಾಲ ಬಂತೂ ಯಂಬುದಾಗಿ ವಿಚ್ಯರನಂ ಕುರಿತು ಚಿಂತೆಯ ಮಾಡುತ್ತಾ ಯಿರಲು ಯಿ ಬ್ಯೆಯಂಮನ್ನು ಬಂದೂ ನೀವು ಯಾಕೆ ಚಿಂತೆ ಮಾಡುತ್ತೀರಿ ನಂನ ಪತಿವ್ರತದರ್ಮಾ ನಿಮಗೆ ತೋರಿಶಿ ಕೊಟ್ಟೇನು ಯಂಬುದಾಗಿ ಗಂಗಾಭವಾನಿಯಂ ಕುರ್ತೂ ಅರ್ರಿಶಿನ ಕುಂಕುಮ ಕಸ್ತೂರ್ಯಾದಿ ಪರಿಮಳ ದ್ರವ್ಯದಿಂದಾ ಪೂಜೆಯಂ ಮಾಡಿ ದೂಪ ದೀಪ ನೈವೇದ್ಯ ತಾಂಬೂಲವಂನ್ನು ಗಂಗಾಭವಾನಿಗೆ ಸಮರ್ಪಿಶಿ ನಮಸ್ಕಾರವಂ ಮಾಡಿ ನಂ ನಕುಲ ವುದಾರ ಮಾಡಿಯೆಂದು ಕೈ ಮುಗಿದು ಕೇಳಿಕೊಂಡುದರಿಂದಾ ಶ್ಯಾಲಿವಾಹನ ಷಕ ೧೦೧೨ನೇ ಪ್ರಜೋತ್ಪತ್ತಿ ಸಂಮತ್ಸರ ಆಶ್ವೀಜಬ ೧ರಲ್ಲಿ ಕ್ಷೀರ ನದಿಯು ಭಾಗವಾಗಿ ದಾರಿ ಕೊಡಲಾಗಿ ಯೇಳು ಬಂಡಿಯವರು ಯಿೂಚೆಗೆ ಸಾಗಿ ಬಂದರು ಪುನಹ ಪ್ರಾರ್ತನೆ ಮಾಡಿಕೊಳಲಾಗಿ ಯತ್ತಾ ಪ್ರಕಾರ ಪ್ರಭಾವಾಯಿತ್ತು ಆ ಕಂಚಿ ದೊರೆ ಮಂದಿ ಮಾರ್ಬಲ ಸಹಿತ್ತ ಬೆಂನಾಡಿ ಬಂದು ಆಚೆ ಹೊಳೆಗಡೆ ನಿಂತ್ತುಕೊಂಡು ನಮಗೆ ಮೋಸ ಮಾಡಿ ಹೋಗುತ್ತಿದ್ದೀರ ಯಂಬದಾಗಿ ಕೇಳಿದನು. ನಮಗೆ ದೈವ ಸಹಾಯ ದಿಂದಾ ನವೂ ಸಾಗಿ ಬಂದೆವೂ ನಿಂಮಿಂದ ಆಗತಕ್ಕದೇನು ಯಂಬುದಾಗಿ ಪಡುವಲ ದೇಶದಲ್ಲಿ ಆರಾಂಬವಾಗಿ ಯಿರುವ ಸ್ತಳದಲ್ಲಿ ನಿಂತೂ ಸುತ್ತ ಗಿಡವಂನು ಕಡಿದು ಬೈಲು ಮಾಡಿ ವಂದು ಗ್ರಾಮವನು ಕಟ್ಟಿ ಸುರಗುತ್ತಳಿ ಕಟ್ಟಿದರಿಂದ ಸುಗಟೂರು ಯೆಂಬ ನಾಮದೇಹವಿಟು ಆ ಗ್ರಾಮದಲ್ಲು....... ಯಿರಲು ಶ್ಯಾಲಿವಾಹನ ಷಕ ೧೦೧೪ನೇ ಶ್ರೀಮುಕ ಸಂವತ್ಸರ ಮಗ ಬ ೧೪ ಯಿ ದೇವಪ್ಪ ಗವೂಡರ ಕೊಮಾರರ್ರು

ತಂಮೆಗವುಡರು ವೂರು ಮುಂದೆ ನಟ ರುಕ್ಷ ಆಲದ ಮರದ ಕೆಳಗೆ ಮಲಗಿ ಯಿರಲು ಸರ್ಪ ಬಂದು ತಲೆ ತಾವೂ ಟೆಕ್ಕೆ ಹಾಕಿಕೊಂಡು ಚತ್ರಿಯೋಪಾದಿಯಲ್ಲಿ ಬಿಸಿಲಿಗೆ ಮರೆಯಾಗಿ ಹೆಡೆಯೆತ್ತಿಕೊಂಡು ಯಿರಲಾಗಿತ್ತಾ ಯಿೂ ತಂದೆಗಳು ಕಂಡು ಆ ಸರ್ಪಕ್ಕೆ ದುಪದೀಪ ನೈವ್ಯಾದ ದಿಂದ ಪೂಜೆಯಂ ಮಾಡಿ ಕೈಮುಗಿದು ಕೇಳಿಕೊಳಲಾಗಿ ಸರ್ಪ(ವನ್ನು) ಹರಿದು ಹೋಯಿತ್ತು ತಾಯಿ ತಂದೆ ಮಕ್ಕಳು ಸಂತೋಷದಲ್ಲಿಯಿದ್ದುಕೊಂಡು ಕಾಲಕ್ಷೇಪಕ್ಕೆ ಮಾರ್ಗವಾಗಬೇಕೆಂದು ಆ ಸುಗಟೂರು ಗ್ರಾಮದ ಸುತ್ತಾ ಗಿಡವನ್ನು ಕಡಿದು ಹೊಲವನ್ನು ಮಾಡಿ ವೂಸುತ್ತ ಯಿರ ಲಾಗಿ ವುಳುವ ನೇಗಿಲ ಕೊನೆಗೆ ನಿಕ್ಷೇಪವನ್ನು ಯೇಳು ಕೊಪ್ಪರಿಗೆ ಶಿಕ್ಕಲಾಗಿ ಯಿ ದ್ರುವ್ಯ ಶಿರ್ಕ ಮಾಡಬಾರದುಂ ಯೆಂದು ವಿಸ್ತಾರವಾಗಿ ಕಾಡುವನ್ನು ಕಡಿಶಿ ಹೊಸಕೋಟೆ ಕೋಟೆ ಕೊತ್ತಲ ಶ್ಯಾರುಪಾನು ಹಾಕಿಶಿ ಶೀಮೆ ವಿಸ್ತಾರ ಮಾಡಿ ಹೊಸಕೋಟೆಯೆಂಬ ನಾಮದೇಹ ವಿಟು ಯಿೂ ಕೋಟೆವಳಗೆ ಆಯಿಮುಕ್ತೇಶ್ವರ ದೇವಸ್ಥಾನ ವನ್ನು ಕಟಿಶಿ ತ್ರಾಮರಾಂಬುಧಿ ಯಂಬದೊಡ್ಡಕೆರೆ ಕಟ್ಟಿಶಿ ಮುತ್ತೂಕೂರು ಅಗ್ರಹಾರ ಸಹ ನಿರ್ಮಿಶಿ ಯಿೂ ಮೂರಂನ್ನು ಯೆಕ ಕಾಲದಲ್ಲಿ ಪ್ರುದಿಷ್ಟೆಯನ್ನು ಶಾಲಿ ವಾಹನ ಶಕೆ ೧೦೧೬ನೆ ಯುವ ಸಂವತ್ಸರ ಮಾಗ ಶುದ್ಧ ೧೫ಲು ಪುಣ್ಯ ಕಾಲದಲ್ಲಿ ನಿರ್ನಯಿಸಿ ಪ್ರುಭುತ್ವ ಮಾಡಿ ಕೊಂಡು ಶೀಮೆಗೆ ಕವ್ವಾಯಿ ಕೊಟು ಪೈ ಯಿಸ್ತಾರ ತಂದ್ದೂ ಶೀಮೆ ವಿಸ್ತಾರ ಮಾಡಿಕೊಂಡೂ ಯಿರಲು ಯಿ ಹೊಸಕೋಟೆಗೆ ಮುಖ್ಯ ಸ್ಥಳವಾಗಿ ಯಿರುವ ಗಿಡವನ್ನು ನಡಿಶಿ ಕೋಲಾರ ಶಿಡ್ಲಗಟ್ಟ ಕೋಟೆಯನ್ನು ಕಟ್ಟಿಶಿ ಪ್ರುಭುತ್ವ ಮಾಡಿಕೊಂಡು ಯಿರಲಾಗಿ ಶ್ಯಾಲಿವಾಹನ ಶಕೆ ೧೧೭೭ನೆ ಯಿಶ್ವರ ಸಂವತ್ಸರಲು ಪೆನಗೊಂಡೆನಗರ ನರಶಿಂಗರಾಯರ ಮೇಲೆ ಚಿದುಪಟು ಚಂಗಲಪಟು ಅರಸುಗಳು ಪೊವುಜು ತೆಗೆದುಕೊಂಡು ಯುದ್ಧಕ್ಕೆ ಬಂದು ಯುದ್ಧದ ಕಾಲದಲ್ಲೂ ರಾಯರ ಪವುಜು ಆಸತ್ತೂ ಆಗಿ ರಾಯರ ಕುಟುಂಬವನ್ನೂ ಚಿದ್ದುಪಟ್ಟು ಚಂಗಲಪಟ್ಟು ಅರಸುಗಳು ತೆಗೆದುಕೊಂಡು ಹೋಗುವ ಕಾಲದಲ್ಲಿ ಯಿೂ ಹೊಸಕೋಟೆ ತಂಮೆಗವುಡರು ರಾಯರ ಶೀಮೆಯಲಿ ನಾವೂ ಯಿದ್ದು ರಾಯರ ಕುಟುಂಬವನ್ನು ತೆಗೆದುಕೊಂಡು ಹೋಗುವಾಗ ನಾವೂ ಸುಂಮನೆ ಯಿರಬಾರದು ಯೆಂದು ತಂಮ್ಮ ಸ್ವಸಾಮರ್ಥ್ಯದಿಂದ ಚಿದ್ದುಪಟ್ಟು ಚಂಗಲಪಟ್ಟು ಅರಸುಗಳ ಮೇಲೆ ಯುದ್ಧ ಮಾಡಿ ರಾಯರ ಕುಟುಂಬ ವನ್ನು ಬಿಡಿಶಿ ರಾಯರಿಗೆ ಮಪಿಸಲಾಗಿ ರಾಯರು ಕುಟುಂಬದ ಮೊಕವನ್ನು ನೋಡಿ ಅನುಮಾನಪಟ್ಟರು ಯಿ ತಂಮೆಗವುಡರು ಆವಾಗ (ಯಿ ತಂಮೆಗವುಡರು) ಹೇಳಿದ ಮಾತು ತಂಮ ಕುಟುಂಬವಂ ನಮಗೆ ತಾಯಿ ಬಾವನೆಯಾಗಿ ನೋಡಿಕೊಂಡು ಯಿದ್ದದ್ದು ವುಂಟೂ. ಆ ತಾಯಿಸ್ತಂನ್ಯಾದಲ್ಲಿ ಯಿರು ಹಾಲಂನ್ನು ನಂನ ಮೊಕದ ಮೇಲೆ ಬೀಳುತ್ತೆಂಬುದಾಗಿ ರಾಯರ ಕಡೆ ಹೇಳಲಾಗಿ ಪರದೆಯಂನು ಕಟ್ಟಿಶಿ ಪರದೆ ಆಚೆ ರಾಯರ ಕುಟುಂಬ ಪರದೆಯಿಚೆ ತಂಮೆಗವುಡರು ನಿಂದಿರಲಾಗಿ ಆಚೆ ಪ್ರುಕಾರಕ್ಕೆ ರಾಯರ ಕುಟುಂಬದ ಸ್ತಂನ್ಯಾದಲ್ಲಿಯಿರುವ ಹಾಲನ್ನು ಯಿೂ ತಂಮೆಗವುಡರ ಮೊಕದ ಮೇಲೆ ಬೀಳ ಲಾಗಿ ರಾಯರು ಮೆಚ್ಚಿ ಕೊಟ್ಟ ಬಿರುದು ಶ್ಯಾಲಿವಾಹನ ಶಕ ೧೧೭೭ನೆ ಬಹುದಾಂನ್ಯ ಸಂವತ್ಸರದಲು ೧ .... .... .... ೧ ಚಿಕ್ಕರಾಯರೆಂಬ ಕಿತ್ತಪು–೧ ಪಟ್ಟದ ಕತ್ತಿ–೧ ಶಿಕಾ ವುಂಗರ–೧ ಮುವತ್ತೆರಡು ಬಿರುದು– ಯಿೂ ಪ್ರುಕಾರಕ್ಕೆ ಶಿರೋಪಾವು ಮುಂತಾಗಿ ಕೊಟು ನೀವು ಸ್ವಸಾಮರ್ಥ್ಯದಿಂದ ಮಾಡಿದಂತ ಹೊಸಕೋಟೆ ಕೋಲಾರ ಶಿಡ್ಲಗಟ್ಟ ಮೂರು ಸ್ಥಳವನ್ನು ಸರ್ವಮಾನ್ಯ ವಾಗಿ ಅನುಭವಿಶಿಕೊಂಡು ಯಿರಿಯೆಂದು ಮಂನಿಶಿದರು ಪ್ರುಭುತ್ವ ಮಾಡಿಕೊಂಡು ಯಿರಲಾಗಿ ಯಿೂ ತಂಮೆಗವುಡ ರಿಗೆ ಹಿರಿಯ ಕೊಮಾರ್ರು ಐಮಾಗವುಡರು ಮೂರನೆಯಾ ವರು ಶಿವನೆಗವುಡರು ಯಿೂ ತಂಮೆಗವುಡರು ಕಾಲವಾದ ಮೇಲೆ ಮಭರಿಗೆ ಮಭರು ಅನುಕೂಲವಿಲದೆ ಶೀಮೆ ಹಂಚಿ ಕೊಂಡವಿವರಾ ॥ ೧ ದೊಡಕೊಮಾರ್ರು ಮುಂಮಡಿ ಐಯಮಗವುಡರಿಗೆ ಹೊಸಕೋಟೆ-೧ ಕಿರಿಯಾವರು ಯಿಂಮಡಿ ವೀರನಂಜುಂಡ ತಂಮೆಗವುಡರಿಗೆ ಕೋಲಾರ– ೧ ಮೂರನೆಯವರು ಶಿವನೆಗವುಡರಿಗೆ ಶಿಡ್ಲಗಟ್ಟ–ಯಿೂ ಪ್ರುಭುತ್ವ ಮಾಡಿಕೊಂಡು ಯಿರಲಾಗಿ ೧ ಹೊಸಕೋಟೆ ದೊರೆ ಮುಂಮಡಿ ಐಮಗವುಡರ ಕೊಮಾರ್ರು ವೀರ ನಂಜುಂಡ ತಂಮೆಗವುಡರು ೧ ಯಿವರ ಕೊಮಾರ್ರು ಚಿಕರಾಯ ತಂಮೆಗವುಡರು ಪ್ರುಭುತ್ವ ಮಾಡಿಕೊಂಡು ಯಿರಲಾಗಿ ಅರಾಂಣ್ಯದಲ್ಲು ಆನೆಗಳು ಯಿದೆ ಯಂಬದಾಗಿ ರಾಯರ ಕಡೆಯಿಂದ ವೂಳಿಗದವರು ಬಂದು ಯಿೂ ತಾಲೂಕದಲ್ಲಿ ಆನೆಗಳು ಯಿದೆ ಯಿಪ್ಪತ್ತು ಆನೆ ಬೇಕು ಯಂಬುದಾಗಿ ವುತ್ತರ ಸಹ ಬರಲಾಗಿ ಅವಾಗ ಯಿೂ

ಹೊಸಕೋಟೆಗೆ ದಕ್ಷಣ ದಿಕ್ಕಿನಲ್ಲಿ ಯಿದೆಯೆಂಬುದಾಗಿ ಸಮಾಚಾರ ತರಲು ಯಿ ತಂಮೆಗವುಡರು ಸ್ವಾರಿ ಬರಲಾಗಿ ಅರಾಂಣ್ಯದಲ್ಲು ಹುಲಿಕಲ್ಲು ಬಂಡೆ ಬಳಿಯಲು ಆನೆ ತವುತಗಿಣಿ ಆನೆಗಳು ಯಿಡಿಶಿ ರಾಯರಿಗೆ ಕಳುವಿಸಿ ಯಿೂ ಆನೆಗಳು ಶಿಕ್ಕಿದ ಸ್ತಳದಲ್ಲು ಪಂದು ಸ್ತಳ ಮಾಡಬೇಕೆಂಬುದಾಗಿ ಪಂದು ಗ್ರಾಮವನ್ನು ಕಟ್ಟಿಶಿ ಅಲ್ಲಿ ತಂಮ ಕಡೆಯಿಂದಾ ಲಿಂಗೆಗವುಡ ಯೆಂಬುವನ ಮಾಡಿಸಿ ಯಿರಲಾಗಿ ಅವಾಗ ಆ ಗ್ರಾಮದ ಬಳಿ ನಿಂಗೆಗವುಡನಕೆರೆ ಲ್ಲಿಂಗೆಗವುಡನ ತೋಪು ಬಾವಿ ಸಹ ಕಟ್ಟಿಶಿ ಯಿರಲಾಗಿ ಆರಾಂಣ್ಯದಲ್ಲು ತೋಟಾಗಾರ್ರುಪಾಳ್ಯ ಪಂಟ್ಲುಗೆರೆ ಶಿಡಿಹೊಸಕೋಟೆ ಪರಾಸ್ತಿ ಮಾದಾಪಂಟ್ಲದಲ್ಲಿ ತೋಟಾಗಾರ್ರು ಯಿದ್ದುಕೊಂಡು ಯಿೂ ಲಿಂಗೆಗವುಡನ ಗ್ರಾಮದ ಮೇಲೆ ಕಲಹ ಮಾಡಲಾಗಿ ಆ ಲಿಂಗೆ ಗವುಡನ್ನು ಹೊಸಕೋಟೆಗೆ ಚಿಕ್ಕರಾಯ ತಂಮೆಗವುಡರ ಸಂಗತ ಅರಿಕೆ ಪಡಿಸಲಾಗಿ ಅವಾಗ ತಂಮೆಗವುಡರು ಪೊವಜು ತೆಗೆದುಕೊಂಡು ಹೋಗಿ ಕೋಟಾಗಾರ್ರ ಸ್ಥಳಗಳ ಮೇಲೆ ಯುದ್ಧ ಮಾಡಿ ಸ್ತಳಗಳ ಸ್ವಾಧೀನ ಮಾಡಿಕೊಂಡು ಲಿಂಗೆಗವೂಡನ್ನು ಯಿರುವ ಸ್ತಳದಲ್ಲು ಕೆಲವು ಪೊವುಜು ಮಾಡಿಸಿ ಯಿ ಹೊಸಕೋಟೆಯು ಸಹ ಪ್ರಭುತ್ವ ಮಾಡಿಕೊಂಡು ಯಿರಲಾಗಿ ಕೆಲವೂ ದಿವಸದ ಮೇಲೆ ವುತ್ತರ ದೇಶದಿಂದಾ ಶ್ಯಾಲಿವಾಹನ ಶಕ ೧೩೭೮ನೇ ವ್ಯಾಯ ಸಂವತ್ಸರದಲ್ಲು ಪೆಷ್ವಾಮಿಯವರ ಕಡೆಯಿಂದಾ ಯೆಕೋಜಿ ಶಿವೋಜಿ ಯಂಬ ಸರದಾರ್ರು ಪವುಜು ಸಮೇತವಾಗಿ ಬಂದು ಹೊಸಕೋಟೆ ಮೇಲೆ ಬಹಳ ಯುದ್ಧ ಮಾಡಿ ಕಾಶಿಂಕಾನರೆಂಬ ಸರದಾರ್ರ ಕಪೂಲಿನಲ್ಲಿ ಹೊಸಕೋಟೆ ಸ್ವಾಧೀನ ಮಾಡಿಕೊಂಡು ದಕ್ಷಿಣ ದಿಕ್ಕಿನಲ್ಲಿ ಆನೆಮಲೆಯಾಗಿಯಿರುವ ತೊಟಗಾರ ಸ್ತಳವನ್ನು ನಮಗೆ ಕೊಟ್ಟು ಅಲ್ಲಿ ಸ್ಥಳಮನೆ ಮಾಡುವ ಪರಿ ಯಂತ್ರ ಆರು ತಿಂಗಳು ಯಿೂ ಹೊಸಕೋಟೆಯಲ್ಲಿ ಯಿಂದ್ದು ಅಲ್ಲಿ ಸ್ತಳಮನೆ ಆದ ತರುವಾಯ ತಂಮ ಜೀದಾಗಾನಿ ಸಹಾವಾಗಿ ನಮೂಸಾಗಿ ಹೋಗುವ ಮೇರೆಗೆ ಕರಾರು ಆಯಿತ್ತು ಅವಾಗ ಲಿಂಗೆಗವುಡನ ವ ವಾ ಕೆ (?) ಪಣ ಹೊಂನ್ನು ಕೊಟು ಅಲ್ಲಿ ದೊಡದಾಗಿ ಪೂರು ಕಟ್ಟಿಶಿ ಕರೆಯಂನ್ನು ಕಟ್ಟಿಸುವ ಮೇರಿಗೆ ಕಳುವಿಸಿ ಕೊಡಲಾಗಿ ಅವಾಗ ಲಿಂಗೆಗವುಡನು ಹೋಗಿ ಗಿಡವಂನ್ನು ಕಡಿಶಿ ಸ್ವಲ್ಪಪವಾಗಿ ಕೋಟೆಯಂನ್ನು ಹಾಕಿಶಿ ದೊಡ ಕೆರೆಯನ್ನು ಕಟಿಶಿ ದೊರೆ ಬಳಿಗೆ ಹೇಳಿಕಳುವಿಸಲಾಗಿ ಅವಾಗ ತಂಮೆಗವುಡರು ಬಂದು ಅಮ್ರುತ ಮಲ್ಲಿಕಾರ್ಜುನ ದೇವಸ್ಥಾನ ತಂಮಸಂದ್ರ ಅಗ್ರಹಾರ ಸಹ ಮಾಡಿಶಿ ಆನೆಕಲ್ಲು ಯಂಬುದಾಗಿ ನಾಮದೇಹವಿಟು ಶ್ಯಾಲಿವಾಹನ ಶಕ ೧೩೬೯ನೆ ಸರ್ವಜಿತು ಸಂಮತ್ಸರ ಮಾಗಮಾಸದಲು ಆನೆಕಲ್ಲು ಸಂಸ್ತಾನಕ್ಕೂ ಅಮ್ರುತಮಲ್ಲಿಕಾರ್ಜುನ ದೇಪರಿಗೂ ತಂಮಾಂಬುಧಿಯೆಂಬ ದೊಡ್ಡಕೆರಿಗೂ ತಂಮಸಂದ್ರ ಆ ಗ್ರಾಮದಕ್ಕೂ ಯೇಕ ಕಾಲದಲ್ಲಿ ಪ್ರದಿಕ್ಷೆಯಂನ್ನು ಮಾಡಿಶಿ ಪುನಹ ಆನೇಕಲ್ಲು ಅತ್ತಿಬೆಲೆ ಕೋಟೆ ವಿಸ್ತಾರವಾಗಿ ಶ್ಯಾರುಪಾನ ಹಾಕಿಶಿ ಶೀಮೆ ವಿಸ್ತಾರ ಮಾಡಿಕೊಂಡು ಪ್ರಭುತ್ವ ಮಾಡಿಕೊಂಡು ಯಿರಲಾಗಿ ೧ ಚಿಕ್ಕರಾಯ ತಂಮೆಗವುಡರ ಕೊಮಾರ್ರು–೧ ಮುಂಮಡಿ ಕರಡು ತಂಮೆಗವುಡರು–೧ ಯಿವರ ಕೊಮಾರ್ರು ಮುಂಮಡಿ ಚಿಕರಾಯರು ತಂಮೆಗವುಡರು ೧ ಯಿವರ ಕೊಮಾರ್ರು ವೀರ ನಂಜುಂಡ ತಂಮೆಗವೂಡರ್ರು–ಪ್ರಭುತ್ವ ಮಾಡಿಕೋಂಡು ಯಿರಲಾಗಿ ಶ್ಯಾಲಿವಾಹನ ಶಕೆ ೧೬೭೯ನೆ ಬಹುಧಾನ್ಯ ಸಂವತ್ಸರಲು ನಾಬಬು ಹೈದರಲ್ಲಿ ಬಹುದರ್ರು ಸಂಸ್ಥಾನಕೆ ಗದ್ದುಕೋಡು ಬೆಂಗುಳೂರಲ್ಲು ಮೂವತ್ತ ನಾಲ್ಕು ವರುಷ ಶರೆ ಹಾಕಿ ಯಿರಲಾಗಿ ಶಾಲಿವಾಹನ ಶಕೆ ೧೭೧೩ನೆ ವಿರೋಧಿ ಕೃತುಸಂವತ್ಸರದಲು ಲಾಟು ವಾಲಿಸು ಮೆಂಡಿಸು ಬಹದರರರ್ರು ಶ್ರೀರಂಗಪಟಲದ ಮೇಲೆ ಪೊವುಜು ತೆಗೆದುಕೊಂಡು ಬರುವಲ್ಲು ಬೆಂಗುಳೂರ ಮೇಲೆ ಲಡಾಯಿ ಮಾಡಿ ಹಲ್ಲ ಮಾಡಿ........ಣ್ಯ ಹಾಕಿದಾಗ ವೀರ ನಂಜು ತಮ್ಮೆಗವುಡರ ಕೊಮಾರ್ರು ಮುಂಮಡಿ ಐಮಗವುಡರು ವುಬಯ ದಣಿಗಳಿಗೂ ಬೇಟಿ ಆಗಿ ನಜರುಹುಜರಾಯಿಶಿ ಕೈಫಿಯತ್ತೂ ಸಂಸ್ತಾನದ ವಿದಿಮಾನ ಹೇಳಿಕೊಂಡದ್ದರಿಂದಾ ಸಂನ್ನದ್ದು ಶಿರೋನಾಮೂ ಕೊಟು ಸಂಸ್ತನಕ್ಕೆ ಅಪ್ಪಣೆ ಕೊಡಲಾಗಿ ಅವಾಗ ಆನೆಕಲ್ಲಿಗೆ ಟಣ್ಯ ಹಾಕಿ ದೊರೆತನ ಮಾಡಿಕೊಂಡೂ ಯಿರಲಾಗಿ ಶ್ರೀರಂಗಪಂಟ್ಟಣ ಸಲ್ಲ ಆಗಿ ಪೊವುಜು ಹಿಂದಕ್ಕೆ ಕಣಿವೆ ಕೆಳಗೆ ಬರುವಲ್ಲು ನಮುಂನ್ನು ಕುಂಪಣಿ ಸೀಮೆಯಲ್ಲಿ ಯಿರಲಾಗಿ ಶ್ಯಾಲಿವಾಹನ ಶಕೆ ೧೭೧೫ ಪ್ರಮಾದೀಚ ಸಂವತ್ಸರದಲು ಐಯಮಗವುಡರ ಪಟ್ಟದ ಶ್ರೀ ಗವುರಂಮನವರು ಕಿರಿ ಹೆಂಡತಿ ಚಂನಂಮನ್ನು ಚಿಕಂಮನ್ನು ದೊಡ್ಡ ದೊರೆ ಹೆಂಡತಿ ಕೆಂಪಮ್ಮ ಪಾರ್ವತಂಮನ್ನು ಯಿವರು ಗ್ರಕೃತ್ಯಾದಲ್ಲಿ ಅನುಕೂಲವಿಲ್ಲದ್ದರಿಂದ ಕರ್ನಲು ಅಲಕ ಸೌಂದರ

ರೀಟು ಬರಹದವರು ಕರಶಿ ಕೈಫಿಯತ್ತು ವಿಚಾರಿಶಿ ಕೆಂಪಮ್ಮಾ ಪಾರ್ವತೆಂಮ್ಮನವರಿಗೆ ಯಿಂದಕ್ಕೆ ದೊಡ್ಡ ದೊರೆ ಯಿರುವಾಗೇ ಪಾಲು ತೇರುಗಡೆಯಾಗಿ ಯಿರೋದ್ರರಿಂದ ಸಂಸ್ಥಾನದ ಹಕ್ಕಿಗೆ ಬಾಧಕವಿಲ್ಲವೆಂದು ಚಂನಂಮ್ಮಗೆ ವಂದು ಭಾಗ ತೇರುಗಡೆ ಮಾಡಿ ಚಿಕ್ಕಂ ಮನವ ಪಾದಲ್ಲಿ ಐಮುಗವುಡರು ಕೊಟ್ಟ ವಡಿವೆ ಅವಳಿಗೆ ಕೊಡಿಸಿ ಪೈಸಲ್ ಮಾಡಿ ಪೈಸಲು ನಾಮ ಬರೆಶಿಕೊಟು, ಐಮುಗವುಡರ ಪಟ ಶ್ರೀಗವುರಂಮ್ಮನವರಿಗೆ ಕರ್ನಲು ಆಲಕ ಸೌಂದರ ರೀಟು ಬಹದರವರು ಹೇಳಿದ್ದು ಕ್ರಿಷ್ಣ ಗಿರಿಯಲ್ಲಿ ನೀವೂ ಯಿರಿ ಸ್ವಲ್ಪ ದಿನ ಸವರಿ ನಿಂಮ್ಮ ಸಂಸ್ಥಾನ ನಿಮಗೆ ದೇವರು ದಯಾ ಮಾಡೆನು ಯಂಬುದಾಗಿ ಅಪ್ಪಣೆ ಕೊಡಲಾಗಿ ಅದೆ ಪ್ರಕಾರಕ್ಕೆ ಕುಂಪಿಣಿ ಯವರಿಗೆ ದವಲಾ ಮಾಡಬೇಕ್ಕು ಯಂಬುದಾಗಿ ಸದಾ ದೇವರಿಗೆ ಪಾರ್ತನೆ ಮಾಡಿಕೊಂಡು ಯಿರಲಾಗಿ ಶ್ಯಾಲಿ ವಾಹನ ಶಕೆ ೧೭೨೦ ಕಾಳಾಯುಕ್ತಿ ಸಂವತ್ಸರದಲು ಕುಂಪಣಿ ದಂಡು ಶ್ರೀರಂಗಪಟ್ಟಣಕ್ಕೆ ಬರುವಲು ಕರ್ನಲು ಅಲಾಕ ಸಾದರ ರೀಟು ಬಹದರವರು ಕರಶಿ ನಿಂಮುಸ್ಮಳ ವಂತರ ಕರಶಿ ದಂಡಿಗೆ ರಸ್ತೂಮು ವೇಶಿಯಂನ್ನು ನೆಡಿಶಿ ಖಬರ ವಗೈರೆ ಬಾತಮಯನ್ನು ಜನವಿಟ್ಟು ಹಾಜರಾಗಿ ಯಿರಬೇಕೆಂದು ಅಪ್ಪಣೆ ಕೊಡಲಾಗಿ ಅಪ್ಪಣೆ ಪ್ರಕಾರಕ್ಕೆ ದಂಡಿಗೆ ರಸ್ತೂಮು ವೇಶಿಯು ನಡೆಸುವ ಬಗ್ಗೆ ಬೇಪಾರಿ ವರ್ತಕಜನವಿಟ್ಟು ಆ ಖಬರ ವಗೈರ ಬಾತ್ತಮ ಜನ ವಿಟ್ಟು ಕಾದುಕೊಂಡು ಯಿರಲಾಗಿ ಆ ತರುವಾಯ್ಯ ಕರ್ನಲ್ಲು ಅಲಕ ಸೌಂದರರೀಟು ಬಹದರವರು ಜನಮಹಾರಿಸು ಬಹದರವರ ದಂಡು ಬರೋಮಾರ್ಗ ಕಾದುಕೋಡೂ ಆ ಮೂರು ಪಾಳಿಯಲ್ಲಿ ಯಿ ಜನಲು ಹರಿಸಹ ಬದರರ ಬೇಟಿ ಮಾಡಿಶಿ ಪ್ರಕಾರಕ್ಕೆ ನೆಡಿಶಿ ಕೊಡಲಾದಿತ್ತು ಯೆಂಬದಾಗಿ ಕವುಲು ವುತ್ರ ಬರಶಿ ಕಳಿವಿಸದರಿಂದ ಅಪ್ಪಣೆ ಪ್ರಕಾರಕ್ಕೆ ಆ ಮೂರು ಬಳಿಲ್ಲಿ ಕಾದುಕೊಂಡು ಯಿದ್ದು ದಂಡಿನ ಕುಡಾ ಪೈಗಾಟು ಶೀಮೆಗೆ ರಾದಾರಿ ತೆಗೆದುಕೊಂಡು ಹೋಗಲಾಗಿ ಹೊಸೂರು ತಾಲೂಕು ಕೆಲಮಂಗಲ ಮಜರಿನಲ್ಲಿ ಜನಲ್ಲು ಹಾರಿಸು ಬಹದರವರು ನಂಮ ಮೆನತ್ತಾದಬೆ ಯಾಮ ಮಾಡಿ ಚಿಕ್ಕರಾಯರ ಹೆಸರಿನಲ್ಲೂ ಸಂನದೂ ಶಿರೋನಾವೂ ಕೊಟ್ಟೂ ಸಂಸ್ಥಾನಕ್ಕೆ ಅಪ್ಪಣೆ ಕೊಡಲಾಗಿ ಆನೇಕಲ್ಲು ಮೇಲೆ ಲಡಾಯಿ ಮಾಡಿ ಸುಲತ್ತಾನ ಟಾಣ್ಯ ತೆಗೆಸಿ ಟಾಣ್ಯ ಹಾಕಿಕೋಂಡು ಕುಂಪಣಿ ಕೆಲಸ ಮುಖ್ಯವಾಗಿ ಸಂಸ್ಥಾನದಲ್ಲಿ ದೊರೆತನ ಮಾಡಿಕೊಂಡು ಯಿದೆವೂ ಶ್ಯಾಲಿವಾಹನ ಶಕೆ ೧೭೨೧ನೆ ಶಿರಾರ್ತಿ ನಾಮ ಸಂಮತ್ಸರ ಶ್ರಾವಣ ಮಾಸದಲೂ ಸಂಸ್ಥಾನ ಮೈಸೂರಿಗೆ ಶೇರಿತೆಂದು ಮೈಸೂರವರ ಕಡೆ ಅಮಲರು ಬಂದೂ ಜೆಪ್ತಿ ಮಾಡಲಾಗಿ ಕುಂಪಣಿಗೆ ಶೇರಿದ ಪಾಳೆಗಳು ಅಂಕುಸಗಿರಿ ಸುಳಿಗಿ (೮) ಬಗಲೂರು ಮುಂತಾಗಿ ನೆಡಶಿ ಕೊಟ್ಟು ಯಿದಿದಾಗಿ ನಂಮ ಸಂಸ್ಥಾನವು ನಮಗೆ ಕೊಡಬೇಕು ಅಹಬೆತ್ತು ಯಿಂಯತಲಪರಿ.... ಕೀರ್ತಿ ಪೂರ್ತಿ ನವಾಸಿ ಯಿವು........ಯಂಬದಾಗಿ ಚಂನಪಟದಲ್ಲಿ ಲಾಟು ಬಹದರವರುರಿಗೆ ಕೈಪಿಯತ್ತು ಬರದುಕೊಡಲಾಗಿ ಕರಿಕಟ್ಟಲ್ಲಿ ಅಲೆ....ಮಾಡಿ ಯಿ ಕೈಪಿಯತ್ತು ವೇಲೆ ಕ್ಲೋಸು ಬಹದರವರಿಗೂ ಪೂರ್ನಯ್ಯನವರಿಗೂ ಬರದು ಕೊಟ್ಟರು ಯಿ ಕೈಪಿಯತ್ತು ಕೊಡಲಾಗಿ ಕಚೇರಿಲಿ ಪಂಚರಾಗಿಯಿರಿ ಯಂಬುದಾಗಿ ಹೇಳಿದರು ಕೆಲದಿವಸದ ಮೇಲೆ ಸಾವಿರ ವರಹ ಕೊಡಿಸುತ್ತೇವೆ ಯಿವಾಗೆ ನೆಂಮದಿಯಾಗಿಯಿರಿ ಮುಂದೆ ತೆರುಗಡೆ ಮಾಡಿ...... ಯಂಬುದಾಗಿ ಹೆ........ಯ.... ....ನಮ ಸಂಸ್ಥಾನ ನನ...ಗೆ ಕೊಡಿ........ಕುಂಪಣಿ ಶೀಮೆ........ ........

(ಶ್ರೀ ಪಿ. ಎಸ್. ಶಿವಕುಮಾರ್, ಪಾಳ್ಯರಾರ್ ಬೀದಿ, ಆನೇಕಲ್ ಇವರಿಂದ ಪಡೆದಿದ್ದ ಛಾಯಾಪ್ರತಿ (ಝೆರಾಕ್ಸ್)ಯಿಂದ ಪ್ರತಿ ಮಾಡಿದೆ.)

ಡಾ|| ಜಿ. ನಂಜುಂಡಸ್ವಾಮಿ*

# ಮುತ್ತಿನ ಮುಮ್ಮಡಿ ಏಳು ನಾಡು ಪ್ರಭುಗಳು, ಕೋರಾ ಇವರಲ್ಲಿರುವ 'ಜಯರೇಖೆ'

ಕೋರಾ, ಮಧುಗಿರಿ, ತರಿಯೂರು, ಚೇಳೂರು, ಬಿದರೆ (ಚೇಳೂರು ಹತ್ತಿರ) ಗುಬ್ಬಿಹೊಸಹಳ್ಳಿ ಹಾಗೂ ದೊಡ್ಡಎಣ್ಣೆಂಗೆರೆಗಳಲ್ಲಿ ಏಳು ಜನ ಅಣ್ಣ–ತಮ್ಮಂದಿರ ರಾಜ್ಯಾಡಳಿತ ಪ್ರದೇಶದಲ್ಲಿ ಇರುವುದು. ತುಮಕೂರು ಜಿಲ್ಲೆಯಲ್ಲಿನ ಪಾಳೆಯಗಾರರ ಬಗ್ಗೆ ಅಧ್ಯಯನವಾಗಿರುವುದು ಬಹಳ ಅಲ್ಪ. ಇದ್ದುದರಲ್ಲಿ ಬಿಜ್ಜವಾರದ ಅರಸರ ಬಗ್ಗೆ ಲೇಖನಗಳು ಬಂದಿವೆ. (ಎಂ.ಎಂ. ಕಲ್ಬುರ್ಗಿ ಬಿ. ಆರ್. ಹಿರೇಮಠರ "ಇಮ್ಮಡಿ ಚಿಕ್ಕ ಭೂಪಾಲ ಸಾಂಗತ್ಯ").ಆ ಕಾಲದ ಜನಜೀವನದ ಬಗ್ಗೆ ಚರ್ಚೆ,ಅವರು ಆಶ್ರಯ ಕೊಟ್ಟು ಬೆಳೆಸಿದ ಕವಿಗಳು, ಅವರು ಬರೆದ ಕಾವ್ಯಗಳು,ಪ್ರಕಟವಾಗಿರುವ ಶಾಸನಗಳು ಇವುಗಳ ಬಗ್ಗೆ ಇದರಿಂದ ಒಂದು ಮಟ್ಟದಲ್ಲಿ ಅಧ್ಯಯನದ ಬಾಗಿಲು ತೆರೆದಿದೆ ಎಂದರೆ ತಪ್ಪಾಗಲಾರದು. ಇನ್ನು ಗುಬ್ಬಿಹೊಸಹಳ್ಳಿ ಅರಸರ ದಾಖಲೆಗಳು ಇದ್ದರೂ ಅದರ ಅಧ್ಯಯನ ಇನ್ನೂ ಆಗಬೇಕಾಗಿದೆ. ಆ ದಾಖಲೆಗಳಲ್ಲಿ ಮೈಸೂರು ಅರಸರದೆ ಬಹುಪಾಲು. ಅವರದೇ ಆದ ಒಂದೇವೊಂದು ತಾಮ್ರಶಾಸನ ಪ್ರಕಟವಾಗಿದೆ. ಇನ್ನೊಂದು ಕಲ್ಲಿನ ಶಾಸನ ಅಧ್ಯಯನಕ್ಕೆ ಕಾಯುತ್ತಾ ಕುಳಿತಿದೆ.ದೊಡ್ಡಎಣ್ಣೆಂಗೆರೆ (ಚಿಕ್ಕನಾಯಕನಹಳ್ಳಿ ತಾಲ್ಲೂಕಿ)ಯಲ್ಲಿ ಇರುವ ಈ ಅರಸು ಮನೆತನದವರಲ್ಲಿ ಇದ್ದ ಅಮೂಲ್ಯ ದಾಖಲೆಗಳು, ಹಸ್ತಪ್ರತಿಗಳು, ತಾಮ್ರಶಾಸನ ಹಿರಿಯರೊಬ್ಬರು ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ತೆಗೆದುಕೊಂಡು ಹೋಗಿ ಅವರಲ್ಲಿ ಈಗ ಕಟ್ಟೆಮನೆ ಕಾಗದ ಪತ್ರಗಳು, 'ಶರಣಲೀಲಾಮೃತ' ಎಂಬ ಒಂದು ಕಟ್ಟು ಬಿಟ್ಟರೆ ಇನ್ನು ಏನೂ ಇಲ್ಲ. ಬಿದರೆಯಲ್ಲಿ ಇದ್ದ ವಂಶಸ್ಥರು ಇನ್ನೂ ಪತ್ತೆ ಆಗಿಲ್ಲ. ಚೇಳೂರಿನಲ್ಲಿ ಇದ್ದ ರಾಜರ ಮನೆತನದವರು ಶಿವಮೊಗ್ಗ, ಶಿಕಾರಿಪುರದ ಗ್ರಾಮದಲ್ಲಿ ಇದ್ದಾರೆ ಎಂದು ಕೇಳಿದ್ದೇನೆ. ಅವರನ್ನು ಭೇಟಿಯಾಗಲು ಆಗಿಲ್ಲ. ಮಿಡಿಗೇಶಿಯ ಪಕ್ಕದಲ್ಲಿ ಇರುವ ತರಿಯೂರಿನಲ್ಲಿ ವಂಶಸ್ಥರನ್ನು ಸರಿಯಾಗಿ ಗುರುತಿಸಲು ಆಗುತ್ತಾ ಇಲ್ಲ. ಅವರು ಕೋರಾ ಪಕ್ಕದ ತರಿಯೂರಿನಲ್ಲಿ ಇದ್ದಾರೆ ಎಂದರೂ ಅದಕ್ಕೆ ಸರಿಯಾದ ದಾಖಲೆ ಇನ್ನೂ ದೊರೆತಿಲ್ಲ; ಕೋರಾದ ಅರಸು ಮನೆತನದವರು ಕೋರಾದಲ್ಲಿ ಇದ್ದಾರೆ. ಈ ದಿನ ಸುಮಾರು ಮೂವತ್ತು ಮನೆಯಾಗಿವೆ. ಅವರಲ್ಲಿ ಎಲ್ಲರೂ ವ್ಯವಸಾಯದಲ್ಲಿ ಉತ್ಸಾಹಿಗಳು. ದಾಖಲೆಗಳು, ಹಸ್ತಪ್ರತಿಗಳು ಎಲ್ಲವೂ ಹೊರಟು ಹೋಗಿವೆ. ಹಿಂದೆ ಒಂದು ಅಜ್ಜಿ ಇದ್ದು, ಅದು ಯಾವಾಗಲೂ ಘೋಷ ಹಾಕಿಕೊಂಡು ಇರುತ್ತಾ ಇತ್ತು. ಆ ಅಜ್ಜಿಗೆ ಪಟ್ಟ ಆಗಿತ್ತು,ಅನ್ನುವ ಒಂದು ಸಣ್ಣ ಮಾಹಿತಿ ಲಭ್ಯವಾಗುತ್ತಾ ಇದೆಯೇ ವಿನಾ ಇನ್ನು ಯಾವ ಮಾಹಿತಿ ಈಗ ಲಭ್ಯವಿಲ್ಲ. ಆದರೆ ಅವರಲ್ಲೇ ಶಾನುಭೋಗರಾಗಿದ್ದ ಮನೆಯವರು ಒಂದು ಅಪರೂಪದ ಕಾಗದ ಸುರುಳಿ ಕಾದಿಟ್ಟಿದ್ದಾರೆ. ಅದು ಸುಮಾರು ೮ ಅಡಿ ಉದ್ದ ಇದೆ. ಅದರಲ್ಲಿ ಕೋರಾ ಮನೆತನದ ಉಲ್ಲೇಖ ಆದಿಯಲ್ಲಿ,

* ಪಂಡಿತ ತಾರಾನಾಥ ಔಷಧಾಲಯ, ತುಮಕೂರು

ಕೊನೆಯಲ್ಲಿ ಮಾತ್ರ ಇದೆ. ಅದು ಬಿಟ್ಟರೆ ಕಟ್ಟೆಮನೆ ಕಾಗದ ಪತ್ರಗಳು ಸಹ ನೋಡಲು ಲಭ್ಯವಿಲ್ಲ. ಕತ್ತಿ ಗುರಾಣಿಗಳು ದಳವಾಯಿ ಮನೆಯವರಲ್ಲಿ ಕೆಲವು ಹಸ್ತ ಪ್ರತಿಗಳು ಊರಿನಲ್ಲಿ ಇರುವ ದೇವಾಲಯಗಳು ಅವರ ಆಚರಣೆ ಇಷ್ಟೆ ಉಳಿದುಕೊಂಡಿರುವುದು. ಊರಿನಲ್ಲಿ ಭೈರವ ದೇವಾಲಯ, ವಿಷ್ಣು ದೇವಾಲಯ (ಮೂಲ ವಿಗ್ರಹ ಇಲ್ಲ), ರಂಗನಾಥ ಉತ್ಸವಮೂರ್ತಿ ದೇವಸ್ಥಾನ, ಲಕ್ಷ್ಮೀ ದೇವಸ್ಥಾನ, ಕೋರಾ ಮಲ್ಲಿಕಾರ್ಜುನ ದೇವಸ್ಥಾನ, ಬೃಹತ್ ಕಂಬದ ನರಸಿಂಹ ದೇವಾಲಯ, ಗ್ರಾಮ ದೇವತೆ, ಆಂಜನೇಯ ದೇವಾಲಯ ಇದೆ. ಹಲವು ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಊರಬಾಗಿಲು, ಕೆರೆಯ ಕೋಡಿಬಾಯಿಯಲ್ಲಿ ಇರುವ ಸುಂದರವಾದ ಕಾರಂಜಿ ಇಷ್ಟೇ ಉಳಿದಿರುವುದು.

ಈ ಹಸ್ತಪ್ರತಿ ಆರು ಇಂಚು ಅಗಲ, ಸುಮಾರು ೮ ರಿಂದ ೯ ಅಡಿ ಉದ್ದ ಇದೆ. ರಾಗಿ ಮಸಿಯಲ್ಲಿ ಒರಟು ಕಾಗದದ ಮೇಲೆ ಬರೆದಿರುವ ಈ ದಾಖಲೆಯನ್ನು ವಂಶಸ್ಥರು "ರಾಯರೇಖೆ" ಎಂದು ಕರೆಯುತ್ತಾರೆ. ಕಡೆಯಲ್ಲಿ ಅಸಲು ಪತ್ರಿಕೆ ಶಿಥಿಲವಾದ ಪ್ರಯುಕ್ತ ನೂತನ ವಾಗಿ ನಿರ್ಮಿಸಿರುತ್ತದೆ. "ಭಾವನಾಮ ಸಂವತ್ಸರದ ಪುಷ್ಯ ಶ್ರೀಮನ್ಮಹಾ ಏಳು ನಾಡು ಪ್ರಭು ಕೋರಾದ ಚಿಕ್ಕವೀರಪ್ಪನ ರುಜುವು ದೊಡ್ಡವೀರಪ್ಪಾಜಿ ಅರಸು ಬರೆದ ಬರಹ ಶುಭಮಸ್ತು." ಕಡೆಯಲ್ಲಿ "ಸೊನ್ನಲಾ ಪುರದ ಗುರುಶಿದ್ಧರಾಮೇಶ್ವರಸ್ವಾಮಿ ಪ್ರಸನ್ನ" ಎಂದಿದೆ. ಶ್ರೀಮನ್ ಮಹಾಏಳುನಾಡುಪ್ರಭುಗಳು ಕೋರಾದ ಮುಮ್ಮಡಿಯವರ ವಂಶಾವಳಿಗಳು ಎಂದು ಪ್ರಾರಂಭ ವಾಗಿದೆ, ಮುಂದುವರೆದಿಲ್ಲ.

ಶಿಥಿಲವಾದ ಹಸ್ತಪ್ರತಿಯನ್ನು ಹೋದ ಶತಮಾನದ ಕಡೆಯ ಭಾಗದಲ್ಲಿ ಅಂದರೆ ಕ್ರಿ.ಶ. ೧೮೮೦ರ ಸುಮಾರಿನಲ್ಲಿ ಮತ್ತೆ ಹೊಸದಾಗಿ ಬರೆದಿದ್ದಾರೆ. ಈ ಹಸ್ತಪ್ರತಿ ಬಹಳ ಉದ್ದ ಇರುವುದರಿಂದ ಅನೇಕ ಸಾರಿ ಬಿಚ್ಚಿ ಸುತ್ತಿ ಮಾಡಿರುವುದರಿಂದ ಕಡೆಯ ೧೨ ಅಂಗುಲ ಸಂಪೂರ್ಣ ಶಿಥಿಲವಾಗಿ ಹೋಗಿದೆ. ಕಾಗದವೆಲ್ಲಾ ತ್ರುಟಿತವಾಗಿದೆ. ಈ ಹಸ್ತಪ್ರತಿಯ ಬಗ್ಗೆ ಆಸಕ್ತಿ ತಳೆದು 'ಮೃತುಂಜಯಾ ಪ್ಪಾಜಿ ಅರಸು' (ಪೋಸ್ಟ್ ಮಾಸ್ಟರ್) ಇವರ ತಂದೆ ತಾವು ಒಂದು ನಕಲು ಮಾಡಿಕೊಂಡು ಇಟ್ಟುಕೊಂಡಿದ್ದರು. ೧೯೫೦ರ ಸುಮಾರಿನಲ್ಲಿ ಈ ಹಸ್ತಪ್ರತಿ ನಕಲಾಗಿದೆ. ಅವರು ನಕಲು ಮಾಡಿಕೊಳ್ಳದೆ ಇದ್ದರೆ ಕೋರಾ ಅರಸು ಮನೆತನದ ಉಲ್ಲೇಖದ ಒಂದು ಗಟ್ಟಿಯಾದ ದಾಖಲೆ ಇಲ್ಲವಾಗಿ ಹೋಗುತ್ತಾ ಇತ್ತು.

ಕೋರಾ ಅರಸು ಮನೆತನದವರು ಬಹಳ ಬೇಗ ಬಿಜ್ಜವಾರದ ಅರಸು ಮನೆತನದ ಜೊತೆ ಹೊಂದಿಕೊಂಡಿರ ಬೇಕು. ಅಣ್ಣತಮ್ಮಂದಿರು ಒಟ್ಟಿಗೆ ರಾಜ್ಯವಾಳುತ್ತಾ ಇದ್ದದ್ದು ನಾವು ಅನೇಕ ಕಡೆ ನೋಡಿದ್ದೇವೆ. (ಈ ಹಸ್ತಪ್ರತಿ ವಿಶೇಷವಾಗಿ ಕೋರಾದಲ್ಲಿ ಇದ್ದು ಹಸ್ತಪ್ರತಿ ಯಲ್ಲಿ ಸಂಪೂರ್ಣವಾಗಿ 'ಮಧುಗಿರಿ' ಅರಸರ ಬಗ್ಗೆಯೂ ಮಾಹಿತಿ ಇರುವುದನ್ನು ನಾನೂ ಶ್ರೀ ಶಿವತಾರಕ ಶಂಭೋನಹಳ್ಳಿಯಲ್ಲಿ ಇರುವ ಮಧುಗಿರಿ ಅರಸರ ದಾಖಲೆಗಳನ್ನು ಸುದೀರ್ಘವಾಗಿ ನೋಡಿದ್ದೇವೆ. ಕೋರಾ ಮನೆತನದ ಬಗ್ಗೆ ಬೇರೆ ಇನ್ನೂ ಯಾವ ಮಾಹಿತಿ ಲಭ್ಯ ವಾಗಿಲ್ಲ.)

**ಹಸ್ತಪ್ರತಿ**

'ಶುಭಮಸ್ತು "ಸೊನ್ನಲಾಪುರದ ಸಿದ್ಧರಾಮೇಶ್ವರ ಸ್ವಾಮಿ" ಶ್ರೀ ಮನ್ ಮಹಾಏಳ್ನಾಡು ಪ್ರಭುಗಳು ಕೋರಾದ ಮುಮ್ಮಡಿಯವರ ವಂಶಾವಳಿಗಳು ಸೊನ್ನಲಾ ಪುರದ ಸಿದ್ಧರಾಮೇಶ್ವರಸ್ವಾಮಿಯವರು ಕಲ್ಯಾಣ ಪಟ್ಟಣದ ಶಿರೋಮಣಿಗಳಾದಂಥ (ಚನ್ನ) ಬಸವಣ್ಣ ನವರು ಉಳಿವಿ ಮನೆಗೆ ದಯಮಾಡಿಸುತ್ತಾ ಇದ್ದಾರೆ ಯೆಂಬ ವರ್ತಮಾನವನ್ನು ಕೇಳಿ ತಾವು ದಯೆಮಾಡಿಸು ವಂತಾ ವ್ಯಾಳೆಯಲ್ಲಿ ತಮ್ಮ ಸನ್ನಿಧಾನದಲ್ಲಿ ಇದ್ದಂಥ ವೀರೇಗೌಡರು ಮುಂತಾದ ಏಳು ಮಂದಿ ಅಣ್ಣ–ತಮ್ಮಂದಿರಿಗೆ ಅಪ್ಪಣೆ ಕೊಟ್ಟ ವಿವರ' ಎಂದು ಪ್ರಾರಂಭ ವಾಗುವ ಈ ಹಸ್ತಪ್ರತಿ ಒಟ್ಟು ೨೩ ಪುಟದಷ್ಟು ಸಾಮಗ್ರಿ ಇರುವುದರಿಂದ ಇದರಲ್ಲಿ ಬರುವ ಮುಖ್ಯವಾದ ವಿಷಯ ಗಳನ್ನು ಮಾತ್ರ ದಾಖಲಿಸುತ್ತಾ ಹೋಗುತ್ತೇನೆ.

೧. ಉಳವಿ ಮನೆಗೆ ಬಸವಣ್ಣ ದಯಮಾಡಿಸಿದರು ಎಂದು ಇದೆ. ಇದು ಚನ್ನಬಸವಣ್ಣ ಎಂದಿರಬೇಕು.

೨. ನಾಗರಮುರಿಯೆಂಬ ಆಯುಧವನ್ನೇ ತೋಶಿ ಖಾನೆಯಲ್ಲಿ ಏಳುಬಂಡಿ ದ್ರವ್ಯವನ್ನೇ ತೆಗೆದುಕೊಂಡು ದಕ್ಷಿಣ ದೇಶದಲ್ಲಿ ವಿಜಯನಗರವೆಂಬ ಪಟ್ಟಣದಲ್ಲಿ

ಶ್ರೀಮನ್ ನರಪತಿಗಳಾದಂಥ ತಿರುಮಲರಾಯರು ರಾಜ್ಯ ಪರಿಪಾಲನೆ ಮಾಡುತ್ತಾ ಇದ್ದರು. ಅವರ ಹತ್ತಿರ ಈ ಅಣ್ಣತಮ್ಮಂದಿರು ಉಳಿದುಕೊಂಡರು.

೩. ಡಿಳ್ಳಿ ಬಾದಶಹನ ಫೌಜು ಮುಲ್ಲಾಖಾನ ಎಂಬ ಸರದಾರ ವಿಜಯನಗರಕ್ಕೆ ಮುತ್ತಿಗೆ ಹಾಕಲು ಬರಲು, ತಿರುಮಲರಾಯರು ವೀರೇಗೌಡರು ಮತ್ತು ಅವರ ಅಣ್ಣತಮ್ಮಂದಿರನ್ನು ಕರೆಸಿ ಅವರಿಗೆ ಫೌಜು ಕೊಟ್ಟು ಕಳುಹಿಸಲು ಅವರಲ್ಲಿ ಇದ್ದ ನಾಗರಮುರಿ ಆಯುಧದಿಂದ ಮುಲ್ಲಾಖಾನನನ್ನು ಕೊಂದುಹಾಕಿ ಶತ್ರುಗಳನ್ನು ಜಯಿಸಿ ಅವರಲ್ಲಿ ಇದ್ದಂಥ ಬಿರುದುಬಾವಲಿಗಳನ್ನು ಶ್ರೀಮನ್ ಮಹಾಸ್ವಾಮಿ ನರಪತಿಗಳಾದಂಥ ತಿರುಮಲರಾಯರಿಗೆ ಒಪ್ಪಿಸಿದರು. ಅವರಿಗೆ ಸಂತೋಷವಾಗಿ ಅಣ್ಣತಮ್ಮಂದಿರಿಗೆ ನವರತ್ನಖಚಿತವಾದಂಥ ಆಭರಣಗಳು ಅನೇಕ ವಸ್ತ್ರಗಳು, ಬಿರುದುಗಳನ್ನು ಕೊಟ್ಟರು.

ಮುಂದೆ ದಕ್ಷಿಣ ದೇಶದಲ್ಲಿ 'ಪಟ್ಟಣ ಪಾಳ್ಯವನ್ನು' ಕಟ್ಟಿಸಿ ದೊರೆತನವನ್ನು ಮಾಡಿಕೊಂಡು ಇರಲಿ ಎಂಬುದಾಗಿ ನಮ್ಮ ಗುರುಗಳಾದಂಥ ಶ್ರೀ ಸಿದ್ಧರಾಮೇಶ್ವರ ಸ್ವಾಮಿಯವರು ಅಪ್ಪಣೆ ಕೊಟ್ಟು ಇದ್ದಾರೆಯೆಂಬುದಾಗಿ ಶ್ರೀಮನ್ ಮಹಾಸ್ವಾಮಿ ತಿರುಮಲರಾಯರಲ್ಲಿ ಅರಿಕೆ ಮಾಡಿಕೊಂಡರು. ತಿರುಮಲಾರಾಯರು ಇವರಿಗೆ ನಿರೂಪವನ್ನು ಕೊಟ್ಟು, ದಕ್ಷಿಣ ದೇಶದಲ್ಲಿ ಪಾಳ್ಯ ಕಟ್ಟಿಸುವುದಕ್ಕೆ ತಮ್ಮ ಸನ್ನಿಧಾನದಲ್ಲಿ ಇದ್ದ 'ರಾಮನಬೋವಿ', 'ಶಾಂತಬೋವಿ' ಎಂಬುವವರನ್ನು ಕಳುಹಿಸಿಕೊಟ್ಟರು.

೪. ಮಾರ್ಗಮಧ್ಯದಲ್ಲಿ ಮೊಹರ್ ಬಿದರೆಯಲ್ಲಿ ಸ್ವಲ್ಪ ದಿವಸ ಇರಲಾಗಿ ಆ ಪಟ್ಟಣದ ಶಾನುಭೋಗ ಮಲ್ಲರಸಯ್ಯ ಎಂಬುವರ ಹಿರಿಯಮಗ ಹರಿನರಸಯ್ಯ, ಚಿಕ್ಕಮಗ ತಿಮ್ಮನರಸಯ್ಯ ಎಂಬುವರು ಇದ್ದರು. ಹರಿನರಸಯ್ಯನಿಗೂ ವೀರೆಗೌಡರಿಗೂ ವಿಶ್ವಾಸ ಬೆಳೆದುದ್ದರಿಂದ "ನನಗೂ ಒಂದು ಅನ್ನಸ್ಥಿತಿ ಮಾಡಿಕೊಡಬೇಕು ಎಂದು ಬೇಡಿಕೊಂಡದ್ದರಿಂದ" ಅವರನ್ನು ಜೊತೆಯಲ್ಲಿ ಕರೆದುಕೊಂಡು ಹೊರಟರು.

೫. ವಿಜಯನಗರದ ಅರಸರು ಇವರಿಗೆ ಕೊಟ್ಟಂತಹ ಬಿರುದುಗಳು, ನವರತ್ನಖಚಿತವಾದಂಥ ಭೂಷಣಗಳು, ದಿವ್ಯತರವಾದ ವಸ್ತ್ರಗಳು, ರೆಂಬಿಣೆ(?) ಯೆಂಬ ಆಯುಧ, ಶ್ವೇತಛತ್ರಿ, ನಾಧಿ ಘಂಟೆ, ವ್ಯಾಘ್ರ ಚರ್ಮ, ಬೋಳಂಭೇರಿ ನವಬತ್ತು ನಗಾರಿ ಮುಂತಾದ ಬಿರುದುಗಳು.

೬. ಹೆಂಜೇರು ಹೇಮಾವತಿ ಪಟ್ಟಣದ ಬಳಿ ಗುಡಾರ ಹಾಕಿಕೊಂಡು ಇರಲಾಗಿ ನೊಣಬೇಶ್ವರ ದೇವರು ವೀರೆಗೌಡರ ಸ್ವಪ್ನದಲ್ಲಿ ಅಪ್ಪಣೆ ಕೊಟ್ಟ ವಿವರ :

"ಈ ಅರಣ್ಯಗಲ್ಲಿ ಭೂಸ್ಥಾಪ್ಯವಾಗಿ ಇದ್ದೇವೆ, ನಮ್ಮನ್ನು ಮೇಲಕ್ಕೆ ತೆಗೆಸಿ ದೇವಸ್ಥಾನವನ್ನು ಕಟ್ಟಿಸು, ದೇವರ ಪ್ರತಿಷ್ಠೆ ಮಾಡಿಸಿ ಪೂಜೆ ಮಾಡಿಸಿದಾದಲ್ಲಿ ನಿಮಗೆ ಅನೇಕ ಧನಪ್ರಾಪ್ತಿಯಾಗುತ್ತದೆ. ಪುತ್ರರು, ಪೌತ್ರರು ಪಾರಂಪರ್ಯವಾಗಿ ಸಕಲ ಸಂಪತ್ತು ಬಹಳ ಅತಿಶಯವಾಗುತ್ತದೆ." ಅದರಂತೆ ಮಾಡಿದರು.

ತುಂಗೋಟಿ ಪಟ್ಟಣದಲ್ಲಿ ತುರುಬಿನ ಮರೇಗೌಡರು, ಚಳ್ಳಗುರುಮರೇಗೌಡ ಇಬ್ಬರು ಅಣ್ಣತಮ್ಮಂದಿರು, ಗೌಡಗಳಾಗಿದ್ದರು. ಅವರು ವೀರೆಗೌಡರನ್ನು ಮತ್ತು ಅಣ್ಣತಮ್ಮಂದಿರನ್ನು ಕೇಳಿದ್ದು ಏನೆಂದರೆ ನಾವು ಶ್ರೀಮನ್ ಮಹಾಸ್ವಾಮಿ ನರಪತಿಗಳಾದಂಥ ತಿರುಮಲರಾಯರ ಸನ್ನಿಧಾನಕ್ಕೆ ಹೋಗಿ ಬುದ್ಧಿ ನಿರೂಪವನ್ನು ತೆಗೆದುಕೊಂಡು ಬಂದು ಇಲ್ಲಿ ಇದ್ದ ಗಿಡಗೆಂಟೆಗಳನ್ನು ಯಾವತ್ತೂ ಕಡಿಸಿ ಕೋಟೆಕೊತ್ತಲಗಳನ್ನು ಹಾಕಿಸಿ ಗ್ರಾಮವನ್ನು ಆಬಾದು ಮಾಡಿಸಿ ಇದ್ದೇವೆ. ನಮ್ಮಲ್ಲಿ ಲೆಖ್ಖಪತ್ರ ಬರೆಯುವುದಕ್ಕೆ ಯಾರು ಇಲ್ಲ. ಹರಿನರಸಯ್ಯನವರನ್ನು ಇಲ್ಲಿ ಬಿಟ್ಟು ನೀವು ಮುಂದಕ್ಕೆ ದಯಮಾಡಿಸಿ ನಿಮಗೆ ಅನುವಾದಂಥ ಸ್ಥಳವನ್ನು ನೋಡಿ ಕೋಟೆಕೊತ್ತಳವನ್ನು ಕಟ್ಟಿಸಿ ಪಟ್ಟಣವನ್ನು ನಿರ್ಮಾಣ ಮಾಡಿಸಿಕೊಂಡು ನಿಂತು ಅಪ್ಪಣೆ ಕೊಟ್ಟು ಕಳುಹಿಸಿದ್ದರಲ್ಲಿ ಈ ಹರಿನರಸಯ್ಯನನ್ನು ಕಳುಹಿಸಿ ಕೊಡುತ್ತೇವೆ. ಈ ಸ್ಥಳಕ್ಕೆ ತಾವೇ ಖಾವಂದರು ಹೊರ್ತು ಮತ್ತಾರು ಇಲ್ಲ ಎಂದು ಕೇಳಿಕೊಂಡರು.

ಅರಣ್ಯದಲ್ಲಿ ಇಳಿದು ಗುಡಾರ ಹಾಕಿಸಿಕೊಂಡು ಶ್ರೀಮನ್ಮಹಾಸ್ವಾಮಿ ತಿರುಮಲಾರಾಯರು ಅಪ್ಪಣೆ ಕೊಟ್ಟು ಬುದ್ಧಿನಿರೂಪದ ಪ್ರಕಾರ ಅಲ್ಲಿ ಇರುವಂಥಾ ಗಿಡಗೆಂಟೆ ಕಡಿಸಿ ಶಾಲಿವಾಹನ ಶಕ ವರುಷ ೧೨೬೮ನೆ

ಸರ್ವಜಿತು ಸಂವತ್ಸರ ಮಾರ್ಗಶಿರ ಶುದ್ಧ ೧೫ ಸೋಮವಾರ ಪ್ರಥಮ ಕೋಟೆಕೊತ್ತಳವನ್ನು ಹಾಕಿಸಿ ಈ ಗ್ರಾಮಕ್ಕೇ ಕೋರಾ ಎಂಬುದಾಗಿ ಹೆಸರನಿಟ್ಟು ರಾಮನ ಭೋವಿ ಶಾಂತಭೋವಿಗೆ ಉಡುಗೊರೆಯನ್ನು ಕೊಟ್ಟರು. (ಕ್ರಿ.ಶ. ೧೩೪೬ರಲ್ಲಿ ಕೋರಾ ಸ್ಥಾಪನೆಯಾದಾಗ ವಿಜಯನಗರದಲ್ಲಿ ಇದ್ದ ತಿರುಮಲರಾಯ ಯಾರು ? ಇದೇ ಯಕ್ಷಪ್ರಶ್ನೆ.)

ವೀರೆಗೌಡರು ಅಣ್ಣತಮ್ಮಂದಿರು ತಮ್ಮ ತಮ್ಮಲ್ಲೆ ಮಾತನಾಡಿಕೊಂಡು ಪ್ರತ್ಯೇಕ ಪ್ರತ್ಯೇಕ ಗ್ರಾಮಗಳನ್ನು ಕಟ್ಟಿಸಿಕೊಂಡು ಇರಬೇಕು ಎಂದು ಕೆಲವು ದ್ರವ್ಯಗಳನ್ನು ಸಾಗಿಸಿಕೊಂಡುಹೋಗಿ ಚನ್ನಪ್ಪಗೌಡರು—ತೆರೆಯೂರು, ಸಂಗಪ್ಪಗೌಡರು—ಚವಳೂರು ಕಟ್ಟಿಸಿಕೊಂಡು ನೊಣಬೇಶ್ವರ ಎಂಬ ದೇವರನ್ನು ಪ್ರತಿಷ್ಠೆಯನ್ನು ಮಾಡಿಸಿಕೊಂಡು ನಿಂತರು. ಕಾಳಚಿಕ್ಕಪ್ಪಗೌಡರು ಶಾಂತಾಭೋವಿಯನ್ನು ಕರೆದುಕೊಂಡು ಹೋಗಿ ಗುಬ್ಬಿಯೆಂಬ ಗ್ರಾಮವನ್ನು ಕಟ್ಟಿಸಿಕೊಂಡು ನಿಂತರು. ಶಾಂತಾಭೋವಿಗೆ ಮಾನ್ಯ ಸ್ವಸ್ತಿಗಳನ್ನು ಕೊಟ್ಟು, ಒಂದು ಗ್ರಾಮವನ್ನು ಜಹಗಿರಿ ಹಾಕಿಸಿಕೊಟ್ಟರು.

ರಾಮಪ್ಪಗೌಡರು ಎಣ್ಣೆಗ್ಗೆರೆಯೆಂಬ ಗ್ರಾಮವನ್ನು ಕಟ್ಟಿಸಿ ನೊಣಬೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿಕೊಂಡು ನಿಂತರು. ಚಿಕ್ಕಪ್ಪಗೌಡರು ಚೇಳೂರು ಬಿದರೆಯೆಂಬ ಗ್ರಾಮವನ್ನು ಕಟ್ಟಿಸಿ ಕಲ್ಲೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿಕೊಂಡು ನಿಂತರು. ಕಾಳಂಣಗೌಡರು ಕೋರಾದಲ್ಲಿ ನಿಂತರು. ಜ್ಯೇಷ್ಠ ಪುತ್ರರಾದಂಥ ವೀರೇಗೌಡರು ರಾಮನಭೋವಿ ಕರೆದುಕೊಂಡು ನಾಗರಮುರಿ ಆಯುಧ ತೆಗೆದುಕೊಂಡು ಶಾಲಿವಾಹನ ಶಕ ವರುಷ ೧೨೮೪ನೆ ಜಯ ಸಂವತ್ಸರ ವೈಶಾಖ ಶು ೨ ಶುಕ್ರವಾರ ಅಭಿಜಿನ್ ಮುಹೂರ್ತದಲ್ಲಿ ರಾಮನಭೋವಿ ಕರಶಿ ಕೋಟೆ ಕೊತ್ತಳ ಕಟ್ಟಿಸಿ ಉತ್ತರ ದಿಕ್ಕಿನಲ್ಲಿ 'ನೊಣಬೇಶ್ವರ' ದೇವರ ಪ್ರತಿಷ್ಠೆ ಮಾಡಿಸಿ 'ಮುಮ್ಮಡಿ ಪಟ್ಟಣ'ವೆಂದು ಹೆಸರನ್ನಿಟ್ಟರು. ರಾಮನಭೋವಿಗೆ ಮಾನ್ಯ ಹಾಕಿ ಭೂಮಿಯನ್ನು ಕೊಟ್ಟರು. ರಾಮನಭೋವಿ ಸ್ವರ್ಗಸ್ತನಾದುದರಿಂದ ಅವನ ಮಗ ತಿರುಮಲಭೋವಿ ಮಾನ್ಯದ ಭೂಮಿಯನ್ನು ಅನುಭವಿಸಿಕೊಂಡು ಬರುತ್ತಾ ಇದ್ದನು.

## ಮುಮ್ಮಡಿ ಪಟ್ಟಣದ ದೇವಸ್ಥಾನಗಳ ವಿವರ :

| | | | | ಪೂಜಾರಿಗಳು |
|---|---|---|---|---|
| ಈಶ್ವರ ದೇವಸ್ಥಾನ | — | ಮೂರು | : | ನಂಬಯ್ಯ |
| ಬಸವನಕಟ್ಟೆ ದೇವಸ್ಥಾನ | — | ಒಂದು | : | ಸೋಮಣ್ಣ |
| ಆಂಜನೇಯ ದೇವಸ್ಥಾನ | — | ಒಂದು | : | ಸಾತಾಳ ಕರಿತಿಮ್ಮಯ್ಯ |
| ಬಸ್ತಿ | — | ಒಂದು | : | ಚಂದಣ್ಣ |
| ಉರಿಶಿಲ ದೇವಸ್ಥಾನ | — | ಒಂದು | : | ತೊಗಟರ ಬಾಲಯ್ಯ |
| ನೊಣಬೇಶ್ವರ ದೇವಸ್ಥಾನ | — | ಒಂದು | : | ವೀರಣ್ಣ |
| ಈ ಪಟ್ಟಣಕ್ಕೆ ಯಜಮಾನ | | | : | ಬೋಲಿನಂಬಯ್ಯ |
| ಪಟ್ಟಣಶೆಟ್ಟಿ | | | : | ಈರಪ್ಪ |

ಕೈವಾಡದವರ ವಿವರ : ಶ್ಯಾನುಬೋಗ ತಿಮ್ಮಪ್ಪ, ಕಮ್ಮಾರ ಪುಟ್ಟಣ, ಕುಂಬಾರ ತಿಮ್ಮಣ್ಣ, ಕೆಲಸಿಗರ ಹೊಟ್ಟೆರಂಗ, ಅಗಸರ ಕೋವಿಗಾ, ಉಪ್ಪಾರ ತಿಮ್ಮ, ಸುಣ್ಣಕಲ್ಲು ರಂಗ, ಚಲುವಾದಿ ನಾಗ, ಮಾದಿಗರ ಗಿಡ್ಡ, ಕದುರ, ತಿಮ್ಮ.

ಸದರಿ ಮುಮ್ಮಡಿ ಪಟ್ಟಣದಲ್ಲಿ ಇರುವ ಮನೆಗಳು : ಅರಮನೆ ಒಂದು, ಅರಮನೆ ಜನರ ಪೈಕಿ ದಳವಾಯಿ ದೊಡ್ಡನಂಜಪ್ಪನವರ ಮನೆ ಒಂದು, ವಿರಕ್ತ ಸಪ್ಪೆದೇವರ ಮಠ ಒಂದು, ಬ್ರಾಹ್ಮಣರ ಮನೆ ೧೦, ಬಣಜಿಗರ ಮನೆ ೧೮, ಬೈಯಿಂದರ ಮನೆ ೧೫, ಕೋಮಟಿಗರ

ಮನೆ ೧೧, ಜಿರಿಕೋಮಿಟಿಗರ ಮನೆ ೩, ಸಾದರ ಮನೆ ೨೦, ಕುಂಚಿಟಿಗರ ಒಕ್ಕಲಿಗರ ಮನೆ ೧೫, ಕಮ್ಮಾರ ಮನೆ ೨, ಅಕ್ಕಸಾಲೆಯುವರ ಮನೆ ೧, ಕುರುಬರ ಮನೆ ೧೫, ತೊಗಟರ ಮನೆ ೨೦, ಜಲಗಾರರ ಮನೆ ೨, ಸುಣ್ಣಕಲ್ಲರ ಮನೆ ೨, ಉಪ್ಪಾರ ಮನೆ ೧೦, ಅಗಸರ ಮನೆ ೩, ಕೆಲಸಿಗರ ಮನೆ ೨, ಬಲಗೈನವರ ಮನೆ ೧೦, ಎಡಗೈನವರ ಮನೆ ೧೫, ಉಭಯ ಮನೆಗಳು, ಮಠಗಳು ೨೮೪.

ತರುವಾಯ ವೀರೆಗೌಡರು ಸ್ವರ್ಗಸ್ಥರಾದರು. ಅವರ ಮಕ್ಕಳು ದೊಡ್ಡೆಗೌಡರು ಸಣ್ಣಮಕ್ಕಳಾದ್ದರಿಂದ ದಂಡಿನಲ್ಲಿ ಇದ್ದಂಥ ದಳವಾಯಿ ದೊಡ್ಡನಂಜಪ್ಪನವರು ಸಂಸ್ಥಾನದ ವಿಚಾರಣೆಯನ್ನು ಮಾಡಿಕೊಂಡು ಇರುತ್ತಾ ಇದ್ದರು. ಮುಮ್ಮುಡಿ ಪಟ್ಟಣದ ಕಸಬೆ ಗ್ರಾಮಗಳನ್ನು ಕಟ್ಟಿಸುವ ಬಗ್ಗೆ ಗೌಡರಿಗೆ ಅಪ್ಪಣೆ ಕೊಡಿಸಿಕೊಟ್ಟಿದ್ದರಿಂದ ಊರುಗೊಲ್ಲರ ರಘುವೇಗೌಡ–ತಗ್ಗಿಹಳ್ಳಿಯನ್ನು ನೊಣಬರ ಬೆಟ್ಟಗೌಡ–ಹರಳಾಪುರ ತೆಲಗರ ವೆಂಕಟಯ್ಯ-ಬುಜಗನಹಳ್ಳಿ ಎಂದು ಕುಂಚಿಟಿಗ ಒಕ್ಕಲಿಗರ ಲಿಂಗೇಗೌಡ ಹಳೇತಮ್ಮನಹಳ್ಳಿ, ಊರಗೊಲ್ಲರ ನಾಗಮುತ್ತ–ನಾಗಮುತ್ತನಹಳ್ಳಿ. ಮುಮ್ಮಡಿ ಚಿಕ್ಕಪ್ಪಗೌಡರು ಅಸುಮಕ್ಕಳು ಆಗಿರುವಲ್ಲಿ ವೈರಿಗಳಾದ ಮೊಗಲರ ದಂಡು ಬಂದು ಮುಮ್ಮಡಿ ಪಟ್ಟಣಕ್ಕೆ ಮುತ್ತಿಗೆ ಹಾಕಿ ಸಿಕ್ಕಿದಂಥವರನ್ನು ಹೊಡೆಯುತ್ತಾ ಬಂದಲ್ಲಿ ದೊಡ್ಡೆಗೌಡರು ಯುದ್ಧದಲ್ಲಿ ವೀರಸ್ವರ್ಗಸ್ಥರಾದರು. ಇವರ ಮಕ್ಕಳು ಮುಮ್ಮಡಿ ಚಿಕ್ಕಪ್ಪಗೌಡರು ಸಣ್ಣವರಾಗಿದ್ದರಿಂದ ದಳವಾಯಿ ದೊಡ್ಡನಂಜಪ್ಪನವರು ಪೌಜು ತೆಗೆದುಕೊಂಡು ಹೋಗಿ ಯುದ್ಧಮಾಡಿ ಮೊಗಲರನ್ನು ಸೋಲಿಸಿ ಓಡಿಸಿದರು. ಮುಮ್ಮಡಿ ಹಿರೇಚಿಕ್ಕಪ್ಪಗೌಡರು ಸುಖದಿಂದ ರಾಜ್ಯಪರಿಪಾಲನೆಯನ್ನು ಮಾಡಿಕೊಂಡು ಇರುತ್ತಾ ಇದ್ದರು. ಸ್ವಪ್ನದಲ್ಲಿ 'ಮಹಾದೇವಿ'ಯೆಂಬ ದೇವರು ಹೇಳಿದ್ದರಿಂದ ಆ ದೇವರ ವಾಕ್ಯಾನುಸಾರವಾಗಿ ಒಂದು ಪಟ್ಟಣವನ್ನು ನಿರ್ಮಾಣ ಮಾಡಬೇಕೆಂಬುದಾಗಿ ಸ್ಥಳವನ್ನು ನೋಡುವಲ್ಲಿ ಮುಮ್ಮಡಿ ಚಿಕ್ಕಪ್ಪಗೌಡರು ತಿರುಮಲಬೋವಿ ಸಂಗಡ ಕರೆದುಕೊಂಡು ಹೋಗಿ ಪಶ್ಚಿಮಕ್ಕೆ ಶ್ರೀಮನ್ಮಾಹಾಸ್ವಾಮಿ ನರಪತಿಗಳಾದಂಥ ತಿರುಮಲರಾಯರ ಸನ್ನಿಧಾನದಿಂದ ನಿರೂಪವನ್ನು ಪಡೆದು ಶಾಲಿವಾಹನ ಶಕವರುಷ ೧೪೪೬ನೆ ಪಾರ್ಥಿವ ಸಂವತ್ಸರ ಫಾಲ್ಗುಣ ಶು ೧೦ ಭಾನುವಾರ ಸೂರ್‍ಯೋದಯ ಕಾಲದಲ್ಲಿ ತಿರುಮಲಬೋವಿ ಮಗ ರಾಮಬೋವಿಯಿಂದ ಪ್ರಥಮ ಕೋಟೆಕೊತ್ತಳ ದೇವಸ್ಥಾನಗಳನ್ನು ಕಟ್ಟಿಸಿ ದೇವರ ಪ್ರತಿಷ್ಠೆ ಮಾಡಿಸಿದರು.

| ದೇವಸ್ಥಾನಗಳ ವಿವರ | | ಪೂಜಾರಿ |
|---|---|---|
| ವೀರಭದ್ರದೇವರ ದೇವಸ್ಥಾನ | ೧ | ನಂಬಯ್ಯ |
| ಬಸವನಕಟ್ಟೆ ದೇವಸ್ಥಾನ | ೧ | ಸಂಗಣ್ಣ |
| ಆಂಜನೇಯನ ದೇವಸ್ಥಾನ | ೧ | ತೆಲುಗರ ವೆಂಕಟಯ್ಯ |

ಪ್ಯಾಟಿ ಅಬಾದು ಮಾಡಿ ಈ ಪಟ್ಟಣಕ್ಕೆ ಬಿಜವಾರ ಎಂಬುದಾಗಿ ಹೆಸರನಿಟ್ಟು ಯಜಮಾನಿಕೆ ವೀರಣ್ಣ ಎಂಬುವನಿಗೆ, ಶೆಟ್ಟಿತನ ನಂಬಯ್ಯನಿಗೆ, ಪಟ್ಟಣಶೆಟ್ಟಿತನ ಕಪಿನಿ ವೀರಣ್ಣನಿಗೆ.

ಕೈವಾಡದವರ ವಿವರ : ಮಲ್ಲರಸಯ್ಯ, ಕಂಬಾರ ವೀರಣ್ಣ, ತಳವಾರ ಮದಲೇಲುಚಿಣ್ಣಾ, ಕುಂಬಾರ ಮಲ್ಲ, ಸುಣ್ಣಕಲ್ಲು ನಾಗಾ, ಅಂಗಬೂಲರ ಮರಿಯ ಅಗಸರ ರಂಗ, ಕೆಲಸಿಗರ ಸಾದಾ, ಛಲವಾದಿ ಕೂಮಾರಿ, ತೋಟಿ ನಾಗ, ಮಾದಿಗರ ಶಿದ್ದ, ಕದುರ.

ಬಿಜವಾರದಲ್ಲಿ ಇರುವ ಒಕ್ಕಲುತನದ ಮನೆಗಳು : ಅರಮನೆ ೧, ದಳವಾಯಿ ದೊಡ್ಡನಂಜಪ್ಪನವರ ಮನೆ ೧, ಅರಮನೆ ಜನಗಳ ಪೈಕಿ ೩೦, ಗೋಸಲ ಚನ್ನಬಸವಪ್ಪನವರ ಮಠ ೧, ಬಳ್ಳಾರಿ ಒಡೆಯರ ಮಠ ೫, ಬ್ರಾಹ್ಮಣರ ಮನೆ ೨೦, ಬಣಜಿಗರ ಮನೆ ೫೦, ಸಾದರ ಮನೆ ೩೦, ಕುಂಚಿಟಿಗರ ಒಕ್ಕಲಿಗರ ಮನೆ ೫೦, ಬೊಕ್ಕಸದ ಗೊಲ್ಲರ ಮನೆ ೧೫, ತೆಲುಗರ ಮನೆ ೨೦, ಕೋಮಟಿಗರ ಮನೆ ೧೦, ಜೈನರ ಮನೆ ೮, ಕಮ್ಮಾರ ಮನೆ ೩, ಅಕ್ಕಸಾಲೆಯುವರ ಮನೆ ೪, ಕಂಚುಗಾರರ ಮನೆ ೫, ರಜಪುತ್ರರ ಮನೆ ೨೦, ಮರಾಠಿಗರ ಮನೆ ೧೫, ತುರುಕರ ಮನೆ ೨೦, ಹಂಡೆರಾಹುತರ ಮನೆ ೧೦, ಬ್ಯಾಡರ ಮನೆ ೫, ಸುಣ್ಣಕಲ್ಲರ ಮನೆ ೪, ಗಾಣಿಗರ ಮನೆ ೮, ಹೆಗ್ಗಾಣಿಗರ ಮನೆ ೨, ರಂಗಾಲಿಯುವರ ಮನೆ ೮, ದರ್ಜಿಯುವರ ಮನೆ ೪, ಕುಂಬಾರ ಮನೆ ೫, ಅಗಸರ ಮನೆ ೫, ಕೆಲಸಿಗರ ಮನೆ ೩, ಬಲಗೈನವರ

ಮನೆ ೧೫, ಎಡಗೈವನರ ಮನೆ ೧೫, ಉಭಯ ಮನೆಗಳು, ಮಠಗಳು ೪೭೦. ಗೋಸಲಮಠದ ಚನ್ನಬಸಪ್ಪ ದೇವರಿಗೆ ಗುರುಪಡೇರಹಳ್ಳಿ ಗ್ರಾಮವನ್ನು ಉಮ್ಮಳಿ ಹಾಕಿಕೊಟ್ಟು (ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ಗುರುಗಳು ಇವರ ಕಾಲ ೧೫೩೦ ಎಂದು ನಿರ್ಧಾರವಾಗಿದೆ. ಅದಕ್ಕೆ ಪೋಷಕವಾಗಿದೆ ಈ ಮಾಹಿತಿ)

ತೋಂಟದ ಸಿದ್ಧಲಿಂಗೇಶ್ವರರು ಬಿಜವಾರಕ್ಕೆ ಬಂದು ಶಿವಪೂಜೆ ಶಿವಾರ್ಪಣವಿಲ್ಲದೆ ಇದ್ದರು. ಪೂಜಾರಿ ಇವರು ಇದ್ದದ್ದು ನೋಡಿ ವೀರಭದ್ರನಿಗೆ ಪೂಜೆ ಮಾಡಿ ನೈವೇದ್ಯ ಮಾಡಿಕೊಂಡು ಹೋದ ಇದನ್ನು ಗಮನಿಸಿದ ಸಿದ್ಧಲಿಂಗೇಶ್ವರರು ದೇವರ ಬಳಿಗೆ ಬಂದು ನಮಗೆ ಶಿವ ಪೂಜೆ, ಶಿವಾರ್ಪಣವಿಲ್ಲದೆ ನೀನು ಶಿವಪೂಜೆ, ಶಿವಾರ್ಪಣ ಮಾಡುವುದಕ್ಕೆ ಕಾರಣವೇನು ಎಂದು ಸೊಂಟದಲ್ಲಿ ಇದ್ದ ಕತ್ತಿಯಿಂದ ದೇವರ ನಾಶಿಕ ಛೇದಿಸಿದರು. ಹರಿಹರೇಶ್ವರ ದೇವಾಲಯಕ್ಕೆ ಹೋಗಿ ಹುಲಿಕರಡಿಗಳ ಒಡ್ಡೋಲಗ ಮಾಡಿಕೊಂಡು ಶಿವಪೂಜೆ ಮಾಡುತ್ತಾ ಇದ್ದರು. ನಂತರ ರಾಜ ಶ್ರೀಮನ್ ಮಹಾನಾಡಪ್ರಭು ಮುಮ್ಮಡಿ ಹಿರೇ ಚಿಕ್ಕಪ್ಪಗೌಡರ ಕಾಲದಲ್ಲಿ ನಡೆದದ್ದು ಈ ಪವಾಡ. (ಸಿದ್ಧಲಿಂಗೇಶ್ವರರ ಕಾಲ ಕ್ರಿ. ಶ. ೧೫೬೧ರ ನಂತರ ಎಂದು ನಿರ್ಧಾರವಾಗಿರುವುದು. ಈ ಪವಾಡ ಪೋಷಕ ವಾಗಿದೆ)

ನಮಗೆ ನೀವೆ ಗುರುಗಳು, ನಿಮಗೆ ನಾವೇ ಶಿಷ್ಯರು, ಈ ಪ್ರಕಾರವಾಗಿ ಅರಮನೆಗೆ ಬಿಜಂಗೈಯಿಸಿ ಗೋಸಲ ತೋಂಟದ ಸಿದ್ಧಲಿಂಗೇಶ್ವರಸ್ವಾಮಿಯ ಆಶೀರ್ವಾದವನ್ನು ಪಡೆದುಕೊಂಡರು. ದಳವಾಯಿ ದೊಡ್ಡನಂಜಪ್ಪನವರಿಗೆ ಗುರಿಕಾರಿಕೆಯನ್ನು ಕೊಟ್ಟರು.

ಸದರಿ ಮುಮ್ಮಡಿ ಪಟ್ಟಣಕ್ಕೆ ರೋಗ ತಗುಲಿದ್ದರಿಂದ ಶಾಲಿವಾಹನ ಶಕ ವರುಷ ೧೪೫೩ನೆ ನಂದನ ಸಂವತ್ಸರದ ಕಾರ್ತೀಕ ಶು ೫ಯಲ್ಲು ಮುಮ್ಮಡಿ ಪಟ್ಟಣದಲ್ಲಿ ಇದಂಥ 'ಸಪ್ಪೆದೇವರು' ಸಮಾದಿಗೆ ದಯಮಾಡಿಸಿದರು. ಸದರಿ ಊರಿನಲ್ಲಿ ಇದ್ದಂಥ ಒಕ್ಕಲು ಸಾದರು ದೊಡ್ಡ ಎಂಬುವನು ಹೊಸಹಳ್ಳಿ ಗ್ರಾಮವನ್ನು ಕಟ್ಟಿಸಿದನು. ಕೆಲವು ಒಕ್ಕಲಿಗರು ಗೊಂದಿಹಳ್ಳಿ ಎಂಬ ಗ್ರಾಮವನ್ನು ಕಟ್ಟಿಸಿಕೊಂಡು ನಿಂತರು. ಊರಗೊಲ್ಲರ ನಾಗ ಎಂಬುವನು ಕೆಲವು ಒಕ್ಕಲಿಗರು ಸಪ್ಪೆದೇವರ ಸಮಾಧಿ ಬಳಿಯಲ್ಲಿ ನಾಗರಹಳ್ಳಿ ಎಂಬ ಗ್ರಾಮವನ್ನು ಕಟ್ಟಿಸಿಕೊಂಡು ನಿಂತರು. ಕೆಲವರು ಹಳೇತಮ್ಮಹಳ್ಳಿ ಕೆಲವು ಒಕ್ಕಲು ಮುಮ್ಮಡಿ ಪಟ್ಟಣದ ಬಳಿಯಲ್ಲಿ ಹಟ್ಟಿಹಾಕಿಕೊಂಡು ಮುಮ್ಮಡಿಹಳ್ಳಿಯಲ್ಲಿ ನಿಂತರು. ಕೆಲವರು ಒಕ್ಕಲು ರಘುಪನಹಳ್ಳಿ ತೆಲುಗರ–ಅಜ್ಜಿಗಬುಜ್ಜಿ ಎಂಬುವನು ಕೆಲವು ಒಕ್ಕಲು ಮಕ್ಕಳು ಗ್ರಾಮ ಕಟ್ಟಿಸಿ ಅದಕ್ಕೆ ಚಿಗಬುಜಗನಹಳ್ಳಿ ಎಂದು ಹೆಸರಿಟ್ಟರು. ಸದರಿ ಗ್ರಾಮಗಳನ್ನು ಬಿಜವಾರಕ್ಕೆ ಸೇರಿಸಿಕೊಂಡರು.

ತರುವಾಯ ತಮ್ಮ ಗುರುಗಳಾದಂಥ ಸಿದ್ಧರಾಮೇಶ್ವರಸ್ವಾಮಿಯವರ ಹೆಸರಿನಿಂದ ಒಂದು ಗ್ರಾಮವನ್ನು ಕಟ್ಟಿಸಬೇಕು ಎಂದು ತಿಮ್ಮಬೋವಿಯನ್ನು ಕರೆದುಕೊಂಡು ಬಿಜವಾರದ ಸಮೀಪದಲ್ಲಿ ಗಿಡಗಂಟೆ ಕಾಡು ಕಡಿಸಿ ಶಾಲಿವಾಹನ ಶಕ ವರುಷಗಳು ೧೫೧೫ ವಿಜಯ ಸಂವತ್ಸರ ಕಾರ್ತಿಕ ಶುದ್ಧ ಪೌರ್ಣಮಿ ಗುರುವಾರ ಸೂರ್ಯೋದಯ ತಿಮ್ಮಬೋವಿಯಿಂದ ಕೋಟೆ ಕೊತ್ತಳವನ್ನು ಕಟ್ಟಿಸಿದರು. (ಈ ವಿಷಯವನ್ನು ಪೋಷಣೆ ಮಾಡುವಂತಹ ಶಾಸನ ಮಧುಗಿರಿ ಪಕ್ಕದ ಸಿದ್ಧಾಪುರದಲ್ಲಿ ಇದ್ದು ಸಿದ್ಧಾಪುರ ಗ್ರಾಮದ ಊರಬಾಗಲಲ್ಲಿ ಬಸವನ ಗುಡಿ ಬಳಿ ಇರುವಂತಹ ಶಾಸನ ; ತುಮಕೂರು ಜಿಲ್ಲೆ, ಮಧುಗಿರಿ ೨೧)

ಪಂಚದೇವಸ್ಥಾನಗಳನ್ನು ಕಟ್ಟಿಸಿದರು ದೇವರುಗಳನ್ನು ಪ್ರತಿಷ್ಠೆ ಮಾಡಿಸಿದರು ತಮ್ಮ ಗುರುಗಳ ಹೆಸರು ಉಂಟಾಗಬೇಕು ಎಂದು ಈ ಗ್ರಾಮಕ್ಕೆ ಸಿದ್ಧಾಪುರ ಎಂಬುದಾಗಿ ಹೆಸರನ್ನು ಇಟ್ಟರು.

| ಊರ ದೇವಾಲಯಗಳು | | ಪೂಜಾರ್ರು |
|---|---|---|
| ಆಂಜನೇಯ ದೇವಸ್ಥಾನ | — | ಸಾತಾಳರ ರಂಗಯ್ಯ |
| ಭೈರವನ ದೇವಸ್ಥಾನ | — | ಬಿಜವಾರದ ವೀರಭದ್ರದೇವರ ಪೂಜಾರಿ ನಂಬಯ್ಯ |
| ವೃಷಭೇಶ್ವರ ದೇವಸ್ಥಾನ | — | ನಂಬಯ್ಯ |
| ವೀರಭದ್ರದೇವರ ದೇವಸ್ಥಾನ | — | ಬಿಜವಾರದ ವೀರಭದ್ರದೇವರ ಪೂಜಾರಿ ನಂಬಯ್ಯ |
| ವಿಘ್ನೇಶ್ವರ ದೇವಸ್ಥಾನ | — | ನಂಬಯ್ಯ |

ತಿಮ್ಮಬೋವಿಗೆ ಬಿಜವಾರದ ಹೋಬಳಿ ಸೋಂಪುರ ಜಹಗೀರು ಹಾಕಿಸಿ ಮೋಹನಮಾಲೆ ಕಂಠೀಹಾರ ಪದಕ ಶಾಲು ಜೋಡಿ ಬಂಗಾರದ ಜೋಡು ಬಳೆ ಕೊಟ್ಟು ಸನ್ನಿಧಾನದಲ್ಲೆ ಇಟ್ಟುಕೊಂಡರು. ಸದರಿ ಸಿದ್ಧಾಪುರಕ್ಕೆ ಕುರುವತ್ತಿ ಕೊಪ್ಪದ ಗೋವಿಂದಗೌಡನಿಗೆ ಊರಗೌಡಿಕೆ ನೇಮಕ ಮಾಡಿಸಿಕೊಟ್ಟು ಶಾನುಭೋಗಿಕೆಗೆ ಮಲ್ಲರಸಯ್ಯ ವೆಂಬುವನ ನೇಮಕಮಾಡಿಸಿಕೊಟ್ಟರು. ಶೆಟ್ಟಿ ವೀರಪ್ಪ, ಯಜಮಾನ್ ನಂಜಪ್ಪ, ಕೈವಾಡದವರ ವಿವರ: ಶಾನುಭೋಗ–ಮಲ್ಲರಸಯ್ಯ, ಕಮ್ಮಾರ–ವೀರಭದ್ರ, ಕುಂಬಾರ–ನಾಗ, ಸುಣ್ಣಕಲ್ಲು–ಕೆಂಪ, ತಳವಾರ ಗೋಪ, ಅಗಸ–ರಂಗ, ಕೆಲಸಿಗರ ತೋಟ ಬಲಕೈ–ಮುದ್ದುರಂಗ, ಎಡಕೈ–ಮುದ್ದುರಂಗ.

ಸಿದ್ಧಾಪುರದಲ್ಲಿ ಇರುವಂತಹ ಮನೆಗಳು :

ಅರಮನೆಗಳು ೧, ದಳವಾಯಿ ದೊಡ್ಡನಂಜಪ್ಪನವರ ಮನೆ ೧, ಅರಮನೆ ಜನಗಳ ಪೈಕಿ ಮನೆಗಳು ೮, ಹಿರೇಮಠ ೧, ಗೋಸಲಮಠ ೨, ಊರ ಒಳಗೆ ಬಾಳೇಶ್ವರ ಮಠ ೧, ಬ್ರಾಹ್ಮಣರ ಮನೆ ೭, ಬಣಜಿಗರ ಮನೆ ೨೦, ಗಾಣಿಗರ ಮನೆ ೫, ರಜಪುತ್ರರ ಮನೆ ೧೦, ಸಾದರ ಮನೆ ೧೦, ಬ್ಯಾಡರ ಮನೆ ೨೦, ಜೈನರ ಮನೆ ೩೦, ರಾಜೋರವರ ಮನೆ ೧೦, ಬೊಕ್ಕಸದ ಗೊಲ್ಲರ ಮನೆ ೧೦, ತೆಲುಗರ ಮನೆ ೨, ಕುರುಬರ ಮನೆ ೨೦, ಕಮ್ಮಾರ ಮನೆ ೨, ಅಕ್ಕಸಾಲೆಯವರ ಮನೆ ೩, ಕಂಚುಗಾರರ ಮನೆ ೫, ಕುಂಬಾರರ ಮನೆ ೫, ಸುಣ್ಣಕಲ್ಲರವರ ಮನೆ ೩, ಚಿಪ್ಪಿಗರ ಮನೆ ೨, ರಂಗಾಲೆಯವರ ಮನೆ ೩, ಅಗಸರ ಮನೆ ೩, ಕೆಲಸಿಗರ ಮನೆ ೨, ಬಲಗೈಯವರ ಮನೆ ೩, ಎಡಗೈನವರ ಮನೆ ೫ ಒಟ್ಟು ೨೪೯ ಮನೆಗಳು.

ಸಿದ್ಧಾಪುರದ ಉತ್ತರದಿಕ್ಕಿನಲ್ಲಿ ಬೆಟ್ಟ ಇದ್ದು ಜಲ ಸಮೃದ್ಧಿಯಾಗಿದ್ದ ಕಾರಣ ಕೋಟೆಕೊತ್ತಲ ಕಟ್ಟಿಸಿ, ದೇವಸ್ಥಾನವನ್ನು ಕಟ್ಟಿಸಿ, ಶ್ರೀ ವೀರಭದ್ರದೇವರ ಪ್ರತಿಷ್ಠೆ ಮಾಡಿಸಿ ಬೆಟ್ಟಕ್ಕೆ ಶ್ರೀ ವೀರಭದ್ರದುರ್ಗ ಎಂಬುದಾಗಿ ಹೆಸರಿಟ್ಟರು.

ಸಿದ್ಧಾಪುರದ ದಕ್ಷಿಣದಲ್ಲಿ ಒಂದು ಬೆಟ್ಟ ಇದ್ದು ಬೆಟ್ಟ ಹತ್ತಿ ನೋಡಲು ಜಲಸಮೃದ್ಧಿಯಾಗಿ ಬಹಳ ರಮ್ಯ ಕಂಡದ್ದರಿಂದ ಶಾಲಿವಾಹನ ಶಕ ವರುಷಂಗಳು ೧೫೨೩ನೆ ಶುಭಕೃತು ಸಂವತ್ಸರದ ಮಾರ್ಗಶಿರ ಶು ೧೫ ಸೋಮವಾರ ಗೋಧೂಳಿ ಲಗ್ನದಲ್ಲಿ ತಿಮ್ಮನಬೋವಿ ಯಿಂದ ಕೋಟೆಕೊತ್ತಲ ಕಟ್ಟಿಸಿ ಬೆಟ್ಟದ ಮೇಲೆ ಗೋಪಾಲಕೃಷ್ಣಸ್ವಾಮಿ ದೇವಸ್ಥಾನವನ್ನು ಕಟ್ಟಿಸಿ ಬೆಟ್ಟಕ್ಕೆ ಮದ್ದಗಿರಿ ಎಂಬುದಾಗಿ ಹೆಸರು ಇಟ್ಟರು. ಮದ್ದಗಿರಿಗೆ ಬೈರೆಗೌಡನನ್ನು ಗೌಡನನ್ನಾಗಿ ನೇಮಕ ಮಾಡಿದರು. ಪ್ಯಾಟೆ ಆಬಾದು ಮಾಡಿಸುವುದಕ್ಕೆ ಬಣಜಿಗ ಉಚ್ಚಣ ಯೆಂಬುವನಿಗೆ ಶೆಟ್ಟಿತನ ಕೊಟ್ಟರು. ಯಜಮಾನಿಕೆ ಶಾಂತಯ್ಯನಿಗೆ ನೇಮಕಮಾಡಿಕೊಟ್ಟು ಪಟ್ಟಣದ ಶೆಟ್ಟಿತನ ಕಾಡಲಿಂಗಯ್ಯನಿಗೆ ಕೊಟ್ಟರು.

ಮದ್ದಗಿರಿಯಲ್ಲಿ ಇರುವ ದೇವಸ್ಥಾನಗಳ ವಿವರ :

| ದೇವಸ್ಥಾನ | | ಪೂಜಾರ್ರು |
|---|---|---|
| ೧. ಮಲ್ಲೇಶ್ವರಸ್ವಾಮಿ ದೇವಸ್ಥಾನ | — | ವೀರಣ್ಣ |
| ೨. ಬೆಟ್ಟದ ಕುಂಭಿ ಮೇಲೆ ಶ್ರೀ ಗೋಪಾಲಕೃಷ್ಣ ದೇವಸ್ಥಾನ | — | ಸಾತಾಳದ ತಿಮ್ಮಯ್ಯ |

ಕೈವಾಡದ ವಿವರ : ಕುಂಬಾರ ಲಿಂಗ, ಸುಣ್ಣಕಲ್ಲು ನಾಗ, ತಳವಾರರ ರಂಗ, ತೋಟಿಗ ನರಸ, ಕೆಲಸಿಗ ಸಿದ್ಧ, ತೋಟಿಗ ರಂಗ, ಅಗಸರ ವರಪ, ಛಲವಾದಿ ಕೊಂಡ, ಬಲಗೈ ರಂಗ, ಎಡಗೈ ಮಲ್ಲ.

ಮದ್ದಗಿರಿಯಲ್ಲಿದ್ದ ಒಕ್ಕಲು ಮನೆಗಳು : ಅರಮನೆ ೧, ದಳವಾಯಿ ದೊಡ್ಡನಂಜಪ್ಪನವರ ಮನೆ ೧, ಗೋಸಲಚನ್ನಬಸಪ್ಪನವರ ಮಠ ೧, ಜಂಗಮರ ಮಠ ೩, ಬ್ರಾಹ್ಮಣರ ಮನೆ ೫೦, ಬಣಜಿಗರ ಮನೆ ೩೦, ಗಾಣಿಗರ ಮನೆ ೧೦, ಜೈನರ ಮನೆ ೫, ಕೋಮಟಿಗರ ಮನೆ ೧೦, ಹಂಡೆಕುರುಬರ ಮನೆ ೧೦, ಬೊಕ್ಕಸದ ಗೊಲ್ಲರ ಮನೆ ೧೦, ಕಮ್ಮಾರರ ಮನೆ ೩, ಅಕ್ಕಸಾಲಿಗರ ಮನೆ ೫, ಕಂಚುಗಾರರ ಮನೆ ೫, ದೇವಾಂಗದವರ ಮನೆ ೨೦, ಸುಣ್ಣಕಲ್ಲಿನವರ ಮನೆ ೫, ರಜಪುತ್ರರ

